# ದಖ್ಖನ್ ಬಹಮನಿ ರಾಜ್ಯ
# ಸಾಮಾಜಿಕ ಮತ್ತು ಆರ್ಥಿಕ ವ್ಯವಸ್ಥೆಯ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಚರಿತ್ರೆ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)

ಸಂಶೋಧಕರು

ಗಂಗಮ್ಮ ಎಮ್

ಮಾರ್ಗದರ್ಶಕರು

ಡಾ. ಕೆ. ಮೋಹನ್‌ಕೃಷ್ಣ ರೈ

ಮುಖ್ಯಸ್ಥರು ಹಾಗೂ ಪ್ರಾಧ್ಯಾಪಕರು

ಚರಿತ್ರೆ ವಿಭಾಗ



ಸಮಾಜ ವಿಜ್ಞಾನಗಳ ನಿಕಾಯ

ಚರಿತ್ರೆ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ- ೫೮೩ ೨೭೬

೨೦೧೬



# ದಖ್ಖನ್ ಬಹಮನಿ ರಾಜ್ಯ
# ಸಾಮಾಜಿಕ ಮತ್ತು ಆರ್ಥಿಕ ವ್ಯವಸ್ಥೆಯ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಚರಿತ್ರೆ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)

ಸಂಶೋಧಕರು

**ಗಂಗಮ್ಮ ಎಮ್**



ಮಾರ್ಗದರ್ಶಕರು

**ಡಾ. ಕೆ. ಮೋಹನ್‌ಕೃಷ್ಣ ರೈ**

ಮುಖ್ಯಸ್ಥರು ಹಾಗೂ ಪ್ರಾಧ್ಯಾಪಕರು

ಚರಿತ್ರೆ ವಿಭಾಗ



ಸಮಾಜ ವಿಜ್ಞಾನಗಳ ನಿಕಾಯ

**ಚರಿತ್ರೆ ವಿಭಾಗ**

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ – ೫೮೩ ೨೭೬

೨೦೧೬





## ಮಾರ್ಗದರ್ಶಕರ ಪ್ರಮಾಣ ಪತ್ರ

**ಗಂಗಮ್ಮ ಎಮ್.** ಇವರು **ದಖ್ಖನ್ ಬಹಮನಿ ರಾಜ್ಯ: ಸಾಮಾಜಿಕ ಮತ್ತು ಆರ್ಥಿಕ ವ್ಯವಸ್ಥೆಯ ಅಧ್ಯಯನ** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯದ ಸಮಾಜ ವಿಜ್ಞಾನಗಳ ನಿಕಾಯದ ಚರಿತ್ರೆ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವನ್ನು ಈ ಮೂಲಕ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದಾರೆ ಹಾಗೂ ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ : ೧೮.೧೧.೨೦೧೬

**(ಡಾ. ಕೆ. ಮೋಹನ್‌ಕೃಷ್ಣ ರೈ)**
ಪ್ರಾಧ್ಯಾಪಕರು ಹಾಗೂ ಮಾರ್ಗದರ್ಶಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಸಂಶೋಧಕರ ಪ್ರಮಾಣ ಪತ್ರ

**ದಖ್ಖನ್ ಬಹಮನಿ ರಾಜ್ಯ: ಸಾಮಾಜಿಕ ಮತ್ತು ಆರ್ಥಿಕ ವ್ಯವಸ್ಥೆಯ ಅಧ್ಯಯನ** ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಚರಿತ್ರೆ ವಿಭಾಗದ ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರಾದ **ಡಾ. ಕೆ. ಮೋಹನ್‌ಕೃಷ್ಣ ರೈ,** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಪಿಎಚ್.ಡಿ. ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಬಳಸಿಕೊಂಡಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ : ೧೮-೧೧-೨೦೧೬

**(ಗಂಗಮ್ಮ ಎಮ್.)**
ಸಂಶೋಧಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಪರಿವಿಡಿ

## ಅಧ್ಯಾಯ–೧

# ಅಧ್ಯಯನದ ಪ್ರಸ್ತಾವನೆ, ಉದ್ದೇಶ, ವ್ಯಾಪ್ತಿ, ವಿಧಾನ ಸಮೀಕ್ಷೆ ಹಾಗೂ ಸ್ವರೂಪ

### ಪ್ರಸ್ತಾವನೆ

ಪ್ರಸ್ತುತ ಚರಿತ್ರೆ ಅಧ್ಯಯನದಲ್ಲಿ ಬಹಳಷ್ಟು ಬದಲಾವಣೆಗಳಾಗಿವೆ. ಚರಿತ್ರೆಯ ಜ್ಞಾನಶಿಸ್ತು ತನ್ನದೇ ಆದ ಹೊಸ ಆಯಾಮಗಳೊಂದಿಗೆ ತನ್ನನ್ನು ತಾನು ಅನಾವರಣಗೊಳಿಸುತ್ತಿರುವ ಸನ್ನಿವೇಶ ಈ ಹೊತ್ತಿನದು. ಚರಿತ್ರೆ ಮಾನವನ ಬದುಕಿನ ಕಥನವಾದ್ದರಿಂದ ಅದು ಯಾವತ್ತಿಗೂ ಜೀವಂತ. ಮಾನವ ತನ್ನ ಬದುಕಿಗಾಗಿ ನಡೆಸುವ ನಿರಂತರ ಹೋರಾಟ, ಹೊಂದಾಣಿಕೆ ಹಾಗೂ ಒಪ್ಪಂದಗಳು ಆಯಾ ಸಂದರ್ಭದ ಚರಿತ್ರೆಗಾಗಿ ರೂಪು ತಳೆದವು. ಇಲ್ಲಿ ಭೂತ ಮತ್ತು ವರ್ತಮಾನಗಳೆನ್ನುವ ಕಾಲದ ನೆಲೆಯ ವಿಂಗಡನೆ ಮಹತ್ವ ಪಡೆದುಕೊಳ್ಳುವುದಿಲ್ಲ. ಏಕೆಂದರೆ ಚರಿತ್ರೆ ನಿರಂತರವಾದ ಪ್ರಕ್ರಿಯೆಯಾಗಿದ್ದು, ಚಲನಶೀಲನತೆಯಿಂದ ಕೂಡಿರುತ್ತದೆ. ಪ್ರಸ್ತುತ ಸನ್ನಿವೇಶದಲ್ಲಿ ಸಮಾಜ ವಿಜ್ಞಾನಗಳಲ್ಲಿ ಹೊಸ ಆಲೋಚನೆಗಳಿಗೆ ಹಿಂದೆಂದಿಗಿಂತಲೂ ಇಂದು ಹೆಚ್ಚಿನ ಒಲವುಗಳು ಕಾಣಿಸಿಕೊಳ್ಳುತ್ತಿವೆ. ಇದೇ ಕಾರಣ ಚರಿತ್ರೆ ಅಧ್ಯಯನ ಕ್ಷೇತ್ರದಲ್ಲಿ ಆಗುತ್ತಿರುವ ಹೊಸ ವಿಶ್ಲೇಷಣಾ ಕ್ರಮಗಳು ಅಲ್ಲದೆ ಹೊಸ ಬಗೆಯ ಸಂಶೋಧನ–ವಿಧಿ–ವಿಧಾನಗಳು, ಚರಿತ್ರೆಯಂತಹ ಜ್ಞಾನಶಾಖೆಯು ಕೇವಲ ಕೆಲವು ತೀರ್ಮಾನಗಳನ್ನು ನೀಡಿ ಮುಗಿಸುವ ಹಂತವನ್ನು ಬಿಟ್ಟು ಬಹಳ ಮುಂದಕ್ಕೆ ಹೋಗಿದೆ. ಒಂದು ಕಾಲಕ್ಕೆ ಗತವನ್ನು ಒಪ್ಪಿಕೊಳ್ಳುವ, ವೈಭವದಿಂದ ಸಂಭ್ರಮಿಸುವ ಹಂತಕ್ಕೆ ಮಾತ್ರ ಅಧ್ಯಯನಗಳು ನೆಲೆನಿಂತಿದ್ದವು. ಆದರೆ ಇಂದು ಹೊಸ ಅನುಭವ, ಅನುಭೂತಿಗಳನ್ನು ಅಭಿವ್ಯಕ್ತಿಸುತ್ತಿರುವ ಶಾಖೆಯಾಗಿ ಈ ಜ್ಞಾನಶಿಸ್ತು ಚಲಿಸುತ್ತಿದೆ.

ಚರಿತ್ರೆ ಹೀಗೆ ಇತ್ತು ಅಥವಾ ಇರಬೇಕು ಎನ್ನುವ ಧೋರಣೆ ಹೇರಿಕೆಯ ಸ್ವರೂಪದ್ದಾಗಿದ್ದು, ಚರಿತ್ರೆಯ ವ್ಯಾಪ್ತಿಯನ್ನು ಕುಗ್ಗಿಸುತ್ತದೆ. ಚರಿತ್ರೆಯನ್ನು ಯಾರು, ಹೇಗೆ, ಯಾಕಾಗಿ ಬಳಸಿದರು ಎನ್ನುವ ಪ್ರಶ್ನೆ ಹಾಕಿಕೊಂಡಾಗ, ಚರಿತ್ರೆಯುದ್ದಕ್ಕೂ ನಡೆದುಬಂದ ಸಾಂಸ್ಕೃತಿಕ ರಾಜಕಾರಣದ ಸ್ವಾರ್ಥ ಬಯಲಾಗುತ್ತದೆ. ಚರಿತ್ರೆಯನ್ನು ಸೀಮಿತ ಪರಿಧಿಗೆ ಮೀಸಲಿರಿಸಿದಾಗ ಅದು ಸಮಗ್ರ ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ಬದಲಾವಣೆಗಳನ್ನು ಗ್ರಹಿಸುವಲ್ಲಿ ಸೋಲಬೇಕಾಗುತ್ತದೆ. ಸಮಾಜ ಬದಲಾಗುತ್ತಿದೆ, ಮಾನವ ಬದಲಾಗುತ್ತಿದ್ದಾನೆ, ಜಾಗತಿಕ ವಿದ್ಯಮಾನಗಳು ಬದಲಾಗುತ್ತಿವೆ ಎಂದರೆ, ಚರಿತ್ರೆಯ ವಸ್ತುವಿಷಯವು ಬದಲಾಗುತ್ತಿದೆ ಎಂದರ್ಥ. ಈ ಬದಲಾವಣೆಯನ್ನು ಗುರುತಿಸುವ ಹಾಗೂ ಸ್ವೀಕರಿಸುವ ಮನಸ್ಸು ಸಂಶೋಧಕರಿಗೆ ಇರಬೇಕು.

ಲಿಖಿತ ದಾಖಲೆಗಳೇ ಉತ್ಕೃಷ್ಟವಾದವು ಹಾಗೂ ಅಂತಿಮವಾದುದು ಎಂದು ಭಾವಿಸಿದ್ದ ಮುಖ್ಯವಾಹಿನಿಯ ಚರಿತ್ರೆಯು, ಮೌಖಿಕ ಪರಂಪರೆಯನ್ನು ಅಲಕ್ಷಿಸಿತು. ರಾಷ್ಟ್ರೀಯ ನೆಲೆಗಟ್ಟಿನಿಂದಲೇ ಚರಿತ್ರೆ ನೋಡಬೇಕೆನ್ನುವ ಬರವಣಿಗೆಯ ಮಾದರಿಯಲ್ಲಿ ಸಾಕಷ್ಟು ಬದಲಾವಣೆಗಳಾಗಿವೆ. ಚರಿತ್ರೆ ಬರವಣಿಗೆ ಮತ್ತು ವಿಶ್ಲೇಷಣೆಗೆ ಸಂಬಂಧಪಟ್ಟಂತೆ ಹಲವು ಪಂಥಗಳು ಹುಟ್ಟಿಕೊಂಡವು. ಅವುಗಳಲ್ಲಿ ವಸಾಹತುಶಾಹಿ, ರಾಷ್ಟ್ರೀಯವಾದಿ, ಮಾರ್ಕ್ಸ್‌ವಾದಿ, ಸಬಾಲ್ಟ್ರನ್ ಪಂಥಗಳು ಮುಖ್ಯವಾದವುಗಳು. ವಸಾಹತು ಸನ್ನಿವೇಶದಲ್ಲಿ ಬ್ರಿಟಿಶ್ ಮತ್ತು ಪಾಶ್ಚಾತ್ಯ ಸೈದ್ಧಾಂತಿಕತೆಗೆ ಒಳಗಾದ ಮನೋಚಿಂತನೆಗಳು ಇಂದಿಗೂ ಅವುಗಳಿಂದ ಮುಕ್ತಗೊಂಡಿಲ್ಲ. ಚರಿತ್ರೆ ಎಂದರೇನು? ಎನ್ನುವ ಪ್ರಶ್ನೆಗೆ ಉತ್ತರವಾಗಿ ವಿಭಿನ್ನ ನೆಲೆಗಳಿಂದ ನೂರಾರು ವ್ಯಾಖ್ಯಾನಗಳು ಹುಟ್ಟಿಕೊಂಡವು. ಆದರೆ ಸಾಮಾನ್ಯವಾಗಿ ಚರಿತ್ರೆಯನ್ನು ಅರಸು ಮನೆತನಗಳಿಗಷ್ಟೆ ಸೀಮಿತಗೊಳಿಸಿ ಅದೊಂದು ನಡೆದು ಹೋದ ಘಟನೆ ಎನ್ನುವ ತೀರ್ಮಾನವನ್ನು ಕೊಡುವ ಅಧ್ಯಯನಗಳ ಸಂಖ್ಯೆಯೇ ಹೆಚ್ಚಾದವು. ರಾಜ್ಯವನ್ನು ರಾಜಮನೆತನದ ಖಾಸಗಿ ಚಟುವಟಿಕೆ ಎಂಬರ್ಥದಲ್ಲಿ ನೋಡಲಾಯಿತೇ ಹೊರತು, ಸಾಮಾಜಿಕ ಪ್ರಕ್ರಿಯೆಯ ಸಾವಯವ ಅಂಗವಾಗಿ ನೋಡಲಿಲ್ಲ. ಹೀಗಾಗಿ ಚರಿತ್ರೆಯೆಂಬುದು ರಾಜರ ಚರಿತ್ರೆ ಅಥವಾ ರಾಜಕೀಯ ಚರಿತ್ರೆ ಎನ್ನುವ ಸೀಮಿತ ಅರ್ಥವನ್ನು ಪಡೆದುಕೊಂಡಿತು. ರಾಜ್ಯ ಎನ್ನುವುದು ಒಂದು ನಿರ್ದಿಷ್ಟ ಭೌಗೋಳಿಕ ಸೀಮೆಗೆ ಸಂಬಂಧಿಸಿದ್ದಾಗಿದೆ. ಅದರಲ್ಲಿ ರಾಜ, ಮಂತ್ರಿ, ಅಧಿಕಾರಿಗಳು, ಪ್ರಜೆಗಳು ಎಲ್ಲರೂ ಇರುತ್ತಾರೆ. ಇವರ ಪರಸ್ಪರ ಸಂಬಂಧಗಳು ಪೂರಕವಾಗಿರುತ್ತವೆ. ರಾಜ ಅಥವಾ ರಾಜಮನೆತನಗಳ ಚರಿತ್ರೆಯ ಒಂದು ಭಾಗ ಮಾತ್ರ. ಆದರೆ ಅದೇ ಚರಿತ್ರೆಯಾಗಲು ಸಾಧ್ಯವಿಲ್ಲ. ಹೀಗಾಗಿ ರಾಜ್ಯಕೇಂದ್ರಿತ ಜನಮುಖಿ ಚರಿತ್ರೆ ರಚನೆಯಾಗಬೇಕು.

ವಸಾಹತೀಕರಣಕ್ಕೊಳಪಟ್ಟ ಇಲ್ಲಿನ ವಿದ್ವಾಂಸರು ಚರಿತ್ರೆಯನ್ನು ನೋಡುವ ದೃಷ್ಟಿಕೋನ ಬದಲಾಯಿತು. ಪ್ರಸ್ತುತ ರಾಷ್ಟ್ರೀಯ ನೆಲೆಗಟ್ಟಿನಿಂದಲೇ ಚರಿತ್ರೆಯನ್ನು ನೋಡಬೇಕೆನ್ನುವ ಬರವಣಿಗೆ ಮಾದರಿಯಲ್ಲಿ ಸಾಕಷ್ಟು ಬದಲಾವಣೆಗಳಾಗಿವೆ. ಮಾರ್ಕ್ಸ್‌ವಾದಿ ಬರವಣಿಗೆಗಳು, ಸಬಾಲ್ಟ್ರನ್ ಚರಿತ್ರೆ ಅಧ್ಯಯನಗಳು ಹೆಚ್ಚು ಪ್ರಾಮುಖ್ಯತೆ ಪಡೆಯುತ್ತಿವೆ. ಭಾರತದಲ್ಲಿ ಕಳೆದ ಎರಡೂವರೆ ದಶಕಗಳಿಂದ ಸಬಾಲ್ಟ್ರನ್ ಅಧ್ಯಯನದ ಮಾದರಿಗಳು ಮತ್ತು ಚಿಂತನೆಗಳು ಪ್ರಚಲಿತದಲ್ಲಿರುವುದನ್ನು ಕಾಣಬಹುದು. ಕರ್ನಾಟಕದಲ್ಲಿ ಈ ಮಾದರಿಯ ಬರವಣಿಗೆಗಳು ಇತ್ತೀಚೆಗೆ ಕಂಡುಬರುತ್ತಿವೆ. ಈ ದೃಷ್ಟಿಯಿಂದ ಸ್ಥಳೀಯ ಚರಿತ್ರೆ ಸಂಶೋಧಕರಿಗೆ ಮುಖ್ಯವೆನಿಸಿದೆ.

ಬ್ರಿಟಿಶ್ ಚರಿತ್ರೆಕಾರರು ಅವ್ಯಾಹತವಾಗಿ ಮತ್ತು ಆಕ್ರಮಣಕಾರಿಯಾಗಿ ಭಾರತೀಯ ಮೌಲ್ಯಗಳನ್ನು ಮತ್ತು ಸಂಸ್ಕೃತಿಯನ್ನು ಟೀಕಿಸಿದ್ದು, ಈ ಬಗೆಯ ಚಿಂತನೆಗೆ ಗ್ರಾಸ ನೀಡುವಂತೆ, ವಿನ್‌ಸೆಂಟ್ ಸ್ಮಿತ್, ಜೇಮ್ಸ್ ಮಿಲ್, ಲೇನ್‌ಪೂಲ್, ಮಾರ್ಕ್‌ವಿಲ್ಕ್ಸ್ ಮುಂತಾದ ಸಾಮ್ರಾಜ್ಯಶಾಹಿ ಚರಿತ್ರೆಕಾರರು, ಭಾರತೀಯರು ಸ್ವಯಂ ಆಡಳಿತ ಅನುಭವವಿಲ್ಲದವರು, ಅವರು ಸ್ವಾತಂತ್ರ್ಯಕ್ಕೆ ಅನರ್ಹರು ಎಂಬುದಾಗಿ ಹೇಳಿ ಬ್ರಿಟಿಶ್ ಆಡಳಿತವನ್ನು ಎತ್ತಿ ಹಿಡಿಯುವ ಪ್ರಯತ್ನ ಮಾಡಿದರು. ಭಾರತದ ಚರಿತ್ರೆಯನ್ನು ಹಿಂದೂ, ಮುಸ್ಲಿಂ, ಹಾಗೂ ಆಧುನಿಕ(ಬ್ರಿಟಿಶ್) ಎಂಬುದಾಗಿ ವಿಂಗಡನೆ ಮಾಡಿ ಕೋಮುವಾದಿ ಭಾವನೆಗಳು ಮೂಡುವ ಕೆಲಸವನ್ನು ಸಾಮ್ರಾಜ್ಯಶಾಹಿ ಚರಿತ್ರೆಕಾರರು ವ್ಯವಸ್ಥಿತವಾಗಿ ಮಾಡಿದರು. ತಮ್ಮ ಚಿಂತನೆಗಳನ್ನು ಅನುಷ್ಠಾನಕ್ಕೆ ತರಲು ಪೂರ್ವದ ಚರಿತ್ರೆಯನ್ನು ಮಾಧ್ಯಮವನ್ನಾಗಿ ಬಳಸಿಕೊಂಡರು. ವಸಾಹತುಶಾಹಿ ಹಿನ್ನಲೆಯಿಂದ ರಚನೆಗೊಂಡ ಕೃತಿಗಳು ಹಾಗೂ ಮೂಡಿಬಂದ ಭಾವನೆಗಳನ್ನು ಸಮರ್ಥವಾಗಿ ಎದುರಿಸಲು ರಾಷ್ಟ್ರೀಯವಾದಿ ಚರಿತ್ರೆಕಾರರ ವಿರೋಧಿ ಗುಂಪೊಂದು ಸಿದ್ಧವಾಯಿತು. ಆದರೆ ಈ ಪಂಥವು ಸಾಮ್ರಾಜ್ಯಶಾಹಿ ಚರಿತ್ರೆಕಾರರನ್ನು

ವಿರೋಧಿಸುವ ನೆಪದಲ್ಲಿ ಅವರ ಹಲವಾರು ಅಭಿಪ್ರಾಯಗಳನ್ನು ತನ್ನ ಸಿದ್ಧಾಂತದೊಳಗೆ ಸೇರಿಸಿಕೊಂಡಿತು. ಹಿಂದೂ ಹಾಗೂ ಮುಸ್ಲಿಂ ಎನ್ನುವ ವರ್ಗೀಕರಣವನ್ನು ರಾಷ್ಟ್ರೀಯವಾದಿ ಚರಿತ್ರೆಕಾರರು ಒಪ್ಪಿಕೊಂಡು ಚರಿತ್ರೆ ನಿರ್ಮಿಸಿದರು. ಅರಸಕೇಂದ್ರಿತ ಚರಿತ್ರೆ ರಚಿಸಿದರು. ಇಲ್ಲಿ ಪ್ರಭುತ್ವಗಳ ವೈಭವೀಕರಣ ಕಂಡುಬಂದಿತು. ಆರ್.ಸಿ. ಮಜುಂದಾರ್, ಹೇಮಚಂದ್ರ ರಾಯ್, ಆರ್.ಜಿ. ಭಂಡಾರ್‌ಕರ್, ಕೆ.ಪಿ. ಜಯಸ್ವಾಲ್, ಕೆ.ಎ.ನೀಲಕಂಠ ಶಾಸ್ತ್ರಿ ಮುಂತಾದ ಚರಿತ್ರೆಕಾರರು ಭಾರತದ ಚರಿತ್ರೆಯನ್ನು ಹೊಸದಾಗಿ ನೋಡುವ ಕೆಲಸ ಮಾಡಿದರು. ಇವರೆಲ್ಲರೂ ಹೆಚ್ಚಾಗಿ ಅರಸಕೇಂದ್ರಿತ ಮತ್ತು ಧರ್ಮಕೇಂದ್ರಿತ ಚಿಂತನೆಗಳಿಗೆ ಮಹತ್ವ ಕೊಟ್ಟರು.

ರಾಷ್ಟ್ರೀಯ ಚರಿತ್ರೆ ಬರವಣಿಗೆಗಳು ಒಂದು ಬಗೆಯ 'ರಾಷ್ಟ್ರೀಯತೆ'ಯನ್ನು ನಿರ್ವಹಿಸಲು ಆರಂಭಿಸಿದವು. ಆ ಕಾಲದ ವಸಾಹತು ವಿರೋಧಿ ಅಂದೋಲನದಲ್ಲಿ ಬಲಾಢ್ಯವಾದ ಕಾಂಗ್ರೆಸ್-ಚಳುವಳಿ ಪ್ರತಿಪಾದಿಸುತ್ತಿದ್ದ, ಭಾರತೀಯ ರಾಷ್ಟ್ರೀಯ ಚಳುವಳಿ ಇದರಿಂದ ಹೊರತೇನೂ ಆಗಿರಲಿಲ್ಲ. ಈ ಕಾರಣದಿಂದಲೇ ಆ ಕಾಲದ ಬುದ್ಧಿಜೀವಿಗಳು ಮತ್ತು ಸಂಶೋಧಕರು ಮೊಳಕೆಯೊಡೆಯಲಿದ್ದ, ಭಾರತದ ಗುರುತಿಗೆ ಸ್ಪಷ್ಟ ಕಲ್ಪನೆ ಕೊಡಲು ಚರಿತ್ರೆಯ ರಚನೆ ಬಗ್ಗೆ ಚಿಂತಿಸಲಾರಂಭಿಸಿದರು. ಏಕಮುಖವಾಗಿ ಅಥವಾ ಏಕಪಕ್ಷೀಯವಾಗಿ ಸಾಗುತ್ತಿದ್ದ ಭಾರತದ ಚರಿತ್ರೆ ಬರವಣಿಗೆಯ ದಿಕ್ಕನ್ನು ಬದಲಾಯಿಸಿದವರಲ್ಲಿ ಡಿ.ಡಿ.ಕೊಸಾಂಬಿ, ಆರ್.ಎಸ್. ಶರ್ಮ, ರೋಮಿಲಾ ಥಾಪರ್, ಡಿ.ಎನ್.ಝಾ, ಇರ್ಫಾನ್ ಹಬೀಬ್, ಬಿಪನ್ ಚಂದ್ರ, ಸುಮಿತ್ ಸರ್ಕಾರ್ ಮುಂತಾದ ಪ್ರಮುಖರು ರಾಜಕೀಯದಿಂದ ದೂರವಾದ ಚರಿತ್ರೆಯತ್ತ ಒಲವನ್ನು ತೋರಿದರು. ಜನರ ಅಧ್ಯಯನ ಇವರಿಂದ ಆರಂಭಗೊಂಡಿತು. ಚರಿತ್ರೆಯನ್ನು ಸಾಮಾಜಿಕ ಮತ್ತು ಆರ್ಥಿಕ ನೆಲೆಗಟ್ಟನಿಂದ ನಿರ್ಮಿಸುವ ಪ್ರಯತ್ನವು ಅಲಕ್ಷಿತ ವರ್ಗದ ಜನರಿಗೆ ನ್ಯಾಯವನ್ನು ಒದಗಿಸುವತ್ತ ಸಾಗಿತು. ಚರಿತ್ರೆಯ ಬದಲಾದ ಅಧ್ಯಯನ ವಿಧಾನ ಹಾಗೂ ಸಿದ್ಧಾಂತಗಳ ಹಿನ್ನಲೆಯಲ್ಲಿ ಕರ್ನಾಟಕದ ಅಧ್ಯಯನ ನಡೆಸಿದವರಲ್ಲಿ ಎಸ್.ಶೆಟ್ಟರ್, ಬಿ. ಷೇಕ್ ಅಲಿ, ಬಿ.ಸುರೇಂದ್ರ ರಾವ್, ಎಸ್.ಚಂದ್ರಶೇಖರ್, ಸೆಬಾಸ್ಟಿಯನ್ ಜೋಸೆಫ್, ಆರ್.ಎನ್.ನಂದಿ, ಎಸ್.ಎ.ಬಾರಿ, ರಾಜಾರಾಮ ಹೆಗ್ಡೆ ಮುಂತಾದವರು ಪ್ರಮುಖರೆನಿಸಿದ್ದಾರೆ.

ಸಬಾಲ್ಟ್ರನ್ ಪಂಥವು ಇದುವರೆಗಿನ ಚರಿತ್ರೆಯ ಎಲ್ಲಾ ಅಧ್ಯಯನಗಳನ್ನು ನಿಜವಾದ ಚರಿತ್ರೆಯ ಕೇವಲ ಒಂದು ಭಾಗವಾಗಿದೆಯೆಂದು ಪರಿಗಣಿಸುತ್ತದೆ. ಸಮಾಜದ ಕೆಳವರ್ಗದ ಬಹುಸಂಖ್ಯಾತ ಜನರ ಚರಿತ್ರೆಯು ನಿಜವಾದ ಚರಿತ್ರೆಯಾಗಿದ್ದು, ಅದು ಶೋಷಣೆಗೆ ಒಳಗಾಗಿದೆ ಎನ್ನುವುದು ಅಂಟೋನಿಯೋ ಗ್ರಾಮ್‌ಶಿಯ ಅಭಿಪ್ರಾಯವಾಗಿದೆ. ರಣಜಿತ್ ಗುಹಾ, ಪಾರ್ಥ ಚಟರ್ಜಿ, ಗ್ಯಾನೇಂದ್ರ ಪಾಂಡೆ, ಡೇವಿಡ್ ಅರ್ನಾಲ್ಡ್, ದಿಪೇಶ್ ಚಕ್ರವರ್ತಿ ಮುಂತಾದವರು ಸಬಾಲ್ಟ್ರನ್ ಪಂಥವು ಭಾರತದಲ್ಲಿ ಹೆಚ್ಚು ಪ್ರಚಾರ ಪಡೆಯುವಂತೆ ಮಾಡಿದರು.

ಭಾರತವನ್ನು ಹಲವಾರು ಸಾಮ್ರಾಜ್ಯಗಳು ಆಳಿದವು. ಆದರೆ ಅವುಗಳ ಅಧ್ಯಯನ ನಡೆಸುವಾಗ ಕೆಲವು ಹೆಚ್ಚಿನ ಮಹತ್ವವನ್ನು ಪಡೆದುಕೊಂಡರೆ ಇನ್ನು ಕೆಲವು ನಿರ್ಲಕ್ಷಕ್ಕೆ ಒಳಗಾದವು. ಕರ್ನಾಟಕದ ಚರಿತ್ರೆ ಸಂಶೋಧನೆಯಲ್ಲಿ ಸ್ವಲ್ಪಮಟ್ಟಿಗೆ ನಿರ್ಲಕ್ಷಕ್ಕೆ ಒಳಗಾದ ಅರಸುಮನೆತನಗಳಲ್ಲಿ ಅಲ್ಲಾವುದ್ದೀನ್ ಹಸನ್-ಗಂಗೂ ಬಹಮನ್ ಷಾ ಎಂಬ ಯೋಧನಿಂದ ಆರಂಭವಾದ ಬಹಮನಿ ಸಂಸ್ಥಾನವು ಒಂದು. ಈ ವಂಶದ ಅರಸರು ಕರ್ನಾಟಕದ ರಾಜಕೀಯದಲ್ಲಿ ಮಹತ್ವದ ಪಾತ್ರವನ್ನು ವಹಿಸಿ ಸಾಮಾಜಿಕ ಮತ್ತು ಆರ್ಥಿಕ, ಸಾಹಿತ್ಯ, ಶಿಲ್ಪಕಲೆ ಮತ್ತು ಶಿಕ್ಷಣ ಮುಂತಾದ ಕ್ಷೇತ್ರಗಳಲ್ಲಿ ಗಣನೀಯ ಕೊಡುಗೆ ನೀಡಿರುವುದನ್ನು ಕಾಣಬಹುದು. ವಿಜಯನಗರ ಸಮನಾಂತರದ ಕಾಲದಲ್ಲಿಯೇ ಗುಲ್ಬರ್ಗಾ ನಂತರ ಬೀದರ ನಗರವನ್ನು ರಾಜಧಾನಿಯನ್ನಾಗಿಸಿಕೊಂಡು ದಖ್ಖನ್ ಪ್ರಸ್ಥಭೂಮಿಯ ಉತ್ತರದಲ್ಲಿ ಆಳಿದ ರಾಜವಂಶ ಬಹಮನಿ

ಅರಸರದು. ದಕ್ಷಿಣದಲ್ಲಿ ಇಸ್ಲಾಂನ ಪ್ರಚಾರಕ್ಕೆ ನೆರವಾಗುವುದರಿಂದಲೂ, ಇಲ್ಲಿನ ಸಂಸ್ಕೃತಿಗೆ ತಮ್ಮದೇ ಆದ ಕೊಡುಗೆ ನೀಡಿರುವುದನ್ನು ಪ್ರಸ್ತುತ ಅಧ್ಯಯನದಲ್ಲಿ ವಿವರಿಸಲಾಗಿದೆ.

ಪ್ರಸ್ತುತ ಅಧ್ಯಯನವು ದಖ್ಖನ್ ಬಹಮನಿ ರಾಜ್ಯದ ಸಾಮಾಜಿಕ ಮತ್ತು ಆರ್ಥಿಕ ವ್ಯವಸ್ಥೆಯ ಅಧ್ಯಯನದ ಹಿನ್ನಲೆಯಲ್ಲಿ ಪ್ರಧಾನವಾಗಿ ಚರ್ಚಿತಗೊಂಡಿದೆ. ವಿಜಯನಗರ ಮತ್ತು ಬಹಮನಿ ನಡುವಿನ ಸಂಬಂಧಗಳನ್ನು ಕುರಿತ ವಿಚಾರವನ್ನು ವಿಶ್ಲೇಷಿಸಲಾಗಿದೆ. ಇವರ ಹೊರಜಗತ್ತಿನೊಂದಿಗಿನ ಸಂಬಂಧದ ಫಲಿತಗಳನ್ನು ನೋಡಬಹುದಾಗಿದೆ. ವಿದೇಶಿ ಸಂಪರ್ಕಗಳಿಂದ ನಿರೀಕ್ಷಿತ ಫಲಗಳು ದೊರೆಯದಿದ್ದರೂ, ಕೊನೆಯ ಪಕ್ಷ ತಮ್ಮ ರಾಜ್ಯದ ವ್ಯಾಪಾರ, ವಾಣಿಜ್ಯ ಮತ್ತು ಕೈಗಾರಿಕೆಗಳ  ಬೆಳವಣಿಗೆಗೆ ಆದ ಸಹಾಯವನ್ನು ಗುರುತಿಸಬಹುದಾಗಿದೆ.

## ಅಧ್ಯಯನದ ಉದ್ದೇಶ

ಪ್ರಸ್ತುತ ಅಧ್ಯಯನವು ದಖ್ಖನ್ ಬಹಮನಿ ಸಾಮ್ರಾಜ್ಯದ ಸಾಮಾಜಿಕ ಮತ್ತು ಆರ್ಥಿಕ ಚರಿತ್ರೆ ಬರವಣಿಗೆಯ ಕ್ರಮಗಳನ್ನು ಕುರಿತು ಅಭ್ಯಸಿಸುವ ಉದ್ದೇಶವನ್ನು ಹೊಂದಿದೆ. ಚರಿತ್ರೆಯಲ್ಲಿ ಬೃಹತ್ ಸಾಮ್ರಾಜ್ಯಗಳನ್ನು ಕುರಿತಾಗಿ ಅಧ್ಯಯನ ಮಾಡುವುದರ ಜೊತೆ ಜೊತೆಗೆ ಸ್ಥಳೀಯ ಪ್ರದೇಶಗಳ ಚರಿತ್ರೆಯನ್ನು ಗುರುತಿಸಲಾಗಿದೆ.

ಬಹಮನಿ ಸಾಮ್ರಾಜ್ಯವು ಭಾರತ ಚರಿತ್ರೆಯಲ್ಲಿ ಅತ್ಯಂತ ನಿರ್ಲಕ್ಷ್ಯಕ್ಕೆ ಒಳಗಾಗಿರುವಂತಹ ರಾಜವಂಶ. ಇದನ್ನು ರಾಷ್ಟ್ರೀಯವಾದಿ ಚರಿತ್ರೆಕಾರರು ಇಸ್ಲಾಂ ಎನ್ನುವ ಕಾರಣಕ್ಕಾಗಿ ನಿರ್ಲಕ್ಷ್ಯ ಮಾಡಿದರು. ಸಾಮ್ರಾಜ್ಯಶಾಹಿಗಳು ಸಹ ಇದೇ ದಾರಿ ತುಳಿದರು. ಈ ಕಾರಣಕ್ಕಾಗಿ ಆ ಸಂದರ್ಭದ ಸಾಮಾಜಿಕ ಮತ್ತು ಆರ್ಥಿಕ ದೃಷ್ಟಿಯನ್ನು ಅರ್ಥ ಮಾಡಿಕೊಳ್ಳುವ ದಿಶೆಯಿಂದ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಬಹಮನಿ ಸಾಮ್ರಾಜ್ಯವನ್ನು ಹಿಂದೂ–ಮುಸ್ಲಿಂ ಎನ್ನುವ ರಾಷ್ಟ್ರೀಯವಾದಿ ಹಾಗೂ ಸಾಮ್ರಾಜ್ಯಶಾಹಿ ಗ್ರಹಿಕೆಗಳಿಂದಾಚೆಗೆ ಒಂದು ಅರಸುಮನೆತನವನ್ನಾಗಿ ನೋಡುವ ಹಾಗೂ ಆ ಸಂದರ್ಭದ ದಕ್ಷಿಣ ಭಾರತದ ರಾಜಕಾರಣ ಹಾಗೂ ಸಾಂಸ್ಕೃತಿಕ ಬದುಕನ್ನು ವಿಮರ್ಶಾತ್ಮಕವಾಗಿ ಅಧ್ಯಯನ ನಡೆಸುವ ಉದ್ದೇಶ ಈ ಮಹಾಪ್ರಬಂಧದ್ದು.

ಉತ್ತರ ಹಾಗೂ ದಕ್ಷಿಣ ಭಾರತದ ನಡುವಿನ ಈ ಮಧ್ಯಭಾರತದ ಭೂಭಾಗವನ್ನು ಆಳ್ವಿಕೆ ನಡೆಸಿ ಬಹಮನಿಗಳ ಆಡಳಿತದ ಸ್ವರೂಪ ಹಾಗೂ ಸಾಂಸ್ಕೃತಿಕ ಕೊಡುಗೆಗಳನ್ನು ಕಂಡುಕೊಳ್ಳುವುದು ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

ದಖ್ಖನ್ ಪ್ರದೇಶದ ಚರಿತ್ರೆ ರಚನೆಯಲ್ಲಿ ಮಧ್ಯಕಾಲೀನ ಭಾರತದ ಚರಿತ್ರೆಯು ವಿಭಿನ್ನವಾಗಿದ್ದು, ವಿಶಾಲ ಸಾಮ್ರಾಜ್ಯಗಳ ಸಂಸ್ಕೃತಿಗಳು ಬೆಳವಣಿಗೆಗೊಂಡಿವೆ. ಇಲ್ಲಿ ಹಿಂದೂ ಹಾಗೂ ಮುಸ್ಲಿಂ ನಡುವಿನ ಹೋರಾಟಗಳು ಹಾಗೂ ಪೈಪೋಟಿಗಳು ಸಾಮಾನ್ಯವಾಗಿ ಕಂಡುಬರುತ್ತವೆ. ಆದರೂ ಮಧ್ಯಕಾಲೀನ ಚರಿತ್ರೆಯಲ್ಲಿ ಆಳ್ವಿಕೆ ನಡೆಸಿದ ರಾಜವಂಶಗಳಲ್ಲಿ, ವಿಜಯನಗರ, ದೆಹಲಿ ಸುಲ್ತಾನರು, ಬಹಮನಿಗಳು, ಬಿಜಾಪುರದ ಆದಿಲ್‌ಷಾಹಿಗಳು, ಮೊಗಲರು, ಮರಾಠರು ಮುಂತಾದವರು ಪ್ರಮುಖರಾಗಿದ್ದಾರೆ.  ಪ್ರಸ್ತುತ ಅಧ್ಯಯನದಲ್ಲಿ ಇವರ ರಾಜಕೀಯ ಬೆಳವಣಿಗೆ ಹಾಗೂ ಆಡಳಿತ ಬೆಳವಣಿಗೆಯ ಪ್ರಾಮುಖ್ಯತೆಯನ್ನು ವಿವರಿಸುವುದರ ಜೊತೆಗೆ ವಿವಿಧ ಕೃತಿಗಳನ್ನು ಮತ್ತು ಲೇಖನಗಳನ್ನು ಅವಲೋಕಿಸುವುದರ ಮುಖಾಂತರ ಸೈದ್ಧಾಂತಿಕವಾಗಿ ವಿವರಿಸಲು ಪ್ರಯತ್ನಿಸಲಾಗಿದೆ.

ಬಹಮನಿ ಸುಲ್ತಾನರು ಭಾರತದಲ್ಲಿ ತಮ್ಮ ವಿಸ್ತಾರವಾದ ಆರ್ಥಿಕ, ಸಾಮಾಜಿಕ ಸ್ಥಾನಮಾನವನ್ನು ಭದ್ರಪಡಿಸಿಕೊಳ್ಳುವುದರ ಕಡೆಗೆ ಹೆಚ್ಚಿನ ಮಹತ್ವ ನೀಡಿದರು. ಆದ್ದರಿಂದಲೇ ವಿಜಯನಗರ ಸಾಮ್ರಾಜ್ಯದೊಂದಿಗೆ ಬಲವಾದ ಸಂಬಂಧವನ್ನು ಏರ್ಪಡಿಸಿಕೊಂಡರು. ಅಂತೆಯೇ ಬಿಜಾಪುರ ಸುಲ್ತಾನರು, ದೆಹಲಿ ಸುಲ್ತಾನರು ಮತ್ತು ಸಣ್ಣಪುಟ್ಟ ಅರಸುಮನೆತನಗಳ ಜೊತೆಗೂ ವ್ಯಾಪಾರದ ಸಂಪರ್ಕವನ್ನು ಇಟ್ಟುಕೊಂಡಿದ್ದರು. ಈ ವಿಷಯವನ್ನು ಕೂಲಂಕುಶವಾಗಿ ಚರ್ಚಿಸುವುದು ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

## ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಅಧ್ಯಯನವು ೧೪ರಿಂದ ೧೬ನೇ ಶತಮಾನದವರೆಗೆ ಆಳಿದ ಬಹಮನಿ ಸಾಮ್ರಾಜ್ಯ ಮತ್ತು ವಿಜಯನಗರದವರೆಗಿನ(ಕ್ರಿ.ಶ.೧೩೪೭ರಿಂದ ೧೫೩೭ರವರೆಗೆ) ೧೯೧ ವರ್ಷಗಳ ಕಾಲಾವಧಿಯನ್ನು ಒಳಗೊಂಡಿರುತ್ತದೆ. ಈ ಹಿನ್ನೆಲೆಯಲ್ಲಿ ಕರ್ನಾಟಕದ ಬಹಳ ಮುಖ್ಯವಾದ ರಾಜವಂಶಗಳಾದ ಶಾತವಾಹನರು, ಚಾಲುಕ್ಯರು, ರಾಷ್ಟ್ರಕೂಟರು, ವಿಜಯನಗರದ ಅರಸರು, ಬಿಜಾಪುರದ ಸುಲ್ತಾನರು, ಮೊಗಲರು ಮುಂತಾದವರು ಈ ಭೂಭಾಗವನ್ನು ಆಳಿ ತಮ್ಮ ಚಾರಿತ್ರಿಕ ಕುರುಹುಗಳನ್ನು ಬಿಟ್ಟಿರುವುದನ್ನು ನೋಡ ಬಹುದಾಗಿದೆ. ಬಹಮನಿ ಮತ್ತು ವಿಜಯನಗರ ಅರಸರ ನಡುವಿನ ಸಂಬಂಧಗಳು ಮತ್ತು ಸಂಘರ್ಷಗಳನ್ನು ಅರ್ಥಮಾಡಿಕೊಳ್ಳುವ ಸಾಮಾಜಿಕ, ಆರ್ಥಿಕ ಯೋಜನೆಗಳನ್ನು ಅಧ್ಯಯನದ ವ್ಯಾಪ್ತಿಯೊಳಗೆ ತಂದುಕೊಳ್ಳಲಾಗಿದೆ.

ಈ ಅಧ್ಯಯನಕ್ಕೆ ಹಾಕಿಕೊಂಡಿರುವ ಕಾಲಮಿತಿ ಕ್ರಿ.ಶ. ೧೩೪೭ ರಿಂದ ಕ್ರಿ.ಶ. ೧೫೩೮ ರವರೆಗೆ. ಈ ಕಾಲಮಿತಿಯಲ್ಲಿ ಅಸ್ತಿತ್ವಕ್ಕೆ ಬಂದು ತಮ್ಮ ಆಡಳಿತವನ್ನು ಸ್ಥಾಪಿಸಿ, ಅಳಿದು ಹೋದಂತಹ ಮಧ್ಯಯುಗೀನ ಕಾಲದ ದಖ್ಖನ್ ಪ್ರದೇಶದ ಬಹಮನಿ ಸುಲ್ತಾನರ ಆಡಳಿತ ಕೇಂದ್ರಗಳಾದ ಗುಲ್ಬರ್ಗಾ ಮತ್ತು ಬೀದರ್ ರಾಜಧಾನಿಗಳನ್ನು ಮತ್ತು ಅದರ ಸುತ್ತಮುತ್ತಲಿನ ಪ್ರಾಂತ್ಯಗಳನ್ನು ಗಮನದಲ್ಲಿಟ್ಟುಕೊಂಡು ಸಿದ್ಧಪಡಿಸಿದ ಒಂದು ಅಧ್ಯಯನವಾಗಿದೆ. ಭೌಗೋಳಿಕವಾಗಿ ದಖ್ಖನ್ ಪ್ರಸ್ಥಭೂಮಿಯಲ್ಲಿರುವ ಕರ್ನಾಟಕದ ಉತ್ತರ ಭಾಗದಲ್ಲಿರುವ ಗುಲ್ಬರ್ಗಾ ಜಿಲ್ಲೆಯು ಮಹಾರಾಷ್ಟ್ರ ಹಾಗೂ ಆಂಧ್ರಪ್ರದೇಶಗಳ ಗಡಿಗಳಿಗೆ ಹೊಂದಿಕೊಂಡಿರುವ ಬೀದರ್, ಗುಲ್ಬರ್ಗಾ ರಾಯಚೂರು ಮತ್ತು ಬಳ್ಳಾರಿ ಜಿಲ್ಲೆಗಳನ್ನು ಒಳಗೊಂಡ ವಿಭಾಗೀಯ ಕೇಂದ್ರ ಸ್ಥಾನವಾಗಿದೆ. ಸುದೀರ್ಘವಾದ ಐತಿಹಾಸಿಕ ಹಿನ್ನಲೆ ಹಾಗೂ ಪರಂಪರೆಯನ್ನು ಹೊಂದಿರುವಂತಹ ಗುಲ್ಬರ್ಗಾ ಪ್ರಾಂತ್ಯವು ಕರ್ನಾಟಕದ ಇತಿಹಾಸದುದ್ದಕ್ಕೂ ಪ್ರಮುಖ ಪಾತ್ರವಹಿಸಿರುವ ಈ ಗುಲ್ಬರ್ಗಾ ಪ್ರಾಂತ್ಯದಲ್ಲಿ ಶಾತವಾಹನರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಕಲಚೂರಿಗಳು, ಬಹಮನಿಯರು, ಆದಿಲ್‌ಶಾಹಿಗಳು ಸತತವಾಗಿ ತಮ್ಮ ಆಳ್ವಿಕೆಯನ್ನು ಮಾಡಿದ್ದಾರೆ. ಅದೇ ದಖ್ಖನ್ ಪ್ರದೇಶದ ಬಹಮನಿ ಸುಲ್ತಾನರು ವಿಶೇಷವಾಗಿ ಗುಲ್ಬರ್ಗಾ ನಗರವನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ಕ್ರಿ.ಶ. ೧೩೪೭ ರಿಂದ ೧೪೨೨ರವರೆಗೆ ಆಳ್ವಿಕೆ ಮಾಡಿದ್ದಾರೆ. ಅದೇ ರೀತಿ ಉತ್ತರ ಕರ್ನಾಟಕದ ಮತ್ತೊಂದು ಪ್ರಮುಖ ಪ್ರಾಂತ್ಯವಾದ ಬೀದರ್‌ನಲ್ಲಿ ಕ್ರಿ.ಶ.೧೪೨೨ರಿಂದ ೧೫೩೮ ರವರೆಗೆ ಬಹಮನಿ ಸುಲ್ತಾನರು ರಾಜ್ಯಭಾರ ಮಾಡಿರುವುದು ಇತಿಹಾಸದಿಂದ ತಿಳಿದುಬರುತ್ತದೆ.

ಬೀದರ್ ಮಹಾರಾಷ್ಟ್ರದೊಂದಿಗೆ ಗಡಿಯನ್ನು ಹಂಚಿಕೊಂಡಿದ್ದು, ಈ ನಗರವು ಕರ್ನಾಟಕ ರಾಜ್ಯದ ಮುಖಪುಟವೆಂದೂ ಸಹ ಕರೆಯಲ್ಪಡುತ್ತದೆ. ಚಾರಿತ್ರಿಕವಾಗಿ ಹೇಳುವುದಾದರೆ, ಬೀದರ್ ಜಿಲ್ಲೆಯು ಪ್ರಾಮುಖ್ಯತೆಯನ್ನು ಪಡೆದಿದ್ದು, ಬಸವಣ್ಣನವರ ಮತ್ತು ಬಹಮನಿ ಸುಲ್ತಾನರ ಕಾಲದಲ್ಲಿ ಎಂದು ಹೇಳಬಹುದು. ಕ್ರಿ.ಶ.೧೪೨೪ರಲ್ಲಿ ಬೀದರ್ ಪಟ್ಟಣವು ಬಹಮನಿ ಸುಲ್ತಾನರ ರಾಜಧಾನಿಯಾಗಿ ಬರೀದ್ ಶಾಹಿ ಕಾಲದವರೆಗೆ

ಮುಂದುವರೆಯಿತು. ಖಿಲ್ಜಿ ಸಾಮ್ರಾಜ್ಯದ ದೊರೆಯಾದ ಅಲ್ಲಾವುದ್ದೀನ್ ಖಿಲ್ಜಿಯ ದಂಡಯಾತ್ರೆಯು ದಕ್ಷಿಣದ ರಾಜಕೀಯ ಸಮತೋಲನವನ್ನು ಅಲ್ಲೋಲಕಲ್ಲೋಲಗೊಳಿಸಿತು. ಇದರಿಂದಾದ ಪ್ರಮುಖ ಬದಲಾವಣೆಗಳೆಂದರೆ, ದಕ್ಷಿಣದಲ್ಲಿ ಪ್ರಸಿದ್ಧ ಹಿಂದೂ ಸಾಮ್ರಾಜ್ಯವಾದ ವಿಜಯನಗರ ಸಾಮ್ರಾಜ್ಯದ ಸ್ಥಾಪನೆ ಮತ್ತು ಪ್ರಸಿದ್ಧ ಮುಸ್ಲಿಂ ರಾಜ್ಯವಾದ ದಖ್ಖನ್ ಬಹಮನಿ ರಾಜ್ಯದ ಸ್ಥಾಪನೆ. ವಿಜಯನಗರ ಸಾಮ್ರಾಜ್ಯವು ಮುಸ್ಲಿಮರ ದಾಳಿಯನ್ನು ಎದುರಿಸುವಲ್ಲಿ ಸಫಲವಾಗಲು ಮುಖ್ಯ ಕಾರಣವೆಂದರೆ, ನೆರೆಯ ಬಹಮನಿ. ಈ ರಾಜ್ಯವು ಮುಸ್ಲಿಮರ ಗಮನವನ್ನು ತನ್ನತ್ತ ಸೆಳೆಯುವಲ್ಲಿ ಯಶಸ್ವಿಯಾಯಿತು. ಬಹಮನಿ ಸಾಮ್ರಾಜ್ಯವು ಸುಮಾರು ಎರಡು ಶತಮಾನಗಳ ಕಾಲ ಕರ್ನಾಟಕದ ಇತಿಹಾಸದಲ್ಲಿ ಪ್ರಮುಖ ಪಾತ್ರವಹಿಸಿತು. ಉಳಿದ ಕೆಲವು ಸಾಮ್ರಾಜ್ಯಗಳಂತೆ ಕರ್ನಾಟಕದ ಪ್ರಮುಖ ಮುಸ್ಲಿಂ ರಾಜ್ಯವಾದ ಬಹಮನಿ ಸಾಮ್ರಾಜ್ಯದ ಕುರಿತು ಇತಿಹಾಸದಲ್ಲಿ ಖಚಿತವಾದ ಮಾಹಿತಿಗಳು ದೊರೆತಿಲ್ಲದಿರುವುದರಿಂದ ಅನೇಕ ವಿದ್ವಾಂಸರು, ಬರಹಗಾರರು, ಚರಿತ್ರೆಕಾರರು ಇದರ ಬಗ್ಗೆ ವಿವಿಧ ವಿಚಾರಗಳನ್ನು ಮಂಡಿಸಿದ್ದಾರೆ. ಕೆಲವು ಸಿದ್ಧಾಂತಗಳನ್ನು ಗಣನೆಗೆ ತೆಗೆದುಕೊಂಡಾಗ, ಅವುಗಳನ್ನು ಅವಲೋಕಿಸಿ ಬಹಮನಿ ಸಾಮ್ರಾಜ್ಯದ ಆರ್ಥಿಕ, ಸಾಮಾಜಿಕ ಮತ್ತು ಧಾರ್ಮಿಕ ಸ್ಥಿತಿಗತಿಗಳನ್ನು ಕೂಲಂಕಶವಾಗಿ ತಿಳಿದುಕೊಳ್ಳಲು ಈ ಅಧ್ಯಯನದಲ್ಲಿ ಪ್ರಯತ್ನಿಸಲಾಗಿದೆ.

ಪ್ರಪ್ರಥಮವಾಗಿ ಬಹಮನಿ ಸಾಮ್ರಾಜ್ಯವನ್ನು ಸ್ಥಾಪಿಸಿದ ಅಲ್ಲಾವುದ್ದೀನ್ ಹಸನ್ ಗಂಗು ಬಹಮನ್ ಷಾನು ಗುಲ್ಬರ್ಗಾ(ಅಹಸನಾಬಾದ್)ವನ್ನು ಬಹಮನಿಯ ನೂತನ ರಾಜಧಾನಿಯನ್ನಾಗಿ ಮಾಡಿಕೊಂಡು ಕ್ರಿ.ಶ. ೧೩೪೭ರಿಂದ ೧೩೫೮ರವರೆಗೆ ರಾಜ್ಯಭಾರ ಮಾಡಿದನು. ಅಲ್ಲಾವುದ್ದೀನ್ ಹಸನ್ ಗಂಗು ಬಹಮನ್ ಷಾನ ನಂತರ  ಒಂದನೇ ಮಹಮ್ಮದ್‌ಷಾನು(ಕ್ರಿ.ಶ. ೧೩೫೮–೧೩೭೫)ರವರೆಗೆ ಸುಮಾರು ಹದಿನೇಳು ವರ್ಷಗಳ ಕಾಲ ಬಹಮನಿ ಸಾಮ್ರಾಜ್ಯದ ಆಡಳಿತವನ್ನು ನಿರ್ವಹಿಸಿದನು. ನಂತರದಲ್ಲಿ ಬಂದ ಸುಲ್ತಾನರಾದ ಮುಜಾಹಿದ್‌ಷಾ(ಕ್ರಿ.ಶ. ೧೩೭೫–೧೩೭೮), ದಾವುದ್ ಷಾ(೧೬–೦೪–೧೩೭೮ ರಿಂದ ೨೧–೦೫–೧೩೭೮), ಎರಡನೇ ಮಹಮ್ಮದ್‌ಷಾ(೧೩೭೮–೧೩೯೭), ಘಿಯಾಸುದ್ದೀನ್(೨೦–೦೪–೧೩೯೭ ರಿಂದ ೧೪–೦೬–೧೩೯೭), ಎರಡನೇ ಶಮಸುದ್ದೀನ್(೧೪–೦೬–೧೩೯೭ರಿಂದ  ೧೫–೧೧–೧೩೯೭) ಮತ್ತು ತಾಜುದ್ದೀನ್ ಫಿರೋಜ್‌ಷಾ(೧೩೯೭–೧೪೨೨) ಗುಲ್ಬರ್ಗಾ ಹಂತದಲ್ಲಿ ಆಳ್ವಿಕೆ ಮಾಡಿರುವುದನ್ನು ಪ್ರಸ್ತುತ ಅಧ್ಯಯನದಲ್ಲಿ ನೋಡಬಹುದು.

ತದನಂತರ ಅಹಮದ್‌ಷಾನು ಕ್ರಿ.ಶ. ೧೪೨೨ರಲ್ಲಿ ಬಹಮನಿ ಸಿಂಹಾಸನವನ್ನೇರಿದ ಸಮಯ ದಿಂದಲೂ ಬಹಮನಿ ಇತಿಹಾಸದಲ್ಲಿ ಬೀದರ್‌ಯುಗ ಆರಂಭವಾಯಿತು. ಫಿರೋಜ್‌ಷಾನ ಬಳಿಕ ಅಧಿಕಾರಕ್ಕೆ ಬಂದು ಚರಿತ್ರೆಯಲ್ಲಿ ಸಂತನೆಂದು ಪ್ರಸಿದ್ಧನಾದ ಅಹಮದ್‌ಷಾ ಬಹಮನಿಯು ತನ್ನ ರಾಜಧಾನಿಯನ್ನು ಗುಲ್ಬರ್ಗಾದಿಂದ ಬೀದರ್‌ಗೆ ೧೪೨೨ರ ಸುಮಾರಿಗೆ ಬದಲಾಯಿಸಿದನು. ಅಹಮದ್ ಷಾನು ಕ್ರಿ.ಶ. ೧೪೨೨ ರಿಂದ ೧೪೩೬ ರವರೆಗೆ ರಾಜ್ಯಭಾರ ಮಾಡಿದನು. ನಂತರ ಬಂದ ಸುಲ್ತಾನರಾದ ಎರಡನೇ ಅಲ್ಲಾವುದ್ದೀನ್ ಅಹಮದ್‌ಷಾ(೧೪೩೬–೧೪೫೮), ಅಲ್ಲಾವುದ್ದೀನ್ ಹುಮಾಯನ್‌ಷಾ(೧೪೫೮–೧೪೬೧), ನಿಜಾಂಷಾ(೧೪೬೧–೧೪೬೩), ಮೂರನೇ ಮಹಮ್ಮದ್‌ಷಾ(೧೪೬೩–೧೪೮೨), ಮಹಮ್ಮದ್ ಗವಾನ್(೧೪೬೩–೧೪೮೧), ಷಿಹಾಬುದ್ದೀನ್ ಮಹಮ್ಮದ್(೧೪೮೨–೧೫೧೮), ಅಲ್ಲಾವುದ್ದೀನ್(೧೫೨೦–೧೫೨೩), ವಲೀಯುಲ್ಲಾ(೧೫೨೩–೧೫೨೬) ಮತ್ತು ಕೊನೆಯದಾಗಿ ಖಲಿಮುಲ್ಲಾ(೧೫೨೬–೧೫೨೭) ಎಂಬ ಸುಲ್ತಾನರು ಬೀದರ್ ಪ್ರಾಂತ್ಯವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಡಳಿತ ಮಾಡಿರುವುದನ್ನು ಪ್ರಸ್ತುತ ಅಧ್ಯಯನದಲ್ಲಿ ಚರ್ಚಿಸಲಾಗಿದೆ.

ಹೀಗೆ ಸುಮಾರು ೧೯೧ ವರ್ಷಗಳವರೆಗೆ ಗುಲ್ಬರ್ಗಾ ಹಾಗೂ ಬೀದರ್ ನಗರಗಳನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ತಮ್ಮ ಸಮೃದ್ಧ ಆಡಳಿತ ನಡೆಸಿದ ಬಹಮನಿ ಷಾಹಿಗಳು ತಮ್ಮ ರಾಜ್ಯದಲ್ಲಿ ಅನೇಕ ಸಾಮಾಜಿಕ, ಆರ್ಥಿಕ ಮತ್ತು ಧಾರ್ಮಿಕ ಪರಂಪರೆಗಳನ್ನು ಸ್ಥಾಪಿಸಿರುವುದರ ಕುರಿತು ಈ ಸಂಶೋಧನೆಯಲ್ಲಿ ಸವಿಸ್ತಾರವಾಗಿ ಅಧ್ಯಯನ ಮಾಡಲಾಗಿದೆ.

**ಅಧ್ಯಯನದ ವಿಧಾನ**

ಕರ್ನಾಟಕ ಚರಿತ್ರೆಯಲ್ಲಿ ಹಲವಾರು ರೀತಿಯಲ್ಲಿ ಬದಲಾವಣೆಗಳಾಗಿವೆ. ಅದರಲ್ಲಿ ದಖ್ಖನ್ನಿಯರು ಕರ್ನಾಟಕವನ್ನು ಬಹಳ ಮುಖ್ಯವಾಗಿ ೨೦೦ ವರ್ಷಗಳ ಕಾಲ ಆಳ್ವಿಕೆ ಮಾಡಿದರು. ಅವರ ಕೊಡುಗೆಗಳು ಅಪಾರ. ಆ ಸಂದರ್ಭದಲ್ಲಿ ಇದ್ದಂತಹ ಸಾಂಸ್ಕೃತಿಕ, ಆರ್ಥಿಕ ಮತ್ತು ಸಾಮಾಜಿಕ ಪಲ್ಲಟಗಳೇನು ಎನ್ನುವುದನ್ನು ಅಧ್ಯಯನ ಮಾಡಲಾಗಿದೆ. ಇದು ಕ್ಷೇತ್ರಕಾರ್ಯಾಧರಿತ ಸ್ವರೂಪದ್ದಾಗಿದೆ. ಈ ಅಧ್ಯಯನವು ಚರಿತ್ರೆ ಸಂಶೋಧನೆಯ ವಿಧಿವಿಧಾನಗಳನ್ನು ಒಳಗೊಂಡಿದೆ. ಇಲ್ಲಿ ಪ್ರಾಥಮಿಕ ಹಾಗೂ ಇತರೆ ಆಕರಗಳನ್ನು ಬಳಸಿಕೊಳ್ಳಲಾಗಿದೆ. ಕರ್ನಾಟಕದಲ್ಲಿ ನಡೆದ ಬಹಮನಿ ಸಾಮ್ರಾಜ್ಯದ ಸ್ಥಿತ್ಯಂತರಗಳ ಅಧ್ಯಯನದ ಬಗ್ಗೆ ವಿವರಗಳಿರುವ ಚಾರಿತ್ರಿಕ ದಾಖಲೆ ಮತ್ತು ವರದಿಗಳಿಂದಲೂ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಸರ್ಕಾರದ ಗೆಜೆಟಿಯರುಗಳು, ಸಂಶೋಧನಾ ಪ್ರಬಂಧಗಳು, ಕರ್ನಾಟಕ ಚರಿತ್ರೆ ಸಂಪುಟಗಳು, ಎನ್‌ಸೈಕ್ಲೋಪಿಡಿಯಗಳು, ನಿಯತಕಾಲಿಕೆಗಳು, ಪತ್ರಿಕೆಗಳು ಮತ್ತು ಲೇಖನಗಳು, ಚರಿತ್ರೆಕಾರರ ಗ್ರಂಥಗಳು, ಅಂತರ್ಜಾಲದ ಸಹಾಯ ಮುಂತಾದವುಗಳಿಂದ ಮಾಹಿತಿ ಸಂಗ್ರಹಿಸಲಾಗಿದೆ. ರಾಜಕೀಯವಾಗಿ ಪ್ರಬಲವಾದ ದಖ್ಖನ್ ಬಹಮನಿ ಅರಸರು ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಇತರ ಸ್ಥಳೀಯ ಅರಸರೊಂದಿಗೆ ಒಳ್ಳೆಯ ಸಂಬಂಧವನ್ನು ಇಟ್ಟುಕೊಂಡಿದ್ದರು. ಇಂತಹ ವಿಷಯಗಳನ್ನು ಸೂಕ್ಷ್ಮವಾಗಿ ಗಮನಿಸಿ ಅದರಿಂದುಂಟಾದ ಪರಿಣಾಮಗಳ ಕುರಿತು ಚರ್ಚೆ ನಡೆಸಲಾಗಿದೆ.

**ಅಧ್ಯಯನದ ಸಮೀಕ್ಷೆ**

ಆಧುನಿಕ ಚರಿತ್ರೆಕಾರರು ಬಹಮನಿ ಸಾಮ್ರಾಜ್ಯದ ಉಗಮಕ್ಕೆ ಸಂಬಂಧಿಸಿದಂತೆ ಫೆರಿಸ್ತಾನ ಸಿದ್ಧಾಂತಗಳ ಅಡಿಯಲ್ಲಿ ಬರೆಯಲು ಒಪ್ಪಲಿಲ್ಲ. ಯಾವ ಸಾಮ್ರಾಜ್ಯ ಉಳಿದೆಲ್ಲಾ ಸ್ವತಂತ್ರ ಮುಸ್ಲಿಂ ಸಾಮ್ರಾಜ್ಯಗಳಲ್ಲಿಯೇ ಬಹಳ ಬಲಿಷ್ಠವಾಗಿತ್ತೋ ಮತ್ತು ಯಾವ ಸಾಮ್ರಾಜ್ಯ ದೆಹಲಿ ಸುಲ್ತಾನರ ಅವನತಿಯ ನಂತರ ಜನ್ಮ ತಾಳಿತ್ತೋ, ಈ ಸಾಮ್ರಾಜ್ಯದ ಹುಟ್ಟು ಮತ್ತು ಬೆಳವಣಿಗೆಗೆ ಸಂಬಂಧಿಸಿದ ಒಟ್ಟಾರೆ ಸಂಪೂರ್ಣ ದರ್ಶನ ನೀಡುವಲ್ಲಿ ಬುರ್ಹಾನ್-ಇ-ಮಾಸಿರ್-ಹಸನ್ ಗ್ರಂಥವು ಪ್ರಮುಖ ಪಾತ್ರವಹಿಸುತ್ತದೆ. ಭಾರತೀಯ ಚರಿತ್ರೆಕಾರರು ದಖ್ಖನ್ನಿನ ಈ ಸಾಮ್ರಾಜ್ಯದ ಹುಟ್ಟು, ಬೆಳವಣಿಗೆ ಮತ್ತು ಅಭಿವೃದ್ಧಿಯ(ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ) ಕುರಿತಾದ ಬಹುಮುಖ್ಯ ದಾಖಲೆಗಳನ್ನು ಬಿಟ್ಟು ಹೋಗಿದ್ದಾರೆ. ಇದಕ್ಕೆ ಸಂಬಂಧಿಸಿದ ಅನೇಕ ದಾಖಲೆಗಳು ಮುಸ್ಲಿಂ ಇತಿಹಾಸಕಾರರಿಂದ ಮತ್ತು ನೇರವಾಗಿ ಬಹಮನಿ ಸಾಮ್ರಾಜ್ಯದ ಇತಿಹಾಸಕ್ಕೆ ಸಂಬಂಧಿಸಿದ ಇತಿಹಾಸ ಬರಹಗಾರರಿಂದ ರಚಿತವಾಗಿವೆ.

ಅವರಲ್ಲಿ ಪ್ರಮುಖವಾಗಿ, ಸಿದ್ಧಿಕಿಯವರ ಬೊರ್ಹಾನ್-ಇ-ಮಾತೆರ್, ಫೆರಿಸ್ತಾನ ತಾಜ್‌ಕರಾತ್-ಉಲ್-ಮುಲಕ್, ಮಹ್ಮದ್ ಗವಾನನ ಇಮಾದ್-ಅಲ್-ದಿನ್ ಮತ್ತು ರಿಯಾಜ್-ಅಲ್-ಇನ್ಸಾ, ಮಹ್ಮದ್ ಅಹ್ಮದ್‌ನ ತದ್‌ಕೇರ-ಎ-ಸಲೆತಿನ್-ಇ-ದಖನ್, ಜಿಯಾವುದ್ದೀನ್ ಭರಣಿಯ ತಾರೀಖ್-ಇ-ಫಿರೋಜ್‌ಷಾಹಿ, ಅಬ್ದುಲ್-ಅಲ್-ಮಲಿಕ್-ಇಸಾಮಿಯ ಪುತುಹ-ಅಲ್-ಸಲೆತಿನ್ ಯಾ-ಷಾ-ನಾಮಾ-ಎ-ಇಂದ್, ಮಹ್ಮದ್ ಖ್ವಾಸೀಮ್ ಫೆರಿಸ್ತಾನ ತಾರೀಖ್-ಇ-ಫೆರಿಸ್ತಾ, ನಾಜಿರ್ ಅಲ್ ದಿನ್ ಹಸಮಿಯ ದಖನಿ-ಕಲ್ಚರ್, ಅಬ್ದುಲ

ಹಸ್ಸಾಮಿಯ ಅಲ್–ಸೆಫಫಾಹ–ಅಲ್–ಇಸ್ಲಾಮಿ–ಅಲ್ಹೆಂಡ್ ಪಿ.ಹುಸೇನಿಯ ಪುತುಹ–ಹಜ್–ಸಲೆಟಿನ್, ಎಚ್.ಕೆ.ಶೆರವಾನಿಯ ಡೆಖನ್ ಕಿ ಬಹಮನಿ ಸುಲ್ತಾನ್, ಸಿದ್ದಿಕಿಯ ಬಹಮನಿ ಸುಲ್ತಾನೇಟ್ ಮತ್ತು ಸಿದ್ದಿಕೀಯ ಮುಖದಮಿ ತಾರೀಖ್–ಡೆಖ್ಬನ್, ನಾಯಿಮ್ ರಿಯಾಜ್ ಅಲ್–ಇನ್ಸಾ, ಮಹ್ಮದ್ ಖ್ವಾಸೀಮ್ ಫೆರಿಸ್ತಾನ ತಾರೀಕ್–ಇ–ಫೆರಿಸ್ತಾ, ಮಹ್ಮದ್‌ಗವಾನನ ಸಮ್ ನೋಟ್ಸ್ ಆಫ್ ದ ಬಹಮನಿ ಡೈನಾಸ್ಟಿ ಮತ್ತು ಸೂಫಿ ಮೂಮೆಂಟ್ ಇನ್ ದ ಡೆಖ್ಬನ್ ಹಾಗೂ ದ ಬಹಮನಿ ಆಫ್ ದ ಡೆಖ್ಬನ್ ಮುಂತಾದ ಬರಹಗಳು ಪ್ರಮುಖವಾಗಿ ಬಹಮನಿ ಸುಲ್ತಾನರ ಸಾಧನೆಗಳನ್ನು ಕುರಿತದ್ದವುಗಳಾಗಿವೆ.

**ಪೂತುಹೂಸ್ ಸಲಾತಿನೆ**

ಈ ಕೃತಿಯು ದಖ್ಖನ್ ಘಟನಾವಳಿಗಳ ಸಂಗ್ರಹವಾಗಿದ್ದು, ಪದ್ಯ ರೂಪದಲ್ಲಿದೆ. ಇದನ್ನು ಮೌಲಾನಾ ಎಂಬುವವನು ರಚಿಸಿದ್ದು, ಈತನ ದೆಹಲಿಯಿಂದ ದಖ್ಖನ್‌ಗೆ ೧೩೨೭ರಲ್ಲಿ ದೆಹಲಿಯ ರಾಜಧಾನಿಯನ್ನು ದೌಲತಾಬಾದ್‌ಗೆ ವರ್ಗಾಯಿಸಿದ ಸಂದರ್ಭದಲ್ಲಿ ತನ್ನ ೧೬ನೇ ವಯಸ್ಸಿನಲ್ಲಿ ದಕ್ಷಿಣ ಭಾರತಕ್ಕೆ ಭೇಟಿ ಕೊಟ್ಟನು. ಈತನ ಪದ್ಯಗಳು ಸುಮಾರು ೧೨೦೦೦ ಸಂಖ್ಯೆಗಳಲ್ಲಿದ್ದು ದಖ್ಖನ್ ಸುಲ್ತಾನರ ರಾಜಕೀಯ ಮತ್ತು ಸ್ವಾತಂತ್ರ್ಯ ಹೋರಾಟದ ಘಟನಾವಳಿಗಳನ್ನು ಒಳಗೊಂಡಿದೆ. ಮೊದಲನೆ ಬಹಮನಿ ಸುಲ್ತಾನನ ಅಡಿಯಲ್ಲಿ ಜೀವಿಸಿದ್ದ ಈತನು ಸುಲ್ತಾನನ್ನು ಬಹಳ ಹೊಗಳಿದ್ದಾನೆ. ಈತನು ತಾನು ಬರೆದ ಘಟನೆಗಳಿಗೆ ಪ್ರತ್ಯಕ್ಷ ದರ್ಶಿಯಾಗಿದ್ದಾನೆ. ತುಘಲಕನು ನಡೆಸಿದ ಎಲ್ಲ ಹೋರಾಟಗಳು ಮತ್ತು ಬೇರೆ ಬೇರೆ ರಾಜಕೀಯ ವ್ಯಕ್ತಿಗಳ ಹೋರಾಟಗಳು ಈತನ ಪೂತುಹೂಸ್ ಸಲಾತಿನ್ ಕೃತಿಯಲ್ಲಿ ವರ್ಣಿಸಲ್ಪಟ್ಟಿವೆ.

**ತಬಾಕತ–ಎ–ನಸಿರಿ**

ಇದನ್ನು ಬರೆದಿರುವ ಜಿಯಾವುದ್ದೀನ್ ಬರಣಿ ೧೩೫೭ರಲ್ಲಿ ಫಿರೋಜ್ ಷಾ ತುಘಲಕನ ಕಾಲದಲ್ಲಿದ್ದನು. ಈತನು ಹಜರತ್ ನಿಜಾಮುದ್ದೀನ್ ಔಲಿಯಾ ಅವರ ಶೀಷ್ಯನಾಗಿದ್ದು, ಮಹಮ್ಮದ್–ಬಿನ್–ತುಘಲಕನನ್ನು ಹೊಗಳಿ ಪ್ರಶಂಸಿಸಿ ಬರೆಯುತ್ತಿದ್ದನು. ಮಹಮ್ಮದ್–ಬಿನ್–ತುಘಲಕನ ಜೊತೆಗೂಡಿ ದಖ್ಖನ್‌ಗೆ ತೆರಳಿದ್ದ ಈತನು ಸಹ ಬರಣಿಯಂತೆ ಅಲ್ಲಿಯ ಘಟನೆಗಳ ಪ್ರತ್ಯಕ್ಷದರ್ಶಿಯೂ ಹೌದು. ಈತನ ನೆನಪಿನ ಶಕ್ತಿ ಮತ್ತು ಘಟನಾವಳಿಗಳ ಸಂಗ್ರಹಣೆ ಅದ್ಬುತವಾಗಿದೆ. ದಖ್ಖನ್‌ನಲ್ಲಿ ಘಟಿಸಿದ ಸಂಗತಿಗಳಿಗೆ ತಬಾತಕ್–ಎ–ನಸರಿ ಮೂಲ ಆಧಾರವಾಗಿದೆ.

**ರಿಯಾಜ್–ಉಲ್–ಇನ್ಸಾ**

ಈ ಕೃತಿಯು ಬಹಮನಿ ಮಂತ್ರಿಯಾಗಿದ್ದ ಖ್ವಾಜಾ ಮಹಮ್ಮದ್ ಗವಾನನು ಬರೆದ ಪತ್ರಗಳ ಸಂಗ್ರಹಣೆಯಾಗಿದೆ. ಇದು ಮೂಲತ: ಹಣಕಾಸು ಮತ್ತು ಕಂದಾಯ ಕಾರ್ಯದರ್ಶಿ ಹೈದರಾಬಾದ್ ಮತ್ತು ನಂತರ ಎಂ.ಎ.ಓ. ಕಾಲೇಜಿನ(ಆಲಿಘರ್ ಮುಸ್ಲಿಂ ವಿಶ್ವದ್ಯಾಲಯ) ಗೌರವ ಕಾರ್ಯದರ್ಶಿಯಾಗಿದ್ದ ನವಾಜ್ ಮುಹ್‌ಷಿನೋ–ಉಲ್–ಮುಲ್ಕ್ ಬಹದೂರ್ ಎಂಬುವರಿಂದ ಸಂಗ್ರಹಿಸಲ್ಪಟ್ಟಿದೆ. ಇದು ದಖ್ಖನ್ ಸಾಮ್ರಾಜ್ಯದ ಬಗ್ಗೆ ಹೇರಳವಾದ ಮಾಹಿತಿಯನ್ನು ಹೊಂದಿದ್ದು, ದಕ್ಷಿಣ ಭಾರತ ಇತಿಹಾಸದ ಮೂಲ ಆಧಾರವಾಗಿದೆ. ಒಟ್ಟಾರೆಯಾಗಿ ಇದರಲ್ಲಿ ೧೪೮ ಪತ್ರಗಳಿದ್ದು, ಅಂದಿನ ರಾಜಕೀಯ ವಾತಾವರಣವನ್ನು ಪ್ರತಿನಿಧಿಸುತ್ತವೆ. ಪತ್ರದಲ್ಲಿನ ಸಾರಾಂಶಗಳು ಮಹಮ್ಮದ್ ಗವಾನನ ಆಂತರಿಕ ಜೀವನ, ಬಹಮನಿಯ ರಾಜಕೀಯ ಸಂಬಂಧಗಳು, ಸೈನಿಕ ಹೋರಾಟಗಳು, ರಾಜಕೀಯ ಬೆಳವಣಿಗೆಗಳು ಹಾಗೂ ಘಟನಾವಳಿಗಳನ್ನು ಒಳಗೊಂಡಿದೆ. ಈ ಪತ್ರಗಳು ಸ್ವತ: ಮಹಮ್ಮದ್ ಗವಾನನಿಂದ ಬರೆಯಲ್ಪಟ್ಟಿದ್ದು ವಿಶ್ವಾಸಾರ್ಹ ಮತ್ತು ಸತ್ಯ

ಸಂಗತಿಗಳಾಗಿವೆ. ಚರಿತ್ರೆಕಾರರಿಗೆ ಈ ಪತ್ರ ಸಂಗ್ರಹಗಳು ಅಮೂಲ್ಯವಾದ ಆಧಾರಗಳನ್ನು ಬಹಮನಿ ಸಾಮ್ರಾಜ್ಯದ ಬಗ್ಗೆ ಒದಗಿಸುತ್ತವೆ.

**ಜಾವ್–ಉಲ್–ಲಾಮಿ**

ಈ ಕೃತಿಯನ್ನು ಮಹಮ್ಮದ್ ಬಿ.ಅಬ್ಬಿರ್ ರಹಮಾನಾಸ್ ಸಖಾವಿ ರಚಿಸಿದ್ದಾನೆ. ಈತನ ಕಾಲಮಾನ ೧೪೨೮ರಿಂದ ೧೪೯೭ ಆಗಿದ್ದು, ಬಹುತೇಕ ಮಹಮ್ಮದ್ ಗವಾನನ ಕಾಲಮಾನವಾಗಿದೆ. ಇದು ೧೦ ಸಂಪುಟಗಳನ್ನು ಒಳಗೊಂಡಿದ್ದು, ದಖ್ಖನ್ನಿನ ಪ್ರಮುಖ ವ್ಯಕ್ತಿತ್ವಗಳ ಬಗ್ಗೆ ಹಾಗೂ ಗವಾನನ ಜೀವನದ ಬಗ್ಗೆ ಉಪಯುಕ್ತ ಮಾಹಿತಿಯನ್ನು ಹೊಂದಿದೆ. ಮಹಮ್ಮದ್ ಗವಾನನ ಹತ್ಯೆಯ ಬಗ್ಗೆ ಹೆಚ್ಚಿನ ಮಾಹಿತಿಯನ್ನು ಈ ಕೃತಿಯಿಂದ ಪಡೆದುಕೊಳ್ಳಬಹುದಾಗಿದೆ.

**ಅಫನಾಸಿ ನಿಕೆಟಿನ್**

ನಿಕೆಟಿನ್ ರಷ್ಯಾದ ಪ್ರವಾಸಿಯಾಗಿದ್ದು, ಕ್ರಿ.ಶ.೧೪೬೮ರಲ್ಲಿ ಭಾರತಕ್ಕೆ ಬಂದು ೧೪೭೨ ರವರೆಗೆ ನೆಲೆಸಿದನು. ಈತನು ಮಹಮ್ಮದ್ ಗವಾನನನ್ನು ಭೇಟ್ಟಿಯಾಗಿ, ಬಹಮನಿ ರಾಜ್ಯಾದ್ಯಂತ ಪ್ರವಾಸ ಮಾಡಿದನು. ನಿಕಟಿನ್‌ನ ಬರವಣಿಗೆಗಳಿಂದ, ಬಹಮನಿ ಸಾಮ್ರಾಜ್ಯದಲ್ಲಿನ ರಾಜಕೀಯ ಮುಖಂಡರ ಮತ್ತು ಶ್ರೀಮಂತ ವರ್ಗದವರ ಐಷಾರಾಮಿ ಜೀವನ ಶೈಲಿಯನ್ನು ಮತ್ತು ಇಲ್ಲಿನ ಬಡವರ ಅತಿಯಾದ ಎರಡು ಹೊತ್ತಿನ ಊಟಕ್ಕೂ ಗತಿಯಿಲ್ಲದ ಕಡುಬಡತನವನ್ನು ನಾವು ಕಂಡುಕೊಳ್ಳಬಹುದು. ನಿಕೆಟಿನ್‌ನ ಚಾರಿತ್ರಿಕ ದಾಖಲೆಗಳು ದಖ್ಖನ್‌ನ ಸಾಮಾಜಿಕ ಇತಿಹಾಸದ ಬಗೆಗೆ ಅಮೂಲ್ಯವಾದ ವಿವರಗಳನ್ನು ನೀಡುತ್ತವೆ.

**ಅಬದೂರ್–ರಜಾಕಿ**

ಈತನು ಮಹಮ್ಮದ್ ಗವಾನನ ಕಾಲದಲ್ಲಿದ್ದನು. ಈತನು ಕ್ರಿ.ಶ.೧೪೭೧ರಲ್ಲಿ ರಚಿಸಿದ ಬರಹಗಳು ಮಹಮ್ಮದ್ ಗವಾನನ ಜೀವನದ ಬಗ್ಗೆ ಬೆಳಕನ್ನು ಚೆಲ್ಲುತ್ತವೆ. ರಜಾಕ್‌ನ ಪ್ರಕಾರ 'ಮಹಮ್ಮದ್ ಗವಾನನು ಉರಿಯುತ್ತಿರುವ ಸೂರ್ಯನಂತೆ ಭಾರತದಲ್ಲಿ ಕಂಗೊಳಿಸಿದನು' ಎಂದಿದೆ. ಅದೇ ರೀತಿ ಗವಾನನು ದಖ್ಖನ್ ಸಾಮ್ರಾಜ್ಯದ ವರಿಷ್ಠರ ಮುಖಂಡನಾಗಿದ್ದು, ಅವನ ಆಂತರಿಕ ಜೀವನವು ಕ್ಲಿಷ್ಟಕರವಾಗಿತ್ತೆಂದು ಹೇಳಿದ್ದಾನೆ.

**ಜಫಾರ್–ಉಲ್–ವಲಿಹ್**

ಇದು ಅಬ್ದುಲ್ಲಾಹ್–ಎಲ್–ಮಕ್ಕಿ ಎಂಬುವರಿಂದ ಅರೇಬಿಕ್ ಭಾಷೆಯಲ್ಲಿ ರಚಿಸಲ್ಪಟ್ಟಿದೆ. ಈತನ ಕೃತಿಯಲ್ಲಿ ಮುಖ್ಯವಾಗಿ ಗುಜರಾತ್ ಬಗ್ಗೆ ಮಾಹಿತಿ ಇದ್ದು, ಅದರ ಜೊತೆಗೆ ದಖ್ಖನ್ ಸಾಮ್ರಾಜ್ಯದ ಬಗ್ಗೆ ೧೬೦೫ನೇ ಇಸ್ವಿಯವರೆಗೆ ನಡೆದ ಘಟನಾವಳಿಗಳ ಪಕ್ಷಿನೋಟವಿದೆ.

**ಬರಹನ್–ಎ–ಮಾಸಿರ್**

ಈ ಗ್ರಂಥವನ್ನು ಸಯ್ಯದ್–ಅಲಿ–ತಬತಬಾನು ೧೯೫೧ ರಚಿಸಿರುವನು. ಇದನ್ನು ಇಂಗ್ಲಿಶ್‌ನಲ್ಲಿ 'ದಿ ಹಿಸ್ಟರಿ ಆಫ್ ಬಹಮನಿ ಡೈನಾಸ್ಟಿ' ಎಂದು ಹೈದರಾಬಾದಿನ ಪರ್ಶಿಯನ್ ಟೆಕ್ಸ್ಟ್ ಸೊಸೈಟಿಯ ಪ್ರಕಟಿಸಿದೆ. ಈ ಪುಸ್ತಕದಲ್ಲಿ ಬಹುತೇಕ ಬಹಮನಿ ಸಾಮ್ರಾಜ್ಯದ ಬಗ್ಗೆ ಫೆರಿಷ್ತಾ ಬರೆದಂತಹ ಆಧಾರಗಳೇ ಸಂಗ್ರಹಗಳಾಗಿ ಸಿಗುತ್ತವೆ. ಇಲ್ಲಿಯ ಘಟನಾವಳಿಗಳು ಮತ್ತು ದಿನಾಂಕಗಳು ಹೆಚ್ಚಿನ ವಿಶ್ವಾಸಾರ್ಹತೆಯನ್ನು ಹೊಂದಿವೆ.

### ತಜ್ಕಿರಾತ್-ಉಲ್-ಮುಲ್ಕ್

ಈ ಕೃತಿಯು ರಫಿ-ಉದ್ದೀನ್‌ರವರಿಂದ ರಚಿಸಲ್ಪಟ್ಟಿದೆ. ಈತನು ೧೫೪೧ರಲ್ಲಿ ಜನಿಸಿದ್ದು, ತನ್ನ ೭೦ನೇ ವಯಸ್ಸಿನಲ್ಲಿ 'ಹಿಸ್ಟರಿ ಆಫ್ ದಿ ಕಿಂಗ್ಸ್' ಎಂಬ ಕೃತಿಯನ್ನು ರಚಿಸಿದ್ದಾನೆ. ಈತನು ಶಿರಾಜ್‌ನಿಂದ ಭಾರತಕ್ಕೆ ಬಂದ ವರ್ತಕನಾಗಿದ್ದು, ನಂತರದಲ್ಲಿ ಬಿಜಾಪುರ ಸುಲ್ತಾನರ ಅಡಿಯಲ್ಲಿ ಸೇವೆಗೆ ಸೇರಿದನು. ಈತನು ಅಫ್ಜಲ್‌ಖಾನ್‌ನ ಸೋದರನಾಗಿದ್ದನು. ಅಫ್ಜಲ್‌ಖಾನ್‌ನು ಛತ್ರಪತಿ ಶಿವಾಜಿಯಿಂದ ಹತ್ಯೆಗೈಯಲ್ಪಟ್ಟಿದ್ದನು. ರಫಿ ಉದ್ದೀನನು ಬಿಜಾಪುರದಲ್ಲಿ ನೆಲೆಯೂರಿದ್ದರಿಂದ ಅಲ್ಲಿಯ ದರ್ಬಾರಿನ ಘಟನಾವಳಿಗಳ ನೈಜ ಚಿತ್ರಣವನ್ನು ನೀಡಿದ್ದಾನೆ. ಆದರೆ ಇವುಗಳ ಜೊತೆ ಕೆಲವು ಆಸಕ್ತಿಯುಳ್ಳ ವರದಿಗಳನ್ನು ದಖ್ಖನ್ನಿನ ಬಹಮನಿಯರ ಬಗ್ಗೆಯೂ ನೀಡಿದ್ದಾನೆ. ಸೂಫಿ ಸಂತ ಸಿರಾಜುದ್ದೀನ್ ಜುನೈದಿಯ ಜೀವನ ಚಿತ್ರಣವು ಸಹ ಈತನ ಕೃತಿಯಲ್ಲಿ ಕಂಡುಬರುತ್ತದೆ. ಈ ಕೃತಿಯಿಂದ ಕೆಲವು ಉಪಯುಕ್ತವಾದ ಹಾಗೂ ಬೇರೆಯವರಿಂದ ವರ್ಣಿಸಿರಲಾಗದ ವರದಿಗಳು ಬಹಮನಿ ಸುಲ್ತಾನರ ಬಗ್ಗೆ ದೊರಕುತ್ತವೆ.

### ತಬಾಕತ್-ಎ-ಅಕ್ಬರ್‌ಶಾಹಿ

ಇದು ಇತಿಹಾಸದ ಮೂಲ ಕೃತಿಯಾಗಿದ್ದು, ನಂತರದ ಕೃತಿಗಳಿಗೆ ಬುನಾದಿಯಾಗಿದೆ. ಇದನ್ನು ನಿಜಾಮುದ್ದೀನ್ ಅಹಮದ್ ರಚಿಸಿರುವನು. ಈತನು ಮುಖಿಮ್-ಅಲ್-ಹರಾವಿಯ ಮಗನಾಗಿದ್ದು, ಹರಾವಿಯ ಬಾರ್ಬರ್ ಮನೆಯಲ್ಲಿ ಉನ್ನತ ಹುದ್ದೆಯ ಸೇವೆಯಲ್ಲಿದ್ದನು. ಈತನು ೧೫೪೯ರಲ್ಲಿ ಜನಿಸಿದ್ದು, ಸಾಮ್ರಾಟ್ ಅಕ್ಬರ್‌ನ ಅಡಿಯಲ್ಲಿ ಹಲವಾರು ಸೈನಿಕ ಹುದ್ದೆಗಳನ್ನು ನಿರ್ವಹಿಸಿದ್ದನು. ತಬಾಕತ್ ಕೃತಿಯು ೧೫೯೩ ಇಸ್ವಿಯವರೆಗಿನ ಭಾರತದ ಇತಿಹಾಸವನ್ನು ಒಳಗೊಂಡಿದೆ. ಈ ಕೃತಿಯಲ್ಲಿ ದಖ್ಖನ್‌ಗೆ ಸಂಬಂಧಿಸಿದ ಸಂಗತಿಗಳು ವಿರಳವಾಗಿದ್ದರೂ ಸಹ ಅಮೂಲ್ಯವಾದ ವರದಿಗಳಾಗಿವೆ.

### ಮುಂತಖಾಬ್-ಉಲ್-ಲುಬಾಬ್

ಈ ಕೃತಿಯನ್ನು ಮಹಮ್ಮದ್ ಹಸೀಮ್ ಖಾಫಿಖಾನ್‌ನು ರಚಿಸಿರುವನು. ಈ ಕೃತಿಯಲ್ಲಿ ದಖ್ಖನ್‌ನ ಇತಿಹಾಸದಲ್ಲಿನ ಅಲ್ಲಾವುದ್ದೀನ್‌ನ ಆಕ್ರಮಣಗಳಿಂದ ಕೂಡಿದ ವಿವರಗಳು ಮತ್ತು ಬಹಮನಿ ರಾಜ್ಯಗಳ ಬಗೆಗಿನ ವಿವರಗಳಿವೆ. ಈ ಕೃತಿಯು ಮೊಗಲ್ ಚರಿತ್ರೆಯನ್ನು ಒಳಗೊಂಡಿದ್ದು, ದಖ್ಖನ್ ಇತಿಹಾಸದ ವಿವರಣೆಯನ್ನು ನೀಡುತ್ತದೆ.

### ಗುಲ್ಷನ್-ಇ-ಇಬ್ರಾಹಿಮಿ

ಈ ಕೃತಿಯನ್ನು ಫೆರಿಷ್ತಾ ಎಂಬ ಅಡ್ಡ ಹೆಸರುಳ್ಳ ಮಹಮ್ಮದ್ ಖಾಸಿಂ ಹಿಂದೂ ಷಾಹ್ ಬರದಿರುವನು. ಕ್ರಿ.ಶ.೧೫೭೦ರಲ್ಲಿ ಇರಾನಿನಲ್ಲಿ ಜನಿಸಿ ಕ್ರಿ.ಶ.೧೬೨೩ರಲ್ಲಿ ದಖ್ಖನ್‌ನ ಬಿಜಾಪುರದಲ್ಲಿ ಮಹಮ್ಮದ್ ಖಾಸಿಂನು ನಿಧನ ಹೊಂದಿದನು. ಚಿಕ್ಕವನಿದ್ದಾಗ ಅಹ್ಮದ್‌ನಗರಕ್ಕೆ ಬಂದು ನಂತರ ೪೦ನೇ ವಯಸ್ಸಿಗೆ ಬಿಜಾಪುರಕ್ಕೆ ವಲಸೆ ಬಂದು ಎರಡನೇ ಇಬ್ರಾಹಿಂ ಆದಿಲ್‌ಷಾಹನ ದರ್ಬಾರಿನಲ್ಲಿ ಕ್ರಿ.ಶ.೧೫೯೧ರಲ್ಲಿ ಸೇವೆಗೆ ಸೇರಿದನು. ಫೆರಿಷ್ತಾನ ಈ ಕೃತಿಯು ದಖ್ಖನ್ನಿನ ಸುಲ್ತಾನರ ಚರಿತ್ರೆಯನ್ನು ಒಳಗೊಂಡಿದೆ. ಈ ಕೃತಿಯು ಬಹಮನಿಯರ ಸಾಮ್ರಾಜ್ಯದ ಬಗ್ಗೆ ಅಮೂಲ್ಯವಾದ ಮಾಹಿತಿಯನ್ನು ಒದಗಿಸುತ್ತದೆ. ಇವನ ಹೇಳಿಕೆಗಳು ಸತ್ಯಕ್ಕೆ ದೂರವಾಗಿದ್ದು ಚರಿತ್ರೆಯಲ್ಲಿ ವಿಶ್ವಾಸಾರ್ಹತೆಯನ್ನು ಪಡೆಯುವಲ್ಲಿ ವಿಫಲವಾಗಿದೆ. ಮಹಮ್ಮದ್ ಖಾಸಿಂನು ಬಹಮನಿಯರ ಬಗ್ಗೆ ಬರೆದಿದ್ದು ಕ್ರಿ.ಶ.೧೬೧೧೪ರಲ್ಲಿ ಅಂದರೆ ಸುಮಾರು ನೂರು ವರ್ಷಗಳ ನಂತರ ಇಷ್ಟೆಲ್ಲಾ ನ್ಯೂನ್ಯತೆಗಳಿದ್ದರೂ ಸಹ ಮಹಮ್ಮದ್‌ಷಾಹನ ಕೃತಿಯು ಮಧ್ಯಕಾಲೀನ ಭಾರತದ ಘಟನಾವಳಿಗಳ ಬಗ್ಗೆ ಹೇರಳವಾದ ಮಾಹಿತಿಯನ್ನು ದೊರಕಿಸಿಕೊಡುತ್ತದೆ.

ದಖ್ಖನ್ ಸುಲ್ತಾನರ ಮಿರ್‌ಜುಮ್ಲಾ ಮತ್ತು ದಖ್ಖನ್ನಿನ ಸುಲ್ತಾನರ ಮಧ್ಯೆ ನಡೆದ ಪತ್ರ ವ್ಯವಹಾರಗಳು, ೧೮೫೭ರಲ್ಲಿ ನಿಕೆಟಿನ್‌ರಿಂದ ಬರೆಯಲ್ಪಟ್ಟ **ದಿ ಇನ್‌ಸ್ಕ್ರಿಪ್‌ಷನ್ಸ್ ಆಂಡ್ ಎಂಟಿಕ್ವಿಟೀಸ್ ಆಫ್ ಬೀದರ್ ಆಂಡ್ ದಿ ಮೆಮೋಯರ್ಸ್,** ನಯೀಮ್‌ನ ಬಹಮನಿಯರ ವಿದೇಶಿ, ಸಾಂಸ್ಕೃತಿಕ ಸಂಬಂಧಗಳ ಕುರಿತಾದ ದಾಖಲೆಗಳು ಬಹಮನಿ ಸಾಮ್ರಾಜ್ಯದ ಮತ್ತು ದಖ್ಖನ್ನಿನ ಪ್ರದೇಶ ಹಾಗೂ ಸಂಸ್ಕೃತಿಗಳು ಅಭಿವೃದ್ಧಿಗೆ ನೀಡಿದ ಕೊಡುಗೆಗಳಿಗೆ ನಿಖರವಾದ ಸಾಕ್ಷ್ಯಗಳನ್ನು ಒದಗಿಸುತ್ತವೆ.

ಜಾನ್ ಬ್ರಿಗ್ಸ್‌ನು ಬರೆದ **ಹಿಸ್ಟರಿ ಆಫ್ ದಿ ರೈಜ್ ಆಫ್ ದಿ ಮಹಮ್ಮದನ್ ಪವರ್ ಇನ್ ಇಂಡಿಯಾ**ದಲ್ಲಿ ರಚಿಸಿದ ೪ ಸಂಪುಟಗಳು ಬಹಮನಿ ಸುಲ್ತಾನರ ವಿಜಯಯಾತ್ರೆಯ ವಿವರ ನೀಡುತ್ತದೆ. ಸುಲ್ತಾನರ ಬಹುಮುಖಿ ಆಡಳಿತ ತಾತ್ವಿಕ ಮತ್ತು ಅಭಿವೃದ್ಧಿಯ ಪ್ರಯತ್ನಗಳು ದಖ್ಖನ್ ಪ್ರದೇಶದ ಸಂಸ್ಕೃತಿಯನ್ನು ಉತ್ಕೃಷ್ಟಗೊಳಿಸುವ ಕುರಿತು ವಿವರ ನೀಡುತ್ತದೆ. ಇದರ ಹೊರತಾಗಿ ಈ ಬರಹಗಳು ಬಹಮನಿ ಸುಲ್ತಾನರ ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ ಮತ್ತು ಆರ್ಥಿಕ ನಿಯಮಾವಳಿಗಳನ್ನು ಮತ್ತು ಕಾರ್ಯಚಟುವಟಿಕಗೆಗಳ ಕುರಿತು ನಿಖರವಾದ ವಿವರಣೆಯನ್ನು ನೀಡುತ್ತವೆ.

ಆಂದ್ರಪ್ರದೇಶದ ಹೈದರಾಬಾದ್‌ನಲ್ಲಿರುವ ಸಾರ್ವಜನಿಕ ದಫ್ತರ್‌ಖಾನೆಯಲ್ಲಿ ದೊರೆತಿರುವ ಕೆಲವು ಬಹುಮುಖ್ಯ ದಾಖಲೆಗಳು ಇಂಗ್ಲಿಶ್‌ನಲ್ಲಿವೆ. ಇವುಗಳು ಬಹಮನಿ ಸಾಮ್ರಾಜ್ಯದ ಹಲವು ಐತಿಹಾಸಿಕ ಅಂಶಗಳಿಗೆ ಸಂಬಂಧಿಸಿದ ದಾಖಲೆಗಳ ಕುರಿತದ್ದವುಗಳಾಗಿವೆ. ಅವುಗಳಲ್ಲಿ ಪ್ರಮುಖವಾಗಿ ಜಾನ್ ಬ್ರಿಗ್ಸ್ ರವರ **ಹಿಸ್ಟರಿ ಆಫ್ ದ ರೈಜ್ ಆಫ್ ದ ಮಹಮ್ಮದನ್ ಪವರ್ ಇನ್ ಇಂಡಿಯಾ,** ಸರ್ ವುಲ್ಸಲಿ ಹೇಗ್ಸ್‌ರವರ ಹಿಸ್ಟಾರಿಕಲ್ ಲ್ಯಾಂಡ್ಮಾರ್ಕ್ಸ್ ಆಫ್ ಡೆಖ್ಖನ್, ರಿಲಿಜನ್ ಆಫ್ ಅಹ್ಮದ್‌ಷಾಹ ಬಹಮನಿ ಮತ್ತು ಹೈದ್ರಾಬಾದ್‌ನ ಪುರಾತತ್ವ ಇಲಾಖೆಯ ವರದಿ, ಮಿಚೆಲ್ ಮತ್ತು ಜೆಬೊವಸ್ಕಿಯ **ಆರ್ಕಿಟೆಕ್ಚರ್ ಆ್ಯಂಡ್ ಆರ್ಟ್ಸ್ ಆಫ್ ದ ಡೆಖ್ಖನ್ ಸುಲ್ತಾನೇಟ್ಸ್, ಯಾಜದಾನಿಯ ಬೀದರ್, ಅಂಟಿಕ್ವಟೀಸ್ ಆಫ್ ಬೀದರ್** ಮುಂತಾದವುಗಳು ಬಹಮನಿ ಸಾಮ್ರಾಜ್ಯ ಮತ್ತು ಆ ಸಾಮ್ರಾಜ್ಯದ ಸುಲ್ತಾನರ ಸಾಧನೆಗಳ ಕುರಿತಾದ ಮಹತ್ವದ ವಿವರಣೆಗಳಿರುವ ದಾಖಲೆಗಳನ್ನು ಒದಗಿಸಿವೆ.

ಭಾರತದ ಚರಿತ್ರೆಕಾರರು ಕೂಡ ಬಹಮನಿ ಸಾಮ್ರಾಜ್ಯದ ಕುರಿತು ಸಾಕಷ್ಟು ಅಧ್ಯಯನವನ್ನು ನಡೆಸಿದ್ದಾರೆ ಮತ್ತು ಈ ಸಾಮ್ರಾಜ್ಯದ ಹಲವಾರು ಸಾಮಾಜಿಕ, ರಾಜಕೀಯ, ಆರ್ಥಿಕ ಮತ್ತು ಸಾಂಸ್ಕೃತಿಕ ಕೊಡುಗೆಗಳ ಕುರಿತು ತಮ್ಮ ಬರಹಗಳಲ್ಲಿ ವಿಶ್ಲೇಷಣೆ ಮಾಡಿದ್ದಾರೆ. ಅಂತಹ ಬರಹಗಳಲ್ಲಿ ಪ್ರಮುಖವಾಗಿ ಗುಲಾಮ್‌ನ **ಬೀದರ್ ಇಟ್ಸ್ ಹಿಸ್ಟರಿ ಆಂಡ್ ಮೊನುಮೆಂಟ್ಸ್,** ಇರ್ಫಾನ್ ಹಬೀಬ್‌ರವರ, **ಮೆಡೀವಲ್ ಟೆಕ್ನಾಲಜಿ ಎಕ್ಸ್‌ಚೇಂಜ್ಡ್ ಬಿಟ್ವೀನ್ ಇಂಡಿಯಾ ಆ್ಯಂಡ್ ಇಸ್ಲಾಮಿಕ್, ಪೊಲಿಟಿಕಲ್ ಥಿಯರಿ ಆಫ್ ದ ದೆಹಲಿ–ಸುಲ್ತಾನೇಟ್ ಆ್ಯಂಡ್ ದ ಅಗ್ರೇರಿಯನ್ ಸಿಸ್ಟಮ್ ಆಫ್ ಮೊಗಲ್ ಇಂಡಿಯಾ,** ಹಬೀಬುಲ್ಲಾಹ ರವರ **ಫೌಂಡೇಶನ್ ಆಫ್ ಮುಸ್ಲಿಮ್ ರೂಲ್ ಇನ್ ಇಂಡಿಯಾ,** ಹುಸೇನ್‌ರವರ **ತುಘಲಕ್ ಡೈನಾಸ್ಟಿ,** ನಯೀಮ್‌ರವರ ಫಾರೆನ್ ಕಲ್ಚರಲ್ ರಿಲೇಶನ್ ಆಫ್ ದ ಬಹಮನೀಸ್, ನಿಜಾಮಿಯವರ **ಸೂಫಿ ಮೂವ್‌ಮೆಂಟ್ ಇನ್ ದ ಡೆಖ್ಖನ್,** ಶೇರ್ವಾನಿಯವರ **ಹಿಸ್ಟರಿ ಆಫ್ ಮೆಡೀವಲ್ ಡೆಖ್ಖನ್,** ಶೇರ್ವಾನಿ ಮತ್ತು ಜೋಶಿಯವರ **ಹಿಸ್ಟರಿ ಆಫ್ ಮೆಡೀವಲ್ ಡೆಖ್ಖನ್** ಮತ್ತು ದ **ಅರ್ಲಿ ಹಿಸ್ಟರಿ ಆಫ್ ದ ಡೆಖ್ಖನ್,** ಸಿದ್ದಕಿಯವರ **ಬಹಮನಿ ಸುಲ್ತಾನೇಟ್** ಮತ್ತು **ಬಹಮನಿ ಸೂಫಿಸ್,** ಚೌರಾಸಿಯರವರ **ಹಿಸ್ಟರಿ ಆಫ್ ಮೆಡೀವಲ್ಸ್ ಇಂಡಿಯಾ,** ದೇಸಾಯಿಯವರ **ಆರ್ಕಿಟೆಕ್ಚರ್–ದ ಬಹಮನೀಸ್,** ದೇವರೆಯವರ **ಎ ಶಾರ್ಟ್ ಹಿಸ್ಟರಿ ಆಫ್ ಪರ್ಶಿಯನ್ ಲಿಟ್‌ರೇಚರ್ ಎಟ್ ದ ಬಹಮನಿ,** ಮೆಹತಾರವರ **ಅಡ್ವಾನ್ಸ್ಡ ಸ್ಟಡಿ ಇನ್ ದ**

**ಹಿಸ್ಟರಿ ಆಫ್ ಮೆಡೀವಲ್ ಇಂಡಿಯಾ,** ಜಗದೀಶ ನಾರಾಯಣ ಸರ್ಕಾರವರ **ಕರೆಸ್ಪಾಂಡೆನ್ಸ್ ಬಿಟ್ವೀನ್ ದ ಡೆಖ್ಖನಿ ಸುಲ್ತಾನೇಟ್ಸ್ ಆ್ಯಂಡ್ ಮಿರ್‌ಜುಮ್ಲಾ ವಿತ್ ದ ಕೋರ್ಟ್ ಆಫ್ ಪರ್ಶಿಯಾ** ಹಾಗೂ ಸಿದ್ಧಿಕಿಯವರ **ಬಹಮನಿ ಸುಲ್ತಾನೇಟ್** ಮತ್ತು **ದ ಬಹಮನಿ ಸೂಫಿಸ್** ಇವುಗಳಲ್ಲಿ ಬಹಮನಿ ಸಾಮ್ರಾಜ್ಯ ಮತ್ತು ಸುಲ್ತಾನರ ವಿವಿಧ ಕ್ಷೇತ್ರಗಳಲ್ಲಿನ ಅಧ್ಯಯನ ನಡೆಸಿರುವುದಲ್ಲದೇ ವಿವಿಧ ಆಯಾಮಗಳಿಂದ ಅವುಗಳನ್ನು ವಿಶ್ಲೇಷಿಸಿದ್ದಾರೆ.

ಭಾರತದ ಅನೇಕ ವಿದ್ವಾಂಸರುಗಳಿಂದ ರಚಿಸಲ್ಪಟ್ಟ ಪುಸ್ತಕಗಳು ಹಾಗೂ ಬರಹಗಳು ಕೂಡ ಬಹಮನಿ ಸಾಮ್ರಾಜ್ಯದ ಹುಟ್ಟು, ಬೆಳವಣಿಗೆ, ಆರ್ಥಿಕ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿ ದಖ್ಖನ್ ಪ್ರದೇಶದಲ್ಲಾದ ಗಣನೀಯ ಅಭಿವೃದ್ಧಿ ಮತ್ತು ಸಾಧನೆಗಳ ಬಗ್ಗೆ ವ್ಯಾಪಕವಾದ ವಿವರಗಳನ್ನು ನೀಡುತ್ತವೆ. ಈ ಬರಹಗಾರರು ಬಹಮನಿ ಅರಸರು ಸಾಮ್ರಾಜ್ಯದ ಪ್ರದೇಶದ ಜನರಿಗೆ ಹಲವು ರೀತಿಯಲ್ಲಿ ಪ್ರಯೋಜನಕಾರಿಯಾದಂತಹ ಪ್ರಗತಿಪರ ನೀತಿ ನಿಯಮಾವಳಿಗಳು ಮತ್ತು ಕಾರ್ಯಕ್ರಮಗಳನ್ನು ರೂಪಿಸಿರುವುದರ ಕುರಿತು ತಮ್ಮ ಬರಹಗಳಲ್ಲಿ ಹೊಗಳಿದ್ದಾರೆ. ಈ ಬರಹಗಳು ಯಾವುದೇ ಪಕ್ಷಪಾತಕ್ಕೊಳಗಾಗದೆ ಮತ್ತು ಬಾಹ್ಯ ಪರಿಗಣನೆಗೊಳಗಾಗದೆ ಬಹಳ ಉಪಯುಕ್ತವಾದ ವಿವರಗಳನ್ನು ನೀಡಿವೆ.

ನಯೀಮ್, ಹುಸೇನ್, ಮಿಚೆಲ್ಸ್, ಸಯ್ಯದ್ ಹಸೇಮಿ ಮತ್ತು ಮುಂತಾದ ಪ್ರಮುಖರು ಕೂಡ ಹಲವು ಪುಸ್ತಕಗಳನ್ನು ಸಂಪಾದನೆ ಮಾಡಿದ್ದಾರೆ. ಇವುಗಳಲ್ಲಿ ಬಹಮನಿ ಸಾಮ್ರಾಜ್ಯದ ಸುಲ್ತಾನರ ಅನೇಕ ಪ್ರಗತಿಪರ ಕಾರ್ಯಕ್ರಮಗಳು ಹೇಗೆ ಈ ಸಾಮ್ರಾಜ್ಯವನ್ನು ದಖ್ಖನ್ ಪ್ರದೇಶದ ಇತಿಹಾಸದಲ್ಲಿ ಹಾಗೂ ಭಾರತದ ಉಪಖಂಡದ ಇತಿಹಾಸದಲ್ಲಿ ಬಲಿಷ್ಠ ಮತ್ತು ಸ್ಮರಣೀಯಗೊಳಿಸಿದ್ದವು ಎಂಬುದರ ಕುರಿತಾದ ದಾಖಲೆಗಳಿಗೆ ಸಂಬಂಧಿಸಿದ್ದಾಗಿವೆ. ಈ ಬರಹಗಳು, ಬಹಮನಿ ಸಾಮ್ರಾಜ್ಯವು ಭಾರತದ ಇತಿಹಾಸದಲ್ಲೇ ಉಳಿದೆಲ್ಲಾ ಸ್ವತಂತ್ರ ಮುಸ್ಲಿಂ ಸಾಮ್ರಾಜ್ಯಗಳಲ್ಲಿಯೇ ಬಹಳ ಬಲಿಷ್ಠ ಸಾಮ್ರಾಜ್ಯವಾಗಿತ್ತು ಎಂಬುದಕ್ಕೆ ಅಧಿಕೃತ ಆವೃತ್ತಿಗಳಾಗಿವೆ ಎಂದರೆ ತಪ್ಪಾಗಲಿಕ್ಕಿಲ್ಲ.

ಭಾರತದ ಇತಿಹಾಸ ಸಂಶೋಧಕ ಮಂಡಳಿ ಹೈದರಾಬಾದ್‌ನ ದಾಖಲೆಗಳು ಕೂಡ ಬಹಮನಿ ಸಾಮ್ರಾಜ್ಯಕ್ಕೆ ಸಂಬಂಧಿಸಿದ ಕೆಲವು ಉಪಯುಕ್ತ ಆಧಾರಗಳನ್ನು ಒಳಗೊಂಡಿವೆ. ಆದರೆ ಈ ದಾಖಲೆಗಳು ಮುಸ್ಲಿಮರ ಪರವಾದ ದೃಷ್ಟಿಕೋನದಿಂದ ಕೂಡಿರುವುದರಿಂದ ಇದನ್ನು ಸಕಾರಾತ್ಮವಾಗಿ ಮತ್ತು ನ್ಯಾಯೋಚಿತವಾಗಿ ವಿಶ್ಲೇಷಿಸುವ ಅವಶ್ಯಕತೆ ಇದೆ. ಏಕೆಂದರೆ ಸ್ಥಳೀಯ ದಾಖಲೆಗಳು ಉರ್ದು ಭಾಷೆಯಲ್ಲಿರುವುದರಿಂದ ಇಂಗ್ಲಿಶ್ ಭಾಷೆಗೆ ಭಾಷಾಂತರ ಮಾಡಿ ಆಧಾರಗಳನ್ನು ತಿರುಚಿ ಭಾಷಾಂತರಿಸಿರುವುದು ಕಂಡುಬರುತ್ತದೆ. ಇದನ್ನು ಸರಿಪಡಿಸಿಕೊಂಡು ಮುನ್ನುಗ್ಗುವ ಜವಾಬ್ದಾರಿ ಇವರನ್ನು ಮತ್ತಷ್ಟು ಸಶಕ್ತರನ್ನಾಗಿಸಲು ಸಹಕಾರಿಯಾಗಿದೆ. ಇಂತಹ ಬರಹಗಳು ಕೂಡ ಇತಿಹಾಸದ ವಿದ್ಯಾರ್ಥಿಗಳಿಗೆ ಬಹಮನಿ ಸಾಮ್ರಾಜ್ಯ ಮತ್ತು ಅದರ ಕೊಡುಗೆಗಳನ್ನು ಸರಿಯಾದ ನಿಟ್ಟಿನಲ್ಲಿ ಅರ್ಥೈಸಿಕೊಳ್ಳಲು ಆತ್ಮ ಬಲ ತುಂಬುವಂತಹ ಬರಹಗಳಾಗಿವೆ.

ಪುರಾತತ್ವ ಇಲಾಖೆಯಲ್ಲಿ ಲಭ್ಯವಿರುವ ದಾಖಲೆಗಳಾದ ಎಕ್ಸೆಲೆನ್ಸಿ ನಿಜಾಮ ಆಫ್ ಹೈದರಾಬಾದ್ ಮತ್ತು ಸೌಥ್ ಇಂಡಿಯನ್ ಎಫಿಗ್ರಾಫಿಯ ವಾರ್ಷಿಕ ವರದಿಗಳು, ಬಹಮನಿ ಸುಲ್ತಾನರ ಆಳ್ವಿಕೆಯಲ್ಲಿ ದಖ್ಖನ್ ಪ್ರದೇಶದ ಜನರ ಜೀವನ ಮತ್ತು ಅವರ ಸ್ಥಿತಿಗತಿಗಳ ಕುರಿತು ಉಪಯುಕ್ತವಾದ ವಿವರಗಳನ್ನು ನೀಡುತ್ತವೆ. ಅಲ್ಲದೇ ಬಹಮನಿ ಸುಲ್ತಾನರ ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ ಮತ್ತು ಆರ್ಥಿಕ

ದೃಷ್ಟಿಕೋನಗಳು ಮತ್ತು ಆಚರಣೆಗಳ ಬಗ್ಗೆ ಈ ದಾಖಲೆಗಳು ಧಾರಾಳ ಸಾಕ್ಷ್ಯಗಳನ್ನು ಒದಗಿಸಿವೆ. ಮತ್ತು ಕ್ರಿ.ಶ.೧೩೪೭ರಿಂದ ಕ್ರಿ.ಶ.೧೫೫೦ರ ಅವಧಿಯಲ್ಲಿ ಪರ್ಷಿಯನ್ ಗಲ್ಫ್ ಮತ್ತು ಬಹಮನಿ ಸಾಮ್ರಾಜ್ಯದ ಸಂಬಂಧಗಳಿಗೆ ಸಂಬಂಧಿತ ಮಾಹಿತಿಯನ್ನು ಒದಗಿಸಿವೆ.

ಬಹಮನಿ ಸುಲ್ತಾನರ ವೈಭವ ಕಾಲಕ್ಕೆ ಸಂಬಂಧಿಸಿದ ಅಗಾಧ ಮತ್ತು ನಿಖರವಾದ ಮೂಲಾಧಾರಗಳುಳ್ಳ ಶೇಖರಣೆಗಳನ್ನು ಭಾರತದ ನಾನಾ ಭಾಗಗಳಲ್ಲಿ ಕಾಣಲು ಸಿಗುತ್ತವೆ. ಅವುಗಳಲ್ಲಿ ಮದ್ರಾಸ್, ಕಲ್ಕತ್ತಾ, ಕ್ಯಾಲಿಕಟ್, ದೆಹಲಿ, ಹೈದರಾಬಾದ್, ತೆಹರಾನ್ ಮತ್ತು ಇನ್ನುಳಿದ ಕೆಲವು ಮಧ್ಯಪೂರ್ವ ಭಾಗಗಳಲ್ಲಿ ದಾಖಲೆಗಳ ಕಛೇರಿಗಳಲ್ಲಿ ನಾವು ಕಾಣಬಹುದಾಗಿದೆ. ಭಾರತದಲ್ಲಿ ವಿದೇಶಿ ಮತ್ತು ಗೃಹ-ಇಲಾಖೆಯ ಗೌಪ್ಯ ಸಲಹೆಗಳು, ಹೈದರಾಬಾದ್ ದಿನಚರಿಗಳು ಮತ್ತು ಸಲಹೆಗಳು, ಅರಣ್ಯ ದಾಖಲೆಗಳು ಮಿಲಿಟರಿಯ ದೇಶಿಯ-ಪತ್ರ ವ್ಯವಹಾರಗಳು(ಮಿಲಿಟರಿ ಸಂಡ್ರೀಸ್), ಹೈದರಾಬಾದ್ ನಿಜಾಮನ ಕಛೇರಿಯ ದಾಖಲೆಗಳು ಮುಂತಾದವುಗಳು ದಖ್ಖನ್ನಿನ ಬಹಮನಿ ಸಾಮ್ರಾಜ್ಯದ ಕುರಿತು ಸಾಕಷ್ಟು ಮಟ್ಟದಲ್ಲಿ ನಂಬಲಾರ್ಹ ಮಾಹಿತಿಗಳನ್ನು ನೀಡಿವೆ. ಈ ಆಧಾರಗಳ ಹೊರತಾಗಿ ದಖ್ಖನ್ನಿನ ಅಭಿವೃದ್ಧಿಯಲ್ಲಿ ಪರ್ಷಿಯನ್ ದಾಖಲೆಗಳು ಮತ್ತು ವರದಿಗಳು ಕೂಡ ಇದನ್ನೇ ಪುಷ್ಠೀಕರಿಸುತ್ತವೆ. ಆದರೆ ಬಹಮನಿ ಸಾಮ್ರಾಜ್ಯದ ಪಾತ್ರದ ಕುರಿತು ಒಂದು ಅಂತಿಮ ತೀರ್ಮಾನಕ್ಕೆ ಬರುವುದಕ್ಕಿಂತ ಮೊದಲು ಇವುಗಳ ಕುರಿತು ಕ್ರಮಬದ್ಧ ವಿಷಯ ವಿಶ್ಲೇಷಣೆ ಮಾಡುವ ಅವಶ್ಯಕತೆ ಇದೆ.

೧೯೯೮ರಲ್ಲಿ ಸಾಕಿಯವರು ಬರೆದ **ಮೇಕಿಂಗ್ ಹಿಸ್ಟರಿ: ಕರ್ನಾಟಕಾಸ್ ಪೀಪಲ್ ಆ್ಯಂಡ್ ದೇಯರ್ ಪಾಸ್ಟ್** ಶೀರ್ಷಿಕೆಯ ಪುಸ್ತಕವು ಎರಡು ಸಂಪುಟಗಳನ್ನು ಒಳಗೊಂಡಿದ್ದು, ಇದು ಮಾನವನು ವಾಸಮಾಡಲು ಪ್ರಾರಂಭಿಸಿದ ಕಾಲದಿಂದ ಸುಮಾರು ೪೦ ಸಾವಿರ ವರ್ಷಗಳ ಅನಾದಿ ಕಾಲದ ಕರ್ನಾಟಕ ಇತಿಹಾಸದಿಂದ ಹಿಡಿದು ಅದು ಬ್ರಿಟಿಶ್‌ರಿಂದ ವಸಾಹತೀಕರಣಕ್ಕೊಳಪಟ್ಟ ಕಾಲದವರೆಗೆ ಕರ್ನಾಟಕದ ಇತಿಹಾಸದ ಕುರುಹುಗಳನ್ನು ಇದರಲ್ಲಿ ಕಾಣಬಹುದು. ಈ ಪುಸ್ತಕವು ವಿಶಾಲಮಟ್ಟದ ಪ್ರಾಥಮಿಕ ಮತ್ತು ದ್ವಿತೀಯ ಮೂಲಾಧಾರಗಳ ನೆಲೆಗಟ್ಟಿನ ಮೇಲೇ ನಿಂತಿದ್ದು, ಕರ್ನಾಟಕದ ಮೇಲೆ ಬ್ರಿಟಿಶ್‌ರ ವಸಾಹತು ನೀತಿಯ ಪರಿಣಾಮದ ಕಡೆ ಹೆಚ್ಚು ಒತ್ತು ನೀಡಿದೆ. ಲೇಖಕರು ಈ ಅವಧಿಯಲ್ಲಿ ಬಹಮನಿ ಸುಲ್ತಾನರ ಆಳ್ವಿಕೆಯನ್ನು ವಿಶೇಷವಾಗಿ ಈ ಪುಸ್ತಕದಲ್ಲಿ ನಮೂದಿಸಿದ್ದಾರೆ.

೧೯೭೪ರಲ್ಲಿ ಹೊರತಂದ ನೀಲಕಂಠಶಾಸ್ತ್ರಿಯವರ, ಫಾರಿನ್ ನೋಟಿಸ್ ಆಫ್ ಸೌಥ್ ಇಂಡಿಯಾ-ಫ್ರಮ್ ಮೇಗಾಸ್ತನೀಸ್ ಟು ಮಾಹೋನ್ ಶೀರ್ಷಿಕೆಯ ಪುಸ್ತಕವು ಕ್ರಿಶ್ಚಿಯನ್ ಯುಗದ ಆರಂಭದಿಂದ ಸುಮಾರು ೧೫ ಶತಮಾನದವರೆಗಿನ ದಕ್ಷಿಣ ಭಾರತದ ಐತಿಹಾಸಿಕ ವಸ್ತುಗಳ ಸಂಗ್ರಹವಾಗಿದೆ. ಇದು ಬಹಮನಿ ಸಾಮ್ರಾಜ್ಯ ಮತ್ತು ಪರ್ಷಿಯನ್ ಗಲ್ಫ್ ನಡುವೆ ಅಸ್ತಿತ್ವದಲ್ಲಿದ್ದ ಸಂಬಂಧಗಳ ಬಗ್ಗೆ ನಿಖರವಾದ ವಿವರಗಳನ್ನು ಒಳಗೊಂಡಿದೆ. ಲೇಖಕರು ಬಹಮನಿ ಸುಲ್ತಾನರು, ಸಾಧಿಸಿದ ಸಾಮಾಜಿಕ-ಸುಧಾರಣೆ, ಸಾಂಸ್ಕೃತಿಕ ಪದೋನ್ನತಿ ಮತ್ತು ಆರ್ಥಿಕ ಅಭಿವೃದ್ಧಿಗೆ ಸಂಬಂಧಿಸಿದ ನಿರ್ದಿಷ್ಟ ವಿವರಗಳನ್ನು ನೀಡಿದ್ದಾರೆ.

೨೦೦೨ರಲ್ಲಿ ಬರೆದ ಚೌರಾಸಿಯಾರವರ, **ಹಿಸ್ಟರಿ ಆಫ್ ಮೆಡೀವಲ್** ಪುಸ್ತಕವು ಸಾಮಾನ್ಯವಾಗಿ ಭಾರತದ ಇತಿಹಾಸ ಮತ್ತು ಬಹಮನಿ ಸಾಮ್ರಾಜ್ಯಕ್ಕೆ(೧೩೪೮-೧೫೨೬) ಕುರಿತದ್ದಾಗಿದೆ. ಈ ಕೃತಿಯು ಲೇಖಕರು ತಿಳಿಸುವುದೇನೆಂದರೆ, ಬಹಮನಿ ಸಾಮ್ರಾಜ್ಯವು ಕ್ರಿ.ಶ.೧೩೪೭ರಿಂದ ಕ್ರಿ.ಶ.೧೪೮೭ ರವರೆಗೆ ೧೪ ಸುಲ್ತಾನರ ಆಳ್ವಿಕಗೆ ಒಳಪಟ್ಟಿತು. ನಂತರ ೫ ಭಾಗಗಳಾಗಿ ವಿಂಗಡಣೆಯಾದಾಗ್ಯೂ ಕೂಡ ಕ್ರಿ.ಶ.೧೫೨೬ರ ತನಕ ತನ್ನದೇ ಆದ ಪ್ರಾಮುಖ್ಯತೆಯನ್ನು ಮುಂದುವರೆಸಿಕೊಂಡು ಹೋಗಿತ್ತು ಎಂದು ತಿಳಿಸಿದ್ದಾರೆ.

ಬಹಮನಿ ಸಾಮ್ರಾಜ್ಯವು ತನ್ನ ಉತ್ತುಂಗದ ಸ್ಥಿತಿಯಲ್ಲಿದ್ದಾಗ ಪರಿಪೂರ್ಣ ಅಧಿಕಾರ, ಅಳೆಯಲಾಗದ ಅಗಾಧ ಸಂಪತ್ತು, ಕ್ರೌರ್ಯ, ಉತ್ಸಾಹ, ಪ್ರತಿಷ್ಠೆ ಮತ್ತು ಪಕ್ಷಪಾತದಿಂದ ಕೂಡಿರುವುದನ್ನು ಕೂಡ ಬಹಿರಂಗಪಡಿಸಿದ್ದಾರೆ.

೨೦೦೭ರಲ್ಲಿ ಸತೀಶ್ ಚಂದ್ರರವರು ಬರೆದ **ಹಿಸ್ಟರಿ ಆಫ್ ಮೆಡೀವಲ್ ಇಂಡಿಯಾ** ಕೃತಿಯ ಎರಡು ಅಧ್ಯಾಯಗಳು ಬಹಮನಿಯ ಆಳ್ವಿಕೆ ಮತ್ತು ಅದರ ಸಾಂಸ್ಕೃತಿಕ ಕೊಡುಗೆಗಳನ್ನು ಕುರಿತದ್ದಾಗಿದೆ. ಲೇಖಕರು ತಿಳಿಸಿದಂತೆ ವಿಜಯನಗರ ಮತ್ತು ಬಹಮನಿ ಸಾಮ್ರಾಜ್ಯಗಳ ಸುಮಾರು ೨೦೦ ವರ್ಷಗಳಿಗಿಂತ ಹೆಚ್ಚು ಕಾಲ ಭಾರತದ ವಿಂಧ್ಯಾ ಪರ್ವತಗಳ ದಕ್ಷಿಣದಲ್ಲಿ ಪ್ರಾಬಲ್ಯ ಮೆರೆದವುಗಳಾಗಿವೆ. ಲೇಖಕರು ತಮ್ಮ ಪುಸ್ತಕದಲ್ಲಿ ಬಹಮನಿಯ ಆಡಳಿತಾವಧಿಯಲ್ಲಿ ವಾಣಿಜ್ಯ ಮತ್ತು ಕರಕುಶಲತೆಯ ಬೆಳವಣಿಗೆಗೆ ಹೆಚ್ಚಿನ ಪ್ರಾಮುಖ್ಯತೆ ನೀಡಿರುವುದನ್ನು ಮತ್ತು ಹೇಗೆ ಅನೇಕ ಕಾರಣಗಳಿಂದಾಗಿ ದಖ್ಖನ್‌ನಲ್ಲಿ ಬಹಮನಿ ಸಾಮ್ರಾಜ್ಯ ಐದು ಭಾಗಗಳಾಗಿ ನಿಯೋಜನೆಯಾಯಿತೆಂಬುದನ್ನು ಕುರಿತು ಬರೆದಿದ್ದಾರೆ.

೧೯೮೭ರಲ್ಲಿ ಮೆಹತಾರವರಿಂದ ಹೊರತಂದ **ಅಡ್ವಾನ್ಸ್ಡ್ ಸ್ಟಡಿ ಇನ್ ದಿ ಹಿಸ್ಟರಿ ಆಫ್ ಮೆಡೀವಲ್ ಇಂಡಿಯಾ** ಕೃತಿಯ ದಖ್ಖನ್‌ನಲ್ಲಿ ಬಹಮನಿಯರ ಆಳ್ವಿಕೆ ಕಾಲದ ಸಾಮಾಜಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಬೆಳವಣಿಗೆಗಳನ್ನು ವಿವರಿಸುತ್ತದೆ. ಗುಲ್ಬರ್ಗಾದ ಬಹಮನಿ ಸಾಮ್ರಾಜ್ಯ ಮತ್ತು ವಿಜಯನಗರ ಸಾಮ್ರಾಜ್ಯಗಳೆರಡೂ ಬಹುತೇಕ ಏಕಕಾಲದಲ್ಲಿಯೇ ಅಸ್ತಿತ್ವಕ್ಕೆ ಬಂದವು. ದಕ್ಷಿಣದಲ್ಲಿ ಭಾರತದ ಅರ್ಧದಷ್ಟು ಭಾಗವನ್ನಾವರಿಸಿದ ಇವೆರಡೂ ಸಾಮ್ರಾಜ್ಯಗಳ ಕಾಲಮಾನವು ಭಾರತದ ಸಾಮಾಜಿಕ ಆರ್ಥಿಕ ಇತಿಹಾಸದಲ್ಲೇ ಒಂದು ವಿಶಿಷ್ಟ ಯುಗಾರಂಭಕ್ಕೆ ನಾಂದಿಯಾಯಿತು. ಇದಲ್ಲದೇ ಲೇಖಕರು ಗಮನಿಸಿದಂತೆ ಬಹಮನಿ ಸುಲ್ತಾನರು ನ್ಯಾಯೋಚಿತವಾಗಿ ಭಾರತೀಯರಾಗಿದ್ದು ಅವರ ಆಚಾರ ವಿಚಾರಗಳ ದಕ್ಷಿಣ ಭಾರತದ ಸಂಸ್ಕೃತಿಗಳನ್ನು ಕೊಂಡೊಯ್ಯುವ ಗುರುತರವಾದ ನೆಲೆಗಟ್ಟಿನ ಮೇಲೆ ನಿಂತಿದ್ದವು ಎಂದೂ ತಿಳಿಸಿದ್ದಾರೆ.

ಬಹಮನಿಯರ ಇತಿಹಾಸ ಅಧ್ಯಯನಕ್ಕೆ ನೆರವಾಗುವ ಕೆಲವು ಶಾಸನಗಳಿದ್ದರೂ, ಅವು ಪರ್ಶಿಯನ್ ಭಾಷೆಯಲ್ಲಿವೆ. ಈ ಶಾಸನಗಳಲ್ಲಿರುವ ಕೆಲವು ಇತಿಹಾಸ ಕಥನಗಳು ಮುಖ್ಯ ಸಾಧನಾ ಸಾಮಗ್ರಿಗಳಾಗಿವೆ. ಅವುಗಳೆಂದರೆ, ಅಹ್ಮದ್‌ನಗರದ–ತಬಾತಬಾ ಬರೆದ–ಬುರ್ಹಾನ–ಇ ಮಾಸೀರ(೧೫೯೬) ಮತ್ತು ನಿಜಾಂ–ಉದ್–ದೀನ್ ಬಕ್ಷಿಯ–ತಬರಾಜತ–ಇ–ಅಕ್ಬರೀ(೧೫೯೪) ಬಹುಮನಿ ಸುಲ್ತಾನರ ಬಗ್ಗೆ ಮಾಹಿತಿ ಒದಗಿಸುತ್ತವೆ. ಈ ಶಾಸನಗಳಿಗೆ ಪುಷ್ಠಿ ನೀಡುವಂತಹ ಪ್ರಮುಖ ಬರಹಗಳಾದ ಬಿಜಾಪುರದ ಫೆರಿಸ್ತಾನ–ತಾರೀಖ್–ಇ–ಫೆರಿಸ್ತಾ(೧೬೦೬) ಹಾಗೂ ಷಿರಾಜಿಯ ತಾಜ್–ಕೀರತ್–ಉಲ್–ಮಲೂಕ್(೧೬೧೦) ಇವುಗಳಲ್ಲದೆ ಇವರ ಕಾಲದ ಅರಸರ ನಾಣ್ಯಗಳು ದೊರೆತಿವೆ. ಜೊತೆಗೆ ರಷ್ಯನ್ ಪ್ರವಾಸಿ ನಿಕಟಿನ್ (೧೪೭೧) ಕೂಡ ಕೆಲವು ವಿವರಗಳನ್ನು ನೀಡಿದ್ದಾನೆ. ಅದರಲ್ಲಿ ಅಲ್ಲಾವುದ್ದೀನ್–ಹಸನ್–ಗಂಗು ಬಹುಮನ್ ಷಾ ಎಂಬ ಮಹಾಯೋಧನಿಂದ ಆರಂಭವಾದ ಬಹುಮನಿ ಸಂಸ್ಥಾನವು ಕರ್ನಾಟಕವನ್ನಾಳಿದ ಪ್ರಮುಖ ರಾಜಮನೆತನಗಳಲ್ಲಿ ಒಂದಾಗಿದೆ. ಈ ವಂಶದ ಅರಸರು ಕರ್ನಾಟಕದ ರಾಜಕೀಯದಲ್ಲಿ ಮಹತ್ವದ ಪಾತ್ರವನ್ನು ವಹಿಸಿ ಸಾಮಾಜಿಕ, ಆರ್ಥಿಕ, ಸಾಹಿತ್ಯ, ಶಿಕ್ಷಣ ಹಾಗೂ ಕಲೆ ಮತ್ತು ವಾಸ್ತುಶಿಲ್ಪ ಮುಂತಾದ ಕ್ಷೇತ್ರದಲ್ಲಿ ಗಣನೀಯ ಕೊಡುಗೆ ನೀಡಿರುವುದನ್ನು ಪ್ರಸ್ತುತ ಅಧ್ಯಯನವು ವಿವರಿಸುತ್ತದೆ.

ದಖ್ಖನ್ ಬಹಮನಿ ಸುಲ್ತಾನರ ಹಲವಾರು ವಿಷಯಗಳ ಅಧ್ಯಯನಕ್ಕೆ ಬೇಕಾಗುವ ಹಾಗೂ ಮಧ್ಯಕಾಲೀನ ಚರಿತ್ರೆಯನ್ನು ಅರ್ಥಮಾಡಿಕೊಳ್ಳುವ ದಿಸೆಯಲ್ಲಿ ನಮಗೆ ಬೇಕಾಗುವ ಬಹುಮುಖ್ಯ ಆಕರ ಸಾಮಗ್ರಿಗಳಾದ ಆಲಿಘರ್ ಮುಸ್ಲಿಂ ವಿಶ್ವವಿದ್ಯಾಲಯ, ಜವಾಹರಲಾಲ್ ನೆಹರು ವಿಶ್ವವಿದ್ಯಾಲಯ, ದೆಹಲಿ ವಿಶ್ವವಿದ್ಯಾಲಯ,

ಜಾಮಿಯಾ ವಿಶ್ವವಿದ್ಯಾಲಯ, ಉಸ್ಮಾನಿಯಾ ವಿಶ್ವವಿದ್ಯಾಲಯ ಹೀಗೆ ಹಲವು ವಿಶ್ವವಿದ್ಯಾಲಯಗಳ ವಿದ್ವಾಂಸರುಗಳು ಕೆಲಸ ಮಾಡಿರುವುದನ್ನು ನಾವು ಗಮನಿಸಬಹುದು. ಇರ್ಫಾನ್ ಹಬೀಬ್, ಸತೀಶ್ ಚಂದ್ರ, ಮುಜಾಫರ್ ಆಲಂ, ಎಸ್.ಸುಬ್ರಮಣ್ಯಂ, ಎಮ್.ಎಚ್.ಫಿಷರ್, ಆಕ್ತರ್, ಅತ್ತರಲಿ, ನಜಫ ಹೈದರ್, ಅಜೀಜ್ ಹಸನ್, ಎಸ್.ಎಚ್, ಒಡಿವಾಲ್, ಶಿರಿನ್ ಮೂಸವಿ, ಓಂ ಪ್ರಕಾಶ ಮುಂತಾದವರ ಗ್ರಂಥಗಳು ಈ ನಿಟ್ಟಿನಲ್ಲಿ ಮುಖ್ಯವಾದವುಗಳು. ಬಹಮನಿ ರಾಜ್ಯದ ವಿವಿಧ ಆಯಾಮಗಳ ಮೇಲೆ ಎಚ್.ಕೆ. ಶೆರ್ವಾನಿ, ಜಿ.ಯಾಜದಾನಿ, ಪಿ.ಎಮ್. ಜೋಶಿ, ಸೈಯದ್ ಅಜಮ್ ಮುಂತಾದವರು ಸಂಶೋಧನೆ ಮಾಡಿದ್ದಾರೆ. ಪ್ರಸ್ತುತ ಅಧ್ಯಯನವು ಅವರ ಸಂಶೋಧನೆಯ, ರಾಜಕೀಯ ವಿಶ್ಲೇಷಣೆಗಳನ್ನು ನಿರ್ವಹಿಸುವ ವಿಚಾರವನ್ನು ಈ ಅಧ್ಯಯನ ಇಟ್ಟುಕೊಂಡಿದೆ. ಇದರೊಂದಿಗೆ ಹಿಂದೂ-ಮುಸ್ಲಿಂ, ವಿಜಯನಗರ-ಬಹಮನಿ ಮುಂತಾದ "ಚಾರಿತ್ರಿಕ ಪ್ರಕ್ರಿಯೆ" ಎಂದು ಬಿಂಬಿಸಲಾಗುತ್ತಿರುವ ಅಂಶಗಳನ್ನು ವಿವರಿಸಲು ಪ್ರಯತ್ನಿಸಲಾಗಿದೆ. ಹಾಗಾಗಿ ಈ ಅಧ್ಯಯನವು ಹಲವಾರು ವಿಧವಾದ ಸೂಕ್ಷ್ಮ ವಿಚಾರಗಳತ್ತ ಗಮನ ಹರಿಸುವ ಉದ್ದೇಶವನ್ನು ಇಟ್ಟುಕೊಂಡಿದೆ.

ಮಧ್ಯಕಾಲೀನ ಚರಿತ್ರೆಯಲ್ಲಿ ವಿಜಯನಗರ ಸಾಮ್ರಾಜ್ಯ, ಬಹಮನಿ ರಾಜ್ಯ, ಬಿಜಾಪುರದ ಆದಿಲ್ ಷಾಹಿಗಳು, ಮೊಗಲರು ಇವರ ಕುರಿತಾದ ಅಧ್ಯಯನಕ್ಕೆ ಎಮ್.ಬಿ.ಪಾಟೀಲ ಅವರ **ಗುಲ್ಬರ್ಗಾ ಜಿಲ್ಲೆ ಗ್ಯಾಜೆಟಿಯರ್(೧೯೯೯)**, ಷೇಕ್ ಅಲಿ ಅವರ, **'ಕರ್ನಾಟಕ ಚರಿತ್ರೆ' ಸಂಪುಟ-೩ ಮತ್ತು ೪(೧೯೯೭)** ಆರ್.ಆರ್. ದಿವಾಕರ ಅವರ, **'ಕರ್ನಾಟಕ ಪರಂಪರೆ'(೨೦೦೬)**, ಎ.ವಿ ನರಸಿಂಹಮೂರ್ತಿಯವರ **'ದೆಹಲಿ ಸುಲ್ತಾನರ ಆಧಿಪತ್ಯ' ಭಾಗ-೦೧, ಬೀದರ್ ಜಿಲ್ಲೆಯ ಶಾಸನಗಳು, ಬೀದರ್ ಜಿಲ್ಲಾ ದರ್ಶನ** ಇವು ಕೂಡ ಸಾಮಾಜಿಕ, ಧಾರ್ಮಿಕ, ಆರ್ಥಿಕ ವಿಷಯಗಳ ಅಧ್ಯಯನಕ್ಕೆ ಸಹಕಾರಿಯಾಗಿವೆ.

## ಅಧ್ಯಯನದ ಸ್ವರೂಪ

ಈ ಅಧ್ಯಯನವು ದಖ್ಖನ್ನಿನ ಬಹಮನಿ ರಾಜ್ಯದ ಸಾಮಾಜಿಕ ಹಾಗೂ ಆರ್ಥಿಕ ಸ್ಥಿತ್ಯಂತರಗಳ ಅಧ್ಯಯನದ ಸ್ವರೂಪ ಹೊಂದಿರುವಂತಹದ್ದು. ಇದರಲ್ಲಿ ಆರು ಅಧ್ಯಾಯಗಳಿದ್ದು, ಅವುಗಳ ಸಂಕ್ಷಿಪ್ತ ವಿವರಗಳನ್ನು ಹೀಗೆ ಕಾಣಬಹುದಾಗಿದೆ.

ಅಧ್ಯಾಯ ಒಂದರಲ್ಲಿ, ಅಧ್ಯಯನದ ಪ್ರಸ್ತಾವನೆ, ಉದ್ದೇಶ, ವ್ಯಾಪ್ತಿ, ಸ್ವರೂಪ, ಸಮೀಕ್ಷೆ ಹಾಗೂ ವಿಧಿ-ವಿಧಾನವನ್ನು ಒಳಗೊಂಡಿದ್ದು, ಸಂಶೋಧನಾ ವೈಧಾನಿಕತೆಯ ಚೌಕಟ್ಟನ್ನು ಗುರುತಿಸುತ್ತದೆ.

ಅಧ್ಯಾಯ ಎರಡರಲ್ಲಿ, ಬಹಮನಿ ರಾಜ್ಯದ ಹುಟ್ಟು, ಬೆಳವಣಿಗೆ ಮತ್ತು ಅವನತಿಯ ಬಗ್ಗೆ ವಿವರಿಸಲಾಗಿದೆ. ಸುಮಾರು ೧೯೧ ವರ್ಷಗಳ ಕಾಲ ೧೩೪೭ರಿಂದ ೧೫೩೮ ರವರೆಗೆ ಆಳ್ವಿಕೆ ಮಾಡಿದ ಅಲ್ಲಾವುದ್ದೀನ್-ಹಸನ್-ಗಂಗೂ ಬಹಮನ್-ಷಾನಿಂದ ಆರಂಭವಾಗಿ ಕೊನೆಯ ಅರಸ ಅಮೀರ ಅಲಿಯವರೆಗೂ ಅವರ ರಾಜಕೀಯ ಇತಿಹಾಸ ಮತ್ತು ಆಡಳಿತದ ಬಗ್ಗೆ ಈ ಅಧ್ಯಾಯದಲ್ಲಿ ಸವಿಸ್ತಾರವಾಗಿ ವಿಶ್ಲೇಷಿಸಲಾಗಿದೆ.

ಅಧ್ಯಾಯ ಮೂರರಲ್ಲಿ, ಬಹಮನಿ ಕಾಲದ ಸಾಮಾಜಿಕ ವ್ಯವಸ್ಥೆಯಲ್ಲಿ ಬಹಮನಿ ರಾಜ್ಯದ ಅಧಿಕಾರವಧಿಯ ಸಂದರ್ಭದಲ್ಲಿಯ ಸಾಮಾಜಿಕ ರಚನೆ, ಸಾಮಾಜಿಕ ಸಂಸ್ಥೆಗಳು, ಶಿಕ್ಷಣ ಮತ್ತು ಸಾಹಿತ್ಯ, ಗುಲಾಮಗಿರಿ ಪದ್ಧತಿ, ಭಕ್ತಿ ಪಂಥ, ಸೂಫಿ ಪಂಥ ಇಂತಹ ಪ್ರಮುಖ ವಿಚಾರಗಳ ಜೊತೆ ಜೊತೆಗೆ ಆಗಿನ ಜನರ ಉಡುಗೆ ತೊಡುಗೆಗಳು, ಮದುವೆ, ಜಾತ್ರೆಗಳು ಮತ್ತು ಹಬ್ಬಗಳು, ಕ್ರೀಡೆ, ಆಭರಣಗಳು ಅವರ ಸತಿ

ಸಹಗಮನ ಪದ್ಧತಿ, ವಿವಾಹ ಪದ್ಧತಿಗಳು ಮುಂತಾದ ಸಾಮಾಜಿಕ ಜೀವನದ ಬಗ್ಗೆ ಈ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.) ಬಹಮನಿ ಕಾಲದಲ್ಲಿ ಬಹುಸಂಖ್ಯಾತರೆನಿಸಿದ ಹಿಂದೂಗಳು ವಾಸವಾಗಿದ್ದರಲ್ಲದೆ, ಜೈನ ಮತ್ತು ಕ್ರೈಸ್ತ ಧರ್ಮದ ಅನುಯಾಯಿಗಳೂ ಕೂಡ ಇದ್ದರು. ಇವೆಲ್ಲವುಗಳನ್ನು ಕ್ರೋಢೀಕರಿಸಿ, ಇವರ ಸಾಮಾಜಿಕ ಜೀವನ ಹೇಗಿತ್ತು ಎಂಬುದರ ಕುರಿತು ಸವಿಸ್ತಾರವಾಗಿ ಈ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ, ಬಹಮನಿ ಕಾಲದ ಆರ್ಥಿಕ ವ್ಯವಸ್ಥೆಯಲ್ಲಿ, ಗ್ರಾಮೀಣ ಆರ್ಥಿಕ ವ್ಯವಸ್ಥೆ ಮತ್ತು ನಗರ ಆರ್ಥಿಕ ವ್ಯವಸ್ಥೆ ಎಂದಿದ್ದು, ಅದರಲ್ಲಿ ಗ್ರಾಮೀಣ ಆರ್ಥಿಕ ವ್ಯವಸ್ಥೆಯಲ್ಲಿ ಕೃಷಿಯ ಸ್ಥಾನಮಾನ, ಕೃಷಿಯೇತರ ಉತ್ಪಾದನೆ, ಇದರ ಸ್ಥಾನ, ನೀರಾವರಿ ಮತ್ತು ವಿಧಾನಗಳು, ಕೃಷಿ ಕಾರ್ಮಿಕರು, ಅವರ ಜೀವನದ ಸ್ಥಿತಿಗತಿಗಳು, ಭೂಮಾಲೀಕರು, ಅವರ ಆಡಳಿತ ಕೆಲಸ ಕಾರ್ಯಗಳು, ಭೂಕಂದಾಯ ವ್ಯವಸ್ಥೆಯ ಕ್ರಮ ಮುಂತಾದವುಗಳ ವಿಶ್ಲೇಷಣೆಯನ್ನು ಮಾಡಲಾಗಿದೆ. ನಗರ ಆರ್ಥಿಕ ವ್ಯವಸ್ಥೆ, ನಗರ ಆರ್ಥಿಕ ಜೀವನ, ವ್ಯಾಪಾರ ಮತ್ತು ವಾಣಿಜ್ಯ, ಬಂದರುಗಳು, ವರ್ತಕ ಸಮುದಾಯಗಳು, ವರ್ತಕ ಸಂಘಗಳು, ಕೈಗಾರಿಕೆಗಳು, ಲೇವಾದೇವಿಗಾರರು, ಹಣಕಾಸು ಸಂಸ್ಥೆ ಮತ್ತು ನಾಣ್ಯಗಳು ಮುಂತಾದವುಗಳ ಬಗ್ಗೆ ಅಧ್ಯಯನವನ್ನು ಮಾಡಲಾಗಿದೆ. ಆದಾಯದ ಬಾಬ್ತುಗಳು, ದಂಡ, ಸಾರ್ವಜನಿಕ ಕಾರ್ಯಗಳಲ್ಲಿ ಆದಾಯದ ವಿನಿಯೋಗ ಮುಂತಾದ ಅಂಶಗಳ ಕುರಿತಾಗಿ ತುಲನಾತ್ಮಕ ಅಧ್ಯಯನವನ್ನು ಮಾಡಲಾಗಿದೆ.

ಅಧ್ಯಾಯ ಐದರಲ್ಲಿ, ಬಹಮನಿ ಮತ್ತು ವಿಜಯನಗರದ ನಡುವಿನ ಸಾಮಾಜಿಕ ಮತ್ತು ಆರ್ಥಿಕ ಸಂಬಂಧಗಳ ಕುರಿತು ವಿಶ್ಲೇಷಿಸಲಾಗಿದೆ. ಎರಡೂ ರಾಜ್ಯಗಳ ಸಂಬಂಧಗಳು ಹೆಚ್ಚು ಕಡಿಮೆ ಹೋಲಿಕೆ ಯಾಗುವಂತಿದ್ದವು. ಹಬ್ಬ-ಹರಿದಿನಗಳು, ಉಡುಗೆ-ತೊಡುಗೆಗಳು, ಸ್ತ್ರೀಯರ-ಸ್ಥಾನಮಾನಗಳು, ವಿವಾಹ-ಪದ್ಧತಿಗಳು, ಜಾತಿ ಪದ್ಧತಿ ಬಹುತೇಕ ಒಂದೆ ಆಗಿದ್ದವಲ್ಲದೆ, ಆರ್ಥಿಕವಾಗಿ ಬಹಮನಿ ಮತ್ತು ವಿಜಯನಗರ ಕಾಲದ ಕೃಷಿ, ವ್ಯಾಪಾರ, ಭೂಕಂದಾಯ, ಹಣಕಾಸು, ನೀರಾವರಿ ವ್ಯವಸ್ಥೆ ಮುಂತಾದವುಗಳು ಕೂಡ ಒಂದೇ ರೀತಿಯದ್ದಾಗಿದ್ದವು. ಅದಲ್ಲದೆ ರಾಜಕೀಯವಾಗಿ, ಸಾಮಾಜಿಕವಾಗಿ ಹಾಗೂ ಆರ್ಥಿಕವಾಗಿ, ರಾಜಕೀಯವಾಗಿ, ಧಾರ್ಮಿಕವಾಗಿ ಮತ್ತು ಸಾಹಿತ್ಯಿಕವಾಗಿ, ಕಲೆ ಮತ್ತು ವಾಸ್ತುಶಿಲ್ಪದ ದೃಷ್ಟಿಯಿಂದ ಬಹಮನಿ ಮತ್ತು ವಿಜಯನಗರದ ಜನರ ಜೀವನದ ಸೂಕ್ಷ್ಮ ವಿಚಾರಗಳನ್ನು ಕುರಿತು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

ಅಧ್ಯಾಯ ಆರರಲ್ಲಿ, ಮೇಲಿನ ಎಲ್ಲ ಅಧ್ಯಯನಗಳ ಸಾರಾಂಶವನ್ನು ತಿಳಿಸುವುದು ಹಾಗೂ ಅಧ್ಯಯನದ ಫಲಿತಗಳ ಕುರಿತು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

ಅಧ್ಯಾಯ-ಎರಡು

# ಬಹಮನಿ ರಾಜ್ಯದ ಹುಟ್ಟು, ಬೆಳವಣಿಗೆ ಆಡಳಿತ ಮತ್ತು ಅವನತಿ

ಪ್ರಸ್ತಾವನೆ

೨.೧. ಬಹಮನಿ ರಾಜ್ಯದ ಹುಟ್ಟು

೨.೨. ಬಹಮನಿ ರಾಜ್ಯದ ಬೆಳವಣಿಗೆ

  ೨.೨.೧. ಗುಲ್ಬರ್ಗಾ ಹಂತ(ಕ್ರಿ.ಶ. ೧೩೪೭-೧೪೨೨)

  ೨.೨.೨. ಬೀದರ್ ಹಂತ(ಕ್ರಿ.ಶ. ೧೪೨೨-೧೫೩೮)

೨.೩. ಬಹಮನಿ ರಾಜ್ಯದ ಆಡಳಿತ ವ್ಯವಸ್ಥೆ

  ೨.೩.೧. ಆಡಳಿತ ವ್ಯವಸ್ಥೆ

  ೨.೩.೨. ನ್ಯಾಯಾಂಗ ವ್ಯವಸ್ಥೆ

  ೨.೩.೩. ಸೈನ್ಯಾಡಳಿತ

  ೨.೩.೪. ಕಂದಾಯ ವ್ಯವಸ್ಥೆ

  ೨.೩.೫. ಚಪರ್‌ಖಾನ್ ಮತ್ತು ಕೊತ್ವಾಲ್ ವ್ಯವಸ್ಥೆ

೨.೪. ಬಹಮನಿ ರಾಜ್ಯದ ಅವನತಿ(ಕ್ರಿ.ಶ. ೧೪೮೨-೧೫೩೮)

ಸಮಾರೋಪ

## ಅಧ್ಯಾಯ-೨

# ಬಹಮನಿ ರಾಜ್ಯದ ಹುಟ್ಟು, ಬೆಳವಣಿಗೆ, ಆಡಳಿತ ಮತ್ತು ಅವನತಿ

### ಪ್ರಸ್ತಾವನೆ

ಮಧ್ಯಕಾಲೀನ ಭಾರತದ ಇತಿಹಾಸದಲ್ಲಿ ದಖ್ಖನ್ ಪ್ರದೇಶದ ಜನರು ಕೇಂದ್ರೀಯ ಅಧಿಕಾರದಿಂದ ಹೊರಬರುವುದರ ಮೂಲಕ ತಮ್ಮ ಪ್ರದೇಶದ ಸ್ಥಳೀಯ ಸಾಂಸ್ಕೃತಿಕ ಸಂಪ್ರದಾಯಗಳನ್ನು, ವೈಯಕ್ತಿಕ ಗುಣಲಕ್ಷಣಗಳನ್ನು ಮತ್ತು ಪ್ರಾದೇಶಿಕ ಸಮಗ್ರತೆಯನ್ನು ಸಂರಕ್ಷಿಸಿಕೊಳ್ಳಲು ಹರಸಾಹಸ ಪಟ್ಟರು. ನಿಜರೂಪದಲ್ಲಿ ಬಹಮನಿ ಸಾಮ್ರಾಜ್ಯದ ಹುಟ್ಟು, ಈ ಪ್ರದೇಶದ ಜನರ ಚಕ್ರಾಧಿಪತ್ಯದ ವಿರೋಧಿ ಪ್ರವೃತ್ತಿಗಳ ಅಗಾಧ ಬೆಂಬಲದ ಪರಿಣಾಮವಾಗಿದೆ ಎಂದು ಹೇಳಬಹುದು. ಚರಿತ್ರೆಕಾರರು, ಬಹಮನಿ ಸಾಮ್ರಾಜ್ಯದ ಇತಿಹಾಸವು ಅದರ ಉಳಿಯುವಿಕೆಗಾಗಿ, ಸಾಮ್ರಾಜ್ಯದ ವಿಸ್ತಾರಕ್ಕಾಗಿ ಮತ್ತು ಅಭಿವೃದ್ಧಿಗಾಗಿ ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣದಲ್ಲಿರುವ, ಬಲಿಷ್ಠ ನೆರೆಹೊರೆಯ ಸಾಮ್ರಾಜ್ಯಗಳನ್ನು ಎದುರಿಸಲು ಮಾಡಿದ ಹೋರಾಟಗಳ ಸಂಕ್ಷಿಪ್ತ ವಿವರಣೆ ಎಂದು ಅಭಿಪ್ರಾಯಪಟ್ಟಿದ್ದಾರೆ. ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಬಹಮನಿ ಸುಲ್ತಾನರ ಪಾತ್ರ ಐತಿಹಾಸಿಕವಾಗಿದೆ. ಇದು ಚರಿತ್ರೆಕಾರರ ಗಮನ ಸೆಳೆಯುವಂತೆ ಮಾಡಿತು. ಬಹಮನಿ ಸುಲ್ತಾನರ ಆಡಳಿತವು ವಿಶಿಷ್ಟ ವಿದ್ಯಮಾನ ಹೊಂದಿದ್ದಾಗಿದೆ. ಇದು ಕೇವಲ ದಖ್ಖನ್ ಪ್ರದೇಶದ ಇತಿಹಾಸದಲ್ಲಿ ಮಾತ್ರವಲ್ಲದೇ, ಭಾರತದ ಇತಿಹಾಸದಲ್ಲಿಯೂ ಅವರ ಜೀವನದ ವಿಭಿನ್ನ ನಡೆಗಳ ಮೂಲಕ ಶ್ಲಾಘನೀಯ ಸಾಧನೆಗಳನ್ನು ಮಾಡಿದ್ದಾರೆ. ಆದರೆ ಬಹಮನಿ ಆಡಳಿತವು ಕೂಡ ಮಾನವೀಯ ಮೌಲ್ಯಗಳ ವಿರುದ್ಧವಾದ ಕೆಲವೊಂದು ನೀತಿಗಳನ್ನು ಹೊಂದಿತ್ತು. ಅದು ಚರಿತ್ರೆಕಾರರ ದೃಷ್ಟಿಯಲ್ಲಿ ಪ್ರಬಲ ಖಂಡನೆಗೆ ಗುರಿಯಾಗಿದೆ. ಈ ಸಾಮ್ರಾಜ್ಯದ ಇತಿಹಾಸವನ್ನು ಅನೇಕ ಆಧಾರಗಳಿಂದ ಮತ್ತು ಮೂಲಗಳಿಂದ ತಿಳಿಯಬಹುದು. ಪ್ರಸ್ತುತ ಅಧ್ಯಾಯದಲ್ಲಿ ಬಹಮನಿ ರಾಜ್ಯದ ಹುಟ್ಟು, ಬೆಳವಣಿಗೆ ಮತ್ತು ಅವನತಿ ಬಗ್ಗೆ ವಿಶ್ಲೇಷಿಸಲಾಗಿದೆ.

### ೨.೧. ಬಹಮನಿ ರಾಜ್ಯದ ಹುಟ್ಟು

ಸಂಸ್ಕೃತದ 'ದಕ್ಷಿಣ' ಎಂಬ ಪದದ ರೂಪಾಂತರವೇ 'ದಖ್ಖನ್' ಎಂದು ಬಹುತೇಕ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಉತ್ತರ ಭಾರತದ ಹಾಗೂ ದಕ್ಷಿಣ ಭಾರತದ ಮಧ್ಯಭಾಗವನ್ನು 'ದಖ್ಖನ್' ಎಂದು ಕರೆಯುವರು. ಉತ್ತರದ ವಿಂದ್ಯಾಪರ್ವತ ಮತ್ತು ನರ್ಮದಾ ನದಿಯಿಂದ ದಕ್ಷಿಣದ ಕೃಷ್ಣಾ ಮತ್ತು ತುಂಗಭದ್ರಾ ನದಿಗಳವರೆಗೆ ಹಾಗೂ ಪಶ್ಚಿಮದ ಕೊಂಕಣದಿಂದ ಪೂರ್ವದ ಕರಾವಳಿಗಳು ದಖ್ಖನ್‌ಗಡಿಗಳೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಉತ್ತರದ ವಿಂದ್ಯಾ ಪರ್ವತಗಳಿಂದ ದಕ್ಷಿಣದ

ನೀಲಗಿರಿ ಘಟ್ಟಗಳವರೆಗಿನ ಪ್ರದೇಶ ದಖ್ಖನ್ ಎಂದೆನ್ನುತ್ತಾರೆ. ದಖ್ಖನ್ ಜ್ವಾಲಾಮುಖಿ ಹರಡಿಕೊಂಡಿರುವ ಪ್ರದೇಶವೇ ದಖ್ಖನ್ ಪ್ರಸ್ಥಭೂಮಿ ಎಂದು ಹೇಳುವುದುಂಟು. ಪ್ರಸ್ತುತ ಅಧ್ಯಾಯದಲ್ಲಿ ದಖನ್ ಪ್ರದೇಶವನ್ನು ಬಹಮನಿ ಸುಲ್ತಾನರ ಅಧೀನದಲ್ಲಿದ್ದ ಪ್ರದೇಶಕ್ಕೆ ನಿರ್ಮಿತಗೊಳಿಸಲಾಗಿದೆ. ಉತ್ತರದಲ್ಲಿ ನರ್ಮದಾ ನದಿಯಿಂದ ದಕ್ಷಿಣದಲ್ಲಿ ಕೃಷ್ಣಾ, ತುಂಗಭದ್ರಾ ನದಿಗಳ ನಡುವಿನ ಭೌಗೋಳಿಕ ಪ್ರದೇಶವನ್ನು 'ಬಹಮನಿ ದಖ್ಖನ್' ಎಂದು ಕರೆಯುವ ವಾಡಿಕೆಯಿದೆ.

ದಖ್ಖನ್ ಪ್ರದೇಶವು ಬಹುಪಾಲು ಬೆಟ್ಟಗಳ ಸಾಲುಗಳಿಂದ ಕೂಡಿದೆ. ವಿಂದ್ಯಾ ಪರ್ವತಗಳು, ಪಶ್ಚಿಮ ಹಾಗೂ ಪೂರ್ವದ ಘಟ್ಟಗಳು ಪ್ರಮುಖವಾದವುಗಳು. ಅವಿರತ ಬೆಟ್ಟಗಳಿಂದ ಕೂಡಿದ ವಿಂದ್ಯಾ ಪರ್ವತಗಳ ಸಾಲುಗಳು ಉತ್ತರ ಹಾಗೂ ದಕ್ಷಿಣ ಭಾರತದ ಗಡಿರೇಖೆಯಂತೆ ಕಾರ್ಯನಿರ್ವಹಿಸಿವೆ. ಪ್ರಾಚೀನ ಕಾಲದಿಂದಲೂ ವಿಂದ್ಯಾಪರ್ವತಗಳ ಸಾಲುಗಳನ್ನು ಉತ್ತರ ಹಾಗೂ ದಕ್ಷಿಣ ಭಾರತದ ಸಾಮ್ರಾಜ್ಯಗಳು ತಮ್ಮ ಸಾಮ್ರಾಜ್ಯಗಳ ಗಡಿರೇಖೆಗಳೆಂದು ಗುರುತಿಸಿಕೊಳ್ಳುತ್ತಿದ್ದರು. ಈ ಪರ್ವತಗಳು ಉತ್ತರದ ರಾಜರ ದಾಳಿಗಳಿಂದ ರಕ್ಷಿಸುವ ರಕ್ಷಾಕವಚದಂತಿದ್ದವು. ಉತ್ತರ ಭಾರತದಲ್ಲಿ ಆಳುತ್ತಿದ್ದ ದೆಹಲಿ ಸುಲ್ತಾನರಿಗೆ ಈ ದಟ್ಟವಾದ ಬೆಟ್ಟಗಳನ್ನು ದಾಟಿ ಬರಲು ಅನೇಕ ಶತಮನಗಳೇ ಬೇಕಾದವು. ದಟ್ಟ ಅರಣ್ಯ ಸಂಪತ್ತನ್ನು ಹೊಂದಿರುವ ಈ ಘಟ್ಟಗಳು ದಖ್ಖನ್ನಿನ ಅನೇಕ ನದಿಗಳ ಉಗಮಕ್ಕೆ ಕಾರಣ ವಾಗಿವೆ. ಪಶ್ಚಿಮ ಹಾಗೂ ಪೂರ್ವ ಘಟ್ಟಗಳ ನಡುವಿನ ಪ್ರದೇಶವಾದ ಬಯಲುನಾಡು ತನ್ನ ಫಲವತ್ತಾದ ಭೂಮಿಯಿಂದ ದಖ್ಖನ್ನಿನಲ್ಲಿ ನಾಗರಿಕತೆಯ ತಾಣವೆನಿಸಿದೆ. ತನ್ನ ಫಲವತ್ತಾದ ಭೂಮಿ ಹಾಗೂ ಸಮೃದ್ಧ ನದಿಗಳಿಂದಾಗಿ ಪ್ರಾಚೀನ ಕಾಲದಿಂದಲೂ ಕೃಷಿ, ಉದ್ಯಮ ಹಾಗೂ ವ್ಯಾಪಾರಗಳಿಗಾಗಿ ಇದು ಕೇಂದ್ರವಾಗಿದೆ.

ಹದಿಮೂರನೇ ಶತಮಾನದ ಅಂತ್ಯ ಭಾಗದಲ್ಲಿ ಪ್ರಬಲರಾಗಿದ್ದ ಉತ್ತರದ ತುರ್ಕರು, ದಕ್ಷಿಣ ರಾಜ್ಯಗಳ ಐಶ್ವರ್ಯದಿಂದ ಆಕರ್ಷಿತರಾಗಿ ರಾಜಕೀಯ ಪ್ರಭಾವಕ್ಕೊಳಗಾದರು. ಅಲ್ಲಾವುದ್ದೀನ್ ಖಿಲ್ಜಿಯ ದಂಡ ಯಾತ್ರೆಯು ದಕ್ಷಿಣದ ರಾಜಕೀಯ ಸಮತೋಲನವನ್ನು ಅಲ್ಲೋಲ ಕಲ್ಲೋಲಗೊಳಿಸಿತು. ಇದರಿಂದಾದ ಪ್ರಮುಖ ಬದಲಾವಣೆಗಳೆಂದರೆ, ದಕ್ಷಿಣದಲ್ಲಿ ಹಿಂದೂ ಸಾಮ್ರಾಜ್ಯವಾದ ವಿಜಯನಗರ ಸಾಮ್ರಾಜ್ಯದ ಸ್ಥಾಪನೆ ಮತ್ತು ಮುಸ್ಲಿಂ ರಾಜ್ಯವಾದ ದಖ್ಖನ್ನಿನ ಬಹಮನಿ ರಾಜ್ಯದ ಉಗಮವಾಯಿತು. ವಿಜಯನಗರ ಸಾಮ್ರಾಜ್ಯವು ಮುಸ್ಲಿಮರ ದಾಳಿಯನ್ನು ಎದುರಿಸುವಲ್ಲಿ ಸಫಲವಾಗಲು ಮುಖ್ಯ ಕಾರಣವೆಂದರೆ, ನೆರೆಯ ಮುಸ್ಲಿಂ ರಾಜ್ಯವಾದ ಬಹಮನಿ ರಾಜ್ಯವು ಮುಸ್ಲಿಮರ ಗಮನವನ್ನು ತನ್ನತ್ತ ಸೆಳೆಯುವಲ್ಲಿ ಯಶಸ್ವಿಯಾಗಿದ್ದು, ಬಹಮನಿ ಸಾಮ್ರಾಜ್ಯವು ಸುಮಾರು ಎರಡು ಶತಮಾನಗಳ ಕಾಲ ಕರ್ನಾಟಕದ ಇತಿಹಾಸದಲ್ಲಿ ಪ್ರಮುಖ ಪಾತ್ರವಹಿಸಿತು.

ಇಸ್ಲಾಂ ಉತ್ಕರ್ಷಕ್ಕೆ ಬರುವ ಮುನ್ನವೇ, ದಕ್ಷಿಣ ಭಾರತ ಅರಬ್ಬರೊಡನೆ ವ್ಯಾಪಾರಿ ಸಂಪರ್ಕವನ್ನಿಟ್ಟು ಕೊಂಡಿತ್ತು. ಭಾರತದಲ್ಲಿ ತಯಾರಾದ ವಸ್ತುಗಳನ್ನು ಅರಬ್ಬರು ಯುರೋಪಿಗೆ ಸಾಗಿಸುತ್ತಿದ್ದರು. ಭಾರತದ ಪಶ್ಚಿಮ ಕರಾವಳಿಯ ನಗರ ಪ್ರದೇಶಗಳಿಗೆ ಅನೇಕ ಶತಮಾನಗಳಿಂದಲೂ ಅರಬ್ಬರು ಭೇಟಿ ಕೊಡುತ್ತಿದ್ದರು. ಅರೇಬಿಯನ್ನರ ಅಶ್ವಗಳಿಗೆ ಭಾರತದಲ್ಲಿ ಬಹಳ ಬೇಡಿಕೆ ಇತ್ತು. ಇಸ್ಲಾಂನ ಪ್ರವೇಶದೊಂದಿಗೆ ಈ ಸಂಪರ್ಕವು ಮತ್ತಷ್ಟು ಹೆಚ್ಚಿತು. ೧೨-೧೩ನೇ ಶತಮಾನದಲ್ಲಿ ವ್ಯಾಪಾರಿಗಳ ಜೊತೆಗೆ ಮುಸ್ಲಿಂ ಸಾಧು-ಸಂತರು ಸಹ ಭಾರತಕ್ಕೆ ಬರತೊಡಗಿದರು.[೧] ೧೩ನೇ ಶತಮಾನದ ಕೊನೆಗೆ ಉತ್ತರದಲ್ಲಿ ಪ್ರಬಲರಾಗಿದ್ದ ತುರ್ಕರು, ದಕ್ಷಿಣ ರಾಜ್ಯಗಳ ಐಶ್ವರ್ಯದಿಂದ ಆಕರ್ಷಿತರಾಗಿ ಇಸ್ಲಾಂ ಧರ್ಮದ ರಾಜಕೀಯ ಪ್ರಭಾವವನ್ನು ಉಂಟು ಮಾಡಿದರು. ಕ್ರಿ.ಶ. ೧೩೩೫ರಲ್ಲಿ ಮಧುರೆಯಲ್ಲಿ ಸುಲ್ತಾನ್ ಜಲಾಲುದ್ದೀನ್ ಅಶನ್‌ಖಾನನಿಂದ ಪ್ರಾರಂಭವಾದ ಸ್ವತಂತ್ರ ಮುಸಲ್ಮಾನ ರಾಜ್ಯ ದಕ್ಷಿಣ ಹಿಂದೂಸ್ತಾನದ ಪ್ರಥಮ ಮುಸಲ್ಮಾನ ರಾಜ್ಯವೆನಿಸಿತು.

ಅಲ್ಲಾವುದ್ದೀನ್ ಖಿಲ್ಜಿಯ ಕಾಲದಲ್ಲಿ ದೆಹಲಿ ಸೈನ್ಯವು ವಿಂದ್ಯಾದ್ರಿ ಪರ್ವತಗಳನ್ನು ದಾಟಿ ದಕ್ಷಿಣಕ್ಕೆ ಆಕ್ರಮಣ ಮಾಡುವ ಮೂಲಕ ದಕ್ಷಿಣದ ರಾಜಕೀಯ ಸಮತೋಲನವನ್ನು ಅಲ್ಲೋಲ–ಕಲ್ಲೋಲಗೊಳಿಸಿತು. ಮಲ್ಲಿಕಾಫರ್‌ನ ದಾಳಿಗಳು ಮುಖ್ಯವಾಗಿ ಸಂಪತ್ತನ್ನು ಲೂಟಿ ಮಾಡುವ ಉದ್ದೇಶವನ್ನೇ ಹೊಂದಿದ್ದವು. ಅಖಂಡ ಭಾರತದ ಕನಸನ್ನು ಕಂಡಿದ್ದ ಮಹಮ್ಮದ್ ಬಿನ್ ತುಘಲಕನು ಮಾತ್ರ ದಕ್ಷಿಣದವರೆಗೆ ಪ್ರದೇಶಗಳನ್ನು ಗೆದ್ದು ತನ್ನ ಆಡಳಿತಕ್ಕೆ ಒಳಪಡಿಸಿಕೊಂಡಿದ್ದನು.

ಉತ್ತರ ಭಾರತದಲ್ಲಿ ಇದ್ದಂತೆ, ದಕ್ಷಿಣ ಭಾರತದಲ್ಲೂ ತುಘಲಕ್‌ನು ಆಡಳಿತದ ಅನುಕೂಲತೆಗಳಿಗಾಗಿ, ದೇವಗಿರಿ(ದೌಲತಾಬಾದ), ತೆಲಂಗಾಣ, ಜಾಜ್‌ನಗರ(ಒರಿಸ್ಸಾ), ದ್ವಾರಸಮುದ್ರ, ಮಹಾರಾಷ್ಟ್ರ ಮತ್ತು ಕಂಪ್ಲಿಗಳ ಕೆಲವು ವಿಭಾಗಗಳನ್ನು ರಚಿಸಿ ಆಡಳಿತದ ಅನುಕೂಲಕ್ಕಾಗಿ ಪ್ರತ್ಯೇಕವಾಗಿ ರಾಜ್ಯಪಾಲರನ್ನು ನೇಮಿಸಿದನು. ಇವುಗಳಿಗೆ ಇಕ್ಲಿಂ ಎಂದು ಹೆಸರಿಸಿದನು. ಇಕ್ಲಿಂಗಳಲ್ಲಿ ನಗರಗಳಿಗೆ 'ಮದಿನಾ' ಮತ್ತು 'ಶಹರ'ಗಳೆಂದು, ಗ್ರಾಮಾಂತರ ಜಿಲ್ಲೆಗಳಿಗೆ ಸಿಖ್ ಎಂದು ಹೆಸರಿಸಿದನು. ರಾಜ್ಯಪಾಲನಿಗೆ 'ವಲಿ' ಎಂದು ಕರೆಯುತ್ತಿದ್ದರು. ಸಿಖ್‌ದ ಮುಖ್ಯಸ್ಥ ಶೇಕ್‌ದಾರ ಆಗಿದ್ದನು. ಶೇಕ್‌ದಾರನು ಅಮಲ್ದಾರ್ ಹಾಗೂ ನಜೀಮರ ಸಹಾಯದಿಂದ ಆಡಳಿತ ನಡೆಸುತ್ತಿದ್ದನು. ನೂರು ಹಳ್ಳಿಗಳಿಗೆ ಒಬ್ಬರಂತೆ 'ಅಮೀರ್–ಇ–ಸಾದಾ' ಎಂಬ ಮುಖಂಡನಿರುತ್ತಿದ್ದನು. ಈ ಅಮೀರರು ಕಂದಾಯ ವಸೂಲಿಯಲ್ಲದೆ ಸೈನ್ಯದ ಮುಖ್ಯಸ್ಥರೂ ಆಗಿರುತ್ತಿದ್ದರು. ಜನಸಾಮಾನ್ಯರ ಮಟ್ಟಿಗೆ ಅಮೀರರೇ ರಾಜ್ಯವಾಳುವ ಅರಸರಂತೆ ಕಾಣುತ್ತಿದ್ದರು.[೨]

ಕಾಶ್ಮೀರದಿಂದ ಕನ್ಯಾಕುಮಾರಿಯವರೆಗಿನ ದೊಡ್ಡ ಪ್ರದೇಶವು ಸುಲ್ತಾನ್ ಮಹಮ್ಮದ್ ಬಿನ್ ತುಘಲಕನ ಆಡಳಿತಕ್ಕೆ ಒಳಪಟ್ಟಿತು. ಇದನ್ನು ನಿಯಂತ್ರಿಸುವುದು ಒಬ್ಬ ಸುಲ್ತಾನನಿಂದ ಕಷ್ಟಸಾಧ್ಯವಾಗಿತ್ತು. ಈ ಕಾರಣಕ್ಕಾಗಿ ಸುಲ್ತಾನನು ರಾಜ್ಯಪಾಲರನ್ನು ಮತ್ತು ಅಮೀರರನ್ನು ನೇಮಿಸಿದನು. ಆದರೆ ಅಮೀರರು ಬಹುಬೇಗ ಸುಲ್ತಾನನ ವಿರುದ್ಧ ದಂಗೆ ಎದ್ದರು. ಒಮ್ಮೆ ಉತ್ತರದಲ್ಲಿ ಬಂಡೆದ್ದರೆ ಅದನ್ನು ನಿಯಂತ್ರಿಸುವಷ್ಟರಲ್ಲಿ ಪಶ್ಚಿಮದಲ್ಲೋ ಅಥವಾ ಪೂರ್ವದಲ್ಲೋ ಅಥವಾ ದಕ್ಷಿಣದಲ್ಲೋ ದಂಗೇಳುತ್ತಿದ್ದರು. ಹೀಗೆ ದಂಗೆ ಎದ್ದವರಲ್ಲಿ ದಕ್ಷಿಣದಲ್ಲಿ ಮೊದಲಿಗನಾದ ಬಹಾವುದ್ದೀನ್ ಗುರುಷಾಸ್ಪನು ಸಗರದ ಜಹಗೀರನಾಗಿದ್ದು ಸ್ವತಃ ಸುಲ್ತಾನನ ಚಿಕ್ಕಪ್ಪನ ಮಗನಾಗಿದ್ದನು. ಬೀದರ್, ಕಲ್ಬುರ್ಗಿ, ಕಂಪ್ಲಿ ಮತ್ತು ದೌಲತಾಬಾದ್‌ಗಳಲ್ಲೂ ಅಮೀರರು ಪ್ರತಿಭಟನೆ, ದಂಗೆ ಮತ್ತು ಬಂಡಾಯಗಳಲ್ಲಿ ಕಾರ್ಯನಿರತರಾದರು.[೩] ಈ ಪ್ರತಿಭಟನೆಯ ಕಾರಣವೇ ಕಂಪ್ಲಿಯಲ್ಲಿ ವಿಜಯನಗರ ಸಾಮ್ರಾಜ್ಯದ ಸ್ಥಾಪನೆಗೆ ಮತ್ತು ದೌಲತಾಬಾದನಲ್ಲಿ ಬಹಮನಿ ರಾಜ್ಯ ಸ್ಥಾಪನೆಗೆ ನಾಂದಿಯಾಯಿತು.

ಕ್ರಿ.ಶ. ೧೩೩೭ರ ಸುಮಾರಿಗೆ ಬೀದರಿನ ರಾಜ್ಯಪಾಲನಾದ ನಸರತ್‌ಖಾನನು ಬಂಡೆದ್ದು ತನ್ನ ಸ್ವಾತಂತ್ರ್ಯವನ್ನು ಘೋಷಿಸಿಕೊಂಡನು. ತನ್ನ ಹೆಸರಿನ ಸ್ವಂತ ನಾಣ್ಯಗಳನ್ನೂ ಸಹ ಮುದ್ರಿಸಿದನು. ಆದರೆ ಇದು ಬಹಳ ದಿನ ನಡೆಯಲಿಲ್ಲ. ರಾಯಭಾರಿಯಾಗಿದ್ದ ಕುತ್ಲುಘ್‌ಖಾನನು ನಸರತ್‌ಖಾನನನ್ನು ಸೆರೆಹಿಡಿದು ದೆಹಲಿಗೆ ರವಾನಿಸಿದನು. ೧೩೪೫ರಲ್ಲಿ ಅಲ್ಲಾವುದ್ದೀನ್ ಖಿಲ್ಜಿಯ ಆಸ್ಥಾನದಲ್ಲಿ ಉನ್ನತ ಅಧಿಕಾರಿಯಾಗಿದ್ದ ಜಾಫರ್‌ಖಾನನು ಸ್ವತಂತ್ರವನ್ನು ಸಾರಿ ಧಾರೂರಿನಲ್ಲಿ ರಾಜ್ಯ ಸ್ಥಾಪಿಸಿದನು. ಈತನ ಜೊತೆ ಆತನ ತಮ್ಮಂದಿರಾದ ಹಸನ್, ಅಹಮದ್ ಮತ್ತು ಮಹಮದ್‌ರು ಎಂಬುವರಿದ್ದರು. ಇದೇ ಸಮಯದಲ್ಲಿ ಮಧುರೆ, ವಾರಂಗಲ್ ಮತ್ತು ವಿಜಯನಗರಗಳಲ್ಲಿಯೂ ದಂಗೆಗಳು ಹುಟ್ಟಿ ರಾಜ್ಯಗಳು ಯಶಸ್ವಿಯಾಗಿ ಮುಂದುವರೆದವು. ದೌಲತಾಬಾದ್‌ನ ಅಮೀರರಲ್ಲಿ ಹಿರಿಯನಾಗಿದ್ದ ನಾಜೀರುದ್ದೀನ್ ಇಸ್ಮಾಯಿಲ್‌ನು ೨೦೦೦ ಹಳ್ಳಿಗಳ ಅಮೀರನಾಗಿದ್ದನು. ಕ್ರಿ.ಶ.೧೩೪೭ರಲ್ಲಿ ಇಸ್ಮಾಯಿಲ್‌ನು ತನ್ನ ಸ್ವಾತಂತ್ರ್ಯವನ್ನು ಸಾರಿದನು. ದೌಲತಾಬಾದ್‌ನಲ್ಲಿ

ಸ್ವತಂತ್ರ ರಾಜ್ಯ ಸ್ಥಾಪನೆಯಾಗಿದ್ದರೂ ಸಹ ಕಲ್ಯಾಣಿ ಮತ್ತು ಕಲ್ಬುರ್ಗಿಗಳ ಅಮೀರರು ಇನ್ನೂ ತುಘಲಕ್‌ನ ಪರವಾಗಿಯೇ ಉಳಿದುಕೊಂಡಿದ್ದರು. ಸಗರವೂ ಇದಕ್ಕೆ ಹೊರತಾಗಿರಲಿಲ್ಲ. ನಜೀರುದ್ದೀನ್ ಇಸ್ಮಾಯಿಲ್‌ನಿಂದ ಅಮೀರ್-ಉಲ್-ಉಮರ್ ಹಾಗೂ ಜಾಫರ್‌ಖಾನ್ ಎಂಬ ಬಿರುದುಗಳನ್ನು ಪಡೆದ ಹಸನ್‌ನು ಮೊಟ್ಟಮೊದಲಿಗೆ ಸಗರಕ್ಕೆ ಹೋಗಿ ಅದನ್ನು ಕೈವಶ ಮಾಡಿಕೊಂಡು ನಂತರ ಕಲ್ಬುರ್ಗಿಗೆ ಬಂದು ಅಲ್ಲಿಂದ ದೌಲತಾಬಾದಿಗೆ ಹಿಂತಿರುಗಿದನು.

ಮಹಮ್ಮದ ಬಿನ್ ತುಘಲಕ್‌ನು ಈ ಬಂಡಾಯವನ್ನು ಹತ್ತಿಕ್ಕಲು ತಾನೇ ಸ್ವತಃ ದೌಲತಾಬಾದಿಗೆ ಸೈನ್ಯದೊಡನೆ ಹೊರಟನು. ಈ ಸಮಯಕ್ಕಾಗಲೇ ಜಾಫರ್‌ಖಾನನು ತನ್ನ ವಿಜಯಿ ಸೈನ್ಯದೊಂದಿಗೆ ಕಲ್ಬುರ್ಗಿಗೆ ಬಂದಾಗಿತ್ತು. ದೌಲತಾಬಾದ್‌ನ ಕೋಟೆಯ ಹತ್ತಿರದಲ್ಲಿಯೇ ತುಘಲಕ್ ಸೈನ್ಯದೊಂದಿಗೂ ಮತ್ತು ಜಾಫರ್‌ಖಾನನಿಗೂ ಯುದ್ಧ ನಡೆಯಿತು. ಒಂದು ಕಡೆ ಸ್ವತಃ ಮಹಮ್ಮದ್ ಬಿನ್ ತುಘಲಕ್‌ನಿದ್ದರೆ ಇನ್ನೊಂದು ಕಡೆ ನಾಜೀರುದ್ದೀನ್ ಇಸ್ಮಾಯಿಲ್‌ಶಾಹ, ಆತನ ಮಗ ಖಿಜ್ರಖಾನ್ ಮತ್ತು ಜಾಫರ್‌ಖಾನನಿದ್ದರು. ಕಾಳಗದಲ್ಲಿ ದಖ್ಖನಿಯರಿಗೆ ಸೋಲುಂಟಾಯಿತು. ಈ ಸಮಯದಲ್ಲಿ ಒಂದು ಯೋಜನೆಯನ್ನು ರೂಪಿಸಿದರು, ಆ ಪ್ರಕಾರ ಇಸ್ಮಾಯಿಲ್‌ನು ಕೋಟೆಯಲ್ಲಿ ಹೋರಾಟವನ್ನು ಮುಂದುವರೆಸಬೇಕು, ಉಳಿದ ಅಮೀರರು ತಮ್ಮ ತಮ್ಮ ಜಹಗೀರುಗಳಿಗೆ ಹೋಗಿ ಅಲ್ಲಿಂದಲೇ ಯುದ್ಧವನ್ನು ಮುಂದುವರೆಸಬೇಕು ಎಂದು ಯೋಜಿಸಲಾಯಿತು. ಈ ಯೋಜನೆಯಿಂದ ತುಘಲಕ್‌ನ ಸೈನ್ಯ ಚದುರಿ ಬಲ ಕುಗ್ಗಬಹುದೆಂಬ ಎಣಿಕೆ ಇತ್ತು. ಆದರೆ ಕೋಟೆಯ ಬಾಗಿಲನ್ನು ಮುಚ್ಚಿ ಯುದ್ಧವನ್ನು ಮುಂದುವರೆಸಿದ ಇಸ್ಮಾಯಿಲ್‌ನು ಕೋಟೆಯಲ್ಲಿ ತುಘಲಕ್ ಸೈನ್ಯಕ್ಕೆ ಸೆರೆಸಿಕ್ಕಂತಾದನು. ಬಹುಬೇಗ ಕೋಟೆಯು ತುಘಲಕ್‌ನ ವಶವಾಯಿತು.

ದೌಲತಾಬಾದ ಕೋಟೆಯನ್ನು ಮಲಿಕ್‌ಜೋಹಾರ್‌ನ ವಶಕ್ಕೆ ಒಪ್ಪಿಸಿ ಮಹಮ್ಮದ್ ಬಿನ್ ತುಘಲಕ್‌ನು ಗುಜರಾತ ದಂಗೆಯನ್ನು ಮಟ್ಟಹಾಕಲು ಹೋದನು.[೪] ಜಾಫರ್‌ಖಾನನನ್ನು ಮಟ್ಟಹಾಕಲು ಸರತಾಜನನ್ನು ಕಳುಹಿಸಲಾಗಿತ್ತು. ಸರತಾಜನು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಸಂಚರಿಸುತ್ತ ಕಲ್ಬುರ್ಗಿ ಕೋಟೆಯನ್ನು ಸಹ ವಶಪಡಿಸಿಕೊಂಡಿದ್ದನು. ಇದನ್ನು ತಿಳಿದ ಜಾಫರ್‌ಖಾನನು ತೆಲಂಗಾಣ ರಾಜ್ಯದ ಸೈನ್ಯದ ಸಹಾಯದಿಂದ ದೆಹಲಿ ಸೈನ್ಯವನ್ನು ಎದುರಿಸಲು ಹುನ್ನಾರ ಮಾಡಿದನು. ಉಭಯತರ ಮಧ್ಯೆ ಭೀಡದ ಹತ್ತಿರ ಕಾಳಗ ನಡೆಯಿತು. ಈ ಯುದ್ಧದಲ್ಲಿ ದೆಹಲಿ ಸೈನ್ಯವು ಸೋಲನ್ನುಂಡು, ಸರತಾಜನು ಮೃತಪಟ್ಟನು. ದೆಹಲಿ ಸೈನ್ಯವನ್ನೆಲ್ಲಾ ಜಾಫರ್‌ಖಾನನು ವಶಪಡಿಸಿಕೊಂಡನು. ಜಾಫರ್‌ಖಾನನ ಈ ವಿಜಯದ ಸುದ್ದಿಯನ್ನು ಕೇಳಿದ ನಾಜೀರುದ್ದೀನ್ ಇಸ್ಮಾಯಿಲ್ ಶಾಹನು ಸೆರೆಮನೆಯಿಂದ ಬಿಡುಗಡೆ ಹೊಂದಿ ದೌಲತಾಬಾದ್‌ನಿಂದ ೧೦ ಮೈಲು ದೂರದಲ್ಲಿ ವಿಜಯಿಯಾದ ಜಾಫರ್‌ಖಾನನನ್ನು ಬರಮಾಡಿಕೊಂಡನು. ದಕ್ಷಿಣದ ರಾಜ್ಯಗಳು ಮುಂದುವರೆಯಬೇಕಾದರೆ ಜಾಫರ್‌ಖಾನನಂತವರು ಆಡಳಿತ ವಹಿಸಿಕೊಳ್ಳುವುದು ಅತೀ ಅವಶ್ಯಕವೆಂದು ತಿಳಿದ ಇಸ್ಮಾಯಿಲ್‌ಶಾಹನು ಸಿಂಹಾಸನವನ್ನು ತ್ಯಾಗ ಮಾಡಿ ಜಾಫರ್‌ಖಾನನೆ ಈ ಸಿಂಹಾಸನಕ್ಕೆ ಯೋಗ್ಯನೆಂದು ಎಲ್ಲಾ ಪ್ರಜೆಗಳ ಮುಂದೆ ಅವಿರೋಧವಾಗಿ ಆಯ್ಕೆ ಮಾಡಿದನು. ದಿನಾಂಕ ೦೩-೦೮-೧೩೪೭ರಂದು ಜಾಫರ್‌ಖಾನ್‌ನು ಅಲ್ಲಾವುದ್ದೀನ್ ಹಸನ್ ಗಂಗು ಬಹಮನ್ ಷಾ ಎಂಬ ಹೆಸರಿನಿಂದ ಸಿಂಹಾಸನವನ್ನೇರಿದನು. ಈ ರಾಜ್ಯವು ಬಹಮನಿ ರಾಜ್ಯವೆಂದು ಪ್ರಸಿದ್ಧಿ ಪಡೆಯಿತು.

ಒಂದು ಕಡೆ ಹರಿಹರನ ಕಾಲದಿಂದಲೂ ಹಿಂದೂ ಸಾಮ್ರಾಜ್ಯಕ್ಕೆ ಭದ್ರ ಬುನಾದಿ ಹಾಕಿದ ಸ್ವಲ್ಪ ಕಾಲದಲ್ಲಿಯೇ ಇನ್ನೊಂದು ಕಡೆ ಹಸನ್ ಗಂಗು ದೆಹಲಿ ಚಕ್ರವರ್ತಿನ್ನು ಧಿಕ್ಕರಿಸಿ ಸ್ವತಂತ್ರವಾಗಿ ಕ್ರಿ.ಶ.೧೩೪೭ ರಲ್ಲಿ ಬಹಮನಿ ರಾಜ್ಯವನ್ನು ಸ್ಥಾಪಿಸಿ ದಕ್ಷಿಣ ಭಾರತದಲ್ಲಿ ಮಹಮದೀಯ ರಾಜ್ಯವನ್ನು ನೆಲೆಗೊಳಿಸಿದನು.[೫]

ಉಳಿದ ಕೆಲವು ಸಾಮ್ರಾಜ್ಯಗಳಂತೆ ಕರ್ನಾಟಕದ ಪ್ರಮುಖ ಮುಸ್ಲಿಂ ರಾಜ್ಯವಾದ ಬಹಮನಿ ಸಾಮ್ರಾಜ್ಯವು ಹೇಗೆ ಉಗಮವಾಯಿತು? ಎನ್ನುವುದರ ಬಗ್ಗೆ ಇತಿಹಾಸದಲ್ಲಿ ಖಚಿತವಾದ ಮಾಹಿತಿಗಳು ದೊರೆತಿಲ್ಲದಿರುವುದರಿಂದ, ಅನೇಕ ವಿದ್ವಾಂಸರು, ಅನೇಕ ಬರಹಗಾರರು, ಇತಿಹಾಸಕಾರರು ಇದರ ಬಗ್ಗೆ ವಿವಿಧ ವಿಚಾರಗಳನ್ನು ಮಂಡಿಸಿದ್ದಾರೆ. ಕೆಲವು ಸಿದ್ಧಾಂತಗಳನ್ನು ಗಣನೆಗೆ ತೆಗೆದುಕೊಂಡಾಗ, ಅವುಗಳನ್ನು ಅವಲೋಕಿಸಿದಾಗ ಬಹಮನಿ ಸಾಮ್ರಾಜ್ಯದ ಉಗಮದ ಬಗ್ಗೆ ನಂಬಲಾರ್ಹ ವಿಚಾರಗಳು ಕಂಡುಬಂದಿವೆ.

ದಖನ್ ರಾಜ್ಯವನ್ನೆಲ್ಲ ಆಳುವ ರಾಜನ ಹೆಸರು ಸುಲ್ತಾನ್ ಮಹಮದೇ ಎಂದು, ಇವನು ದೂರ ಮಹಾನಗರವಾದ ಮಹಾಬಿದರೆ ಇವರ ರಾಜಧಾನಿ. ಅಲ್ಲಿ ರಾಜ ಅಷ್ಟೈಶ್ವರ್ಯದಿಂದಲೂ ಬಹು ಆನಂದದಿಂದಲೂ ಕಾಲಕಳೆಯುತ್ತಾನೆ. ಇವನು ತನ್ನ ರಾಜ್ಯವನ್ನೆಲ್ಲ ನೇರವಾಗಿ ಆಳದೆ ಅದನ್ನು ನಗರಗಳಾಗಿಯೂ, ಪಟ್ಟಣಗಳಾಗಿಯೂ ವಿಭಾಗಿಸಿ, ಅದಕ್ಕೆ ಅಧಿಪತಿಗಳನ್ನು ನೇಮಿಸಿ, ಅವರ ಮೂಲಕ ಆಳುತ್ತಿದ್ದಾನೆ. ಈ ಅಧಿಪತಿಗಳಲ್ಲಿಯೇ ಆಗಾಗ್ಗೆ ಒಳಜಗಳಗಳಾಗುತ್ತಿರುತ್ತವೆ.[೬]

ಫೆರಿಸ್ತಾ ಎಂಬ ಇತಿಹಾಸಕಾರನ ಒಂದು ಸಿದ್ಧಾಂತದ ಪ್ರಕಾರ "ಬಹಮನಿ ಸಾಮ್ರಾಜ್ಯದ ಮೂಲ ಪುರುಷನಾದ 'ಹಸನ್' ಎನ್ನುವವನು ದೆಹಲಿಯಲ್ಲಿ ಗಂಗು ಎಂಬ ಬ್ರಾಹ್ಮಣನ ಬಳಿ ಕೆಲಸಕ್ಕಿದ್ದ. ಒಮ್ಮೆ ಭೂಮಿಯನ್ನು ಉಳುವಾಗ ಹಸನ್‌ನಿಗೆ ಚಿನ್ನದ ನಾಣ್ಯವಿದ್ದ ಮಡಕೆಯೊಂದು ದೊರೆಯುತ್ತದೆ. ಹಸನ್‌ನು ಅದನ್ನು ಪ್ರಾಮಾಣಿಕವಾಗಿ ಒಡೆಯನಾದ ಬ್ರಾಹ್ಮಣ ಗಂಗುವಿಗೆ ಒಪ್ಪಿಸುತ್ತಾನೆ, ಇವನ ಪ್ರಾಮಾಣಿಕತೆಯನ್ನು ಗಂಗು ಬ್ರಾಹ್ಮಣನು ಮೆಚ್ಚಿ ಈ ವಿಷಯವನ್ನು ಸುಲ್ತಾನನಾದ ಮಹಮ್ಮದ್ ಬಿನ್ ತುಘಲಕ್ ಅವರಿಗೆ ತಿಳಿಸುತ್ತಾನೆ. ಆಗ ಸುಲ್ತಾನನು ಹಸನ್‌ನ ಪ್ರಾಮಾಣಿಕತೆಯನ್ನು ಮೆಚ್ಚಿ ಒಂದು ಸಾವಿರ ಅಶ್ವದಳದ ಮುಖಂಡನನ್ನಾಗಿ ಹಸನ್‌ನ್ನು ನೇಮಿಸುತ್ತಾನೆ. ಜ್ಯೋತಿಷಿಯಾದ ಗಂಗು ಬ್ರಾಹ್ಮಣನು, ಮುಂದೆ ಹಸನ್‌ನು ಸುಲ್ತಾನನಾಗುವನೆಂದು ಭವಿಷ್ಯ ನುಡಿಯುತ್ತಾರೆ. ಹಾಗೇನಾದರೂ ಈ ಭವಿಷ್ಯ ನಿಜವಾದರೆ, ಹಸನ್ ತನ್ನ ಹೆಸರಿನ ಪಕ್ಕದಲ್ಲಿ ಗಂಗು ಎಂಬ ಹೆಸರನ್ನು ಜೋಡಿಸಬೇಕೆಂದು ಹೇಳಿರುತ್ತಾನೆ."[೭]

ಕ್ರಿ.ಶ.೧೩೪೪ರಲ್ಲಿ ಹಸನ್ ಗಂಗು, ಸುಲ್ತಾನನಾದ ಮಹಮ್ಮದ್ ಬಿನ್ ತುಘಲಕನ ವಿರುದ್ಧ ದಂಗೆ ಏಳುತ್ತಾನೆ. ದೌಲತಾಬಾದನ್ನು ಆಕ್ರಮಿಸಿಕೊಂಡ ಹಸನ್ ಸ್ವಾತಂತ್ರ್ಯವನ್ನು ಘೋಷಿಸಿ, 'ಅಬ್ದುಲ್ ಮುಜಾಫರ್ ಅಲ್ಲಾವುದ್ದೀನ್ ಬಹಮನ್‌ಷಾಹ್' ಎಂಬ ನಾಮಾಂಕಿತದೊಂದಿಗೆ ಸುಲ್ತಾನನಾಗಿ ಸಿಂಹಾಸನವನ್ನು ಏರುತ್ತಾನೆ. ಫೆರಿಸ್ತಾರವರ ಪ್ರಕಾರ ಹಸನ್, ಬಡತನದಲ್ಲಿ ಹುಟ್ಟಿ ತನ್ನ ಪ್ರಾಮಾಣಿಕತೆಯಿಂದ ಮತ್ತು ಸ್ವಂತ ಸಾಮರ್ಥ್ಯದಿಂದ ಉನ್ನತ ಸ್ಥಾನಕ್ಕೇರಿ ಸುಲ್ತಾನನಾದನೆಂದು ಒಂದು ನಂಬಲಾರ್ಹ ಇತಿಹಾಸವಿದೆ.[೮]

ಮತ್ತೊಂದು ಐತಿಹಾಸಿಕ ದಾಖಲೆಯ ಪ್ರಕಾರ– ಹಸನ್‌ನು ಪರ್ಷಿಯನ್ ವೀರನಾದ ಬಹಮನ್ ಷಾನ ವಂಶಜನೆಂದು, ಅವನು ಇಸ್‌ಫಂದಿಯಾರನ ಮಗನಾಗಿದ್ದರಿಂದ ಅವನ ವಂಶವನ್ನು ಬಹಮನಿ ವಂಶವೆಂದು ಕರೆಯಲಾಯಿತೆಂದು ಇತಿಹಾಸದಿಂದ ತಿಳಿದುಬರುತ್ತದೆ. ವಂಶಾವಳಿ ತಜ್ಞರು ಹಸನ್‌ನು ಪರ್ಷಿಯನ್ ಮೂಲಕ್ಕೆ ಸೇರಿದವನೆಂದು, ಅವರಿಗೆ ಸಂಬಂಧಿಸಿದವನೆಂದು ತಮ್ಮ ಬರಹಗಳಲ್ಲಿ ದಾಖಲಿಸಿರುವರು.[೯]

ಇನ್ನೊಂದು ಐತಿಹಾಸಿಕ ದಾಖಲೆಯ ಪ್ರಕಾರ– ಹಸನ್‌ನು ಶೇಖ್ ಸಿರಾಜುದ್ದೀನ್ ಜುವೈದಿ ಎಂಬ ಸೂಫಿ ಸಂತನ ಶಿಷ್ಯನಾಗಿದ್ದನೆಂದು, ಮುಂದೊಂದು ಕಾಲದಲ್ಲಿ ಅವನು ಹಸನ್ ಸುಲ್ತಾನ ನಾಗುವನೆಂದು ಭವಿಷ್ಯ ನುಡಿದಿದ್ದನಂತೆ ಎಂದು ಹೇಳುತ್ತಾರೆ.[೧೦]

ಫೆರಿಸ್ತಾರಿಗಿಂತ ಮೊದಲೇ ಜೀವಿಸಿದ್ದ, 'ಬರ್ಹಾನ್–ಇ–ಮಾಸೀರ್' ಮತ್ತು 'ತಬಕಾತ್–ಇ–ಅಕ್ಬರೀ' ಎಂಬ ಗ್ರಂಥಗಳನ್ನು ರಚಿಸಿರುವ "ತಬಾತಬಾ ಮತ್ತು ನಿಜಾಮ್–ಉದ್–ದೀನ್" ಎನ್ನುವ ವಿದ್ವಾಂಸರು ಹೇಳುವ ಪ್ರಕಾರ– "ಇಸ್‌ಫಂದಿಯಾರನ ಮಗನಾದ ಬಹಮನ್" ಎಂಬ ಪ್ರಸಿದ್ಧ ಪರಾಕ್ರಮಿಯ ವಂಶದಲ್ಲಿ ಹಸನ್ ಜನಿಸಿದನೆಂದು, ಆದ ಕಾರಣ ಅವನ ವಂಶಕ್ಕೆ 'ಬಹಮನಿ' ಎಂಬ ಹೆಸರು ಬಂದಿತೆಂದು ಊಹೆಯಿದ್ದು, ಅದನ್ನು ಸಮರ್ಥಿಸಿದ್ದಾರೆ.[೧೧] ಆದರೆ ಫೆರಿಸ್ತಾರವರು ಈ ವಾದವನ್ನು ಒಪ್ಪುವುದಿಲ್ಲ. ಫೆರಿಸ್ತಾರವರ ಪ್ರಕಾರ ಮೇಲಿನ ಊಹೆಗಳು ಹೊಗಳು ಭಟ್ಟರಿಂದ ಮತ್ತು ಕವಿಗಳಿಂದ ಸೃಷ್ಟಿಯಾಗಿರುವವೆಂದು, ಹಸನ್‌ನ ವಂಶಾವಳಿಯು ಪತ್ತೆಹಚ್ಚಲಾಗದಷ್ಟು ಅಜ್ಞಾತವಾಗಿದ್ದು, ಈ ಕಾರಣದಿಂದ ಊಹೆಗಳು ಹುಟ್ಟಿಕೊಂಡಿವೆ ಎಂದು ಹೇಳುತ್ತಾರೆ. 'ಬ್ರಾಹ್ಮಣ' ಎನ್ನುವುದನ್ನು 'ಬಹಮನಿ' ಎಂದು ಉಚ್ಚರಿಸುವುದು ಸರ್ವೇಸಾಮಾನ್ಯ, ಹಾಗಾಗಿ ಬಹಮನಿ ಎಂಬ ಹೆಸರು ಬಂದಿದೆ ಎಂದು ತನ್ನ ವಾದವನ್ನು ಫೆರಿಸ್ತಾರವರು ಮಂಡಿಸಿದ್ದಾರೆ.[೧೨]

ಬಹಮನಿ ರಾಜನು ಜನ್ಮತಃ ಒಬ್ಬ ಅಫ್ಘಾನನೆಂದು, ಅವನನ್ನು ಹಸನ್ 'ಗಂಗು' ಅಥವಾ 'ಕಂಕು' ಎಂದು ಕರೆದರೆಂದು ವಿದ್ವಾಂಸರಾದ 'ನಿಜಾಮ್–ಉದ್–ದೀನ್' ಮತ್ತು ದಾಖಲೆಕಾರರಾದ 'ಯಾಹ್ಯ'ರವರು ಅಭಿಪ್ರಾಯಪಟ್ಟಿದ್ದಾರೆ.[೧೩] ಇನ್ನೊಂದು ಐತಿಹಾಸಿಕ ದಾಖಲೆ ಪ್ರಕಾರ: "ಜಾಪರಾಬಾದ್, ಬೀದರ್ ಶಹರ, ಬಾದಶಾಹಿ ರಾಜಕೀಯ ಹೇಗೆ ಹುಟ್ಟಿತೆಂದು ಅರಿಯುವುದು ಆಶ್ಚರ್ಯಕರವಾಗಿದೆ. ದೇವರೇಂದೆ ತಿಳಿಯಬೇಕು ಅಂತಹ ಮಹಾಮಹಿಮ ವಿಭೂತಿ ಪುರುಷ ಬೇಬಿ ಐಳರೂ ಮೇಲೆ ಅವಳೊಂದಿಗೆ ವಿವಾಹವಾಗಿ 'ಹಸನ್' ಎಂಬ ಸುಪತ್ರನನ್ನು ಹಾಗೂ 'ತಾನಾಬೀಬಿ' ಎಂಬ ಸುಪುತ್ರಿಯನ್ನು ಪಡೆದರು. ಕುಟುಂಬ ಸಮೇತ ದೇಶಾಂತರ ಹೊರಟು ದೇಶಗಳನ್ನು ವೀಕ್ಷಿಸುತ್ತ ಒಂದು ನದಿಯ ದಡೆಕ್ಕಿಳಿದು ನಮಾಜು ಮಾಡಿದರು. ಸತಿಸುತ ಸುತೆಯರನ್ನು ಅಲ್ಲಿಯೆ ಸುರಿಸಿ, ಪಕೀರ(ಸಂತ) ನಗರವೂ ಪ್ರವೇಶಿಸಿ ಇಲ್ಲಿ ಯಾರಾದರೂ ಧಾರ್ಮಿಕ ದಾರ್ಶನಕರಿದ್ದಾರೆಯೇ ಎಂದು ಜನರನ್ನು ವಿಚಾರಿಸಲು ಆ ಜನರು ಹಿರೆಯರು ಒಬ್ಬ ಧಾರ್ಮಿಕ ದಾರ್ಶನಿಕರಿರುವರು. ಅವರ ಹೆಸರು ರಾಜನನ್ನು ಗಂಗಾರಸ ಪಂತ ಯಾವುದೇ ಜೋಗಿ ಜಂಗಮರು ಸಂತರು ಬಂದರೆ ಅವರಿಗೆ ಊಟ ವಸತಿ ಹಾಗೂ ಬಟ್ಟೆಯ ವ್ಯವಸ್ಥೆ ಅವರೇ ಮಾಡುವುದು ತಾವು ಅವರಲ್ಲಿಗೆ ಹೋದರೆ ತಮ್ಮನ್ನು ಆ ವ್ಯವಸ್ಥೆಯಾಗುವುದೆಂದು ಹೇಳಿದರು. ರಾಜಮಾನ್ಯ ಗಂಗಾರಸ ಪಂತರ ಮನೆಯ ವಿಳಾಸ ವಿಚಾರಿಸುತ್ತ ಫೋರ(ಸಂತ) ತಲುಪಲು ದ್ವಾರಪಾಲಕ ಸಂತನ ವಿಷಯ ಪಂಡಿತರಿಗೆ ತಿಳಿಸಲು ರಾಜಮಾನ್ಯ ಗಂಗಾರಸ ಪಂತರು ಅವರನ್ನು ಒಲಗೆ ಬಿಡಲು ದ್ವಾರಪಾಲಕರಿಗೆ ಅಜ್ಞಾಪಿಸಿದಿದು, ಫಕೀರ ದ್ವಾರ ಪ್ರವೇಶಿಸಿ ಪಂತರಿಗೆ ಆಶೀರ್ವದಿಸಿ ನಂತರ ರಾಜಮಾನ್ಯ ಗಂಗಾರಸ ತಾವು ಎಲ್ಲಿಂದ ಬರುವಂತಾಯಿತು. ತಾವೆಷ್ಟು ಜನರಿದರೆಂದು ತಿಳಿದು ೪ ಜನ ಅವರಿಗಾಗಿ ನಗರ ಮಧ್ಯೆ ಒಂದು ಮನೆ ಕಟ್ಟಿಸಿಕೊಟ್ಟರು. ಕಾಲಾಂತರವೇ ಫಕೀರರು ಸ್ವರ್ಗಸ್ಥರಾದರು. ಅವಳು ಧ್ಯೇವಾಧೀನವಾದಳು. ತಾನಾಬೀಬಿ ಒಬ್ಬ ಮಂತ್ರಿಗೆ ಮದುವೆ ಮಾಡುವಲ್ಲಿ ಹಸನ್ ೭–೮ ವರ್ಷದವನಿದ್ದ ಗಂಗಾರಸ ಬಾಲಕ ಹಸನ್‌ನಿಗೆ ಸಾಂತ್ವಾನ ಮಾಡಿದನು. ಹಸನ್ ಒಂದು ಹಸುವಿನ ಕರು ಉಪವಾಸವಿದ್ದಕ್ಕೆ ಅಡವಿಗೆ ಹೋಗಿ ಮೇಹಿಸಿಕೊಂಡು ಮನೆಗೆ ಬಂದನು. ನಂತರ ಗಂಗಾರಸ ಹಸನ್ನನಿಗೆ ರಾಜಗುರುಕುಲಕ್ಕೆ ಕರೆದೊಯ್ದು ರಾಜಗುರುಗಳಿಗೆ ಒಪ್ಪಿಸಿ ಬೆಳತ ಬೆಳೆತ, ಇವನ ಅಭಿವೃದ್ಧಿ ನೋಡಿ ಅವನಿಗೆ ಸುಲ್ತಾನ–ಎ–ಅಹಮದ್–ಷಾಹ ಎಂದು ಹೆಸರು ಇಟ್ಟನು. ನಂತರ ರಾಜನು ಅನಿರಿಕ್ಷಿತವಾಗಿ ಅನಾರೋಗ್ಯ ಇದ್ದಾಗ ಹಸನ್‌ನ್ನು ರಾಜನಾಗಿ ಮಾಡಿನೆಂದು ತಿಳಿಸುತ್ತದೆ."[೧೪]

ಬಹಮನ್ ಷಾ ಎಂಬ ಗೌರವ ನಾಮವು ಗುಲ್ಬರ್ಗಾ ಮಸೀದಿಯ ಶಾಸನದಲ್ಲೂ ಮತ್ತು ಬಹಮನಿ ವಂಶಜರ ನಾಣ್ಯಗಳಲ್ಲೂ ಕಾಣಬಹುದು. ಬಹಮನಿ ರಾಜನಿಗೆ ಬ್ರಾಹ್ಮಣ ಗಂಗುವಿನ ಮೇಲೆ ಗೌರವ-ಕೃತಜ್ಞತೆಗಳಿದ್ದರೆ, ಇನ್ನೊಂದು ಕಡೆ ಪ್ರಸಿದ್ಧ ಪಾರಸೀ ರಾಜನು ಮತ್ತು ಇಸ್‌ಫಂದಿಯಾರನ ಮಗನಾದ ಬಹಮನ್‌ನ(ಬಹಮನ್ ಎಂದರೆ ಬ್ರಾಹ್ಮಣ ಪದದ ಪಾರಸೀ ರೂಪ) ಜೊತೆ ಹೋಲಿಕೆ ಮಾಡಲಾಗಿದೆ. ಈ ಅಂಶಗಳನ್ನೆಲ್ಲಾ ಗಮನಿಸಿದಾಗ ಬಹಮನಿ ಎಂಬುದು ಅಲ್ಲಾವುದ್ದೀನ್‌ನ ಆಸ್ಥಾನದಲ್ಲಿರುವ ಪಂಡಿತರು ಸೂಚಿಸಿರುವ ಯುಕ್ತವಾದ ಉಪನಾಮಧೇಯ ಇರಬಹುದೆಂದು ತೋರುತ್ತದೆ. "ಗುಲ್ಬರ್ಗಾದಲ್ಲಿ ಇಂದಿಗೂ ಬೈಹ್ಮನಿಪುರವೆಂಬ ಕೇರಿ ಇರುವುದು ತಿಳಿದುಬರುತ್ತದೆ. ಅಲ್ಲಿ ವಾಸಿಸುವ ಬಹುತೇಕ ಜನರು ಬ್ರಾಹ್ಮಣರಾಗಿದ್ದು, ತಾವು ಗಂಗುವಿನ ವಂಶಜರೆಂದು ಹೇಳಿಕೊಳ್ಳುತ್ತಾರೆ".[೧೫]

ಮಹಮ್ಮದ್ ಬಿನ್ ತುಘಲಕನ ಆಡಳಿತ ಕಾಲದಲ್ಲಿ ದೆಹಲಿಯ ಸುಲ್ತಾನರ ಮೇಲೆ ದಕ್ಷಿಣದಲ್ಲಿ ಅನೇಕ ದಂಗೆಗಳು ನಡೆದವು. ಮಲ್ಲಿಕಾಫರನ ದಕ್ಷಿಣದ ದಂಡಯಾತ್ರೆಗಳು, ರಾಜ್ಯವನ್ನು ಕಟ್ಟಬೇಕೆನ್ನುವ ಮಹತ್ವಾಕಾಂಕ್ಷೆಯನ್ನು ಹೊಂದಿರದೆ ಕೇವಲ ದಾಳಿಗಳಾಗಿ ಮಾರ್ಪಾಟದವು. ಇದರಿಂದ ದಕ್ಷಿಣದ ರಾಜರು ಹುರಿದುಂಬಿಸಲ್ಪಟ್ಟು, ಸುಲ್ತಾನನ ವಿರುದ್ಧ ವಿವಿಧ ದಂಗೆಗಳ ಉಗಮಕ್ಕೆ ಕಾರಣರಾದರು.

ದಕ್ಷಿಣದಲ್ಲಿ ದೆಹಲಿಯ ಪ್ರತಿನಿಧಿಗಳಾಗಿದ್ದ ವಿದೇಶಿ ಆಮೀರರಲ್ಲಿ ಅತೃಪ್ತಿ ಮತ್ತು ಸಂಶಯಗಳು ಹುಟ್ಟಲು ಪ್ರಾರಂಭಿಸಿದವು. ಇದರ ಪರಿಣಾಮವಾಗಿ ಇಮದ್-ಉಲ್-ಮುಲ್ಕ್ ಎಂಬ ಸೇನಾಧಿಪತಿಯ ಪದಚ್ಯುತಿಯಾಯಿತು ಮತ್ತು ದೌಲತಾಬಾದ್(ದೇವಗಿರಿ)ಯ ಮೇಲೆ ಆಕ್ರಮಣ ಮಾಡಿ ಅದನ್ನು ಸ್ವಾಧೀನಪಡಿಸಿಕೊಂಡು. ಇಸ್ಮಾಯಿಲ್‌ಮಖ್ ಎಂಬ ದಕ್ಷಿಣಾಪಥದ ವಿದೇಶಿ ಆಮೀರರ ನಾಯಕ ದೌಲತಾಬಾದ್‌ನ ಪಥನಕ್ಕೆ ಕಾರಣೀಭೂತನಾದನು. ತದನಂತರ ಇಸ್ಮಾಯಿಲ್‌ಮಖ್‌ನು, ಪ್ರಾಮಾಣಿಕ ಮತ್ತು ದಕ್ಷವಾದ ಹಸನ್ ಎಂಬುವವನಿಗೆ ನಾಯಕತ್ವವನ್ನು ಬಿಟ್ಟು ಕೊಟ್ಟನೆಂದು ಇತಿಹಾಸದಿಂದ ತಿಳಿದುಬಂದಿದೆ. ಕ್ರಿ.ಶ.೧೩೪೭ರಲ್ಲಿ ಹಸನ್‌ನ ಅನುಯಾಯಿಗಳು ಹಸನ್‌ನನ್ನು ಬಹಮನಿ ರಾಜನೆಂದು ಘೋಷಿಸಿ, 'ಅಲ್ಲಾವುದ್ದೀನ್ ಹಸನ್ ಗಂಗು ಬಹಮನ್ ಷಾ' ಎಂದು ನಾಮಕರಣ ಮಾಡಿದರು.[೧೬] ತದನಂತರ ಹಸನ್‌ನು ಗುಲ್ಬರ್ಗಾವನ್ನು ರಾಜಧಾನಿಯಾಗಿ ಮಾಡಿಕೊಂಡು ಪ್ರಸಿದ್ಧ ಬಹಮನಿ ಸಾಮ್ರಾಜ್ಯದ ಸ್ಥಾಪನೆಗೆ ಕಾರಣೀಭೂತನಾದನು.

ಮತ್ತೊಂದು ಮೂಲದ ಪ್ರಕಾರ ಕಾಶ್ಮೀರದಿಂದ ಕನ್ಯಾಕುಮಾರಿವರೆಗಿನ ದೊಡ್ಡ ಪ್ರದೇಶವು ಸುಲ್ತಾನನಾದ ಮಹಮ್ಮದ್ ಬಿನ್ ತುಘಲಕ್‌ನ ಆಡಳಿತಕ್ಕೆ ಒಳಪಟ್ಟಿತು. ಆ ದೊಡ್ಡ ಪ್ರದೇಶದ ಆಡಳಿತವನ್ನು ನಿಯಂತ್ರಿಸುವುದು ಒಬ್ಬರಿಂದ ಸಾಧ್ಯವಾಗದ ಕಾರಣ ಸುಲ್ತಾನನು ರಾಜ್ಯಪಾಲರನ್ನು ಮತ್ತು ಅಮೀರರನ್ನು ನಂಬಿಕಸ್ತರನ್ನಾಗಿ ಆಡಳಿತ ನಡೆಸಲು ನೇಮಿಸಬೇಕಾಯಿತು. ಆದರೆ ಇವರು ಬಹುಬೇಗನೆ ಸುಲ್ತಾನನ ವಿರುದ್ಧ ಬಂಡಾಯ ಹೂಡಿದರು. ಒಂದು ದಿನ ಉತ್ತರದಲ್ಲಿ ಬಂಡೆದ್ದರೆ ಮತ್ತೊಂದು ದಿನ ಪಶ್ಚಿಮದಲ್ಲೋ, ಪೂರ್ವದಲ್ಲೋ ಬಂಡೇಳುತ್ತಿದ್ದರು, ದಕ್ಷಿಣವೂ ಇದಕ್ಕೆ ಹೊರತಾಗಿರಲಿಲ್ಲ. ಒಂದನ್ನು ನಿಯಂತ್ರಿಸುವಲ್ಲಿ ಮತ್ತೊಂದು ಬಂಡಾಯ ಹುಟ್ಟುತ್ತಿತ್ತು. ದಕ್ಷಿಣದಲ್ಲಿ ಮೊಟ್ಟ ಮೊದಲಿಗೆ ದಂಗೆಗೆ ಕಾರಣನಾದವನು, ಸುಲ್ತಾನನ ಸ್ವಂತ ಕಕ್ಕನ ಮಗನಾದ ಮತ್ತು ಸಗರದ ಜಹಗೀರದಾರನಾದ ಬಹಾವುದ್ದೀನ್ ಗುರುಷಾಸ್ಫನು. ಈ ದಂಗೆಯ ಹಿಂದೆಯೇ ಬೀದರ್, ಕಲ್ಬುರ್ಗಿ, ಕಂಪಲಿ ಮತ್ತು ದೌಲತಾಬಾದ್‌ಗಳಲ್ಲೂ ಆಮೀರರಿಂದ ಪ್ರತಿಭಟನೆ ಮತ್ತು ದಂಗೆಗಳು ಪ್ರಾರಂಭವಾದವು. ಇದರ ಪರಿಣಾಮವಾಗಿ ಕಂಪಲಿಯ ಪ್ರತಿಭಟನೆಯು ವಿಜಯನಗರ ಸಾಮ್ರಾಜ್ಯದ ಸ್ಥಾಪನೆಗೆ ಕಾರಣವಾಯಿತು. ಅದೇ ರೀತಿ ದೌಲತಾಬಾದ್‌ನ ಪ್ರತಿಭಟನೆಯು ಪ್ರಸಿದ್ಧ ಬಹಮನಿ ಸಾಮ್ರಾಜ್ಯ ಸ್ಥಾಪನೆಗೆ ಕಾರಣೀಭೂತವಾಯಿತೆಂದು ತಿಳಿದುಬರುತ್ತದೆ.[೧೭]

ದೌಲತಾಬಾದ್‌ದ ಅಮೀರರಲ್ಲಿ ನಾಸೀರುದ್ದೀನ್ ಇಸ್ಮಾಯಿಲ್‌ನು ಹಿರಿಯನು ಮತ್ತು ಪ್ರಮುಖನಾಗಿದ್ದು ೨೦೦೦ ಹಳ್ಳಿಗಳ ಅಮೀರನಾಗಿದ್ದನು. ಸೆಪ್ಟೆಂಬರ್ ಕ್ರಿ.ಶ.೧೩೪೬ರಲ್ಲಿ ಇಸ್ಮಾಯಿಲ್‌ನು ತನ್ನ ಸ್ವಾತಂತ್ರ್ಯವನ್ನು ಘೋಷಿಸಿದನು. ದೌಲತಾಬಾದ್‌ದಲ್ಲಿ ಸ್ವತಂತ್ರ್ಯ ರಾಜ್ಯ ಸ್ಥಾಪನೆಯಾಗಿದ್ದರೂ, ಸಹ ಕೆಲವು ಪ್ರದೇಶಗಳಲ್ಲಿ ಅಮೀರರು ಇನ್ನೂ ತುಘಲಕ್‌ನ ಪರವಾಗಿಯೇ ಕೆಲಸಮಾಡುತ್ತಿದ್ದರು. ಇವುಗಳ ಪೈಕಿ ಸಗರವೂ ಒಂದು ಪ್ರದೇಶವಾಗಿತ್ತು. ಜಾಫರ್‌ಖಾನ್ ಎಂಬ ಬಿರುದನ್ನು ಹೊಂದಿದ್ದ ಹಸನ್‌ನು ಮೊದಲಿಗೆ ಸಗರಕ್ಕೆ ಹೋಗಿ ಅದನ್ನು ಸ್ವಾಧೀನಪಡಿಸಿಕೊಂಡು ನಂತರ ಕಲ್ಬುರ್ಗಿಯನ್ನು ಗೆದ್ದು ಅಲ್ಲಿಂದ ದೌಲತಾಬಾದ್‌ಗೆ ಹಿಂತಿರುಗಿದನೆಂದು ಮೂಲಗಳಿಂದ ತಿಳಿದುಬರುತ್ತದೆ.

ತುಘಲಕ್‌ನು ಮಲಿಕ್‌ಜೊಹಾರ್‌ನನ್ನು ದೌಲತಾಬಾದ್‌ನ ಕೋಟೆಯ ಮುಖ್ಯಸ್ಥನನ್ನಾಗಿ ಮಾಡಿ ಕೋಟೆಯನ್ನು ಅವನ ವಶಕ್ಕೆ ಕೊಟ್ಟು ಗುಜರಾತ ದಂಗೆಯನ್ನು ಅಡಗಿಸಲು ಹೊರಟನು. ಜಾಫರ್ ಖಾನನನ್ನು ಅಡಗಿಸಲು ಸರತಾಜನನ್ನು ಕಳುಹಿಸಲಾಗಿದ್ದಿತು, ಸರತಾಜನು ಕಲ್ಬುರ್ಗಿ ಕೋಟೆಯನ್ನು ವಶಪಡಿಸಿಕೊಂಡಿದ್ದನು. ಇದನ್ನು ತಿಳಿದ ಜಾಫರ್‌ಖಾನನು ತೆಲಂಗಾಣ ರಾಜ್ಯದ ಸೈನ್ಯದ ಸಹಾಯವನ್ನು ಪಡೆದು ದೆಹಲಿಯ ಸೈನ್ಯವನ್ನು ಎದುರಿಸಿದನು. ಬೀಡದ ಹತ್ತಿರ ನಡೆದ ಭೀಕರ ಕಾಳಗದಲ್ಲಿ ದೆಹಲಿ ಸೈನ್ಯವು ಸೋಲನ್ನನುಭವಿಸಿತು, ಸರತಾಜನು ಯುದ್ಧದಲ್ಲಿ ಮಡಿದನು, ನಂತರ ದೆಹಲಿ ಸೈನ್ಯವು ಬೇರೆ ದಾರಿ ಇಲ್ಲದೇ ಜಾಫರ್‌ಖಾನನಿಗೆ ಶರಣಾಗತವಾಯಿತು. ಇದನ್ನೆಲ್ಲಾ ಕಂಡ ಇಸ್ಮಾಯಿಲ್ ಶಹಾನಿಗೆ ತನ್ನ ತಪ್ಪಿನ ಅರಿವಾಗಿ, ದಕ್ಷಿಣದಲ್ಲಿ ರಾಜ್ಯವು ಮುಂದುವರೆಯಬೇಕಾದರೆ ಜಾಫರ್‌ಖಾನನಂತಹ ಮುಖಂಡರು ಮತ್ತು ವೀರರು ಸಿಂಹಾಸನವನ್ನು ಅಲಂಕರಿಸಬೇಕೆಂದು ನಿಶ್ಚಯಿಸಿ, ಜಾಫರ್‌ಖಾನ್ ಯೋಗ್ಯನೆಂದು ಆಯ್ಕೆ ಮಾಡಿ, ಕ್ರಿ.ಶ.೧೩೪೭ರಲ್ಲಿ ಸಿಂಹಾಸನದ ಮೇಲೆ ಕೂಡಿಸಿದನು. ಅಂದಿನಿಂದ ಜಾಫರ್‌ಖಾನನು 'ಅಲ್ಲಾವುದ್ದೀನ್ ಹಸನ್ ಗಂಗು ಬಹಮನ್ ಷಾ' ಎಂಬ ಹೆಸರು ಪಡೆದು ಪ್ರಸಿದ್ಧ ಬಹಮನಿ ಸಾಮ್ರಾಜ್ಯದ ಸ್ಥಾಪನೆಗೆ ಕಾರಣನಾದನು.

ಮೇಲಿನ ಎಲ್ಲಾ ಅಂಶಗಳನ್ನು ಗಮನಿಸಿದಾಗ ಬಹಮನಿ ಸಾಮ್ರಾಜ್ಯದ ಸಂಸ್ಥಾಪಕನಾದ 'ಅಲ್ಲಾವುದ್ದೀನ್ ಹಸನ್ ಗಂಗು ಬಹಮನ್ ಷಾ'ನು ಸಾಮಾನ್ಯ ಕುಟುಂಬವೊಂದರಲ್ಲಿ ಹುಟ್ಟಿ, ಬಡತನದಲ್ಲಿ ಬೆಳೆದು ಪ್ರಾಮಾಣಿಕತೆಯಿಂದಲೂ, ಸ್ವಪ್ರಯತ್ನದಿಂದಲೂ ಸ್ವತಂತ್ರವಾದ ಬಹಮನಿ ಸಾಮ್ರಾಜ್ಯವನ್ನು ಸ್ಥಾಪಿಸಿದನೆಂದು ಹೇಳಬಹುದು. ಒಟ್ಟಾರೆಯಾಗಿ ಹೇಳುವುದಾದರೆ, ಹಸನ್‌ನು ಹುಟ್ಟುಹಾಕಿದ ಬಹಮನಿ ವಂಶವು ಇತಿಹಾಸದಲ್ಲಿ ಬಹಮನೀ ಸಾಮ್ರಾಜ್ಯವೆಂದು ಪ್ರಸಿದ್ಧಿ ಪಡೆದು ಸುಮಾರು ೨೦೦ ವರ್ಷಗಳ ಕಾಲ ದಖ್ಖನ್‌ನನ್ನು ಯಶಸ್ವಿಯಾಗಿ ಆಳ್ವಿಕೆ ಮಾಡಿದನೆಂದು ಪ್ರಸ್ತುತ ಅಧ್ಯಾಯದಿಂದ ತಿಳಿದುಬರುತ್ತದೆ.

### ೨.೨. ಬಹಮನಿ ರಾಜ್ಯದ ಬೆಳವಣಿಗೆ

ಕ್ರಿ.ಶ. ೧೩೪೭ರಲ್ಲಿ ದೌಲತಾಬಾದ್‌ದ ಪತನಕ್ಕೆ ಕಾರಣನಾದ ಇಸ್ಮಾಯಿಲ್ ಮಖ್ ಎಂಬ ಅಮೀರರ ನಾಯಕನು ದಕ್ಷನಾದ ಹಸನ್ ಎಂಬುವವನಿಗೆ ನಾಯಕತ್ವವನ್ನು ವಹಿಸಿದನು. ಹಸನ್‌ನ ಸಹೋದ್ಯೋಗಿಗಳು ಹಸನ್‌ನನ್ನು ರಾಜನೆಂದು ಘೋಷಿಸಿದರು. ಹಸನ್‌ನ ಪೂರ್ಣ ಹೆಸರು 'ಅಲ್ಲಾವುದ್ದೀನ್ ಹಸನ್ ಗಂಗು ಬಹಮನ್ ಷಾ', ಇವನು ಗುಲ್ಬರ್ಗಾವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಪ್ರಸಿದ್ಧ ರಾಜ್ಯವಾದ ಬಹಮನಿ ಸಾಮ್ರಾಜ್ಯದ ಸ್ಥಾಪನೆಗೆ ಕಾರಣನಾದನು.[೧೮]

## ಬಹಮನಿ ಸಂತತಿಯ ಅರಸರು ಮತ್ತು ಅವರು ಆಳಿದ ವರ್ಷ

| ಕ್ರಸಂ. | ಬಹಮನಿ ಸುಲ್ತಾನರ ಹೆಸರುಗಳು | ಆಳ್ವಿಕೆ ಮಾಡಿದ ದಿನಾಂಕ ಮತ್ತು ವರ್ಷ |
|---|---|---|
| ೧. | ಅಲ್ಲಾವುದ್ದೀನ್ ಹಸನ್ ಬಹಮನ್ ಷಾ | ೩.೮.೧೩೪೭ ರಿಂದ ೧೧.೨.೧೩೫೮ |
| ೨. | ಮಹಮ್ಮದ್ ಷಾ ಮೊದಲನೆ | ೧೧.೨.೧೩೫೮ ರಿಂದ ೨೧.೪.೧೩೭೫ |
| ೩. | ಮುಜಾಹಿದ್ ಷಾ | ೨೧.೪.೧೩೭೫ ರಿಂದ ೧೬.೪.೧೩೭೮ |
| ೪. | ದಾವೂದ್ ಷಾ | ೧೬.೪.೧೩೭೮ ರಿಂದ ೨೧.೫.೧೩೭೮ |
| ೫. | ಮಹಮ್ಮದ್ ಷಾ ಎರಡನೆ | ೨೧.೩.೧೯೭೮ ರಿಂದ ೨೦.೪.೧೩೯೭ |
| ೬. | ಘೀಯಾಸುದ್ದೀನ್ ಷಾ | ೨೦.೪.೧೩೯೭ ರಿಂದ ೧೪.೬.೧೩೯೭ |
| ೭. | ಶಮಶೂದ್ದೀನ್ ಷಾ | ೧೪.೫.೧೩೯೭ ರಿಂದ ೧೬.೧೧.೧೩೯೭ |
| ೮. | ಫಿರೋಜ್ ಷಾ | ೧೬.೧೧.೧೩೯೭ ರಿಂದ ೨೨.೯.೧೪೨೨ |
| ೯. | ಅಹಮದ್ ಷಾ | ೨೨.೯.೧೪೨೨ ರಿಂದ ೧೭.೪.೧೪೩೬ |
| ೧೦. | ಎರಡನೆ ಅಹಮದ್ ಷಾ | ೧೭.೪.೧೪೩೬ ರಿಂದ ೭.೫.೧೪೫೮ |
| ೧೧. | ಹುಮಾಯೂನ ಷಾ | ೭.೫.೧೪೫೮ ರಿಂದ ೪.೯.೧೪೬೧ |
| ೧೨. | ಮೂರನೇ ಅಹಮದ್ ಷಾ | ೪.೯.೧೪೬೧ ರಿಂದ ೩೦.೭.೧೪೬೩ |
| ೧೩. | ಮಹಮ್ಮದ್ ಷಾ ಮೂರನೇ | ೩.೭.೧೪೬೩ ರಿಂದ ೨೬.೩.೧೪೮೨ |
| ೧೪. | ಮಹಮ್ಮದ್ ಷಾ | ೨೬.೩.೧೪೮೨ ರಿಂದ ೭.೧೨.೧೫೧೮ |
| ೧೫. | ನಾಲ್ಕನೆ ಅಹಮದ್ ಷಾ | ೭.೧೨.೧೫೧೮ ರಿಂದ ೧೫.೧೨.೧೫೨೦ |
| ೧೬. | ಮೂರನೇ ಅಲ್ಲಾವುದ್ದೀನ್ ಷಾ | ೨೮.೧೨.೧೫೨೦ ರಿಂದ ೫.೩.೧೫೨೩ |
| ೧೭. | ವಲಿಯುಲ್ಲಾ ಷಾ | ೫.೩.೧೫೨೩ ರಿಂದ ೧೫೨೬ |
| ೧೮. | ಕಲೀಮುಲ್ಲಾ ಷಾ | ೧೫೨೬ ರಿಂದ ೧೫೩೮ |

(ಕೃಪೆ:ರಾಬರ್ಟ್ ಸಿವೆಲ್(ಮೂಲ), ಸದಾನಂದ ಕನವಳ್ಳಿ(ಅನು), ಮರೆತುಹೋದ ಮಹಾಸಾಮ್ರಾಜ್ಯ ವಿಜಯನಗರ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦, ಪು೪೧೭)

ಬಹಮನ್‌ರು ಸುಮಾರು ೨೦೦ ವರ್ಷಗಳ ಕಾಲ ಆಳ್ವಿಕೆ ಮಾಡಿದರು. ಇವರ ಆಳ್ವಿಕೆಯ ಕಾಲವನ್ನು ಎರಡು ಭಾಗಗಳಾಗಿ ವಿಂಗಡಿಸಬಹುದು. ಅವುಗಳೆಂದರೆ ಗುಲ್ಬರ್ಗಾ ಭಾಗ ಕ್ರಿ.ಶ. ೧೩೪೭ ರಿಂದ ಕ್ರಿ.ಶ. ೧೪೨೨ ಮತ್ತು ಬೀದರ್ ಭಾಗ ಕ್ರಿ.ಶ.೧೪೨೨ ರಿಂದ ೧೫೨೮. ಈ ಭಾಗಗಳ ನಂತರ ಬಹಮನಿ ಸಾಮ್ರಾಜ್ಯವು ಐದು ಶಾಹಿ ರಾಜ್ಯಗಳಾಗಿ ವಿಂಗಡಣೆಯಾಯಿತು, ಅವುಗಳೆಂದರೆ ಬೀದರ್, ಬಿಜಾಪುರ, ಗೋಲ್ಕೊಂಡ, ಅಹಮದ್‌ನಗರ ಮತ್ತು ಬೀರಾರ್. ಬಹಮನಿ ಆಳ್ವಿಕೆ ಕಂಡ ಎರಡು ಕಾಲಗಳೂ ಅವರ ರಾಜಕೀಯ ವಿಸ್ತಾರವನ್ನು ಸೂಚಿಸುತ್ತವೆ.

### ೨.೨.೧. ಗುಲ್ಬರ್ಗಾ ಹಂತ(ಕ್ರಿ.ಶ.೧೩೪೭–೧೪೨೨)

ಇತಿಹಾಸದ ಪ್ರಕಾರ ಬಹಮನ್ ಸುಲ್ತಾನರು ಗುಲ್ಬರ್ಗಾವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ೧೩೪೭ರಿಂದ ೧೪೨೨ ರವರೆಗೆ(೭೫ ವರ್ಷ) ರಾಜ್ಯವನ್ನಾಳಿದರು. ಈ ಸಮಯವನ್ನು ಗುಲ್ಬರ್ಗಾ ಹಂತವೆಂದು ಕರೆಯಲಾಗಿದ್ದು, ಈ ಕಾಲದಲ್ಲಿ ಆಳ್ವಿಕೆ ಮಾಡಿದ ಬಹಮನಿ ಸುಲ್ತಾನರು ಈ ಕೆಳಗಿನಂತಿದ್ದಾರೆ.

೧. ಅಲ್ಲಾವುದ್ದೀನ್ ಹಸನ್ ಗಂಗು ಬಹಮನ್ ಷಾ(೧೩೪೭–೧೩೫೮)

೨. ಒಂದನೇ ಮಹಮ್ಮದ್ ಷಾ(೧೩೫೮–೧೩೭೫)

೩. ಮುಜಾಹಿದ್ ಷಾ(೧೩೭೫–೧೩೭೮)

೪. ದಾವುದ್ ಷಾ(೧೬–೦೪–೧೩೭೮ ರಿಂದ ೨೧–೦೫–೧೩೭೮)

೫. ಎರಡನೇ ಮಹಮ್ಮದ್ ಷಾ(೧೩೭೮–೧೩೯೭)

೬. ಘಿಯಾಸುದ್ದೀನ್(೨೦–೦೪–೧೩೯೭ ರಿಂದ ೧೪–೦೬–೧೩೯೭)

೭. ಎರಡನೇ ಶಮಸುದ್ದೀನ್(೧೪–೦೬–೧೩೯೭ ರಿಂದ ೧೫–೧೧–೧೩೯೭)

೮. ತಾಜುದ್ದೀನ್ ಫಿರೋಜ್ ಷಾ(೧೩೯೭–೧೪೨೨)

**೧. ಅಲ್ಲಾವುದ್ದೀನ್ ಹಸನ್ ಗಂಗು ಬಹಮನ್ ಷಾ (ಕ್ರಿ.ಶ.೧೩೪೭–೧೩೫೮)**

ಯಾವುದೇ ರಾಜ್ಯ ಸ್ಥಾಪನೆಯಾದ ಪ್ರಾರಂಭದ ಹಂತದಲ್ಲಿ ಅನೇಕ ಸಂಕಷ್ಟಗಳನ್ನು ಎದುರಿಸ ಬೇಕಾಗುತ್ತದೆ. ಸ್ಥಾಪಕರಲ್ಲಿ ಧೈರ್ಯ, ಸಾಹಸ ಮತ್ತು ಅತ್ಯುತ್ತಮ ಗುಣಗಳಿರಬೇಕಾಗುತ್ತದೆ. ಅಲ್ಲಾವುದ್ದೀನ್ ಹಸನ್ ಗಂಗು ಬಹಮನ್ ಷಾ ಸ್ಥಾಪಿಸಿದ ಬಹಮನಿ ರಾಜ್ಯವು ಅನೇಕ ಸಮಸ್ಯೆಗಳಿಂದ ಕೂಡಿದ್ದಾಗಿತ್ತು. ಆರಂಭದಲ್ಲಿ ರಾಜನಿಗೆ ದೊರಕಿದ್ದು ಮೀರಜ್, ಬೆಳಗಾಂವ ಮತ್ತು ಇತರ ಚಿಕ್ಕನಗರಗಳನ್ನೊಳಗೊಂಡ ಸಣ್ಣ ಜಹಗೀರು. ಅಧಿಕಾರ ವಹಿಸಿಕೊಂಡ ನಂತರ ಸಮಸ್ಯೆಗಳನ್ನು ಪರಿಹರಿಸುವುದು ಸುಲಭ ಕಾರ್ಯವಾಗಿರಲಿಲ್ಲ. ಒಂದು ಕಡೆ ದೆಹಲಿ ಸುಲ್ತಾನನ ಬೆಂಬಲಿಗರ ಭಯವಿದ್ದರೆ, ಇನ್ನೊಂದೆಡೆ ಸ್ಥಳೀಯ ಹಿಂದೂ ಅರಸರು ಪರಿಸ್ಥಿತಿಯ ಉಪಯೋಗವನ್ನು ಹೇಗೆ ಪಡೆದುಕೊಳ್ಳಬೇಕೆಂದು ಸಮಯ ಕಾಯುತ್ತಿದ್ದರು. ಈ ಎಲ್ಲಾ ಪರಿಸ್ಥಿತಿಗಳನ್ನು ಮತ್ತು ಸವಾಲುಗಳನ್ನು ಎದುರಿಸಿ ಅಲ್ಲಾವುದ್ದೀನನು ಎಲ್ಲಾ ಸಮಸ್ಯೆಗಳನ್ನು ಪರಿಹರಿಸಿಕೊಂಡು ಜಾಣ್ಮೆ ಮತ್ತು ಪರಾಕ್ರಮದಿಂದ ರಾಜ್ಯವನ್ನು ಕ್ರೋಢೀಕರಿಸಿಕೊಂಡನು.

ಮೊಟ್ಟ ಮೊದಲನೆಯದಾಗಿ ದುರಾಶಾಗ್ರಸ್ಥರಾದ ಅಮೀರರನ್ನು ತನ್ನತ್ತ ಒಲಿಸಿಕೊಳ್ಳುವುದು ಬಹು ಮುಖ್ಯವಾಗಿತ್ತು, ಮುಂದೆ ತೊಂದರೆಕೊಡಬಹುದೆಂದು ಯೋಚಿಸಿ ಶಂಸುದ್ದೀನ್ ಇಸ್ಮಾಯಿಲ್‌ಮುಖ್‌ನನ್ನು ತನ್ನ ಆಪ್ತ ಕಾರ್ಯದರ್ಶಿಯನ್ನಾಗಿ ನೇಮಿಸಿಕೊಂಡನು. ಇನ್ನೊಬ್ಬ ಅಮೀರ ಬಲಿಷ್ಠನಾದ, ಅಮೀರ ಮಲಿಕ್ ಸೈಫುದ್ದೀನ್ ಘೋರಿಯ ಮಗಳನ್ನು ತನ್ನ ಮಗನಿಗೆ ತಂದುಕೊಂಡು ವಿವಾಹ ಸಂಬಂಧ ಬೆಳೆಸಿ ದುರಾಶಾಗ್ರಸ್ಥರಾದ ಅಮೀರರನ್ನು ತಕ್ಕಮಟ್ಟಿಗೆ ತನ್ನತ್ತ ಒಲಿಸಿಕೊಳ್ಳುವಲ್ಲಿ ಯಶಸ್ವಿಯಾದನು. ರಾಜಕುಮಾರ ಜಾಫರ್‌ಖಾನ್‌ನು ತಂದೆಯಂತೆಯೇ ಸಾಮರ್ಥ್ಯಶಾಲಿಯು ಮತ್ತು ಪರಾಕ್ರಮಿಯು ಆಗಿದ್ದನು. ಪ್ರಧಾನಮಂತ್ರಿಯಾದ ಮಲಿಕ್ ಸೈಫುದ್ದೀನ್ ದೂರದೃಷ್ಟಿ ಮತ್ತು ವಿವೇಕಶಾಲಿಯಾದ ವ್ಯಕ್ತಿಯಾಗಿದ್ದು ಅಲ್ಲಾವುದ್ದೀನನಿಗೆ ಸರಿಯಾದ ಮಾರ್ಗದರ್ಶಕನಾಗಿದ್ದನು. ಪೂರ್ತಿ ದಖ್ಖನನ್ನೇ ಗೆಲ್ಲಬೇಕೆಂಬ ಅಲ್ಲಾವುದ್ದೀನ್‌ನ ಮಹತ್ವಕಾಂಕ್ಷೆಯನ್ನು ಮತ್ತು ದೆಹಲಿಯ ಮೇಲೆ ದಂಡೆತ್ತಿ ಹೋಗಬೇಕೆನ್ನುವ ಆಕಾಂಕ್ಷೆಯನ್ನು ವಿವೇಕಶಾಲಿಯಾದ ಮಲಿಕ್ ಸೈಫುದ್ದೀನನು ತಡೆಯುವಲ್ಲಿ ಯಶಸ್ವಿಯಾದನು. ಮೊದಲು ಇರುವ ರಾಜ್ಯದ ಸ್ಥಿರತೆ, ಸುಭದ್ರತೆ ಮತ್ತು ಉತ್ತಮ ಆಡಳಿತಕ್ಕೆ ಹೆಚ್ಚಿನ ಗಮನವನ್ನು ಕೊಡಬೇಕೆಂದು ರಾಜನಿಗೆ ಮಾರ್ಗದರ್ಶನ

# ಬಹಮನಿ ರಾಜ್ಯದ ವಂಶವೃಕ್ಷ




ಕೃಪೆ: ಎಂ. ಶೇಷಾದ್ರಿ(ಅನು), ಕರ್ನಾಟಕ ಪರಂಪರೆ, ಸಂಪುಟ ೨, ಮಧ್ಯಕಾಲ ಮತ್ತು ಆಧುನಿಕ ಕಾಲ, ಮೈಸೂರು, ೧೯೭೦, ಪು. ೭೦.

ಮಾಡಿದನು. ಇದು ಸರಿಯೆನಿಸಿ ಸುಲ್ತಾನನು ಸಣ್ಣಪುಟ್ಟ ಸಂಸ್ಥಾನಗಳಾದ ಕಲ್ಯಾಣ, ತೆಲಂಗಾಣ ಮತ್ತು ಗುಲ್ಬರ್ಗಾಗಳನ್ನು ಆಕ್ರಮಣ ಮಾಡಿ ವಶಪಡಿಸಿಕೊಂಡು ರಾಜ್ಯವನ್ನು ತಕ್ಕಮಟ್ಟಿಗೆ ವಿಸ್ತರಿಸಿದನು.

ರಾಜ್ಯ ವಿಸ್ತರಣೆಯನ್ನು ಮಾಡುವ ಮಹತ್ವಾಕಾಂಕ್ಷೆಯಿಂದ ಅಲ್ಲಾವುದ್ದೀನನು ತನ್ನ ಪ್ರಧಾನಮಂತ್ರಿಯಾದ ಮಲಿಕ್ ಸೈಫುದ್ದೀನ್‌ನ ಮುಖಾಂತರ ಅನೇಕ ಯೋಜನೆಗಳನ್ನು ರೂಪಿಸಿ, ಪ್ರಮುಖ ಸೇನಾಧಿಕಾರಿಗಳನ್ನು ಮೊದಲನೆಯ ದಂಡಯಾತ್ರೆಯ ಸಲುವಾಗಿ ಸಜ್ಜುಗೊಳಿಸಿದನು. ಪ್ರಥಮ ದಂಡಯಾತ್ರೆಯನ್ನು ಸೇನಾಧಿಕಾರಿಯಾದ ಗುರುಷಾಸ್ಪ್‌ನು ಕೊಟಗೀರ್ ಮೇಲೆ ಮಾಡಿ, ಕೊಟಗೀರ್ ಸೈನ್ಯವು ಶಸ್ತ್ರಾಸ್ತ್ರಗಳನ್ನು ತ್ಯಜಿಸುವಂತೆ ಮಾಡಿದನು.[೧೯] ಮುಂದೆ ಸೇನಾಧಿಕಾರಿಯಾದ ರಜಿಯುದ್ದೀನನು ಮಾರಂ, ಮಹೇಂದ್ರಿ ಮತ್ತು ಅಕ್ಕಲ ಕೋಟೆಗಳನ್ನು ಆಕ್ರಮಣ ಮಾಡಿ ವಶಪಡಿಸಿಕೊಂಡನು. ಕೀರ್‌ಖಾನನು ಕಲ್ಯಾಣವನ್ನು, ಸಿಕಂದರ್‌ಖಾನನು ಬೀದರ್ ಮತ್ತು ಮಳಖೇಡ್‌ಗಳನ್ನು ಆಕ್ರಮಣ ಮಾಡಿ ಗೆದ್ದುಕೊಂಡರು. ಈ ಎಲ್ಲಾ ಸ್ಥಳಗಳು ಈ ಮೊದಲು ಮಹಮ್ಮದ್ ಬಿನ್ ತುಘಲಕ್‌ನ ಆಳ್ವಿಕೆಗೆ ಒಳಪಟ್ಟಿದ್ದವು. ಅಲ್ಲಾವುದ್ದೀನನು ವಶಪಡಿಸಿಕೊಂಡ ಸ್ಥಳಗಳನ್ನು ಮತ್ತು ಸೈನಿಕರನ್ನು ದಯೆಯಿಂದ ನಡೆಸಿಕೊಂಡು ಉತ್ತಮ ರಾಜನಂತೆ ವರ್ತಿಸಿದನು. ಹಸನ್‌ನು ಬಹಮನಿ ರಾಜ್ಯವನ್ನು ಮಳಖೇಡ್‌ನಿಂದ ವಾರಂಗಲ್‌ವರೆಗೆ ವಿಸ್ತರಿಸಿ ನೂತನ ರಾಜ್ಯದ ಪ್ರದೇಶಗಳ ಜೊತೆ ಉತ್ತಮ ಮೈತ್ರಿ ಸಂಬಂಧಗಳನ್ನು ಬೆಳೆಸಿಕೊಂಡು ರಾಜಕೀಯ ಒಪ್ಪಂದಗಳನ್ನು ಮಾಡಿಕೊಳ್ಳಲು ವಾರಂಗಲ್ ರಾಜನಾದ ಕಾಪನಾಯಕನನ್ನು ಪ್ರೋತ್ಸಾಹಿಸಿದನು. ಇವರ ಪ್ರಭಾವಕ್ಕೊಳಗಾದ ಕಾಪನಾಯಕನು ಬಹಮನಿ ರಾಜ್ಯದ ಸಾಮಂತ ವ್ಯವಸ್ಥೆಯನ್ನು ಒಪ್ಪಿಕೊಂಡನು. ಆ ಮೂಲಕ ಸಿಕಂದರ್ ಮತ್ತು ಕಾಪರು ಮಿತ್ರರಾದರು.

ಅಲ್ಲಾವುದ್ದೀನನಿಗೆ ಗುಲ್ಬರ್ಗಾವನ್ನು ಗೆಲ್ಲುವುದು ಪ್ರಯಾಸದ ಕೆಲಸವೇ ಆಯಿತು. ಪೋಚರೆಡ್ಡಿಯು ತುಘಲಕ್‌ನ ಪರವಾಗಿ ಹೊಸ ರಾಜ್ಯದ ವಿರುದ್ಧ ದಂಗೆಯನ್ನು ಎಬ್ಬಿಸಿದಾಗ ಮೂರು ಜನ ಸೈನ್ಯಾಧಿಕಾರಿಗಳು ಸೇರಿ ದಂಗೆಯನ್ನು ಹತ್ತಿಕ್ಕುವಲ್ಲಿ ಯಶಸ್ವಿಯಾದರು. ಸಾಗರದಲ್ಲಿ ಮಹಮ್ಮದ್ ಬಿನ್ ತುಘಲಕ್ ನಡೆಸಿದ ದಂಗೆಯನ್ನು ಹತ್ತಿಕ್ಕಲು ದೌಲತಾಬಾದ್‌ದಿಂದ ಅಲ್ಲಾವುದ್ದೀನ್ ಬರಬೇಕಾಯಿತು. ಇದೇ ಸಮಯಕ್ಕೆ ಮಹಮ್ಮದ್ ಬಿನ್ ತುಘಲಕ್‌ನು ಸಿಂಧೂ ನದಿಯ ದಡದಲ್ಲಿ ಅಶ್ವಸ್ಥನಾಗಿ ೧೩೫೧ರಲ್ಲಿ ಕಾಲವಶನಾದನೆಂಬ ಸುದ್ಧಿ ಅಲ್ಲಾವುದ್ದೀನನಿಗೆ ತಲುಪಿತು. ನೂತನ ಸಾಮ್ರಾಜ್ಯವಾದ ಬಹಮನಿ ರಾಜ್ಯಕ್ಕೆ ಹಿಂದೂ ರಾಜರಿಗಿಂತ ತುಘಲಕ್‌ನ ಪರವಾಗಿದ್ದ ಆಮೀರರು ಮತ್ತು ನಾಯಕರೇ ಹೆಚ್ಚಿನ ತೊಂದರೆಯನ್ನು ಕೊಟ್ಟರು.

ಜಮಖಂಡಿ ನಾಯಕನಾದ ನಾರಾಯಣನ ದಂಗೆಯನ್ನು ಹತ್ತಿಕ್ಕುವುದು ಸಮಸ್ಯೆಯಾಗಿತ್ತು, ಈ ಸಂದರ್ಭದಲ್ಲಿ ಮೇವಾರದ ಜಹಗೀರನಾದ ದಿಲೀಪ್‌ಸಿಂಗನು ಯುದ್ಧದಲ್ಲಿ ಪ್ರಮುಖ ಪಾತ್ರವಹಿಸಿ ಜಮಖಂಡಿ ನಾಯಕನನ್ನು ಸೋಲಿಸಿ ಶರಣಾಗತನಾಗುವಂತೆ ಮಾಡಿದನು. ಯಾರು ರಾಜ್ಯದ ಕ್ರೋಢೀಕರಣಕ್ಕೆ ಸಹಕರಿಸುವರೋ ಅವರಿಗೇ ಅಲ್ಲಿನ ಅಧಿಕಾರವನ್ನು ವಹಿಸಿಕೊಡಲಾಗುತ್ತಿತ್ತು, ಅದೇ ರೀತಿ ಜಮಖಂಡಿ ನಾಯಕನಾದ ನಾರಾಯಣನು ಅಲ್ಲಾವುದ್ದೀನನಿಗೆ ಶರಣಾದ ನಂತರ ಜಮಖಂಡಿ ಆಡಳಿತವನ್ನು ಪುನಃ ಅವನಿಗೆ ವಹಿಸಿಕೊಡಲಾಯಿತು. ಈ ರೀತಿಯಾಗಿ ಹೊಸ ಹೊಸ ಪ್ರದೇಶಗಳು ಬಹಮನಿ ರಾಜ್ಯಕ್ಕೆ ಸೇರಿ, ವಶಪಡಿಸಿಕೊಂಡು ಪ್ರದೇಶಗಳಿಗೆ ಉತ್ತಮ ಆಡಳಿತದ ವ್ಯವಸ್ಥೆ ಮಾಡಲಾಯಿತು. ಬಂಡುಕೋರ ಖೀರ್‌ಖಾನ್‌ನನ್ನು ಸಿಕಂದರ್‌ಖಾನನು ಬೀದರ್‌ನಲ್ಲಿ ಸೋಲಿಸಿ ಸರಪಣಿಗಳಿಂದ ಬಂಧಿಸಿ ಅಲ್ಲಾವುದ್ದೀನ್‌ನ ಮುಂದೆ ನಿಲ್ಲಿಸಲಾಯಿತು. ಖೀರ್‌ಖಾನನು ಪ್ರಥಮ ಹಂತದಲ್ಲಿ ತುಂಬಾ ಸಹಾಯ ಮಾಡಿರುವನೆಂದು ಸಿಕಂದರ್‌ಖಾನನು ರಾಜನಿಗೆ ಮನವಿ ಮಾಡಿ ಅವನಿಗೆ ಕ್ಷಮೆ ನೀಡಬೇಕೆಂದು ಪ್ರಾರ್ಥಿಸಿದನು, ಆದರೆ

ಅಲ್ಲಾವುದ್ದೀನನು ರಾಜ್ಯ ದ್ರೋಹಿಗಳಿಗೆ ದಯೆ, ಕ್ಷಮೆ ತೋರಿಸುವುದು ವಿನಾಶಕ್ಕೆ ದಾರಿ ಮಾಡಿಕೊಟ್ಟಂತೆ ಎಂದು ಹೇಳಿ, ಖೀರ್‌ಖಾನನಿಗೆ ಮೃತ್ಯು ದಂಡವನ್ನು ವಿಧಿಸಲಾಯಿತು. ಅಲ್ಲಾವುದ್ದೀನ್ ಹಸನ್ ಗಂಗೂ ಬಹಮನ್‌ಷಾ ಗುಲ್ಬರ್ಗಾವನ್ನು ರಾಜಧಾನಿಯನ್ನಾಗಿ ಮಾಡಿಕೊಂಡನೆಂದು ಹೇಳುತ್ತದೆ.

ಗುಲ್ಬರ್ಗಾವನ್ನು ಬಹಮನಿ ರಾಜ್ಯದ ನೂತನ ರಾಜಧಾನಿಯನ್ನಾಗಿ ಮಾಡಿ 'ಅಹಸನಾಬಾದ್' ಎಂಬ ಹೊಸ ಹೆಸರಿನೊಂದಿಗೆ ನಾಮಕರಣ ಮಾಡಲಾಯಿತು.[೨೦] ಬಹಮನಿ ರಾಜ್ಯವು ಗೋವಾ ಮತ್ತು ಧಾಬೂಲ್‌ವರೆಗೆ ವಿಸ್ತಾರಗೊಂಡಿತು ಮತ್ತು ಅರೇಬಿಯನ್ ಸಮುದ್ರದ ಮುಖ್ಯ ಬಂದರಾಗಿ ಮಾರ್ಪಟ್ಟಿತು. ಉತ್ತರದಲ್ಲಿ ಬಹಮನಿ ರಾಜ್ಯವು ಮಾಂಡುವರೆಗೂ, ಪೂರ್ವದಲ್ಲಿ ತೆಲಂಗಾಣದ ನೆಲ್ಲೂರಿನವರೆಗೂ ವಿಸ್ತರಿಸಿಕೊಂಡಿತ್ತು. ರಾಯಚೂರು ಮತ್ತು ಮುದ್ಗಲ್ ಪ್ರದೇಶಗಳನ್ನೊಳಗೊಂಡ ಗುಲ್ಬರ್ಗಾವನ್ನು ಪ್ರಧಾನಮಂತ್ರಿ ಸೈಫುದ್ದೀನ್ ಘೋರಿಯ ಆಡಳಿತಕ್ಕೆ ಒಳಪಡಿಸಲಾಯಿತು. ದೌಲತಾಬಾದ್‌ನನ್ನು ಸುಲ್ತಾನನ ಸೋದರಳಿಯನಾದ ಮಹಮ್ಮದ್‌ನ ಆಡಳಿತಕ್ಕೆ ಒಳಪಡಿಸಲಾಯಿತು. ಬೀರಾರ್ ಪ್ರದೇಶವನ್ನು ಸಫ್ದರ್‌ಖಾನ್ ಸಿಸ್ತನಿಗೆ ತೆಲಂಗಾಣ ಪ್ರದೇಶದ ಆಡಳಿತವನ್ನು ಸೈಫುದ್ದೀನ್‌ನ ಮಗ ಹುಮಾಯೂನ್‌ನಿಗೆ ವಹಿಸಿ ಕೊಡಲಾಯಿತು. ೧೩೫೧ರಲ್ಲಿ ರಾಜಕುಮಾರ ಮಹಮ್ಮದ್‌ನ ವಿವಾಹಕ್ಕೆ ಎಲ್ಲಾ ಹಿಂದೂ ರಾಜ್ಯಗಳ ಅರಸರಿಗೆ ಆಮಂತ್ರಣವನ್ನು ನೀಡಿ ವಿವಾಹದ ಔತಣಕೂಟವನ್ನು ಬರೀ ಅರಸರಿಗಷ್ಟೇ ಅಲ್ಲದೆ ಎಲ್ಲಾ ಸಾಮಾನ್ಯ ಪ್ರಜೆಗಳಿಗೂ ನೀಡಲಾಗಿತ್ತು. ಹೀಗಾಗಿ ಬಹಮನಿ ಸಾಮ್ರಾಜ್ಯವು ಒಂದು ಜಾತ್ಯಾತೀತ ನೀತಿಯನ್ನು ಅನುಸರಿಸಿದ ರಾಜ್ಯವೆಂದು ತಿಳಿದುಬರುತ್ತದೆ.

ಸುಲ್ತಾನನು ಸ್ವಯಂ ಸಾಮರ್ಥ್ಯವುಳ್ಳ ವ್ಯಕ್ತಿಯಾಗಿದ್ದು, ರಾಜ್ಯವನ್ನು ವಿಸ್ತರಿಸುವಲ್ಲಿ, ಕ್ರೋಢೀಕರಿಸುವಲ್ಲಿ ಸಮರ್ಥನಾಗಿದ್ದನು. ಸುಲ್ತಾನನ ರಾಜಕಾರಣ ಕೌಶಲ್ಯ, ನ್ಯಾಯ ಮತ್ತು ಜನಕಲ್ಯಾಣ ಯೋಜನೆಗಳು ಮೆಚ್ಚುವಂತಹವುಗಳಾಗಿದ್ದವು. ಅಲ್ಲಾವುದ್ದೀನನು ಮುಸ್ಲಿಮೇತರರಿಂದ ಜಿಜಿಯಾ ತೆರಿಗೆಯನ್ನು ವಸೂಲಿ ಮಾಡಿದ ಮೊದಲ ಮುಸ್ಲಿಂ ಸುಲ್ತಾನನಾಗಿದ್ದನು. ಸುಲ್ತಾನನ ಕಾಲದಲ್ಲಿ ಗುಲ್ಬರ್ಗಾ ನಗರವು ಪ್ರಸಿದ್ಧಿ ಮತ್ತು ಪ್ರಾಧಾನ್ಯತೆಯನ್ನು ಪಡೆದು, ಹಲವಾರು ಧಾರ್ಮಿಕ ಕಟ್ಟಡಗಳನ್ನು ಮತ್ತು ಕೋಟೆ ಕೊತ್ತಲಗಳನ್ನು ನಿರ್ಮಿಸಲ್ಪಟ್ಟವು. ಸುಲ್ತಾನನು ಸುಮಾರು ೩೫ ವರ್ಷಗಳ ಕಾಲ ದಖ್ಖನ್ನಿನಲ್ಲಿ ಒಂದು ಪ್ರಮುಖ ಸಾಮ್ರಾಜ್ಯದ ಉದಯಕ್ಕೆ ಕಾರಣನಾಗಿ, ಮುಖ್ಯಪಾತ್ರ ವಹಿಸಿ, ಬಹಮನಿ ರಾಜ್ಯದ ಸಂಸ್ಥಾಪಕನಾದನು. ಕಠಿಣವಾದ ಜೀವನವನ್ನು ನಡೆಸಿ, ನ್ಯಾಯ ಮತ್ತು ಧರ್ಮಪರತೆಯನ್ನು ಪಾಲಿಸಿ, ಉತ್ತಮ ಆಡಳಿತ ನಡೆಸಿದ ಸುಲ್ತಾನನೆಂದು ಹೆಸರುವಾಸಿಯಾಗಿದ್ದನು. ತನ್ನ ಕೊನೆಯ ದಿನಗಳಲ್ಲಿ ಸುಲ್ತಾನನು ತನ್ನ ಮೂವರು ಮಕ್ಕಳಾದ ಮಹಮ್ಮದ್, ಮಹಮೂದ ಮತ್ತು ದಾವುದ್‌ರನ್ನು ಬಳಿಗೆ ಕರೆದು ಅವರಿಗೆ ಒಗ್ಗಟ್ಟಾಗಿರಲು ತಿಳಿಸಿ ಇಬ್ಬರು ತಮ್ಮಂದಿರು ಅಣ್ಣನಿಗೆ ವಿಧೇಯಕರಾಗಿರುವಂತೆಯೂ ಒಗ್ಗಟ್ಟಿನಲ್ಲೇ ಬಲವಿರುವುದೆಂದು ಅವರಿಗೆ ತಿಳಿಸಿ ಹೇಳಿದನು. ೧೩೫೮ರಲ್ಲಿ ಸುಲ್ತಾನನಾದ ಅಲ್ಲಾವುದ್ದೀನ್ ಹಸನ್ ಗಂಗು ಬಹಮನ್ ಷಾನು ತನ್ನ ೬೭ನೇ ವಯಸ್ಸಿನಲ್ಲಿ ತನ್ನ ಕೊನೆಯುಸಿರೆಳೆದನು. ಸುಲ್ತಾನನ ಕೊನೆಯ ಆಸೆಯಂತೆ ಗುಲ್ಬರ್ಗಾದ ಕೋಟೆಯ ಹತ್ತಿರದಲ್ಲೇ ಇರುವ 'ಗುರು ಷೇಕ್ ಶಿರಾಜುದ್ದೀನ್ ಜುನೈದಿ'ಯ ಸಮಾದಿಯ ಸಮೀಪದಲ್ಲಿಯೇ ಸುಲ್ತಾನನನ್ನು ಸರಳವಾಗಿ ಸಮಾಧಿ ಮಾಡಲಾಯಿತು.[೨೧] ಸಮಾಧಿಯನ್ನು ತುಘಲಕ್ ಶೈಲಿಯಲ್ಲಿ ನಿರ್ಮಿಸಲಾಗಿದ್ದು ೨೬ ಅಡಿ ಚೌಕಾಕಾರದಲ್ಲಿದೆ.

### ೨. ಒಂದನೇ ಮಹಮ್ಮದ್ ಷಾ(ಕ್ರಿ.ಶ.೧೩೫೮–೧೩೭೫)

ಮೊದಲನೇಯ ಮಹಮ್ಮದ್ ಷಾ ಸುಮಾರು ಹದಿನೇಳುವರೆ ವರ್ಷಗಳ ಕಾಲ ಬಹಮನಿ ಸಾಮ್ರಾಜ್ಯದ ಆಡಳಿತವನ್ನು ನಿರ್ವಹಿಸಿದನು. ಈತನ ಆಳ್ವಿಕೆಯ ಕಾಲದಲ್ಲಿ ಬಹಮನಿ ಸಾಮ್ರಾಜ್ಯ ಮತ್ತು ವಿಜಯನಗರ

ಸಾಮ್ರಾಜ್ಯಗಳ ಮಧ್ಯೆ ನಿರಂತರವಾಗಿ ಯುದ್ಧಗಳು ನಡೆದವು. ಈ ಯುದ್ಧಗಳು ಧಾರ್ಮಿಕ ವೈಷಮ್ಯಕ್ಕಾಗಿ ನಡೆಯುತ್ತಿದ್ದವು ಎಂದು ಕೆಲ ಇತಿಹಾಸ ತಜ್ಞರು ತಿಳಿಸಿದರೆ ಮತ್ತೆ ಕೆಲವರು ಆರ್ಥಿಕ ಕಾರಣಗಳಿಗಾಗಿ ಈ ಯುದ್ಧಗಳು ನಡೆದವು ಎಂದು ಬಿಂಬಿಸಿದ್ದಾರೆ. ಮಹಮ್ಮದ್ ಷಾ ತನ್ನ ಆಳ್ವಿಕೆಯ ಬಹುಕಾಲವನ್ನು ವಿಜಯನಗರ ಮತ್ತು ತೆಲಂಗಾಣಗಳ ವಿರುದ್ಧ ಹೋರಾಡುತ್ತಲೇ ಕಳೆದನು. ತೆಲಂಗಾಣ ವಿರುದ್ಧ ಎರಡು ವರ್ಷಗಳ ಕಾಲ ಅತ್ಯಂತ ಭೀಕರ ಯುದ್ಧವನ್ನು ಮಾಡಿದನೆಂದು ಇತಿಹಾಸದಿಂದ ತಿಳಿದುಬರುತ್ತದೆ.[೨೨] ಈ ಯುದ್ಧದಲ್ಲಿ ವಿಪರೀತ ಸಾವು–ನೋವುಗಳು ಉಂಟಾಗಿ ಕೊನೆಯದಾಗಿ ಮಹಮ್ಮದ್ ಷಾ ತೆಲಂಗಾಣದ ರಾಜ ಕಾಪಯ್ಯನಾಯಕನನ್ನು ಸೋಲಿಸುವಲ್ಲಿ ಯಶಸ್ವಿಯಾದನು. ಕಾಪಯ್ಯನಾಯಕನು ಮಹಮ್ಮದ್ ಷಾನಿಗೆ ಗೋಲ್ಕೊಂಡದ ಕೋಟೆಯನ್ನು ಬಿಟ್ಟುಕೊಟ್ಟು ಕಪ್ಪ ಕಾಣಿಕೆಯಾಗಿ ಅಪಾರ ಸಂಪತ್ತನ್ನು ಮಹಮ್ಮದ್ ಷಾನಿಗೆ ಸಮರ್ಪಿಸಿದನು. ಕಾಪಯ್ಯನು ರತ್ನಖಚಿತವಾದ ಸಿಂಹಾಸನವನ್ನು ಮಹಮ್ಮದ್‌ಷಾಗೆ ಬಿಟ್ಟುಕೊಟ್ಟನೆಂದು, ಮಹಮ್ಮದ್‌ಷಾನು ಗುಲ್ಬರ್ಗಾದ ಅರಮನೆಯಲ್ಲಿ ಇದನ್ನು ಸ್ಥಾಪಿಸಿ ವೈಭವದ ದರ್ಬಾರನ್ನು ನಡೆಸಿದನೆಂದು ತಿಳಿದುಬರುತ್ತದೆ.

ಮಹಮ್ಮದ್‌ಷಾನ ಕಾಲದಲ್ಲಿ ಕಂಡುಬರುವ ಮಹತ್ವವಾದ ಅಂಶಗಳೆಂದರೆ ಬಹಮನಿ ಸಾಮ್ರಾಜ್ಯದ ಸಾಂಸ್ಕೃತಿಕ ಹಾಗೂ ಆಡಳಿತ ಸುಧಾರಣೆಗಳು. ಎಲ್ಲಕ್ಕಿಂತ ಮುಖ್ಯವಾಗಿ ರಾಜ್ಯದ ರಾಜಕಾರಣದಲ್ಲಿ ಕ್ರಾಂತಿಕಾರಕ ಬದಲಾವಣೆಗಳು ನಡೆದು, ಸಿಡಿಮದ್ದಿನ ಸಂಶೋಧನೆಗೆ ಕಾರಣವಾಗಿ, ರಕ್ಷಣಾ ವ್ಯವಸ್ಥೆಯ ಪರಿಕಲ್ಪನೆಯೇ ಬದಲಾಯಿತು. ಬಹಮನಿ ಸೈನ್ಯದಲ್ಲಿ ಸೇವೆ ಸಲ್ಲಿಸುತ್ತಿದ್ದ ಪರ್ಶಿಯನ್ನರು ಮತ್ತು ಟರ್ಕರು ಪ್ರಥಮ ಬಾರಿಗೆ ಸಿಡಿಮದ್ದನ್ನು ದಖ್ಖನಿನ ಯುದ್ಧಗಳಲ್ಲಿ ಉಪಯೋಗಿಸಿದರು.[೨೩] ೧೩೬೫ರಲ್ಲಿ ಮಹಮ್ಮದ್‌ಷಾನು ಆದೋನಿಯನ್ನು ಮುತ್ತಿಗೆ ಹಾಕಿದಾಗ ಸಿಡಿಮದ್ದುಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ಬಳಸಲಾಯಿತು. ಈ ಕಾರಣಕ್ಕಾಗಿ ಮುಂದಿನ ದಿನಗಳಲ್ಲಿ ಕೋಟೆಗಳ ವಾಸ್ತುಶಿಲ್ಪವನ್ನೇ ಬದಲಾಯಿಸಲಾಯಿತು. ಹೆಚ್ಚು ಅಗಲವಾದ ಗೋಡೆಗಳಿಂದ ಕೂಡಿದ ಎತ್ತರವಾದ ಕೋಟೆಗಳು ಅಸ್ತಿತ್ವಕ್ಕೆ ಬಂದವು. ಕೋಟೆಯ ಬಾಗಿಲುಗಳ ಎದುರು ತೆರೆ–ಗೋಡೆಗಳು, ಬಂದೂಕುಗಳನ್ನು ಮತ್ತು ತೋಪುಗಳ ನಳಿಕೆಗಳನ್ನು ಜೋಡಿಸಲು ಕಿಂಡಿಗಳನ್ನು ನಿರ್ಮಿಸಲಾಯಿತು. ಸಿಡಿಮದ್ದಿನಿಂದ ಕೋಟೆಯನ್ನು ರಕ್ಷಿಸಲು ಎರಡು ಮೂರು ಸುತ್ತಿನ ಕೋಟೆ ಗೋಡೆಗಳನ್ನು ನಿರ್ಮಿಸಲಾಯಿತು. ಸಿಡಿಮದ್ದುಗಳಿಂದಾಗಿ ಇಡೀ ಯುದ್ಧದ ಕಾರ್ಯವಿನ್ಯಾಸವೇ ಕ್ರಾಂತಿಕಾರಕವಾಗಿ ಬದಲಾವಣೆ ಹೊಂದಿತು.

ದಖ್ಖನ್ನಿನ ಇತಿಹಾಸದಲ್ಲಿ ನಿರಂತರವಾಗಿ ಕಂಡುಬಂದ ಕಳವಳಕಾರಿಯಾದ ಅಂಶವೆಂದರೆ ಬಹಮನಿ ರಾಜ್ಯ ಮತ್ತು ವಿಜಯನಗರ ರಾಜ್ಯದ ನಡುವೆ ಸಂಬಂಧಗಳು ಹಳಿಸಿಹೋಗಿದ್ದು ಮಹಮ್ಮದ್‌ಷಾನ ಆಳ್ವಿಕೆಯಿಂದ ಪ್ರಾರಂಭವಾಗಿ ವಿಜಯನಗರ ಸಾಮ್ರಾಜ್ಯದ ಪತನದವರೆಗೂ ಎರಡೂ ರಾಜ್ಯಗಳು ನಿರಂತರವಾಗಿ ಕದನಗಳಲ್ಲಿ ನಿರತವಾಗಿದ್ದು ಬೇರುಬಿಟ್ಟ ಹುಣ್ಣಿನಂತಾಗಿದ್ದವು. ವಿಜಯನಗರ ಮತ್ತು ಬಹಮನಿ ಈ ಎರಡು ರಾಜ್ಯಗಳ ಮಧ್ಯೆ ನಡೆದ ನಿರಂತರ ಯುದ್ಧಗಳಿಗೆ ಪ್ರಮುಖ ಕಾರಣಗಳನ್ನು ಹುಡುಕಿದಾಗ ಹೆಚ್ಚಿನದಾಗಿ ಆರ್ಥಿಕ ಕಾರಣಗಳೇ ಪ್ರಮುಖವೆನಿಸುತ್ತವೆ. ಹಿಂದೆ ಚೋಳರ ಕಾಲದಲ್ಲಿ ನಡೆದ ಯುದ್ಧಕ್ಕೆ ಬಹುಮುಖ್ಯ ಕಾರಣವೆಂದರೆ ಕೃಷ್ಣಾ–ತುಂಗಭದ್ರಾ ನಡುವಿನ ಫಲವತ್ತಾದ ಭೂಮಿ, ಮುಂದೆ ಹೊಯ್ಸಳರು–ಯಾದವರು ಸಹ ಇದಕ್ಕಾಗಿಯೇ ಹೋರಾಟ ನಡೆಸಿದರು. ಬಹಮನಿ ಹಾಗೂ ವಿಜಯನಗರ ಕಾಲದಲ್ಲಿ ಈ ಇತಿಹಾಸವು ಪುನರಾವರ್ತನೆಯಾಗಿರುವುದನ್ನು ನಾವು ನೋಡಬಹುದು. ಇದಕ್ಕೆ ಆರ್ಥಿಕ ಕಾರಣಗಳೇ ಪ್ರಮುಖ ಅಂಶವಾಗಿತ್ತೆಂಬುದು ಸ್ಪಷ್ಟವಾಗಿ ತಿಳಿದುಬರುತ್ತದೆ. ಚಾಲುಕ್ಯ

ಮತ್ತು ಚೋಳರ ಕಾಲದಲ್ಲಿ ಕೃಷ್ಣ–ತುಂಗಭದ್ರಾ ಮಧ್ಯೆ ಇರುವ ದೋ–ಅಬ್‌ನ ಭಾಗಗಳು ಈ ರಾಜ್ಯಗಳೆರಡಕ್ಕೂ ಸೇರಿದ್ದು, ಈ ಸಂಪೂರ್ಣ ಪ್ರದೇಶವೆಲ್ಲ ತಮ್ಮ ತಮ್ಮ ರಾಜ್ಯಕ್ಕೆ ಸೇರ್ಪಡೆಯಾಗಬೇಕು ಎಂಬ ಪ್ರಬಲ ಆಕಾಂಕ್ಷೆಯಿಂದ ಎರಡು ರಾಜ್ಯಗಳ ಮಧ್ಯೆ ಯುದ್ಧಗಳು ನಡೆದವು. ಅದೇ ರೀತಿ ವಿಜಯನಗರ ಸಾಮ್ರಾಜ್ಯದ ವೈಭವ, ಸಂಪತ್ತು, ಅಧಿಕಾರ ಬಹಮನಿ ಸುಲ್ತಾನರ ಕಣ್ಣಿಗೆ ದುರಾಸೆಯನ್ನು ಹುಟ್ಟಿಸಿ ಕಿಚ್ಚನ್ನುಂಟು ಮಾಡುತ್ತಿತ್ತು. ಈ ಕಾರಣವಾಗಿಯೇ ಎರಡೂ ಸಾಮ್ರಾಜ್ಯಗಳ ನಡುವೆ ನಿರಂತರವಾಗಿ ಯುದ್ಧಗಳು ನಡೆದವು.

ವಿಜಯನಗರದ ಅರಸರು ಮತ್ತು ವಾರಂಗಲ್‌ನ ದೊರೆಗಳು ದೋ–ಅಬ್‌ನ ಪ್ರದೇಶವನ್ನು ತಮಗೆ ಬಿಟ್ಟುಕೊಡಬೇಕೆಂದು ಮಹಮ್ಮದ್‌ಷಾನಿಗೆ ತಿಳಿಸಿದಾಗ, ಸುಲ್ತಾನನು ಅವರ ಕೋರಿಕೆಗೆ ಮನ್ನಣೆ ನೀಡದೆ ಆ ಪ್ರದೇಶವನ್ನು ಬಹಮನಿ ಸಾಮ್ರಾಜ್ಯಕ್ಕೆ ಸೇರಿಸಿ ಸಾರ್ವಭೌಮತ್ವ ಸಾಧಿಸಬೇಕೆಂದು ನಿರ್ಧರಿಸಿದನು. ಈ ಸಮಯದಲ್ಲಿ ಯುದ್ಧವೊಂದೇ ಅನಿವಾರ್ಯ ಅಂಶವಾಗಿದ್ದು, ೧೩೬೨ರಲ್ಲಿ ವಿಜಯನಗರ ಮತ್ತು ವಾರಂಗಲ್ ಸೈನ್ಯಗಳೆರಡೂ ಕಾಪನಾಯಕನ ಮಗ ವಿನಾಯಕದೇವನ ನೇತೃತ್ವದಲ್ಲಿ ಕೌಲಾ ಪ್ರದೇಶದತ್ತ ನುಗ್ಗಿದವು. ಮಹಮ್ಮದ್‌ಷಾ ಸುಲ್ತಾನನ ಸೈನ್ಯವು ಸೇನಾಧಿಪತಿಯಾದ ಆಮೀರ್–ಉಲ್–ಉಮರ್ ಬಹಾದ್ದೂರ್ ಖಾನನ ಅಧಿಪತ್ಯದಲ್ಲಿ ವಿಜಯನಗರ ಮತ್ತು ವಾರಂಗಲ್ ಸೈನ್ಯಗಳ ವಿರುದ್ಧ ಹೋರಾಟ ನಡೆಸಿದವು. ಭೀಕರ ಯುದ್ಧವಾಗಿ ವಿನಾಯಕದೇವನು ಯುದ್ಧದಲ್ಲಿ ಮರಣಹೊಂದಿದನು.[೨೪] ಬಹಮನಿ ಸೈನ್ಯವು ವಾರಂಗಲ್‌ನ್ನು ಆಕ್ರಮಿಸಿಕೊಂಡು ಕಾಪನಾಯಕನನ್ನು ಸೋಲಿಸಿ ಗೋಲ್ಕೊಂಡ ಕೋಟೆಯನ್ನು ವಶಪಡಿಸಿಕೊಂಡಿತು.

ವಿನಾಯಕ ದೇವನ ಮರಣದಿಂದ ತೆಲಂಗಾಣದಾದ್ಯಂತ ಗಲಭೆಗಳು ಪ್ರಾರಂಭವಾದವು. ಸುಲ್ತಾನನಿಗೆ ಜನರಿಂದ ಹೆಚ್ಚಿನ ಕಿರುಕುಳ ಉಂಟಾಗಿ ಗಲಭೆಯಲ್ಲಿ ಅನೇಕ ಗಾಯಗಳಾದವು. ಪಲ್ಲಕ್ಕಿಯಲ್ಲಿಯೇ ಸುಲ್ತಾನನನ್ನು ಕೈಲಾಸದುರ್ಗಕ್ಕೆ ಒಯ್ದು ಅಲ್ಲಿಂದ ಗುಲ್ಬರ್ಗಾಕ್ಕೆ ಕೊಂಡೊಯ್ಯಲಾಯಿತು. ಇದೇ ಸಮಯದಲ್ಲಿ ತೆಲಂಗಾಣದ ರಾಯನು ದೆಹಲಿಯ ಫಿರೋಜ್‌ಷಾ ತುಘಲಕ್‌ನೊಂದಿಗೆ ಮಾತುಕತೆ ನಡೆಸಿ ಬಹಮನಿಗಳನ್ನು ನಿರ್ನಾಮ ಮಾಡಲು ತುಘಲಕ್ ಸೈನ್ಯದ ಸಹಾಯವನ್ನು ಕೋರಿದನು, ಇದಕ್ಕೆ ಪ್ರತಿಫಲವಾಗಿ ತಾನು ತುಘಲಕ್‌ನ ಸಾಮಂತನಾಗಿರುವುದಾಗಿ ಒಪ್ಪಂದ ಮಾಡಿಕೊಂಡನು. ಈ ವಿಷಯ ತಿಳಿದ ಮಹಮ್ಮದ್ ಷಾನು ಪೂರ್ಣ ಪ್ರಮಾಣದಲ್ಲಿ ದೊಡ್ಡ ಸೈನ್ಯದೊಂದಿಗೆ ತೆಲಂಗಾಣದ ಮೇಲೆ ದಾಳಿ ಮಾಡಲು ಆಜ್ಞಾಪಿಸಿದನು. ತೆಲಂಗಾಣದ ರಾಯನನ್ನು ಸೆದೆಬಡೆಯಲು ತಾನೇ ಖುದ್ದಾಗಿ ಯುದ್ಧಕ್ಕೆ ಹೊರಟನು. ತೆಲಂಗಾಣದ ರಾಯನು ವಿಜಯನಗರದ ಅರಸರ ಸಹಾಯವನ್ನು ಯಾಚಿಸಿದನು ಆದರೆ ಅದು ದೊರೆಯಲಿಲ್ಲ. ಹತಾಶನಾದ ತೆಲಂಗಾಣದ ರಾಯನು ಬೇರೆ ದಾರಿ ಕಾಣದೆ ಬಹಮನಿ ಸುಲ್ತಾನದೊಂದಿಗೆ ಸಂಧಿಯನ್ನು ಯಾಚಿಸಿದನು. ಈ ಸಂಧಿಯ ಪ್ರಕಾರ ಅಪಾರ ಮೊತ್ತದ ಹಣ, ಮುನ್ನೂರು ಆನೆಗಳು, ಇನ್ನೂರು ಕುದುರೆಗಳು, ಇದರ ಜೊತೆ ಗೋಲ್ಕೊಂಡ ನಗರ ಮತ್ತು ಅದರ ಆಧೀನ ಪ್ರದೇಶಗಳು, ಇವೆಲ್ಲವನ್ನು ಸುಲ್ತಾನನಿಗೆ ಕೊಟ್ಟು ಸಂಧಿ ಮಾಡಿಕೊಂಡನು.[೨೫] ಈ ಮುಖಾಂತರ ಮೊದಲನೇ ಸಲ ಗೋಲ್ಕೊಂಡ ಪ್ರದೇಶವು ಬಹಮನಿ ರಾಜ್ಯದ ಭಾಗವಾಗಿ ಎರಡು ರಾಜ್ಯಗಳ ನಡುವೆ ಗಡಿಪ್ರದೇಶವಾಯಿತು. ಈ ಅಂಶವು ದಖ್ಖನ್ನಿನ ಕಲಹಗಳು ಬರೀ ಹಿಂದೂ ಮತ್ತು ಮುಸ್ಲಿಂರ ನಡುವೆ ನಡೆದ ಕಲಹಗಳಾಗಿದ್ದವು ಎಂಬ ವಾದವನ್ನು ಸುಳ್ಳಾಗಿಸುತ್ತದೆ.

೧೪ನೇ ಶತಮಾನವು ವಿಜಯನಗರದಲ್ಲಿ ಸಂಗಮ ವಂಶ ಅಧಿಕಾರಕ್ಕೆ ಬಂದರೆ ಗುಲ್ಬರ್ಗಾದಲ್ಲಿ ಬಹಮನಿ ಸುಲ್ತಾನರು ಅಧಿಕಾರಕ್ಕೆ ಬಂದರು. ಆಗ ಇವರೀರ್ವರುಗಳ ಮಧ್ಯೆ ರಾಯಚೂರು ಅನೇಕ ಕದನಗಳಿಗೆ ತಾಣವಾಯಿತು. ಇದನ್ನು ತಮ್ಮ ತಮ್ಮ ರಾಜ್ಯಕ್ಕೆ ಸೇರಿಸಿಕೊಳ್ಳಬೇಕೆಂಬ ಹಂಬಲ ಎರಡು ಮನೆತನಗಳಿಗಿದ್ದಿತು. ಹಾಗಾಗಿ ಇವುಗಳ ಮಧ್ಯೆ ವಿರಸವುಂಟಾಗಲು ಕಾರಣವಾಯಿತು. ಆ ಸಂದರ್ಭದಲ್ಲಿ ರಾಯಚೂರು ಮತ್ತು ಮುದಗಲ್ ಕೋಟೆಗಳು ಪ್ರತಿಷ್ಠೆಯ ಸಂಕೇತಗಳಾಗಿದ್ದವು. ಮೊದಮೊದಲು ಮುದಗಲ್ ವಿಜಯನಗರದ ಪ್ರದೇಶದ ವ್ಯಾಪ್ತಿಗೆ ಸೇರಿದ್ದರೂ ಬಹಮನಿ ಅರಸರ ಅಧೀನದಲ್ಲಿದ್ದಿತು. ಈ ಸಂದರ್ಭದಲ್ಲಿ ಬಹಮನಿ ಅರಸ ಒಂದನೇ ಮಹಮದ್‌ಷಾಹನು ವಿಜಯನಗರದ ಅರಸನ ಬೊಕ್ಕಸದಿಂದ ಹಣ ಪಡೆಯಲು ೩೦೦ ಜನ ಸಂಗೀತಗಾರರಿಗೆ ಪತ್ರ ನೀಡಿದನು. ಆಗ ವಿಜಯನಗರ ಅರಸ ಒಂದನೇ ಬುಕ್ಕನಿಗೆ ಅವಮಾನವಾಗಿ ಕ್ರಿ.ಶ. ೧೩೬೬–೬೭ರಲ್ಲಿ ಬಹಮನಿಯ ಮೇಲೆ ದಾಳಿ ಮಾಡಿ ಮುದಗಲ್ಲನ್ನು ವಶಪಡಿಸಿಕೊಂಡನು.[೨೬] ಮೊದಲನೇ ಬುಕ್ಕನು ಮುದಗಲ್ ಕೋಟೆಯನ್ನು ಆಕ್ರಮಿಸಿದ ಕಾರಣಕ್ಕಾಗಿ ವಿಜಯನಗರ ಮತ್ತು ಬಹಮನಿ ರಾಜ್ಯಗಳ ನಡುವೆ ಯುದ್ಧ ಪ್ರಾರಂಭವಾಯಿತು. ಮಹಮ್ಮದ್‌ಷಾ ಬುಕ್ಕನ ವಿರುದ್ಧ ದಂಡೆತ್ತಿ ನಡೆದ ಭೀಕರ ಯುದ್ಧದಲ್ಲಿ ಬುಕ್ಕನು ಶರಣಾಗತನಾದನೆಂದು, ಈ ಯುದ್ಧವು ಶಾಂತಿ ಒಪ್ಪಂದದಲ್ಲಿ ಮುಕ್ತಾಯವಾಯಿತೆಂದು ತಿಳಿದುಬರುತ್ತದೆ. ಮಹಮ್ಮದ್‌ಷಾನು ತನ್ನ ಅಧಿಕಾರಾವಧಿಯ ಬಹುಪಾಲು ಸಮಯವನ್ನು ಯುದ್ಧಗಳಲ್ಲೇ ಕಳೆದರೂ ಸಹ ಬಹಮನಿ ರಾಜ್ಯಕ್ಕೆ ಒಂದು ಉತ್ತಮ ಆಡಳಿತ ಕ್ರಮವನ್ನು ರೂಢಿಸಿದನು. ರಾಜ್ಯದ ಪ್ರಾಂತ್ಯಗಳನ್ನು ವಾರ್ಷಿಕವಾಗಿ ಭೇಟಿಮಾಡಿ ಆಡಳಿತ ಚಕ್ರವನ್ನು ಸುಭದ್ರವಾಗಿರಿಸುವಲ್ಲಿ ಮಹಮ್ಮದ್‌ನು ಯಶಸ್ವಿಯಾಗಿದ್ದನು. ಕಲೆಗಳಿಗೆ ಹೆಚ್ಚಿನ ಪ್ರೋತ್ಸಾಹವನ್ನು ಕೊಡುತ್ತಿದ್ದ ಮಹಮ್ಮದ್‌ಷಾನು ಕ್ರಿ.ಶ.೧೩೬೭ರಲ್ಲಿ ಗುಲ್ಬರ್ಗಾದಲ್ಲಿ 'ಜಾಮಿ ಮಸೀದಿಯ' ನಿರ್ಮಾಣಕ್ಕೆ ಕಾರಣವಾದನು.[೨೭]

ಮಹಮ್ಮದ್ ಷಾನ ಆಡಳಿತದ ಕೊನೆಯ ಅವಧಿಗಳು ಯುದ್ಧದಿಂದ ಮುಕ್ತವಾಗಿದ್ದವು. ಮಹಮ್ಮದ್‌ನು ಶಾಂತಿ ಮತ್ತು ಸುವ್ಯವಸ್ಥೆಯ ಕಡೆ ಹೆಚ್ಚಿನ ಗಮನವನ್ನು ಈ ಸಮಯದಲ್ಲಿ ಕೊಟ್ಟನೆಂದು ತಿಳಿದುಬರುತ್ತದೆ. ಮಹಮ್ಮದ್‌ಷಾನು ಶಿಸ್ತು ಪರಿಪಾಲಕನಾಗಿದ್ದು ರಾಜ್ಯದ ಮತ್ತು ಆಸ್ಥಾನದ ಘನತೆ–ಗೌರವಗಳನ್ನು ಕಾಪಾಡುವಲ್ಲಿ, ರಾಜ್ಯದಲ್ಲಿಯ ಅವ್ಯವಸ್ಥೆ ಮತ್ತು ಅರಾಜಕತೆಗಳನ್ನು ಕಠಿಣ ಮನಸ್ಸಿನಿಂದ ಹತ್ತಿಕ್ಕುವಲ್ಲಿ ಯಶಸ್ವಿಯಾಗಿದ್ದನು. ಮದ್ಯವನ್ನು ನಿಷೇಧಿಸಿ ಹೊಸ ಆಚಾರ ಮತ್ತು ಸಂಪ್ರದಾಯ ಪದ್ಧತಿಗಳನ್ನು ಜಾರಿಗೆ ತಂದು ಆಡಳಿತ ವ್ಯವಸ್ಥೆಯನ್ನು ಸುಗಮ ಮತ್ತು ಸುವ್ಯವಸ್ಥೆಗೊಳಿಸಿದನು. ಮಹಮ್ಮದ್ ಷಾನು ಜಾರಿಗೆ ತಂದ ಆಡಳಿತ ವ್ಯವಸ್ಥೆ ಮತ್ತು ಪದ್ಧತಿಗಳು ಬಹಮನಿ ಸಾಮ್ರಾಜ್ಯದ ಅಂತ್ಯದವರೆಗೂ ಜಾರಿಯಲ್ಲಿದ್ದವೆಂದು ಇತಿಹಾಸದಿಂದ ತಿಳಿಯುತ್ತದೆ.

ಮಹಮ್ಮದ್‌ಷಾನ ಆಸ್ಥಾನದಲ್ಲಿ ಹಲವಾರು ಕವಿಗಳು, ಪಂಡಿತರು, ವಿದ್ವಾಂಸರು ಆಶ್ರಯ ಪಡೆದಿದ್ದರೆಂದು ಮತ್ತು ಈ ಎಲ್ಲಾ ಕಾರಣಗಳಿಂದಾಗಿ ಮಹಮ್ಮದ್‌ಷಾ ಸುಲ್ತಾನನು ಒಬ್ಬ ಶ್ರೇಷ್ಠ ಸುಲ್ತಾನನೆಂದು ಪರಿಗಣಿಸಲ್ಪಟ್ಟಿದ್ದನೆಂದು ಹೇಳಬಹುದು. ಸುಲ್ತಾನನಾದ ಮಹಮ್ಮದ್ ಷಾನು ೧೩೭೫ರ ಏಪ್ರಿಲ್ ತಿಂಗಳಿನಲ್ಲಿ ಮರಣ ಹೊಂದಿದನು. ಮಹಮ್ಮದ್‌ಷಾನ ಸಮಾಧಿಯನ್ನು ತನ್ನ ತಂದೆಯಾದ ಅಲ್ಲಾವುದ್ದೀನ್ ಹಸನ್ ಗಂಗು ಬಹಮನ್ ಷಾನ ಸಮಾಧಿಯ ಪಕ್ಕದಲ್ಲೇ ಮಾಡಲಾಗಿದೆ.

**೩.ಮುಜಾಹಿದ್‌ಷಾ(ಕ್ರಿ.ಶ.೧೩೭೫–೧೩೭೮)**

ಮಹಮ್ಮದ್‌ಷಾನ ಮರಣಾನಂತರ ಆತನ ಮಗನಾದ ಮುಜಾಹಿದ್‌ಷಾನು ಬಹಮನಿ ರಾಜ್ಯದ ಅಧಿಕಾರವನ್ನು ವಹಿಸಿಕೊಂಡನು. ಮುಜಾಹಿದ್ ಷಾನು ಕೇವಲ ಮೂರು ವರ್ಷಗಳ ಕಾಲ ಆಳ್ವಿಕೆ ಮಾಡಿ ಆತನ ದಾಯಾದಿಯಾದ ದಾವುದ್ ಎಂಬುವವನಿಂದ ಕೊಲೆಮಾಡಲ್ಪಟ್ಟನು.

**೪. ದಾವುದ್‌ಷಾ(ಕ್ರಿ.ಶ. ೧೬-೦೪-೧೩೭೮ ರಿಂದ ೨೧-೦೫-೧೩೭೮)**

ನಂತರ ಸುಲ್ತಾನನಾದ ದಾವುದನು ತನ್ನ ಅಧಿಕಾರಾವಧಿಯಲ್ಲಿ ಅನೇಕ ಗಲಭೆಗಳಿಗೆ ಕಾರಣನಾದನು. ಈ ಸಮಯದಲ್ಲಿಯೇ ವಿಜಯನಗರದ ಸೈನ್ಯವು ಹರಿಹರನ ನಾಯಕತ್ವದಲ್ಲಿ ರಾಯಚೂರನ್ನು ವಶಪಡಿಸಿಕೊಂಡಿತು. ಬಹಮನಿ ಸುಲ್ತಾನನಾದ ದಾವುದ್‌ನು ಒಂದು ಶುಕ್ರವಾರ ಗುಲ್ಬರ್ಗಾದ ದೊಡ್ಡ ಮಸೀದಿಯಲ್ಲಿ ಪ್ರಾರ್ಥನೆ ಸಲ್ಲಿಸುತ್ತಿದ್ದಾಗ ಆತನ ಕೊಲೆ ಮಾಡಲಾಯಿತು. ಕೇವಲ ೩೫ ದಿನಗಳ ದಾವುದನ ಆಳ್ವಿಕೆ ಒಳಸಂಚುಗಳಿಂದಲೂ ಮತ್ತು ಹೇಯವಾದ ಕೃತ್ಯ ಮತ್ತು ಕಲಹಗಳಿಂದಲೂ ಕೂಡಿದ್ದಾಗಿದ್ದಿತೆಂದು ತಿಳಿದುಬರುತ್ತದೆ.

**೫.ಎರಡನೇ ಮಹಮ್ಮದ್‌ಷಾ (ಕ್ರಿ.ಶ.೧೩೭೮-೧೩೯೭)**

ಅಲ್ಲಾವದ್ದೀನ್ ಹಸನ್ ಗಂಗೂ ಬಹಮನ್ ಷಾನ ಮೊಮ್ಮಗನಾದ ಎರಡನೇ ಮಹಮ್ಮದ್ ಷಾನು ೧೩೭೮ರಲ್ಲಿ ಬಹಮನಿ ಸಾಮ್ರಾಜ್ಯದ ಸುಲ್ತಾನನಾದನು. ಎರಡನೇ ಮಹಮ್ಮದ್‌ನು ಪಟ್ಟಕ್ಕೆ ಬಂದ ನಂತರ ರಾಜ್ಯದಲ್ಲಿ ಶಾಂತಿ-ಸುವ್ಯವಸ್ಥೆಯು ನೆಲೆಸಿತು. ಸುಸಂಸ್ಕೃತ ವ್ಯಕ್ತಿಯಾಗಿದ್ದ ಮಹಮ್ಮದ್‌ನು ವಿಜಯನಗರದೊಂದಿಗೆ ವೈರತ್ವವನ್ನು ಕೊನೆಗೊಳಿಸಿಕೊಳ್ಳಲು ಬಯಕೆಯುಳ್ಳವನಾಗಿದ್ದನು. ಮಹಮ್ಮದ್‌ನ ಆಳ್ವಿಕೆಯು ೧೯ ವರ್ಷಗಳದ್ದಾಗಿದ್ದು, ಇವನು ಶಾಂತಿಪ್ರಿಯ ಮತ್ತು ಧರ್ಮನಿಷ್ಠ ದೊರೆಯಾಗಿದ್ದು, ಸ್ವತಃ ವಿದ್ವಾಂಸ ಮತ್ತು ಬರಹಗಾರನಾಗಿದ್ದನೆಂದು, ಹಲವಾರು ವಿದ್ವಾಂಸರುಗಳಿಗೆ, ಕವಿಗಳಿಗೆ ಹಾಗೂ ಪಂಡಿತರಿಗೆ ಆಶ್ರಯ ನೀಡಿದ್ದನೆಂದು ತಿಳಿದುಬರುತ್ತದೆ. ಯುದ್ಧ ಮತ್ತು ರಾಜ್ಯ ವಿಸ್ತರಣೆ ಕಾರ್ಯಗಳ ಕಡೆ ಹೆಚ್ಚಿನ ಗಮನ ನೀಡದೆ ಈತನು ಜನಪರ ಕಾರ್ಯಗಳ ಕಡೆಗೆ ತೀವ್ರ ಗಮನ ಹರಿಸಿದ್ದನು. ಮಹಮ್ಮದ್‌ನು ಕರುಣಾಮಯಿಯೂ, ಶಾಂತಿಬೀರುವೂ ಆಗಿದ್ದು ಅನೇಕ ಅನಾಥಾಲಯಗಳನ್ನು, ಮದರಸಗಳನ್ನು ಮತ್ತು ಧರ್ಮಛತ್ರಗಳನ್ನು ಸ್ಥಾಪಿಸಿದನು. ಸರಳನು ಮತ್ತು ಮಿತಾಹಾರಿಯು ಆಗಿದ್ದ ಮಹಮ್ಮದ್‌ಷಾನು ರಾಜತ್ವದ ವಿಚಾರಗಳಲ್ಲಿ ಉನ್ನತ ಮಟ್ಟದ ಆದರ್ಶಗಳನ್ನು ಪಾಲಿಸುವಂಥವನಾಗಿದ್ದನು.

ಇವನ ಆಡಳಿತ ಕಾಲದಲ್ಲಿ 'ದುರ್ಗಾದೇವಿ ಬರಗಾಲ'ವೆಂಬ ಭಯಂಕರ ಬರಗಾಲವು ಬಿದ್ದಿತ್ತು. ಮುಸ್ಲಿಮನಾಗಿದ್ದರೂ ಸಹ ಮಹಮ್ಮದ್‌ಷಾನು ಈ ಬರಗಾಲದ ಪರಿಹಾರಾರ್ಥವಾಗಿ ತನ್ನ ಹೆಬ್ಬೆರಳನ್ನು ದುರ್ಗಾ ದೇವಿಗೆ ಬಲಿಕೊಟ್ಟನೆಂದು ಇತಿಹಾಸದಿಂದ ತಿಳಿದುಬರುತ್ತದೆ.[೨೮] ಬರಗಾಲದಿಂದ ಸಂತ್ರಸ್ತರಾಗಿದ್ದ ಪ್ರಜೆಗಳಿಗೆ ವಸತಿ ಮತ್ತು ಆಹಾರಗಳನ್ನು ಒದಗಿಸಲು ಗುಜರಾತ್ ಮತ್ತು ಮಾಳ್ವಾಗಳಿಂದ ಅಸಂಖ್ಯಾತ ಎತ್ತುಗಳ ಮೇಲೆ ಆಹಾರ ಧಾನ್ಯಗಳನ್ನು ತರಿಸಿ ಪ್ರಜೆಗಳಿಗೆ ಉಚಿತವಾಗಿ ವಿತರಿಸಿದನೆಂದು ತಿಳಿದುಬರುತ್ತದೆ.

ಮಹಮ್ಮದ್‌ನ ಆಡಳಿತ ಸಮಯದಲ್ಲಿ ಬಹಮನಿ ಮತ್ತು ವಿಜಯನಗರ ಸಂಸ್ಥಾನಗಳ ನಡುವೆ ಸತತ ಗಲಭೆಗಳು ನಡೆದವು. ವಾರಂಗಲ್ ಮತ್ತು ವಿಜಯನಗರಗಳು ಒಂದಾಗಿ ಬಹಮನಿ ರಾಜ್ಯದ ಮೇಲೆ ಅನೇಕ ಸಲ ದಾಳಿಗಳನ್ನು ಮಾಡಿದರು. ಮಹಮ್ಮದ್‌ಷಾನು ಈ ಒಗ್ಗಟ್ಟಿನ ದಾಳಿಯ ವಿರುದ್ಧ ಬಹಮನಿ ರಾಜ್ಯವನ್ನು ರಕ್ಷಿಸುವಲ್ಲಿ ಯಶಸ್ವಿಯಾಗಿದ್ದನು. ರಾಜಕೀಯ ಮತ್ತು ಆರ್ಥಿಕ ಬಿನ್ನಾಭಿಪ್ರಾಯಗಳೇ ಈ ಎರಡು ಸಂಸ್ಥಾನಗಳ ನಡುವಣ ನಡೆಯುತ್ತಿದ್ದ ಕಹಿ ಸಂಬಂಧಗಳಿಗೆ ಮತ್ತು ಗಲಭೆಗಳಿಗೆ ಪ್ರೇರಣಾ ಶಕ್ತಿಯಾಗಿದ್ದವು.

ಮುಂದೆ ವಿಜಯನಗರದ ಅರಸರೊಂದಿಗೆ ನಡೆದ ಯುದ್ಧದಲ್ಲಿ ಮಹಮ್ಮದ್‌ಷಾನಿಗೆ ಸೋಲುಂಟಾಗಿ ಇದರ ಪರಿಣಾಮವಾಗಿ ಕೊಂಕಣ ಪ್ರದೇಶವು ವಿಜಯನಗರದ ಪಾಲಾಯಿತು. ಇದಾದ ನಂತರ ಬಹಮನಿ ಸುಲ್ತಾನರು ರಾಜ್ಯವು ವಿಜಯನಗರದೊಂದಿಗೆ ಶಾಂತಿಯನ್ನು ಪರಿಪಾಲಿಸಿದರು. ೧೯ ವರ್ಷಗಳ ಕಾಲದ ಎರಡನೇ ಮಹಮ್ಮದ್‌ಷಾನ ತಕ್ಕಮಟ್ಟಿಗಿನ ದೀರ್ಘವಾದ ಆಳ್ವಿಕೆಯು ಬಹಮನಿ ಸಾಮ್ರಾಜ್ಯದ ಇತಿಹಾಸದಲ್ಲಿ ಮತ್ತು ಸಮಗ್ರ ವ್ಯಾಪ್ತಿಯಲ್ಲಿ ಅತ್ಯಂತ ಶಾಂತಿಯುತವಾದ ಕಾಲವೆಂದು ಪರಿಗಣಿಸಲ್ಪಟ್ಟಿದೆ.

ಬಹುಕಾಲದವರೆಗೆ ಎರಡನೇ ಮಹಮ್ಮದ್‌ಷಾನಿಗೆ ಗಂಡುಮಕ್ಕಳಾಗಲಿಲ್ಲವೆಂದು, ಈ ಕಾರಣಕ್ಕಾಗಿ ಮಹಮ್ಮದ್‌ನು ತನ್ನ ಸೋದರಳಿಯನಾದ ಮತ್ತು ಮುಂದೆ ಅಳಿಯನೂ ಆದ ಫಿರೋಜ್‌ನನ್ನು ಬಹಮನಿ ರಾಜ್ಯದ ಉತ್ತರಾಧಿಕಾರಿಯನ್ನಾಗಿ ನೇಮಕ ಮಾಡಿದನು. ಇದಾದ ಕೆಲವು ವರ್ಷಗಳ ನಂತರ ಮಹಮ್ಮದ್‌ನಿಗೆ ಘಿಯಾಸುದ್ದೀನ್ ಮತ್ತು ಶಂಸುದ್ದೀನ್ ಎಂಬ ಇಬ್ಬರು ಗಂಡುಮಕ್ಕಳು ಜನಿಸಿದ ಕಾರಣ ಮೊದಲು ಮಾಡಿದ ಉತ್ತರಾಧಿಕಾರಿಯ ವ್ಯವಸ್ಥೆಯನ್ನೂ ರದ್ದು ಮಾಡಲಾಯಿತು. ಹೀಗಾಗಿ ೧೩೯೭ರಲ್ಲಿ ಎರಡನೇ ಮಹಮ್ಮದ್‌ಷಾನ ಮರಣದ ನಂತರ ಘಿಯಾಸುದ್ದೀನನು ಬಹಮನಿ ರಾಜ್ಯದ ಸುಲ್ತಾನನಾದನು.

**೬.ಘಿಯಾಸುದ್ದೀನ್(ಕ್ರಿ.ಶ.೨೦-೦೪-೧೩೯೭ ರಿಂದ ೧೪-೦೬-೧೩೯೭)**

ಘಿಯಾಸುದ್ದೀನ್ ಬಹಮನಿ ಸಾಮ್ರಾಜ್ಯದ ಸುಲ್ತಾನನಾಗುವಲ್ಲಿ ಯಾವುದೇ ಸಮಸ್ಯೆಯೂ ಎದುರಾಗಲಿಲ್ಲ. ಮೊದಲಿನ ಉತ್ತರಾಧಿಕಾರಿಯೆಂದು ನೇಮಿತವಾಗಿದ್ದ ಫಿರೋಜನು ಸಹ ಹೊಸ ಉತ್ತರಾಧಿಕಾರಿಗೆ ಗೌರವ ಸಲ್ಲಿಸಿದನು. ಬಹಮನಿ ರಾಜ್ಯದ ಹೊಸ ಸುಲ್ತಾನನು ಎಲ್ಲಾ ಗಣ್ಯರನ್ನು, ಉನ್ನತ ಅಧಿಕಾರಿಗಳನ್ನು, ಗವರ್ನರ್‌ಗಳನ್ನು ಮತ್ತು ಸೇನಾನಾಯಕರನ್ನು ತನ್ನ ವಿಶ್ವಾಸಕ್ಕೆ ತೆಗದುಕೊಳ್ಳುವಲ್ಲಿ ಸಮರ್ಥನಾಗಿ ಉತ್ತಮ ರೀತಿಯಲ್ಲಿ ರಾಜ್ಯಭಾರವನ್ನು ಪ್ರಾರಂಭಿಸುವಲ್ಲಿ ಯಶಸ್ವಿಯಾದನು. ಮುಂದೆ ಪರ್ಷಿಯಾದಿಂದ ಬಂದ ಹೊಸಬರಿಗೆ ರಾಜ್ಯದಲ್ಲಿ ಉನ್ನತ ಅಧಿಕಾರಗಳನ್ನು ಕೊಟ್ಟನು. ಈ ಕಾರಣಕ್ಕಾಗಿ ಗುಲ್ಬರ್ಗಾದಲ್ಲಿನ ಕುಲೀನ್ ವರ್ಗದವರಿಗೆ ಅಸಮಾಧಾನವುಂಟಾಯಿತು. ಮುಂದೆ ಐದು ಆಳ್ವಿಕೆಗಳಲ್ಲಿ ಪ್ರಧಾನಮಂತ್ರಿಯಾಗಿದ್ದ ಸೈಫುದ್ದೀನ್ ಘೋರಿಯು ಮೃತಪಟ್ಟಾಗ, ತಘಲ್‌ಚಿನ್ ಎಂಬುವ ಯಾವುದೇ ಪ್ರಕಾರದ ಅರ್ಹತೆ ಮತ್ತು ನೀತಿ-ನಿಯಮಗಳಿಲ್ಲದ ಕುಠಿಲ ವ್ಯಕ್ತಿಯು ಈ ಹುದ್ದೆಯನ್ನು ಅಲಂಕರಿಸಲು ವಿವಿಧ ಪ್ರಯತ್ನಗಳನ್ನು ಮಾಡಿದನು. ಆದರೆ ಈ ಹುದ್ದೆಯು ಅವನಿಗೆ ದೊರಕದಿದ್ದ ಕಾರಣ ತಘಲ್‌ಚಿನ್‌ನು ಸುಲ್ತಾನದ ವಿರುದ್ಧ ಒಂದು ಸಂಚನ್ನು ಮಾಡಿ, ಘಿಯಾಸುದ್ದೀನ್‌ನ ಕಣ್ಣುಗಳನ್ನು ಕಿತ್ತಿಸಿ, ಸಾಗರದಲ್ಲಿ ಬಂಧನದಲ್ಲಿಟ್ಟನೆಂದು ತಿಳಿಯುತ್ತದೆ. ಈ ರೀತಿಯಾಗಿ ರಾಜಕೀಯ ಕುತಂತ್ರಗಳಿಗೆ ಬಲಿಯಾಗಿ ಎರಡನೇ ಘಿಯಾಸುದ್ದೀನನು ಕೇವಲ ಎರಡು ತಿಂಗಳ ಕಾಲ ಬಹಮನಿ ಸಾಮ್ರಾಜ್ಯದ ಸುಲ್ತಾನನಾಗಿ ಆಳ್ವಿಕೆ ನಡೆಸಿದನು.

**೭.ಎರಡನೇ ಶಮಸುದ್ದೀನ್(ಕ್ರಿ.ಶ.೧೪-೦೬-೧೩೯೭ ರಿಂದ ೧೫-೧೧-೧೩೯೭)**

ಘಿಯಾಸುದ್ದೀನ್‌ನ ಬಂಧನದ ಬಳಿಕ ಅವನ ಮಲತಮ್ಮನಾದ ಶಮಸುದ್ದೀನ್‌ನು ಬಹಮನಿ ರಾಜ್ಯದ ಸುಲ್ತಾನನಾದನು. ಈ ಕಿರಿಯ ಸುಲ್ತಾನನ ತಾಯಿಯು ಘಿಯಾಸುದ್ದೀನ್‌ನು ತಾಯಿಗೆ ಸೇವಕಿಯಾಗಿದ್ದವಳು. ಈಕೆಯ ಮಗನ ರಾಜ್ಯಾಭಿಷೇಕದ ನಂತರ ಆಕೆಯು 'ಮಖ್‌ದುಮ್-ಐ-ಜಹಾನ್' ಪದವಿಯನ್ನು ಪಡೆದಳು.[೯] ಈಕೆಯ ಮೂಲಕವೇ ತಘಲ್‌ಚಿನ್‌ನು ಪ್ರಧಾನ ಮಂತ್ರಿಯಾಗಿ ಉನ್ನತ ಮಟ್ಟಕ್ಕೇರಿದ, ಇವಳ ನೆರವಿನಿಂದಲೇ ಅವನು ಅಪ್ರಾಪ್ತ ವಯಸ್ಕನಾಗಿದ್ದ ಶಮಸುದ್ದೀನ್ ಸುಲ್ತಾನನ ಬದಲಿಗೆ ತಾನೇ ರಾಜ್ಯಭಾರ ನಡೆಸುವ ರಾಜಪ್ರತಿನಿಧಿಯಾದನು. ತಘಲ್‌ಚಿನ್‌ನ ಈ ಎಲ್ಲಾ ಅತ್ಯಾಚಾರಗಳಿಂದ ಬಹಮನಿ ರಾಜಮನೆತನಕ್ಕೆ ಒದಗಿದ ದುರವಸ್ಥೆಯನ್ನು, ಅಲ್ಪಮತಿಯಾದ ಇವನ ದುರ್ವತನೆಯನ್ನು ಸಹಿಸದ ಮೃತರಾಜನ ಸೋದರ ಅಳಿಯಂದಿರಾದ ಫಿರೋಜ್ ಹಾಗೂ ಅಹ್ಮದರು ಕ್ರೋಧಿಷ್ಟರಾದರು. ಫಿರೋಜ್ ಮತ್ತು ಅಹ್ಮದರು ಎರಡನೇ ಮಹಮ್ಮದ್‌ನ ಷಾನ ಹೆಣ್ಣು ಮಕ್ಕಳಾದ ಸೋದರಿಯರನ್ನು ಮದುವೆಯಾಗಿದ್ದರು. ತನ್ನ ಪದವಿಯನ್ನು ಕಳೆದುಕೊಳ್ಳುವೆನೆಂಬ ಭಯ ಮತ್ತು ಆತಂಕದಿಂದ ತಘಲ್‌ಚಿನ್‌ನು ಫಿರೋಜ್ ಮತ್ತು ಅಹ್ಮದರನ್ನು ಬಂಧಿಸಿ ಸೆರೆಮನೆಗೆ ಕಳಿಸಬೇಕೆಂದು ಶಮಸುದ್ದೀನ್‌ನ ಮನವೊಲಿಸಲು ಪ್ರಯತ್ನಿಸಿದನು. ಶಮಸುದ್ದೀನ್‌ನ ತಾಯಿ ವಿಧವೆಯಾಗಿರುವ ರಾಣಿ ಮಖ್‌ದುಮ್-ಐ-ಜಹಾನ್ ಬಳಿಗೆ ಹೋಗಿ ಆಕೆಯ ಮಗನನ್ನು ಸಿಂಹಾಸನದಿಂದಿಳಿಸುವ ಸಂಚನ್ನು ಫಿರೋಜ್ ಮತ್ತು ಅಹ್ಮದರು ಮಾಡಿರುವರೆಂದು, ಅವರಿಗೆ ಮರಣ ದಂಡನೆಯನ್ನು ವಿಧಿಸಬೇಕೆಂದು ಕಿವಿಯೂದಿದನು.

ತಘಲ್‌ಚಿನ್‌ನು ಮಾಡಿದ ಒಳಸಂಚು ರಹಸ್ಯವಾಗಿ ಉಳಿಯದೆ ಫಿರೋಜ್ ಮತ್ತು ಅಹ್ಮದರ ಕಿವಿಗೆ ಬಿದ್ದು, ಇಬ್ಬರೂ ಸಾಗರಕ್ಕೆ ಪಲಾಯನಗೈದರು. ಸಾಗರದಿಂದಲೇ ತಘಲ್‌ಚಿನ್‌ನ್ನು ಪದವಿಯಿಂದ ಇಳಿಸುವ ಪ್ರಯತ್ನ ನಡೆಸಿದರು, ತಮ್ಮ ಈ ಪ್ರಯತ್ನಕ್ಕೆ ಅಸಮಧಾನಗೊಂಡಿರುವ ಗುಲ್ಬರ್ಗಾದ ಕುಲೀನ ವಂಶಸ್ತರು ಮತ್ತು ಅತೃಪ್ತ ಸೈನಿಕರು ಬೆಂಬಲಿಸುವರೆಂದು ತಿಳಿದಿದ್ದರು. ಆದರೆ ಅವರ ಅನಿಸಿಕೆ ಹುಸಿಯಾಗಿ, ಇಬ್ಬರೂ ಸೋದರರು ಮೈತ್ರಿ ಮಾರ್ಗವನ್ನು ಅನುಸರಿಸಬೇಕಾಯಿತು. ಫಿರೋಜ್ ಮತ್ತು ಅಹ್ಮದರು ಶಮಸುದ್ದೀನ್‌ಗೆ ನಿಷ್ಠೆಯನ್ನು ವ್ಯಕ್ತಪಡಿಸಿ ತಮ್ಮ ಕೃತ್ಯಕ್ಕಾಗಿ ಕ್ಷಮೆಯಾಚಿಸಿದರು. ಗುಲ್ಬರ್ಗಾದಲ್ಲಿ ನೆಲೆಸಲು ಅನುಮತಿ ಕೇಳಿ ಒಂದು ಕರಾರು ಪತ್ರವನ್ನು ಮಾಡಿಕೊಂಡರು, ಈ ಕರಾರು ಪತ್ರದಿಂದ ಅವರಿಬ್ಬರ ಜೀವನಕ್ಕೆ ಭದ್ರತೆ ಒದಗಿತು. ಗುಲ್ಬರ್ಗಾಕ್ಕೆ ಹಿಂದಿರುಗಿದ ಸೋದರರು ಮತ್ತು ಪದಚ್ಯುತ ರಾಜನಾದ ಘಿಯಾಸುದ್ದೀನ್, ತಘಲ್‌ಚಿನ್‌ನ ವಿರೋಧಿಗಳೊಂದಿಗೆ ಸೇರಿ ಸೈನ್ಯದೊಂದಿಗೆ ಏಕಾಏಕಿ ದರ್ಬಾರಿಗೆ ನುಗ್ಗಿ ತಘಲ್‌ಚಿನ್‌ನ್ನು ಹತ್ಯೆಗೈದು, ಶಮಸುದ್ದೀನ್‌ನ್ನು ಬಂಧಿಸಿ ಅವನ ಕಣ್ಣುಗಳನ್ನು ಕೀಳಿಸಲಾಯಿತು. ಅವನಿಗೆ ತನ್ನ ತಾಯಿಯೊಂದಿಗೆ ಮೆಕ್ಕಾಗೆ ಹೋಗಲು ಅನುಮತಿ ನೀಡಲಾಗಿ, ಶಮಸುದ್ದೀನ್‌ನು ೧೪೧೪ರಲ್ಲಿ ಮೆಕ್ಕಾದಲ್ಲಿ ಮೃತಪಟ್ಟನೆಂದು ಇತಿಹಾಸಕಾರರಿಂದ ತಿಳಿದುಬರುತ್ತದೆ. ಬಹಮನಿ ಸಾಮ್ರಾಜ್ಯದ ಆಸ್ಥಾನದಲ್ಲಿ ಇರುವವರೆಲ್ಲರೂ ತಮ್ಮ ತಮ್ಮ ಪದವಿಗಳಿಗಾಗಿ ಹೋರಾಡುತ್ತಿರುವ ಸಂದರ್ಭದಲ್ಲಿ ಶಮಸುದ್ದೀನ್‌ನ ಆಳ್ವಿಕೆಯ ಐದು ತಿಂಗಳುಗಳು ಅಷ್ಟೇನೂ ಗಮನಾರ್ಹವಾಗಿರಲಿಲ್ಲವೆಂದು ಹೇಳಬಹುದು.

**೮. ತಾಜುದ್ದೀನ್ ಫಿರೋಜ್‌ಷಾ(ಕ್ರಿ.ಶ.೧೩೯೭–೧೪೨೨)**

ತಾಜುದ್ದೀನ್ ಫಿರೋಜ್‌ಷಾನು ನವೆಂಬರ್ ೧೬, ಕ್ರಿ.ಶ.೧೩೯೭ರಂದು ಕ್ರಾಂತಿ ನಡೆಸಿದನು. ಬಹಮನಿ ಸುಲ್ತಾನನನ್ನು ಬಂಧಿಸಿ ದಯಾದಿ ಫಿರೋಜ್‌ಷಾ ಎಂಬಾತನು ಸಿಂಹಾಸನವನ್ನು ಏರಿದನು. ಬರೀ ಒಳಸಂಚುಗಳಿಂದ ಕೆಟ್ಟುಹೋಗಿದ್ದ ಬಹಮನಿ ರಾಜಕೀಯವು ಫಿರೋಜ್‌ಷಾನ ಪಟ್ಟಾಭಿಷೇಕದಿಂದ ರಾಜಕೀಯದಲ್ಲಿ ಒಳ್ಳೆಯ ಗಾಳಿ ಬೀಸುವಂತಾಯಿತು. ಅನೇಕ ಕಾರಣಗಳಿಂದ ಫಿರೋಜ್‌ನ ಆಳ್ವಿಕೆಯು ಮಹತ್ವಪೂರ್ಣವಾಗಿತ್ತೆಂದು ತಿಳಿದುಬರುತ್ತದೆ. ಫಿರೋಜ್‌ಷಾನು ಬಹಮನಿ ಸಾಮ್ರಾಜ್ಯದ ಗುಲ್ಬರ್ಗಾ ವಿಭಾಗದ ಕೊನೆಯ ರಾಜನಾಗಿದ್ದನು. ನಂತರನ ರಾಜನಾದ ಅಹ್ಮದನು ರಾಜಧಾನಿಯನ್ನು ಬೀದರ್‌ಗೆ ವರ್ಗಾಯಿಸಿದನು. ಫಿರೋಜ್‌ಷಾನು ತುಂಬಾ ವಿದ್ಯಾವಂತನಾದ ರಾಜನಾಗಿದ್ದು, ನ್ಯಾಯಶಾಸ್ತ್ರ, ಪ್ರಕೃತಿ ವಿಜ್ಞಾನ, ಯುಕ್ಲಿಡ್ ರೇಖಾಗಣಿತ, ತತ್ವಶಾಸ್ತ್ರ, ಭಾಷಾಶಾಸ್ತ್ರ, ಗಣಿತಶಾಸ್ತ್ರ, ಸೂಫಿ ತತ್ವ, ಅಲಂಕಾರಿಕ ಬರಹ ಮುಂತಾದ ವಿಷಯಗಳಲ್ಲದೆ ಕುರಾನಿನ ವ್ಯಾಖ್ಯಾನಗಳಲ್ಲೂ ಪರಿಣಿತನಾಗಿದ್ದನೆಂದು ತಿಳಿಯುತ್ತದೆ. ಈತನು ಪ್ರಸಿದ್ಧ ಕವಿಯೂ ಸಹ ಆಗಿದ್ದು, 'ಉರುಜಿ' ಮತ್ತು 'ಫಿರೋಜಿ' ಎಂಬ ಗುಪ್ತ ನಾಮಗಳನ್ನು ಹೊಂದಿದ್ದನು.[೩೦] ಈತನ ಆಸ್ಥಾನದಲ್ಲಿ ಅನೇಕ ಕವಿಗಳು ಮತ್ತು ವಿದ್ವಾಂಸರು ಸ್ಥಾನ ಪಡೆದಿದ್ದರು, ಮುಲ್ಲ-ಇಸ್ಸಾಕ್-ಸಿರ್ ಹಾದಿ ಇವನ ಆಸ್ಥಾನದ ಶ್ರೇಷ್ಠ ವಿದ್ವಾಂಸನಾಗಿದ್ದನು. ಫೈಜುಲ್ ಅಂಜು ಎಂಬ ಮತ್ತೊಬ್ಬ ವಿದ್ವಾಂಸನನ್ನು ಫಿರೋಜ್‌ಷಾನು ತನ್ನ ಮಂತ್ರಿಯನ್ನಾಗಿ ನೇಮಕ ಮಾಡಿಕೊಂಡಿದ್ದನು. ಫಿರೋಜ್‌ನು ಹೆಸರಾಂತ ಖಗೋಳ ಶಾಸ್ತ್ರಜ್ಞನಾದಂತಹ ಹಸನ್ ಗಿಲಾನಿಯ ಸಹಕಾರದಿಂದ ನಕ್ಷತ್ರ ವೀಕ್ಷಣಾಲಯವನ್ನು ದೌಲತಾಬಾದಿನಲ್ಲಿ ನಿರ್ಮಿಸಿದನು. ಇವನ ಸಮಯದಲ್ಲಿ ಗುಲ್ಬರ್ಗಾ ರಾಜಧಾನಿಯು ಸುಂದರ ರೂಪವನ್ನು ಪಡೆದುದಲ್ಲದೇ, ಭೀಮಾ ನದಿಯ ದಂಡೆಯ ಮೇಲೆ ಹೊಸ ನಗರವನ್ನು ನಿರ್ಮಿಸಿ ಅದಕ್ಕೆ ಫಿರೋಜಾಬಾದ್ ಎಂಬ ನಾಮಕರಣವೂ ಸಹ ಮಾಡಲಾಯಿತು. ಫಿರೋಜಾಬಾದ್ ಕೆಲವು ದಿನಗಳ ಕಾಲ ಬಹಮನಿ ಸಾಮ್ರಾಜ್ಯದ ರಾಜಧಾನಿಯೂ ಆಗಿತ್ತು.

ಸುಲ್ತಾನನು ಕೊಂಕಣದ ಚೌಲ್ ಮತ್ತು ದಾಬೋಲ್ ರೇವು ಪಟ್ಟಣಗಳನ್ನು ಅಭಿವೃದ್ಧಿಗೊಳಿಸಿ ವ್ಯಾಪಾರ ಮತ್ತು ವಾಣಿಜ್ಯಗಳಿಗೆ ಪ್ರೋತ್ಸಾಹವನ್ನು ನೀಡಿದನು. ಈತನು ಸ್ವಧರ್ಮನಿಷ್ಠನಾಗಿದ್ದರೂ ಸಹ ಮತಾಂಧನಾಗಿರಲಿಲ್ಲ, ಅದೇ ರೀತಿ ಮದ್ಯಪಾನ ಲೋಲುಪನಾಗಿದ್ದರೂ ವಿಚಾರವಂತತೆಯನ್ನು ಬಿಟ್ಟಿರಲಿಲ್ಲ. ಈತನಿಗೆ ಬಹುಪತ್ನಿಯರಿದ್ದರೆಂದು, ಈತನ ಹರಮ್‌ನಲ್ಲಿ ವಿವಿಧ ದೇಶಗಳ ಸುಮಾರು ೮೦೦ ಸ್ತ್ರೀಯರಿದ್ದರೆಂದು, ಇವರ ಜೊತೆ ಬಹುಭಾಷಾ ಪಂಡಿತನಾಗಿದ್ದ ಫಿರೋಜ್‌ನು ಅವರವರ ಭಾಷೆಯಲ್ಲಿಯೇ ಸಂಭಾಷಿಸುತ್ತಿದ್ದನೆಂದು ತಿಳಿದು ಬರುತ್ತದೆ. ಫಿರೋಜ್‌ನಿಗೆ ಹಲವು ಹಿಂದೂ ರಾಣಿಯರಿದ್ದು ಅವರಿಗೆ ಅವನು ತಮ್ಮ ಧರ್ಮಾನುಸಾರವಾಗಿ ಪೂಜೆ-ಪುನಸ್ಕಾರಗಳನ್ನು ಮಾಡಲು ಮತ್ತು ಆಚಾರ-ವಿಚಾರಗಳನ್ನು ಕೈಗೊಳ್ಳಲು ಅವಕಾಶ ನೀಡಿದ್ದನೆಂದು ತಿಳಿದುಬರುತ್ತದೆ. ಫಿರೋಜ್‌ನ ಆಳ್ವಿಕೆಯ ಸಮಯದಲ್ಲಿ ಬಹಮನಿ ಸಾಮ್ರಾಜ್ಯದ ವೈಭವವು ತನ್ನ ಪರಾಕಾಷ್ಠತೆಯನ್ನು ಮುಟ್ಟಿತು. ಇತಿಹಾಸಕಾರರಾದ ಎಸ್.ಕೆ. ಸಿನ್ಹಾ ಅವರು ಹೇಳುವ ಪ್ರಕಾರ "ಫಿರೋಜ್‌ಷಾನು ಬಹಮನಿ ಸುಲ್ತಾನರಲ್ಲಿ ಶ್ರೇಷ್ಠ ಸುಲ್ತಾನನಾಗಿದ್ದುದಲ್ಲದೇ ಭಾರತದ ಸುಲ್ತಾನರಲ್ಲಿಯೂ ಶ್ರೇಷ್ಠನಾಗಿದ್ದನು. ಇವನ ಆಳ್ವಿಕೆಯ ಕಾಲದಲ್ಲಿ ಬಹಮನಿ ಸಂತತಿ ತನ್ನ ವೈಭವದ ಉತ್ತುಂಗ ಶಿಖರವನ್ನು ಮುಟ್ಟಿದ್ದಿತು".

ಸುಶಿಕ್ಷಿತನಾಗಿದ್ದ ಹಾಗೂ ಜನಪ್ರಿಯನಾಗಿದ್ದ ಫಿರೋಜ್‌ಷಾನು ತನ್ನ ಆಡಳಿತದ ಸಮಯದಲ್ಲಿ ವಿಜಯನಗರ ಸಾಮ್ರಾಜ್ಯದ ವಿರುದ್ಧ ಮೂರು ಯುದ್ಧಗಳನ್ನು ಮಾಡಿದನು. ಕ್ರಿ.ಶ.೧೩೯೮ರಲ್ಲಿ ವಿಜಯನಗರದ ಹರಿಹರನು ಬಹಮನಿ ರಾಜ್ಯದ ಮೇಲೆ ದಂಡೆತ್ತಿ ಬಂದು ಸಾಗರದ ಕೋಟೆಯನ್ನು ಆಕ್ರಮಣ ಮಾಡಿದಾಗ, ಬಲಿಷ್ಠನಾಗಿದ್ದ ಫಿರೋಜ್ ಷಾ ಸುಲ್ತಾನನ ಸೈನ್ಯವು ಸಾಗರದ ಕೋಟೆಯನ್ನು ವಿಜಯನಗರದ ಸೈನ್ಯದಿಂದ ಪುನಃ ವಶಪಡಿಸಿಕೊಂಡಿತ್ತಲ್ಲದೇ ಕೃಷ್ಣಾ ನದಿಯನ್ನು ದಾಟಿ ವಿಜಯನಗರದವರೆಗೂ ತನ್ನ ದಾಳಿಯನ್ನು ಮುಂದುವರೆಸಿದನು. ಬಹಮನಿ ಸುಲ್ತಾನರ ದಾಳಿಯಿಂದ ಹೆದರಿದ ವಿಜಯನಗರದ ಹರಿಹರನು ಸುಲ್ತಾನನೊಡನೆ ಒಂದು ಒಪ್ಪಂದವನ್ನು ಮಾಡಿಕೊಂಡು, ವಿಜಯನಗರವನ್ನು ಶತ್ರುಗಳ ದಾಳಿಯಿಂದ ತಡೆಗಟ್ಟುವಲ್ಲಿ ಯಶಸ್ವಿಯಾದನು. ಸಂಧಿಯ ಪ್ರಕಾರ ವಿಜಯನಗರದ ಹರಿಹರನು ಸುಲ್ತಾನನಿಗೆ ೧೦ ಲಕ್ಷ ವರಹಗಳನ್ನು ನೀಡಬೇಕಾಯಿತು. ಸಧ್ಯದ ಮಟ್ಟಿಗೆ ಎರಡು ರಾಜ್ಯಗಳ ಮಧ್ಯೆ ಶಾಂತಿ ಸ್ಥಾಪನೆಯಾಯಿತು.

ಈ ಶಾಂತಿ ವಾತಾವರಣವು ಅಲ್ಪ ಕಾಲದ್ದಾಗಿದ್ದು ಕ್ರಿ.ಶ.೧೪೦೬ರಲ್ಲಿ ಪುನಃ ಬಹಮನಿ ಮತ್ತು ವಿಜಯನಗರಗಳ ಮಧ್ಯೆ ಕಲಹಗಳು ಪ್ರಾರಂಭವಾದವು. ವಿಜಯನಗರದ ಅರಸನಾಗಿದ್ದ ದೇವರಾಯನು ಒಬ್ಬ ಸುವರ್ಣಕಾರನ(ಅಕ್ಕಸಾಲಿಗನ) ಅತ್ಯಂತ ಸುಂದರಿಯಾದ ಮಗಳನ್ನು ಪಡೆಯುವುದಕ್ಕೋಸ್ಕರ ಮುದಗಲ್ ಕೋಟೆಯನ್ನು ಮುತ್ತಿಗೆ ಹಾಕಿದನು. ಸುವರ್ಣಕಾರನ ಮಗಳು ದೇವರಾಯನನ್ನು ವರಿಸಲು ಒಪ್ಪಲಿಲ್ಲ, ಆಕೆಯನ್ನು ಫಿರೋಜ್‌ಷಾನು ತನ್ನ ಮಗನಿಗೆ ನಿಖಾ ಮಾಡಿಕೊಂಡನು. ಇದರಿಂದ ಕೋಪಗೊಂಡ ದೇವರಾಯನು ಬಹಮನಿ ಸಾಮ್ರಾಜ್ಯಕ್ಕೆ ಸೇರಿದಂತಹ ದೋ ಅಬ್ ಪ್ರಾಂತ್ಯದ ಮೇಲೆ ಆಕ್ರಮಣ ಮಾಡಿದನು. ಈ ಯುದ್ಧದಲ್ಲಿ ಬಹಮನಿ ಸುಲ್ತಾನನು ದೇವರಾಯನನ್ನು ಪರಾಜಯಗೊಳಿಸಲಾಗಿ, ವಿಜಯನಗರದ ದೇವರಾಯನು ಫಿರೋಜ್‌ಷಾನ ಜೊತೆ ಸಂಧಿ ಮಾಡಿಕೊಂಡನು.[೨೧] ಈ ಒಪ್ಪಂದದ ಪ್ರಕಾರ ದೇವರಾಯನು ತನ್ನ ಮಗಳನ್ನು ಸುಲ್ತಾನನಿಗೆ ಕೊಟ್ಟು ಮದುವೆ ಮಾಡಿದ್ದಲ್ಲದೇ ಬಂಕಾಪುರವನ್ನು ಬಹಮನಿ ಸುಲ್ತಾನನಿಗೆ ಬಿಟ್ಟುಕೊಟ್ಟನು. ಇಷ್ಟೇ ಅಲ್ಲದೆ ೧೦ ಲಕ್ಷ ವರಹ, ಐದು ಮಣ ಮುತ್ತು, ಒಂದು ಸಾವಿರ ಪುರಷ ಹಾಗೂ ಸ್ತ್ರೀ ಗುಲಾಮರನ್ನು ಬಹಮನಿ ಸುಲ್ತಾನರಿಗೆ ಒಪ್ಪಿಸುವುದಾಗಿ ಸಂಧಿ ಮಾಡಿಕೊಂಡನೆಂದು ಚರಿತ್ರೆಯಿಂದ ತಿಳಿದುಬರುತ್ತದೆ.

ಕ್ರಿ.ಶ.೧೪೧೭ ರಿಂದ ೧೪೨೦ರ ಅವಧಿಯಲ್ಲಿ ಬಹಮನಿ ಮತ್ತು ವಿಜಯನಗರದ ಮಧ್ಯೆ ಮೂರನೇ ಯುದ್ಧವು ನಡೆಯಿತು. ವಿಜಯನಗರದ ವಶದಲ್ಲಿದ್ದ ಹಾನಗಲ್ ಕೋಟೆಯನ್ನು ಸುಲ್ತಾನನು ಮುತ್ತಿಗೆ ಹಾಕಿದನು. ಈ ಯುದ್ಧದಲ್ಲಿ ವಿಜಯನಗರ ಸೈನ್ಯವು ಸುಲ್ತಾನನನ್ನು ಹಿಮ್ಮೆಟ್ಟುವಲ್ಲಿ ಯಶಸ್ವಿಯಾಯಿತು. ವಿಜಯನಗರದೊಂದಿಗೆ ನಡೆದ ಯುದ್ಧಗಳಲ್ಲಿ ಸೋಲನ್ನು ಅನುಭವಿಸಿದ ಸುಲ್ತಾನ ಫಿರೋಜ್ ಷಾನ ರಾಜ್ಯದಲ್ಲಿ ಅನೇಕ ಗಲಭೆಗಳು ಉಂಟಾದವು. ಫಿರೋಜ್ ಷಾನು ೧೪೧೭ರಲ್ಲಿ ರಾಜಮಹೇಂದ್ರಿ, ಕಾಪಯ್ಯ, ವೇಮರೆಡ್ಡಿಯನ್ನು ಸೋಲಿಸಿ ಆತನ ರಾಜ್ಯವನ್ನು ವಶಪಡಿಸಿಕೊಂಡನು, ಮಧ್ಯಪ್ರದೇಶದ ಖೇರ್ಲಾದ ಅರಸನನ್ನು ಸೋಲಿಸಿ ಆತನಿಂದ ಕಪ್ಪ ಕಾಣಿಕೆಗಳನ್ನು ಪಡೆದುಕೊಂಡನು. ಈ ರೀತಿಯಾಗಿ ನಡೆದ ಫಿರೋಜ್‌ಷಾನ ಆಳ್ವಿಕೆಯ ಅಂತಿಮ ದಿನಗಳು ದುರ್ದೆಶೆಯಿಂದ ಕೂಡಿದ್ದವಾಗಿದ್ದವು. ಸುಲ್ತಾನನು ಮಾಡಿದ ಯುದ್ಧಗಳು, ಆತನ ದುರ್ವ್ಯಸನಗಳು ಆತನ ಶಕ್ತಿ ಸಾಮರ್ಥ್ಯವನ್ನು ಕುಂದಿಸಿ ಸುಲ್ತಾನನನ್ನು ಹಲವು ವ್ಯಾಧಿಗಳಿಗೀಡು ಮಾಡಿದವು. ಇದಷ್ಟೇ ಅಲ್ಲದೆ ಸಿಂಹಾಸನಕ್ಕಾಗಿ ದಾಯಾದಿ ಕಲಹ ಉಂಟಾಗಿ ಸುಲ್ತಾನನಾದ ಫಿರೋಜ್‌ಷಾನಿಗೆ ತೀವ್ರ ಮನಃಕ್ಷೋಬೆ ಉಂಟಾಯಿತು, ಇದರಿಂದೆಲ್ಲಾ ಬೇಸತ್ತ ಸುಲ್ತಾನನು ೧೪೨೨ರಲ್ಲಿ ಸ್ವಯಂ ಪ್ರೇರಿತನಾಗಿ ಸಿಂಹಾಸನವನ್ನು ತ್ಯಾಗ ಮಾಡಿ, ತಮ್ಮನಾದ ಅಹ್ಮದನಿಗೆ ಪಟ್ಟವನ್ನು ಕಟ್ಟಿ ತನ್ನ ಆಳ್ವಿಕೆಯನ್ನು ಮುಕ್ತಾಯಗೊಳಿಸಿದನು.

### ೨.೨.೨. ಬೀದರ್ ಹಂತ(ಕ್ರಿ.ಶ. ೧೪೨೨ರಿಂದ ೧೫೩೮)

ಇತಿಹಾಸದ ಪ್ರಕಾರ ಬಹಮನ್ ಸುಲ್ತಾನರು ಬೀದರ್‌ನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಕ್ರಿ.ಶ.೧೪೨೨ ರಿಂದ ೧೫೩೮ ರವರೆಗೆ(೧೧೬ ವರ್ಷ) ರಾಜ್ಯವನ್ನಾಳಿದರು. ಈ ಸಮಯವನ್ನು ಬೀದರ್ ಹಂತವೆಂದು ಕರೆಯಲಾಗಿದ್ದು, ಈ ಕಾಲದಲ್ಲಿ ಆಳ್ವಿಕೆ ಮಾಡಿದ ಬಹಮನಿ ಸುಲ್ತಾನರು ಈ ಕೆಳಗಿನಂತಿದ್ದಾರೆ.

೧. ಅಹ್ಮದ್‌ಷಾ(೧೪೨೨–೧೪೩೬)

೨. ಎರಡನೇ ಅಲ್ಲಾವುದ್ದೀನ್ ಅಹ್ಮದ್‌ಷಾ(೧೪೩೬–೧೪೫೮)

೩. ಅಲ್ಲಾವುದ್ದೀನ್ ಹುಮಾಯನ್‌ಷಾ(೧೪೫೮–೧೪೬೧)

೪. ನಿಜಾಂಷಾ(೧೪೬೧–೧೪೬೩)

೫. ಮೂರನೇ ಮಹಮ್ಮದ್‌ಷಾ(೧೪೬೩–೧೪೮೨)

೬. ಮಹಮ್ಮದ್ ಗವಾನ್(೧೪೬೩–೧೪೮೧)

೭. ಷಿಹಾಬುದ್ದೀನ್ ಮಹಮ್ಮದ್(೧೪೮೨–೧೫೧೮)

೮. ಅಲ್ಲಾವುದ್ದೀನ್(೧೫೨೦–೧೫೨೩)

೯. ವಲೀಯುಲ್ಲಾ(೧೫೨೩–೧೫೨೬)

೧೦. ಖಲಿಮುಲ್ಲಾ(೧೫೨೬–೧೫೩೮)

#### ೧. ಅಹ್ಮದ್ ಷಾ(ಕ್ರಿ.ಶ.೧೪೨೨–೧೪೩೬)

ಅಹ್ಮದ್ ಷಾನು ಸಿಂಹಾಸನವನ್ನೇರಿದ ಸಮಯದಿಂದಲೂ ಬಹಮನಿ ಇತಿಹಾಸದಲ್ಲಿ ಬೀದರ್ ಯುಗ ಆರಂಭವಾಯಿತು. ಫಿರೋಜ್ ಷಾನ ಬಳಿಕ ಅಧಿಕಾರಿಕ್ಕೆ ಬಂದ ಚರಿತ್ರೆಯಲ್ಲಿ 'ವಲೀ' ಅಥವಾ 'ಸಂತ'ನೆಂದು ಪ್ರಸಿದ್ಧನಾದ ಅಹ್ಮದ್ ಷಾ ಬಹಮನಿಯು ತನ್ನ ರಾಜಧಾನಿಯನ್ನು ಗುಲ್ಬರ್ಗಾದಿಂದ ಬೀದರಿಗೆ ಕ್ರಿ.ಶ.೧೪೨೨ರ ಸುಮಾರಿಗೆ ಬದಲಾಯಿಸಿದನೆಂದು ಚರಿತ್ರೆ ಹೇಳುತ್ತದೆ.[೨] ರಾಜಧಾನಿಯನ್ನು ಬದಲಾಯಿಸಲು ಪ್ರಮುಖ ಕಾರಣವೆಂದರೆ ಬಹಮನಿ ರಾಜ್ಯದ ಆರಂಭದಿಂದಲೂ ರಾಜಧಾನಿಯಾದ

ಗುಲ್ಬರ್ಗಾದಲ್ಲಿ ರಾಜನ ವಿರುದ್ಧ ಅನೇಕ ಸಂಚುಗಳು, ಅಂತಃಕಲಗಳು ಮತ್ತು ಕೊಲೆಗಳು ನಡೆದವು. ಇದೇ ಸಮಯಕ್ಕೆ ಸುಲ್ತಾನನ ಗುರುವಾದ ಹಜರತ್ ಗೇಸುದರಾಜನ ಮರಣ ಸಂಭವಿಸಿತು. ಅಹ್ಮದ್‌ನು ತನ್ನ ಗುರುವಿನ ಕೊಲೆಗೆ ಗುಲ್ಬರ್ಗಾದಲ್ಲಿ ಆಗುತ್ತಿರುವ ಸಂಚುಗಳೇ ಕಾರಣವೆಂದು ಭಾವಿಸಿದನು. ಇಷ್ಟೇ ಅಲ್ಲದೆ ಗುಲ್ಬರ್ಗಾವು ಈಗ ವಿಸ್ತಾರವಾಗಿದ್ದ ಬಹಮನಿ ಸಾಮ್ರಾಜ್ಯದ ಒಂದು ಮೂಲೆಯಲ್ಲಿತ್ತು. ವಾರಂಗಲ್‌ನನ್ನು ಗೆದ್ದುಕೊಂಡ ಮೇಲೆ ಬಹಮನಿ ಸಾಮ್ರಾಜ್ಯವು ಪೂರ್ವಕ್ಕೆ ಬಹಳಷ್ಟು ಬೆಳೆಯಿತು ಮತ್ತು ಬೀದರ್ ಪ್ರದೇಶವು ಈ ಹೊಸ ಸಾಮ್ರಾಜ್ಯದ ಮಧ್ಯ ಭಾಗದಲ್ಲಿತ್ತು. ಈ ಕಾರಣಕ್ಕಾಗಿ ಬಹಮನಿ ರಾಜ್ಯದ ಮಧ್ಯದಲ್ಲಿದ್ದ ಮತ್ತು ಹೆಚ್ಚು ಎತ್ತರದಲ್ಲಿ, ಉತ್ತಮ ಹವಾಮಾನ ಹೊಂದಿದ್ದ ಬೀದರ್‌ಗೆ ಬಹಮನಿ ಸಾಮ್ರಾಜ್ಯದ ರಾಜಧಾನಿಯನ್ನು ವರ್ಗಾಯಿಸಲಾಯಿತು. ಕೆಲವು ಚರಿತ್ರೆಕಾರರು ಅಭಿಪ್ರಾಯಪಡುವಂತೆ ಸುಲ್ತಾನನು ವಿಜಯನಗರದ ಭೀತಿಯಿಂದ ತಪ್ಪಿಸಿಕೊಂಡು ನೆಮ್ಮದಿಯಿಂದ ಇರಲು ಮಾಡಿದ ಒಂದು ಯತ್ನವೆಂದು ಊಹಿಸಿರುವರು. ಆದರೆ ಅಹ್ಮದ್‌ಷಾ ಸುಲ್ತಾನನು ರಾಜಧಾನಿಯ ವರ್ಗಾವಣೆಯ ನಂತರವೂ ವಿಜಯನಗರದ ಮೇಲೆ ಅನೇಕ ದಾಳಿಗಳನ್ನು ಮಾಡಿದ್ದನ್ನು ನೋಡಿದಾಗ ಈ ಊಹೆ ಸುಳ್ಳೆನಿಸುತ್ತದೆ. ಬೀದರ್ ಪ್ರದೇಶದ ವಾತಾವರಣವು ಗುಲ್ಬರ್ಗಾ ಪ್ರದೇಶಕ್ಕಿಂತ ಉತ್ತಮವಾಗಿದ್ದು ರಕ್ಷಣಾ ದೃಷ್ಟಿಯಿಂದ ಕೂಡಾ ಹೆಚ್ಚು ಸುಭದ್ರ ಸ್ಥಾನದಲ್ಲಿತ್ತು. ೧೪೨೩-೨೪ನೇ ಇಸ್ವಿಯಲ್ಲಿ ರಾಜ್ಯಕ್ಕೆ ಭೀಕರ ಕ್ಷಾಮವು ಬಂದೊದಗಿದಾಗ ಸುಲ್ತಾನನು ಪ್ರಜೆಗಳ ಪರವಾಗಿ ದೇವರಲ್ಲಿ ಪ್ರಾರ್ಥನೆಗಳನ್ನು ಸಲ್ಲಿಸಿ ಆ ಮೂಲಕ 'ವಲಿ' ಎಂಬ ಬಿರುದನ್ನು ಪಡೆದನು. ಸುಲ್ತಾನ ಅಹ್ಮದ್‌ಷಾನು ಬೀದರಿನಲ್ಲಿ ಮುಕ್ಕಾಲು ಮೈಲು ಉದ್ದ ಮತ್ತು ಅರ್ಧಮೈಲು ಅಗಲವುಳ್ಳ ಭದ್ರವಾದ ಕೋಟೆಯೊಂದರ ನಿರ್ಮಾಣಕ್ಕೆ ಕಾರಣಕರ್ತನಾದನು.

ಸುಲ್ತಾನನಾದ ಅಹ್ಮದ್‌ಷಾನು ಅಧಿಕಾರಕ್ಕೆ ಬರುತ್ತಿದ್ದಂತೆಯೇ ತನ್ನ ಅಣ್ಣನಾದ ಫಿರೋಜ್‌ನ ಅಪೂರ್ಣ ಅಭಿಲಾಷೆಗಳನ್ನು ಪೂರ್ಣಗೊಳಿಸಲು ನಿರ್ಧರಿಸಿ, ವಿಜಯನಗರದ ಎರಡನೇ ದೇವರಾಯನ ಮೇಲೆ ಮುತ್ತಿಗೆ ಹಾಕಿದನು, ಆದರೆ ವಿಜಯನಗರದ ದೊರೆ ದೇವರಾಯನಿಂದ ಸೋಲನ್ನುಂಡು ಸುಲ್ತಾನನು ಹಿಂತಿರುಗಬೇಕಾಯಿತು. ೧೪೨೩-೨೮ರ ಕಾಲಾವಧಿಯಲ್ಲಿ ಸುಲ್ತಾನನು ಮಹೂರ್, ಕೊಂಕಣ ಮತ್ತು ತೆಲಂಗಾಣಗಳ ವಿರುದ್ಧ ಮಾಡಿದ ದಂಡಯಾತ್ರೆಗಳು ಯಶಸ್ವಿಯಾದವು. ಇದಾದನಂತರ ೧೪೨೫ರಲ್ಲಿ ಅಹ್ಮದ್‌ಷಾನು ವಾರಂಗಲ್‌ನನ್ನು ಮುತ್ತಿಗೆ ಹಾಕಿದನು, ವಾರಂಗಲ್‌ನ ರಾಜನನ್ನು ಕೊಂದು ಅದನ್ನು ಬಹಮನಿ ಸಾಮ್ರಾಜ್ಯಕ್ಕೆ ಸೇರ್ಪಡೆ ಮಾಡಿಕೊಳ್ಳುವಲ್ಲಿ ಯಶಸ್ವಿಯಾದನು. ಆನಂತರ ಅಹ್ಮದ್‌ಷಾನು ೧೪೨೯-೩೦ರಲ್ಲಿ ಗುಜರಾತಿನ ಮೇಲೆ ದಂಡಯಾತ್ರೆಗಳನ್ನು ನಡೆಸಿದನು, ಆದರೆ ಈ ದಂಡಯಾತ್ರೆಗಳು ನಿರೀಕ್ಷಿಸಿದ ಯಶಸ್ಸನ್ನು ತರಲಿಲ್ಲವೆಂದು ತಿಳಿದುಬರುತ್ತದೆ.

ಮಾಳ್ವಾ ಮತ್ತು ಗುಜರಾತ್‌ಗಳು ತುಘಲಕ್ ಸಾಮ್ರಾಜ್ಯದ ಛಿದ್ರತೆಯಿಂದಾಗಿ ಹುಟ್ಟಿಕೊಂಡವು. ಅಹ್ಮದ್‌ಷಾನು ಮಾಡಿದ ಮಾಳ್ವಾದ ಮೇಲಿನ ಆಕ್ರಮಣವು ಭಯಂಕರವಾದದ್ದು ಮತ್ತು ತೀವ್ರ ನಿರ್ಣಾಯಕರವಾಗಿತ್ತು, ಇದರ ಪ್ರಭಾವವು ಎಷ್ಟಿತ್ತೆಂದರೆ ಮುಂದೆ ಅಹ್ಮದ್‌ಷಾನ ಆಳ್ವಿಕೆಯ ಅವಧಿಯಲ್ಲಿ ಈ ಎರಡೂ ರಾಜ್ಯಗಳ ಮಧ್ಯೆ ಪುನಃ ಯುದ್ಧಗಳು ಸಂಭವಿಸಲೇ ಇಲ್ಲ. ಅಹ್ಮದ್ ಷಾ ಸುಲ್ತಾನನು ಗುಜರಾತಿನ ಜೊತೆಯಲ್ಲಿ ಘರ್ಷಣೆ ಮಾಡಲು ಕಾರಣವೆಂದರೆ-ಗುಜರಾತಿನ ಹಿಂದೂ ನಾಯಕನೊಬ್ಬ ತನ್ನ ಸುಲ್ತಾನನ ವಿರುದ್ಧ ದಂಗೆಯೆದ್ದು ಖಾನ್ದೇಶದ ಮೂಲಕ ಅಹ್ಮದ್ ಷಾನ ಬಳಿಗೆ ಸಹಾಯವನ್ನರಸಿ ಬಂದನು. ಬಹಮನಿ ಸೈನ್ಯವು ೧೪೨೯ರಲ್ಲಿ ಖಾನ್ದೇಶನ ನೆರವಿಗೆ ಬಂದು ಗುಜರಾತಿನ ನಂದುರ್ಬಾರ್ ಪ್ರದೇಶದ ಮೇಲೆ ಆಕ್ರಮಣ ನಡೆಸಿತು, ಆದರೆ ಶತ್ರುಪಡೆಗಳು ಪ್ರತಿ ಆಕ್ರಮಣವನ್ನು ನೀಡುವಲ್ಲಿ ಯಶಸ್ವಿಯಾಗಿ ಖಾನ್ದೇಶನನ್ನು ಬಹಮನಿ ಸರಹದ್ದಿನೊಳಗೆ ಹಿಮ್ಮೆಟ್ಟಿಸುವಲ್ಲಿ ಯಶಸ್ವಿಯಾದರು. ನಂತರದ ವರ್ಷಗಳಲ್ಲಿ

ಖಲಫ್ ಹಸನ್ ಬಸ್ರಿಯಾ ನಾಯಕತ್ವದಲ್ಲಿ, ಸಾಲ್ಸೆಟ್ ದ್ವೀಪವನ್ನು ಆಕ್ರಮಿಸಲು ಬೇರೊಂದು ಸೈನ್ಯವನ್ನು ಕಳಿಸಿಕೊಟ್ಟನು, ಈ ಸೈನ್ಯವು ಮಾಹಿಂಖಾರಿಯ ಒಂದು ಬದಿಯಲ್ಲಿ ಬೀಡುಬಿಟ್ಟರೆ ಮತ್ತೊಂದು ಬದಿಯಲ್ಲಿ ಬಾಂದ್ರಾದ ಕಡೆ ವೈರಿ ಸೈನ್ಯವು ಯುದ್ಧಕ್ಕೆ ತಯಾರಾಗಿ ನಿಂತ್ತಿತ್ತು, ಆದರೆ ಗುಜರಾತಿನ ಪ್ರದೇಶವನ್ನು ಕಸಿಯುವ ಪ್ರಯತ್ನವು ಈ ಸಲವೂ ವಿಫಲವಾಯಿತು. ಈ ಯುದ್ಧದಲ್ಲಿ ದಖ್ಖನ್-ಪರದೇಶಿ ಪೈಪೋಟಿಯೂ ಪ್ರಾರಂಭವಾಯಿತು. ಖಲಫ್‌ಹಸನ್‌ನ ಕೈಕೆಳಗಿನ ಕೆಲವು ಅಧಿಕಾರಿಗಳು ವೈರಿಪಾಳ್ಯವನ್ನು ಸೇರುವ ಮೂಲಕ ಆತನಿಗೆ ದ್ರೋಹ ಬಗೆದಿದ್ದರಿಂದ ಖಲಫ್‌ಹಸನ್‌ನಿಗೆ ಸೋಲಾಗಿ ಗುಜರಾತಿಗೆ ಸುಲಭವಾಗಿ ಜಯ ದೊರಕಿತು. ಈ ಯುದ್ಧದ ಸಂದರ್ಭದಲ್ಲಿ ಮಾಹಿಂ ದ್ವೀಪಗಳು ಮತ್ತು ಕೆಲ ದಕ್ಷಿಣದ ಭಾಗಗಳು ಗುಜರಾತಿನ ವಶವಾದವು. ಈ ಸಮಯದಲ್ಲಿ ಯುದ್ಧದಲ್ಲಿ ಸಹಾಯವಾಗಲೆಂದು ಸುಲ್ತಾನ್ ಅಹ್ಮದ್‌ಷಾನು ಖಾನ್ದೇಶದ ಮಿತ್ರತ್ವವನ್ನು ಬಯಸಿ ಅಲ್ಲಿನ ರಾಜನಾದ ನಜೀರ್‌ಖಾನ್ ಫರೂಕಿಯ ಮಗಳನ್ನು ತನ್ನ ಮಗನಾದ ಅಲ್ಲಾವುದ್ದೀನನಿಗೆ ತಂದುಕೊಂಡು ನಿಖಾ ಮಾಡಿದನು.

ಅಹ್ಮದ್‌ಷಾನು ಯುದ್ಧದಲ್ಲಿ ಆಸಕ್ತಿಯುಳ್ಳ ಸುಲ್ತಾನನಾಗಿದ್ದರೂ ಕೂಡ ಅತ್ಯಂತ ದಯಾಳುವೂ, ಧರ್ಮನಿಷ್ಟನೂ ಆಗಿದ್ದನು. ಸುಲ್ತಾನನು ಸಂತನಂತಹ ಮನೋಭಾವ ಹೊಂದಿದ್ದು, ತನ್ನ ಉದಾರ ನೀತಿಗಳಿಂದ ಹಿಂದೂ ಮತ್ತು ಮುಸ್ಲಿಂ ಇಬ್ಬರ ಪ್ರೀತಿವಿಶ್ವಾಸಗಳನ್ನು ಗಳಿಸಿದ್ದನು. ಪರ್ಷಿಯನ್ ಕವಿಯಾದ ಅಜರಿ 'ಬಹಮನ್ ನಾಮಾ' ಎಂಬ ಕೃತಿಯನ್ನು ಅಹ್ಮದ್ ಷಾನ ಆಸ್ಥಾನದಲ್ಲಿ ರಚಿಸಿದನೆಂದು ಚರಿತ್ರೆಯು ಹೇಳುತ್ತದೆ.[೩೩] ಅಹ್ಮದ್‌ಷಾನು ತನ್ನ ಹೊಸ ರಾಜಧಾನಿಯಾದ ಬೀದರ್ ನಗರವನ್ನು ಸುಭದ್ರವಾದ ಕೋಟೆ ಕೊತ್ತಲುಗಳಿಂದ ಮತ್ತು ಅರಮನೆಗಳಿಂದ ಸುಭದ್ರಗೊಳಿಸಿದನೆಂದು ತಿಳಿಯುತ್ತದೆ. ಈತನ ಕಾಲದಲ್ಲಿ ವಾಸ್ತುಶಿಲ್ಪ ಮತ್ತು ಕೃತಿಗಳು ರಚನೆಯಾದವು, ಅವುಗಳಲ್ಲಿ 'ತಖ್ತ್ ಮಹಲ್' ಮತ್ತು 'ಸೋಲಾಕಂಬ ಮಸೀದಿ' ಪ್ರಮುಖವಾದವುಗಳು.

ಸುಲ್ತಾನ ಅಹ್ಮದ್ ಷಾನ ಆಡಳಿತಾವಧಿಯಲ್ಲಿ ಬೆಳಕಿಗೆ ಬಂದ ಅತಿ ಮುಖ್ಯ ಅಂಶವೆಂದರೆ ಮುಸ್ಲಿಂ ಶ್ರೀಮಂತ ವರ್ಗದಲ್ಲಿ ಪರಸ್ಪರ ಪ್ರತಿಸ್ಪರ್ಧಿಯಾಗಿದ್ದ ಎರಡು ಬಣಗಳು ಏಳ್ಗೆ ಕಂಡವು. ಬಹಮನಿ ಸಾಮ್ರಾಜ್ಯವು ಸ್ಥಾಪನೆಯಾದಂದಿನಿಂದಲೂ ಟರ್ಕಿ, ಅರಬ್, ಪರ್ಷಿಯನ್, ಅಬಿಸೀನಿಯನ್ ಮೊದಲಾದ ಮೂಲದ ಸಾಹಿತಿಗಳು, ಯೋಧರು ಮತ್ತು ಆಡಳಿತಗಾರರು ಬಹಮನಿ ಸುಲ್ತಾನರ ಆಸ್ಥಾನದಲ್ಲಿ ಸೇವೆಯಲ್ಲಿ ಸಲ್ಲಿಸುತ್ತಾ ಬಂದರು. ಇವರೆಲ್ಲರೂ ತಮ್ಮ ಸ್ವಸಾಮರ್ಥ್ಯದಿಂದ, ಸಾಹಸ-ಶೌರ್ಯಗಳಿಂದ, ಚತುರ ಬುದ್ಧಿಯಿಂದ ಪ್ರಮುಖ ಹುದ್ದೆಗಳನ್ನಲಂಕರಿಸಿ ಪ್ರಭಾವಶಾಲಿಯಾಗಿ ಬೆಳೆದರು. ಇವರನ್ನು 'ಅಫಾಕಿ' ಅಥವಾ 'ಪರದೇಶಿ' ಶ್ರೀಮಂತರೆಂದು ಕರೆಯಲಾಗುತ್ತಿತ್ತು. ಇವರ ಪ್ರಭಾವಗಳು, ಸ್ಥಾನಮಾನಗಳು, ಪ್ರಾಮುಖ್ಯತೆಗಳು ಸ್ಥಳೀಯವಾಗಿದ್ದ ಶ್ರೀಮಂತ ವರ್ಗಕ್ಕೆ ಸೇರಿದ್ದ 'ದಖ್ಖನಿ' ಶ್ರೀಮಂತರ ಅಸೂಯೆಗೆ ಕಾರಣವಾಯಿತು. 'ಪರದೇಶಿ' ಮತ್ತು 'ದಖ್ಖನಿ' ಶ್ರೀಮಂತ ವರ್ಗದವರು ಅನುಕ್ರಮವಾಗಿ 'ಶಿಯಾ' ಮತ್ತು 'ಸುನ್ನಿ' ಪಂಥದವರಾಗಿದ್ದುದರಿಂದ ನಿರಂತರವಾಗಿ ಈ ಎರಡು ಬಣಗಳ ನಡುವೆ ವೈಶಮ್ಯ ಮತ್ತು ಪೈಪೋಟಿಗಳು ನಡೆದಿದ್ದವು. ಬಹಮನಿ ಸುಲ್ತಾನರ ಆಸ್ಥಾನದಲ್ಲಿ ಹೆಚ್ಚಿನ ಅಧಿಕಾರವನ್ನು ಮತ್ತು ಪ್ರಭಾವವನ್ನು ಹೊಂದಿದ್ದ ಪರದೇಶಿ ಶ್ರೀಮಂತರನ್ನು ಕಂಡರೆ ದಖ್ಖನಿ ಶ್ರೀಮಂತರಿಗೆ ಸಹಿಸಲಾಗುತ್ತಿರಲಿಲ್ಲ, ಈ ಕಾರಣದಿಂದಾಗಿ ಈ ಎರಡು ಬಣಗಳ ನಡುವೆ ಅಧಿಕಾರ, ಐಶ್ವರ್ಯ ಮತ್ತು ಸ್ಥಾನಮಾನಗಳಿಗಾಗಿ ತೀವ್ರವಾದ ಘರ್ಷಣೆಗಳು ಪ್ರಾರಂಭವಾದವು. ಕೊನೆಯದಾಗಿ ಹೇಳಬೇಕೆಂದರೆ ಈ ಘರ್ಷಣೆಗಳು ಯಾವ ಮಟ್ಟದಲ್ಲಿದ್ದವೆಂದರೆ ಮುಂದೆ ಬಹಮನಿ ಸಾಮ್ರಾಜ್ಯದ ಪಥನಕ್ಕೆ ಇವೇ ಪ್ರಮುಖ ಕಾರಣಗಳಾದವು.[೩೪] ಅಹ್ಮದ್‌ಷಾನು ತನ್ನ ಕೊನೆಗಾಲದಲ್ಲಿ ತೀವ್ರ

ಅಸ್ವಸ್ಥನಾಗಿದ್ದು ಕ್ರಿ.ಶ.೧೪೩೬ರಲ್ಲಿ ಮರಣ ಹೊಂದಿದನು. ತದನಂತರ ಆತನ ಮಗನಾದ ಎರಡನೇ ಅಲ್ಲಾವುದ್ದೀನ್ ಅಹ್ಮದನು ಬಹಮನಿ ಸುಲ್ತಾನನಾದನು.

**೨. ಎರಡನೇ ಅಲ್ಲಾವುದ್ದೀನ್ ಅಹ್ಮದ್ ಷಾ(ಕ್ರಿ.ಶ.೧೪೩೬–೧೪೫೮)**

ಅಹ್ಮದ್ ಷಾನ ಮರಣದ ನಂತರ ಅವನ ಮಗನಾದ ಎರಡನೇ ಅಲ್ಲಾವುದ್ದೀನ್ ಅಹ್ಮದ್ ಷಾನು ಬಹಮನಿ ಸಾಮ್ರಾಜ್ಯದ ಗದ್ದುಗೆಯನ್ನು ಏರಿದನು. ಈತನ ಆಳ್ವಿಕೆ ಸುಮಾರು ೨೩ ವರ್ಷಗಳವರೆಗೆ ನಡೆದರೂ ಆಡಳಿತದಲ್ಲಿ ಅಷ್ಟೇನು ಸಮರ್ಥ ಸುಲ್ತಾನನಾಗಿರಲಿಲ್ಲ. ರಾಜ್ಯದಲ್ಲಿ ಉಂಟಾಗುವ ಅನೇಕ ಸಮಸ್ಯೆಗಳನ್ನು ನಿಭಾಯಿಸುವಲ್ಲಿ ವಿದೇಶಿ ಮತ್ತು ಸ್ಥಳೀಯ ಮುಸ್ಲಿಂ ಬಣಗಳ ನಡುವಿನ ಹೋರಾಟವನ್ನು ಹತ್ತಿಕ್ಕುವಲ್ಲಿ ಈತನು ವಿಫಲನಾದನು. ಅಲ್ಲಾವುದ್ದೀನನು ವಿಜಯನಗರ, ತೆಲಂಗಾಣ, ಗುಜರಾತ್, ಖಾನ್ದೇಶ ಮತ್ತು ಮಾಳ್ವಾಗಳ ಮುಸ್ಲಿಂ ದೊರೆಗಳ ವಿರುದ್ಧ ಹಲವು ಯುದ್ಧಗಳನ್ನು ಮಾಡಿದನು.

ಅಲ್ಲಾವುದ್ದೀನನು ವಿಜಯನಗರದ ವಿರುದ್ಧ ೧೪೩೬ರಲ್ಲಿ ಮೊದಲ ದಂಡಯಾತ್ರೆಯನ್ನು ಮತ್ತು ೧೪೪೩ರಲ್ಲಿ ಎರಡನೇ ದಂಡಯಾತ್ರೆಯನ್ನು ಮಾಡಿದನು. ಮೊದಲನೇ ದಂಡಯಾತ್ರೆಯಲ್ಲಿ ಈತನಿಗೆ ಯಶಸ್ಸು ಸಿಗಲಿಲ್ಲ, ಎರಡನೇ ದಂಡಯಾತ್ರೆಯಲ್ಲಿ ವಿಜಯನಗರದ ಅರಸನಾದ ದೇವರಾಯನ ಮಗನನ್ನು ಕೊಲ್ಲಿಸಿದರು. ಆದರೂ ಸಹ ದೇವರಾಯನು ಸೋಲನ್ನೊಪ್ಪಿಕೊಳ್ಳಲಿಲ್ಲ. ಅಲ್ಲಾವುದ್ದೀನ್ ಸುಲ್ತಾನನು ಸಂಗಮೇಶ್ವರದ ರಾಜನ ಮಗಳನ್ನು ಮದುವೆಯಾಗಿ ಅವಳನ್ನೇ ಮುಖ್ಯ ರಾಣಿಯನ್ನಾಗಿ ಮಾಡಿದನು. ತನ್ನ ಮೊದಲನೇ ರಾಣಿಯಾಗಿದ್ದ ನಜೀರ್‌ಖಾನ್‌ನ ಮಗಳನ್ನು ಮೂಲೆಗುಂಪು ಮಾಡಿದ ಕಾರಣ ಅಲ್ಲಾವುದ್ದೀನನು ತನ್ನ ಮಾವನಾಗಿದ್ದ ಖಾನ್ದೇಶದ ಸುಲ್ತಾನನಾದ ನಜೀರ್‌ಖಾನ್ ಫರೂಕಿಯ ವಿರುದ್ಧ ಹೋರಾಡ ಬೇಕಾಯಿತು. ಮುಂದೆ ಬಹಮನಿ ಸೈನ್ಯವು 'ಲಾಲಿಂಗ್' ಯುದ್ಧ ಭೂಮಿಯಲ್ಲಿ ಗುಜರಾತ್ ಮತ್ತು ಮಾಳ್ವಾಗಳ ಸುಲ್ತಾನರೊಡನೆ ಕೂಡಿಕೊಂಡು ಬಂದ ನಜೀರ್‌ಖಾನ್‌ನ ವಿರುದ್ದ ಯುದ್ದ ಮಾಡಿದನು. ಈ ಯುದ್ಧದಲ್ಲಿ ಪರದೇಶಿ ದಂಡನಾಯಕನಾದಂತಹ ಖಲಾಫ್‌ಹಸನ್‌ನು ಬಹಮನಿ ಸೈನ್ಯವನ್ನು ಮುನ್ನಡೆಸಿ ಈ ಸಂಯುಕ್ತ ಸೈನ್ಯವನ್ನು ಸೋಲಿಸುವಲ್ಲಿ ಯಶಸ್ವಿಯಾದನು. ಪರದೇಶಿ ನಾಯಕನ ಈ ವಿಜಯವು ದಖ್ಖನಿ ಶ್ರೀಮಂತರ ತೀವ್ರ ಅಸಮಾಧಾನಕ್ಕೆ ಕಾರಣವಾಯಿತು. ಪರದೇಶಿಗಳ ವಿರುದ್ಧ ಸೇಡು ತೀರಿಸಿಕೊಳ್ಳಲು ದಖ್ಖನಿ ಶ್ರೀಮಂತರು ಸೂಕ್ತ ಸಮಯಕ್ಕಾಗಿ ಕಾಯುತ್ತಿದ್ದರು. ೧೪೪೬ರಲ್ಲಿ ಪರದೇಶಿ ಸೈನ್ಯವು ಖೇಲ್ನದ ರಾಜನ ದಂಗೆಯನ್ನು ಅಡಗಿಸುವಲ್ಲಿ ವಿಮುಖರಾದಾಗ ದಖ್ಖನಿಗಳು ಅವರ ವಿರುದ್ಧ ಸೇಡು ತೀರಿಸಿಕೊಳ್ಳಲು ಸಮಯ ಸಿಕ್ಕಂತಾಯಿತು. ದಖ್ಖನಿ ಶ್ರೀಮಂತರು ಚಾಡಿ ಮಾತುಗಳಿಂದ ಸುಲ್ತಾನಿನ ಮನಸ್ಸನ್ನು ಪರದೇಶಿಗಳ ವಿರುದ್ದ ಹಾಳುಮಾಡಿ 'ಚಾಕನ್'ನಲ್ಲಿ ವಿಶ್ರಮಿಸಿದ್ದ ಪರದೇಶಿಗಳ ಕಗ್ಗೊಲೆಗೆ ಸುಲ್ತಾನನು ಆಜ್ಞೆ ಮಾಡುವಂತೆ ಮಾಡಿದರು. ಈ ಸಮಯದಲ್ಲಿ ಹಲವಾರು ಪರದೇಶಿಗಳು ಹತರಾದರು. ಸುಲ್ತಾನನಿಗೆ ತನ್ನ ತಪ್ಪಿನ ಅರಿವಾಗಿ ಪಶ್ಚಾತಾಪ ಪಟ್ಟು ಪರದೇಶಿಗಳ ಕ್ಷಮೆ ಕೇಳಿದನು, ಈ ಹತ್ಯಾಕಾಂಡವು 'ಚಾಕನ್ ದುರಂತ'ವೆಂದೇ ಹೆಸರುವಾಸಿಯಾಯಿತು. ಇದೇ ಕಾಲಕ್ಕೆ ಅಲ್ಲಾವುದ್ದೀನ್‌ನ ತಮ್ಮನಾದ ಜಲಾಲ್‌ಖಾನ್‌ನು ತೆಲಂಗಾಣದಲ್ಲಿ ಬಂಡಾಯವೆದ್ದಾಗ ಅದನ್ನು ಅಡಗಿಸುವಲ್ಲಿ ಸುಲ್ತಾನನು ಯಶಸ್ವಿಯಾದನು.

ಅಲ್ಲಾವುದ್ದೀನ್ ಸುಲ್ತಾನನು ಬಹಮನಿಯ ರಾಜಧಾನಿಯಾದ ಬೀದರಿನ ಹತ್ತಿರವಿರುವ ಅಷ್ಟೂರಿನಲ್ಲಿ ತನ್ನ ತಂದೆಯಾದ ಅಹ್ಮದ್ ಷಾನ ಸಮಾಧಿಯ ಮೇಲೆ ಭವ್ಯವಾದ ಗೋಳವನ್ನು ನಿರ್ಮಿಸಿ ಅದರ ಮೇಲೆ ಹೂವಿನ ಅಲಂಕಾರವನ್ನು ಮಾಡಿಸಿ ಗೋರಿಯನ್ನು ನಿರ್ಮಿಸಿದನು.[೩೫] ಈ ಗೋಳವು ಭಾರತದಲ್ಲೇ

ಭವ್ಯತೆ ಮತ್ತು ಸೌಂದರ್ಯಕ್ಕೆ ಪ್ರಸಿದ್ಧವಾಗಿದೆ. ಅಲ್ಲಾವುದ್ದೀನನು ಅನೇಕ ಜನಪರ ಕೆಲಸಗಳನ್ನು ಮಾಡಿದನು, ಅವುಗಳಲ್ಲಿ ಪ್ರಮುಖವೆಂದರೆ ಬೀದರಿನಲ್ಲಿ ವೈದ್ಯ ಚಿಕಿತ್ಸಾಲಯವನ್ನು ನಿರ್ಮಿಸಿದನು, ನ್ಯಾಯ ವ್ಯವಸ್ಥೆಯನ್ನು ಸುಧಾರಿಸಿದನು ಮತ್ತು ಪ್ರಜೆಗಳ ಹಿತವನ್ನು ಬಯಸುವ ನ್ಯಾಯ ಪಂಡಿತರನ್ನು ನ್ಯಾಯಾಧೀಶರನ್ನಾಗಿ ನೇಮಿಸಿದನು. ಸುಲ್ತಾನನು ೧೪೫೮ರಲ್ಲಿ ಮರಣಹೊಂದಿದನು.

**೩. ಅಲ್ಲಾವುದ್ದೀನ್ ಹುಮಾಯನ್ ಷಾ(೧೪೫೮–೧೪೬೧)**

ಅಲ್ಲಾವುದ್ದೀನ್ ಅಹ್ಮದ್‌ಷಾನ ಮರಣಾನಂತರ ಆತನ ಹಿರಿಯ ಮಗನಾದ ಅಲ್ಲಾವುದ್ದೀನ್ ಹುಮಾಯನ್‌ಷಾನು ಬಹಮನಿ ಸಾಮ್ರಾಜ್ಯದ ಅಧಿಕಾರವನ್ನು ವಹಿಸಿಕೊಂಡನು. ಈತನು ಸುಲ್ತಾನನಾಗುವುದಕ್ಕಿಂತ ಮೊದಲೇ ತನ್ನ ಕ್ರೂರತನಕ್ಕೆ ಮತ್ತು ನಿರಂಕುಶ ಪ್ರಭುತ್ವಕ್ಕೆ ಕುಖ್ಯಾತನಾಗಿದ್ದನು, ಈ ಕಾರಣದಿಂದಾಗಿ ಈತನನ್ನು 'ಅಲ್ಲಾವುದ್ದೀನ್ ಹುಮಾಯನ್ ಜಾಲಿಮ್ ಷಾ' ಎಂದು ಕರೆಯಲಾಗುತ್ತಿತ್ತು.[೩೬] ಈತನ ಕ್ರೂರತೆಗೆ ಹೆದರಿದ ಹಲವಾರು ಮುಸ್ಲಿಂ ಶ್ರೀಮಂತರು ಸುಲ್ತಾನನ ಆಸ್ಥಾನವನ್ನು ಬಿಟ್ಟು ವಲಸೆ ಹೋದರಲ್ಲದೇ ಮತ್ತೆ ಕೆಲವರು ಇವನ ವಿರುದ್ಧ ದಂಗೆ ಎದ್ದು ಸುಲ್ತಾನನ ಸಹೋದರನಾದ ಹಸನ್‌ಖಾನ್‌ನ್ನು ಹೊಸ ಸುಲ್ತಾನನೆಂದು ಘೋಷಿಸಿದರು. ಕ್ರೂರಿಯಾದ ಹುಮಾಯನ್‌ನು ತಮ್ಮನಾದ ಹಸನ್‌ಖಾನ್‌ನನ್ನು ಯುದ್ಧದಲ್ಲಿ ಸೋಲಿಸಿ ಅವನನ್ನು ಸೆರೆಮನೆಗೆ ತಳ್ಳಿ ತಾನೇ ಅಧಿಕಾರವನ್ನು ವಹಿಸಿಕೊಂಡನು. ಅಧಿಕಾರಕ್ಕೆ ಬಂದತಕ್ಷಣವೇ ಸುಲ್ತಾನನಾದ ಹುಮಾಯನನು ಪರದೇಶಿ ಶ್ರೀಮಂತ ವರ್ಗಕ್ಕೆ ಸೇರಿದ್ದ ಮಹಮ್ಮದ್ ಗವಾನನನ್ನು ತನ್ನ ಪ್ರಧಾನಮಂತ್ರಿಯಾಗಿ ನೇಮಿಸಿಕೊಂಡನು. ಈತನನ್ನು ಇತಿಹಾಸಕಾರರು ನಿರಂಕುಶ ಪ್ರಭು ಎಂದು ವರ್ಣಿಸಿದ್ದಾರೆ. ಕಾಲಾಂತರದಲ್ಲಿ ೧೪೬೧ರಲ್ಲಿ ಇವನ ಕ್ರೂರತನಕ್ಕೆ ರೋಶಿ ಹೋಗಿದ್ದ ಇವನ ಸೇವಕನಿಂದಲೇ ಇವನ ಕೊಲೆಯಾಯಿತು. ಇದಕ್ಕೆ ಕಾರಣ ಸುಲ್ತಾನನು ಪರದೇಶಿಗಳ ಪಕ್ಷವನ್ನು ಬೆಂಬಲಿಸುತ್ತಿದ್ದುದು, ಈತನ ಸಾವು ಪ್ರಜೆಗಳಿಗೆ ಶಾಂತಿ–ಸಮಾಧಾನವನ್ನು ತಂದಿತೆಂದು ಇತಿಹಾಸ ಹೇಳುತ್ತದೆ.

**೪. ನಿಜಾಂಷಾ(೧೪೬೧–೧೪೬೩)**

ಅಲ್ಲಾವುದ್ದೀನ್ ಹುಮಾಯನ್ ಷಾನ ಮರಣಾನಂತರ ಆತನ ಎಂಟು ವರ್ಷದ ಮಗ ನಿಜಾಂ ಷಾನನ್ನು ಸಿಂಹಾಸನದ ಮೇಲೆ ಕೂಡಿಸಲಾಯಿತು. ಚಿಕ್ಕ ವಯಸ್ಸಿನವನಾದ್ದರಿಂದ ಸುಲ್ತಾನನ ಪರವಾಗಿ ಅವನ ತಾಯಿಯಾದ ರಾಣಿ ನರ್ಗಿಸ್ ಬೇಗಂ ರಾಜಪ್ರತಿನಿಧಿಯಾಗಿ ಕರ್ತವ್ಯ ನಿರ್ವಹಿಸಿದಳೆಂದು ತಿಳಿದುಬರುತ್ತದೆ. ಈ ಸುಲ್ತಾನನ ಕಾಲದಲ್ಲಿ ಮಾಳ್ವಾದ ಸುಲ್ತಾನರು ಬಹಮನಿ ರಾಜ್ಯದ ಮೇಲೆ ದಂಡೆತ್ತಿ ಬಂದರು. ಈ ದಾಳಿಯನ್ನು ಮಹಮ್ಮದ್ ಗವಾನನು ಯಶಸ್ವಿಯಾಗಿ ಹಿಮ್ಮೆಟ್ಟಿಸಿದನು. ೧೪೬೩ರಲ್ಲಿ ನಿಜಾಂಷಾನು ಅಕಾಲ ಮರಣಕ್ಕೆ ತುತ್ತಾದನು.

**೫. ಮೂರನೇ ಮಹಮ್ಮದ್‌ಷಾ(೧೪೬೩–೧೪೮೨)**

ನಿಜಾಂಷಾನ ಮರಣಾನಂತರ ಅವನ ತಮ್ಮನಾದ ಮೂರನೇ ಮಹಮ್ಮದ್ ಷಾನು ಅಧಿಕಾರಕ್ಕೆ ಬಂದನು, ಆಗ ಅವನಿಗೆ ಬರೀ ೯ ವರ್ಷಗಳು. ಈ ಸುಲ್ತಾನನ ಆಡಳಿತ ಕಾಲದಲ್ಲಿ ಮಹಮ್ಮದ್ ಗವಾನನು 'ಅಮೀರ್–ಉಲ್–ಉಮ್ರಾ'[೩೭] ಎಂಬ ಪ್ರತಿಷ್ಠಿತ ಸ್ಥಾನವನ್ನು ಪಡೆದನು. ಅಷ್ಟೇ ಅಲ್ಲದೆ ಮಹಮ್ಮದ್ ಷಾನು ಅಪ್ರಾಪ್ತ ವಯಸ್ಕನಾಗಿದ್ದುದರಿಂದ ಮಹಮ್ಮದ್ ಗವಾನನು ರಾಜ್ಯದ ಆಡಳಿತದ ಜವಾಬ್ದಾರಿಗಳನ್ನೆಲ್ಲಾ ತಾನೇ ವಹಿಸಿಕೊಂಡು ಮಹಮ್ಮದ್ ಷಾನ ಆಳ್ವಿಕೆಯ ಕೊನೆಯವರೆಗೂ ರಾಜಪ್ರತಿನಿಧಿಯಾಗಿಯೂ ಮತ್ತು ಪ್ರಧಾನಮಂತ್ರಿಯಾಗಿಯೂ ಬಹಮನಿ ಸಾಮ್ರಾಜ್ಯದ ಬಹುಮುಖ

ಏಳ್ಗೆಗೆ ಕಾರಣನಾದನು. ಈ ಕಾಲದಲ್ಲಿಯೇ ದಖ್ಖನ್ ಮತ್ತು ಪರದೇಶಿ ಶ್ರೀಮಂತರ ಮಧ್ಯೆ ತೀವ್ರ ಘರ್ಷಣೆ ಮತ್ತು ಹೋರಾಟಗಳು ನಡೆದವು.

**೬. ಮಹಮ್ಮದ್ ಗವಾನ್(ಕ್ರಿ.ಶ.೧೪೬೩–೧೪೮೧)**

ಖ್ವಾಜಾ ಮಹಮ್ಮದ್ ಗವಾನನು ತನ್ನ ೨೬ ವರ್ಷಗಳ ರಾಜಕೀಯ ಜೀವನದಲ್ಲಿ ಮೂವರು ಸುಲ್ತಾನರನ್ನು ಗೌರವದಿಂದ ನಡೆಸಿಕೊಂಡು, ನಿಷ್ಠಾವಂತನಾಗಿ ಗುರುತಿಸಿಕೊಂಡಿದ್ದನು. ಆತನ ಆಡಳಿತ ಅವಧಿಯಲ್ಲಿಯೇ ಬಹಮನಿ ರಾಜ್ಯ ಅತ್ಯುನ್ನತಿಯನ್ನು ಸಾಧಿಸಿತು. ಬಹಮನಿ ರಾಜ್ಯವನ್ನು ನಿಜವಾಗಿಯೂ ಕಲ್ಯಾಣ ರಾಜ್ಯವನ್ನಾಗಿ ಮಾರ್ಪಡಿಸಿದನು. ಮೆಡೋಸ್ ಟೇಲರ್ ಭಾರತದ ಮಹಮದೀ ಚರಿತ್ರೆಯಲ್ಲಿ ಗವಾನನ ಸಮಬಲನಿಲ್ಲವರಾರೂ ಇಲ್ಲ ಎಂದಿದ್ದಾರೆ. ಬಹಮನಿಯ ಇತಿಹಾಸದಲ್ಲಿ ಅದ್ವಿತೀಯ ವ್ಯಕ್ತಿಯಾಗಿ ಹೊರಹೊಮ್ಮಿದ್ದಾನೆ. ಇವನು ಮೂರನೇ ಮಹಮ್ಮದ್ ಷಾನ ಪ್ರಧಾನಮಂತ್ರಿ ಮತ್ತು ದಂಡನಾಯಕನಾಗಿದ್ದನು. ಗವಾನನ ವ್ಯಕ್ತಿತ್ವ ಮತ್ತು ಸಾಧನೆಗಳು, ಅವನ ಸಮರ್ಥ ಆಡಳಿತ, ದಂಡನಾಯಕನಾಗಿಯೂ ಮತ್ತು ಕುಶಲಮತಿಯಾಗಿಯೂ ಅವನು ಮಾಡಿದ ಕಾರ್ಯಗಳು ಮತ್ತು ಸಾಧನೆಗಳು ಬಹಮನಿ ಸುಲ್ತಾನರಿಗಿಂತ ಇವನಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ತಂದುಕೊಟ್ಟವು. ಮಹಮ್ಮದ್ ಗವಾನನ ಪಾಂಡಿತ್ಯ ಮತ್ತು ಪ್ರತಿಭೆಗಳು, ಅವನು ಸಾಹಿತ್ಯ, ಶಿಕ್ಷಣ ಮತ್ತು ಸಾಹಿತಿಗಳಿಗೆ ನೀಡಿದ ಪ್ರೋತ್ಸಾಹಗಳು ಬಹಮನಿ ಇತಿಹಾಸದಲ್ಲಿ ಗವಾನನನ್ನು ಆಕರ್ಷಕ ಮತ್ತು ಅದ್ಭುತ ವ್ಯಕ್ತಿಯನ್ನಾಗಿ ಮಾಡಿವೆ.

ಹುಟ್ಟಿನಿಂದಲೇ ಪರ್ಷಿಯನ್‌ನಾಗಿದ್ದ ಗವಾನನು ಪರ್ಷಿಯಾದ ಶ್ರೀಮಂತ ಕುಟುಂಬದಲ್ಲಿ ೧೪೧೧ರಲ್ಲಿ ಜನಿಸಿದನು. ಚಿಕ್ಕಂದಿನಿಂದಲೇ ಉತ್ತಮ ಶಿಕ್ಷಣವನ್ನು ಹೊಂದಿ, ವ್ಯಾಪಾರಿಯಾಗಿ ತನ್ನ ಜೀವನವನ್ನು ಆರಂಭಿಸಿದನು. ಇವನು ತನ್ನ ೪೨ನೇ ವಯಸ್ಸಿನಲ್ಲಿ ದೆಹಲಿಗೆ ವಲಸೆಬಂದನು. ಬೀದರಿನಲ್ಲಿದ್ದ ಸುಪ್ರಸಿದ್ಧ ಮುಸ್ಲಿಂ ಸಂತನಾದ ಮಹಿಬುಲ್ಲಾ ಖೀರ್ಮಾನಿಯನ್ನು ಭೇಟಿಯಾಗಲು ಬೀದರಿಗೆ ತನ್ನ ಪ್ರಯಾಣವನ್ನು ಬೆಳೆಸಿದನು. ಆ ಸಮಯದಲ್ಲಿ ಬಹಮನಿ ಸುಲ್ತಾನನಾಗಿದ್ದ ಅಲ್ಲಾವುದ್ದೀನನು ಇವನ ಪ್ರತಿಭೆ, ಪಾಂಡಿತ್ಯ ಮತ್ತು ಪ್ರಾಮಾಣಿಕತೆಗಳಿಗೆ ಪ್ರಭಾವಿತನಾಗಿ ಆತನನ್ನು ತನ್ನ ಆಸ್ಥಾನಕ್ಕೆ ಬರಮಾಡಿಕೊಂಡನು. ಈ ರೀತಿಯಾಗಿ ಬೀದರಿನಲ್ಲಿ ನೆಲೆಯೂರಿದ ಗವಾನನು ಬಹಮನಿ ಸುಲ್ತಾನರ ಸೇವೆಗೆ ತನ್ನ ಕೊನೆಯುಸಿರಿರುವವರೆಗೂ ಸಮರ್ಪಿಸಿಕೊಂಡನು. ಮಹಮ್ಮದ್ ಗವಾನನು ಬಹಮನಿ ಸುಲ್ತಾನರಾದ ಅಲ್ಲಾವುದ್ದೀನ್, ಹುಮಾಯನ್‌ಷಾ, ನಿಜಾಂಷಾ ಮತ್ತು ಮಹಮ್ಮದ್‌ಷಾ ಇವರುಗಳ ಆಸ್ಥಾನದಲ್ಲಿ ಸೇವೆಸಲ್ಲಿಸಿದನು.

ಕ್ರಿ.ಶ. ೧೪೫೮ರಲ್ಲಿ ಅಲ್ಲಾವುದ್ದೀನ್‌ನ ಮರಣಾನಂತರ ಕ್ರಿ.ಶ.೧೪೫೮ ರಿಂದ ೧೪೬೧ ರವರೆಗೆ ಮೂರು ವರ್ಷಗಳ ಕಾಲ ಹುಮಾಯನ್‌ಷಾನ ಕೈಕೆಳಗೆ, ತದನಂತರ ಅವನ ಮಗನಾದ ನಿಜಾಂಷಾನ ಆಳ್ವಿಕೆಯಲ್ಲಿ ಗವಾನನು ಸೇವೆ ಸಲ್ಲಿಸಿದನು. ನಿಜಾಂಷಾನು ಆಡಳಿತಕ್ಕೆ ಬಂದಾಗ ಅವನಿಗೆ ಕೇವಲ ಎಂಟು ವರ್ಷಗಳು, ಈ ಸಮಯದಲ್ಲಿ ಮಹಮ್ಮದ್ ಗವಾನನು, ಸುಲ್ತಾನನು ಅಪ್ರಾಪ್ತ ವಯಸ್ಕನವನಾದ್ದರಿಂದ ಪ್ರಜಾಪತಿ ಮಂಡಲಿ(ಸಲಹಾ ಮಂಡಳಿ)ಯನ್ನು ಸ್ಥಾಪಿಸಿದನು, ಈ ಮಂಡಳಿಯಲ್ಲಿ ಮಹಮ್ಮದ್ ಗವಾನ್, ಸುಲ್ತಾನನ ತಾಯಿ ಮತ್ತು ಖ್ವಾಜಾ ಜಹಾನ್ ಅಂದರೆ ಪ್ರಧಾನಿಯೂ ಸ್ಥಾನಹೊಂದಿದ್ದರು. ಸುಲ್ತಾನನ ತಾಯಿಯು ಮಧ್ಯಕಾಲೀನ ಭಾರತದ ಇತಿಹಾಸದಲ್ಲಿ ಸಮರ್ಥ ಮಹಿಳೆಯಾಗಿದ್ದಳು, ಈಕೆಯು ಗವಾನನನ್ನು ಶ್ರೇಷ್ಠ ಆಡಳಿತಾಧಿಕಾರಿಯೆಂದು ಆಯ್ಕೆ ಮಾಡಿ, ತಾನೂ ಸಹ ರಾಜ್ಯವನ್ನು ಕಷ್ಟ ಕಾಲದಲ್ಲಿ ಕಾಪಾಡುವ ಹೊಣೆಯನ್ನು ಹೊತ್ತಳು. ಓರಿಸ್ಸಾದ ದೊರೆಯಾದ ಕಪಿಲೇಂದ್ರನು ಬೀದರಿನ ಮೇಲೆ ಆಕ್ರಮಣ ಮಾಡಿದಾಗ ಮಹಮ್ಮದ್ ಗವಾನನು ಧೈರ್ಯದಿಂದ ಅವನನ್ನು ಹಿಮ್ಮೆಟ್ಟಿಸಿದನು. ಇದೇ ರೀತಿ ಮಾಳ್ವಾದ ದೊರೆಯು

ಗುಜರಾತಿನ ಸಹಾಯದೊಂದಿಗೆ ಬಹಮನಿಯ ಮೇಲೆ ಆಕ್ರಮಣ ಮಾಡಿದಾಗ ಅವರನ್ನೂ ಸಹ ಸಫಲವಾಗಿ ಹಿಮ್ಮೆಟ್ಟಿಸಿದನು.

ಕ್ರಿ.ಶ.೧೪೬೬ರಲ್ಲಿ ಮಹಮ್ಮದ್‌ಷಾನು ಪಟ್ಟಕ್ಕೇರಿದಾಗ ಅವನಿಗೆ ಎಂಟು ವರ್ಷಗಳು, ಆಗ ರಾಜಪ್ರತಿನಿಧಿ ಮಂಡಳಿ ಅಸ್ತಿತ್ವದಲ್ಲಿತ್ತು. ಅದೇ ವರ್ಷ ಮಹಮ್ಮದ್ ಗವಾನನನ್ನು ರಾಣಿಯು ಪ್ರಧಾನಮಂತ್ರಿಯಾಗಿ ನೇಮಿಸಿದಳು. ಅಲ್ಲಿಂದೀಚೆಗೆ ತನ್ನ ಕೊನೆಯುಸಿರಿನವರೆಗೂ ಮಹಮ್ಮದ್ ಗವಾನನು ಬಹಮನಿ ಆಸ್ಥಾನದಲ್ಲೇ ಮುಂದುವರೆದನು. ಅಲ್ಲಾವುದ್ದೀನ್‌ನ ನಂತರದ ಸುಲ್ತಾನನಾಗಿದ್ದ ಹುಮಾಯನ್ ಷಾನು 'ಮಲಿಕ್-ಉಲ್-ತಜೂರ್' ಅಥವಾ ವ್ಯಾಪಾರಿಗಳ ಮುಖಂಡ ಎಂದು ಮಹಮ್ಮದ್ ಗವಾನನಿಗೆ ಬಿರುದು ನೀಡಿ ಗೌರವಿಸಿದನು.

ಮಹಮ್ಮದ್ ಗವಾನನು ಸಮರ್ಥ ಆಡಳಿತಗಾರನಾಗಿದ್ದು ಕೇವಲ ಪ್ರಧಾನಿಯಾಗಿರದೆ ಬಿಜಾಪುರದ ಗವರ್ನರ್ ಆಗಿಯೂ, ಸೇನಾ ನಾಯಕನಾಗಿಯೂ ಬಹಮನಿ ಸಾಮ್ರಾಜ್ಯದ ವಿಸ್ತಾರಕ್ಕೆ ಮತ್ತು ಸುವ್ಯವಸ್ಥಿತ ಆಡಳಿತಕ್ಕೆ ಶ್ರಮವಹಿಸಿ ದುಡಿದು ಪ್ರಮುಖ ಪಾತ್ರವಹಿಸಿದನು. ಆಂತರಿಕವಾಗಿ ಹುಟ್ಟಿಕೊಂಡಿದ್ದ ಅನೇಕ ದಂಗೆಗಳನ್ನು ಯಶಸ್ವಿಯಾಗಿ ಅಡಗಿಸಿ, ಸಾಮ್ರಾಜ್ಯಕ್ಕೆ ಒದಗಿದಂತಹ ಹೊರಗಿನ ಆಪತ್ತುಗಳೆಲ್ಲವನ್ನೂ ನಿವಾರಿಸಿ ಬಹಮನಿ ಸಾಮ್ರಾಜ್ಯವನ್ನು ರಕ್ಷಿಸಿದನು. ಈತನು ತನ್ನ ಮಂತ್ರಿಯಾದ ಅವಧಿಯಲ್ಲಿ ವಿಶಿಷ್ಟವಾದ ಸೈನಿಕ ನೀತಿಯನ್ನು ಅನುಸರಿಸಿದನು. ಬಹಮನಿ ಸುಲ್ತಾನರಾದ ಹುಮಾಯನ್ ಷಾ, ನಿಜಾಂಷಾ ಮತ್ತು ಮೂರನೇ ಮಹಮ್ಮದ್‌ಷಾನು ಅಷ್ಟೊಂದು ಸಮರ್ಥರಾಗಿರದ ಕಾರಣ ರಾಜ್ಯ ವಿಸ್ತರಣೆಯಲ್ಲಿ ವಿಫಲರಾಗಿದ್ದರು. ಆದರೆ ಮಹಮ್ಮದ್ ಗವಾನನು ಯಶಸ್ವಿಯಾಗಿ ಯುದ್ಧಗಳನ್ನು ಮಾಡುವ ಮೂಲಕ ವಿಜಯನಗರಕ್ಕೆ ಸೇರಿದಂತಹ ಕೊಂಕಣ, ಬೆಳಗಾವಿ ಮತ್ತು ಗೋವಾ ಪ್ರದೇಶಗಳನ್ನು ಬಹಮನಿ ಸಾಮ್ರಾಜ್ಯಕ್ಕೆ ಮರಳಿ ಸೇರಿಸುವಲ್ಲಿ ಯಶಸ್ವಿಯಾದನು. ಓರಿಸ್ಸಾದ ಮೇಲೂ ದಾಳಿ ಮಾಡಿ ಅಲ್ಲಿನ ಹಲವಾರು ಪ್ರದೇಶಗಳನ್ನು ಬಹಮನಿ ಸುಲ್ತಾನರ ಆಧೀನಕ್ಕೆ ಒಳಪಡಿಸಿದನು. ಹುಬ್ಬಳ್ಳಿ ಹಾಗೂ ಬಾಗಲಕೋಟೆ ಮುಂತಾದ ಉತ್ತರ ಕರ್ನಾಟಕದ ಪ್ರದೇಶಗಳನ್ನು ಗೆದ್ದು ಸಂಪೂರ್ಣವಾಗಿ ಉತ್ತರ ಕರ್ನಾಟಕವೆಲ್ಲವೂ ಬಹಮನಿ ಸುಲ್ತಾನರ ಆಡಳಿತಕ್ಕೆ ಒಳಪಡುವಂತೆ ಕಾರ್ಯನಿರ್ವಹಿಸಿದನು. ವಿಜಯನಗರಕ್ಕೆ ಸೇರಿದಂತಹ ಗೋವಾ ಬಂದರನ್ನು ಅತಿ ಪ್ರಯಾಸದಿಂದ ಬಹಮನಿಯ ಕೈವಶ ಮಾಡಿದನು.

ಮಾಳ್ವಾದ ಸುಲ್ತಾನನಾದ ಮಹಮ್ಮದ್ ಖಿಲ್ಜಿಯನ್ನು ಯುದ್ಧದಲ್ಲಿ ಸೋಲಿಸಿ ಎಲೀಜಪುರ ಮತ್ತು ದಾಬುಲ್‌ಗಳನ್ನು ಕ್ರಿ.ಶ.೧೪೬೬ರಲ್ಲಿ ವಶಪಡಿಸಿಕೊಂಡನು. ಓರಿಸ್ಸಾದ ಗಜಪತಿಗಳ ರಾಜಕೀಯ ವ್ಯವಹಾರ ಗಳಲ್ಲಿ ತನ್ನ ನಿಪುಣತೆಯನ್ನು ತೋರಿಸಿ ಅವರಿಂದ ಯಶಸ್ವಿಯಾಗಿ ಕೊಂಡವೀಡು ಮತ್ತು ರಾಜ ಮಹೇಂದ್ರಿಗಳನ್ನು ಆಕ್ರಮಿಸಿಕೊಳ್ಳುವಲ್ಲಿ ಸಫಲನಾದನು. ದಖ್ಖನ್ ಪೂರ್ವ ವಲಯದವರೆಗೂ ಬಹಮನಿ ಸಾಮ್ರಾಜ್ಯವನ್ನು ಗವಾನನು ವಿಸ್ತರಿಸಿದನೆಂದು ಚರಿತ್ರೆಯಿಂದ ತಿಳಿದುಬರುತ್ತದೆ. ಪಶ್ಚಿಮ ವಲಯದಲ್ಲಿ ಅನೇಕ ದಂಡಯಾತ್ರೆಗಳನ್ನು ನಡೆಸಿ ಗವಾನನು ತನ್ನ ನಾಯಕತ್ವದ ಯಶಸ್ಸನ್ನು ಪ್ರದರ್ಶಿಸಿದನು. ಗವಾನನ ಕಾಲದಲ್ಲಿ ಬಹಮನಿ ಸಾಮ್ರಾಜ್ಯದ ಪಶ್ಚಿಮದ ಮತ್ತು ಉತ್ತರದ ಗಡಿಗಳು ಸ್ಥಿರತೆಯನ್ನು ಕಂಡುಕೊಂಡವು. ಕೊಂಕಣ ಮತ್ತು ಖಾನ್ದೇಶದ ಭಾಗಗಳು ಬರೀ ಹೆಸರಿಗೆ ಮಾತ್ರ ಬಹಮನಿ ಸುಲ್ತಾನರ ಪ್ರಭುತ್ವಕ್ಕೆ ಒಳಗಾಗಿದ್ದವು, ಮಹಮ್ಮದ್ ಗವಾನನು ಈ ಪ್ರದೇಶಗಳ ಮೇಲೆ ಆಕ್ರಮಣ ಮಾಡಿ ಅಲ್ಲಿದ್ದಂತಹ ಸ್ಥಳೀಯ ಆಡಳಿತಗಾರರನ್ನು, ಅಧಿಪತಿಗಳನ್ನು ಹತ್ತಿಕ್ಕಿ ಆ ಪ್ರದೇಶಗಳ ಮೇಲೆ ಬಹಮನಿ ಅಧಿಪತ್ಯವನ್ನು ಸಂಪೂರ್ಣವಾಗಿ ಸಾಧಿಸಿದನು. ಈ ರೀತಿಯಾಗಿ ಹುಬ್ಬಳ್ಳಿ, ಖೇಲ್ನಾ ಮತ್ತು ಸಂಗಮೇಶ್ವರಗಳನ್ನು

ವಶಪಡಿಸಿಕೊಳ್ಳುವಲ್ಲಿ ಮಹಮ್ಮದ್ ಗವಾನನು ಸಫಲನಾದನು. ಕ್ರಿ.ಶ.೧೪೬೯ರಲ್ಲಿ ಗವಾನನು ದಕ್ಷಿಣ ಕೊಂಕಣದ ರಾಜ ಸಂಗಮೇಶ್ವರನಿಂದ ಖೇಲ್ನಾ ಕೋಟೆಯನ್ನು ವಶಪಡಿಸಿಕೊಂಡನು. ಕ್ರಿ.ಶ.೧೪೭೨ರಲ್ಲಿ ವಿಜಯನಗರದ ಅರಸರಿಂದ ಗೋವಾವನ್ನು, ಕ್ರಿ.ಶ.೧೪೭೩ರಲ್ಲಿ ಪಶ್ಚಿಮ ದಖ್ಖನಿನ ಪ್ರಮುಖ ದುರ್ಗವಾಗಿದ್ದ ಬೆಳಗಾವಿಯನ್ನು ಬಹಮನಿ ಸುಲ್ತಾನನ ಸೈನ್ಯಗಳು ವಶಪಡಿಸಿಕೊಂಡವು. ಕ್ರಿ.ಶ.೧೪೮೧ರಲ್ಲಿ ಬಹಮನಿ ಸೈನ್ಯವು ಗವಾನನ ನೇತೃತ್ವದಲ್ಲಿ ಕಂಚಿಗೆ ಮುತ್ತಿಗೆ ಹಾಕಿ ಅಪಾರ ಧನ ಸಂಪತ್ತನ್ನು ಲೂಟಿ ಮಾಡಿದರು. ಈ ಎಲ್ಲಾ ದಂಡಯಾತ್ರೆಗಳು ಮಹಮ್ಮದ್ ಗವಾನನ ಮುಖಾಂತರ ನಡೆದು, ಯಶಸ್ವಿಯಾಗಿ ಬಹಮನಿ ಸಾಮ್ರಾಜ್ಯದ ವಿಸ್ತಾರವನ್ನು ಅತ್ಯುನ್ನತ ಮಟ್ಟಕ್ಕೇರಿಸಿದನು. ಶೇರವಾನಿ ಅವರ ಅಭಿಪ್ರಾಯದಂತೆ "ಖ್ವಾಜನು ವಿದೇಶಾಂಗ ನೀತಿಯ ವಲಯಕ್ಕಿಂತಲೂ ಯುದ್ಧ ರಂಗದಲ್ಲಿ ಹೆಚ್ಚು ಯಶಸ್ಸು ಗಳಿಸಿದ್ದನು" ಎಂದು ತಿಳಿದುಬರುತ್ತದೆ.[೩೮]

ಮಹಮದ್ ಗವಾನನು ತನ್ನ ಮೇಧಾವಿತನದಿಂದಲೂ, ಸಮರ್ಥ ಆಡಳಿತ ವೈಖರಿಯಿಂದಲೂ, ವರ್ಚಸ್ಸಿನಿಂದಲೂ, ಗಮನ ಸೆಳೆಯುವ ಸಾಮರ್ಥ್ಯದಿಂದಲೂ, ಚಾಣಾಕ್ಷ ಮುತ್ಸದ್ಧಿತನದಿಂದಲೂ ಮತ್ತು ಯಶಸ್ವಿ ಮಿಲಿಟರಿ ಆಕ್ರಮಣಗಳಿಂದಲೂ ಬಹಮನಿಯ ಹಿಂದಿನ ಸುಲ್ತಾನರಷ್ಟೇ ಸಾಧನೆಯನ್ನು ಮಾಡಿ ಸಮರ್ಥ ವಜೀರನಾಗಿ ಬಹಮನಿ ಸಾಮ್ರಾಜ್ಯದ ಪ್ರಭುತ್ವವನ್ನು ಸುಭದ್ರಗೊಳಿಸಿದನು. ಬಹಮನಿ ಸಾಮ್ರಾಜ್ಯವು ತನ್ನ ಇತಿಹಾಸದಲ್ಲೇ ಕಂಡಿರಲಾರದಷ್ಟು ಉನ್ನತ ಸ್ಥಿತಿಗೇರಿತ್ತು. ಸಾಂಸ್ಕೃತಿಕವಾಗಿ ಬೆಳವಣಿಗೆಯಾದುದಲ್ಲದೇ ಬಹಮನಿ ರಾಜ್ಯವು ಪ್ರಥಮ ಬಾರಿಗೆ ಕೊಂಕಣದವರೆಗೂ ಮತ್ತು ಗೋದಾವರಿ, ಕೃಷ್ಣ, ದೋ-ಅಬ್‌ವರೆಗೂ ವಿಸ್ತಾರವಾಗಿ, ಸಮುದ್ರದಿಂದ ಸಮುದ್ರದವರೆಗೂ ಸಾಮ್ರಾಜ್ಯದ ವಿಸ್ತಾರವನ್ನು ನೋಡಬಹುದು.

ಮಹಮ್ಮದ್ ಗವಾನನು ಕೇವಲ ದಿಗ್ವಿಜಯಿಯಾಗಿರದೆ ಉತ್ತಮ ಆಡಳಿತಗಾರನೂ ಮತ್ತು ಸಮರ್ಥ ದಂಡನಾಯಕನೂ ಆಗಿದ್ದನು. ಈತನು ಸಾಹಿತ್ಯ, ಕಲೆ ಮತ್ತು ಶಿಕ್ಷಣಗಳ ಮಹಾಪೋಷಕನೂ ಸಹ ಆಗಿದ್ದನು. ನಾಲ್ಕು 'ತರಫ್'ಗಳಾಗಿ ವಿಭಾಗವಾಗಿದ್ದ ಬಹಮನಿ ಸಾಮ್ರಾಜ್ಯವನ್ನು ಎಂಟು 'ತರಫ್'ಗಳಾಗಿ ಪುನರ್ ವಿಭಜನೆ ಮಾಡಿದನು. ರಾಜ್ಯದ ಸಂಪೂರ್ಣ ಆಡಳಿತವನ್ನು ಸುಲ್ತಾನನ ಕೈಯಲ್ಲಿ ಕೇಂದ್ರೀಕರಿಸಿ ಪ್ರಾಂತೀಯ ಅಧಿಕಾರಿಗಳ ನಿರಂಕುಶತ್ವಕ್ಕೆ ಕಡಿವಾಣ ಹಾಕಿದನು.[೩೯] ಪ್ರಾಂತಾಧಿಕಾರಿಗಳ ಜಹಗೀರುಗಳನ್ನು ರದ್ದುಗೊಳಿಸಿ ಅವರಿಗೆ ನೇರವಾಗಿ ಸಂಭಾವನೆ ಕೊಡುವಂತಹ ಪದ್ಧತಿಯನ್ನು ಜಾರಿಗೆ ತಂದನು. ಪ್ರತಿಯೊಂದು 'ತರಫ್'ನಲ್ಲಿಯೂ ಸುಭದ್ರವಾದ ಕೋಟೆಗಳನ್ನು ನಿರ್ಮಿಸಿ ಸಶಕ್ತವಾದ ಸೈನಿಕ ತುಕಡಿಗಳನ್ನು ನೆಲೆಗೊಳಿಸಿದನು. ಹಳೆಯ ಭೂಕಂದಾಯ ಪದ್ಧತಿಯನ್ನು ಸುಧಾರಣೆ ಮಾಡಿ ಹೊಸ ಪದ್ಧತಿ ಮತ್ತು ವ್ಯವಸ್ಥೆಯನ್ನು ಜಾರಿಗೆ ತಂದನು. ಪ್ರತಿ ಗ್ರಾಮದ ಭೂಮಿಯನ್ನು ಮಾಪನ ಮಾಡಿ ಕಂದಾಯವನ್ನು ಭೂಮಿಯ ಫಲವತ್ತತೆ, ನೀರಿನ ಸೌಲಭ್ಯ ಮತ್ತು ಮಾರುಕಟ್ಟೆ ಸೌಲಭ್ಯಗಳಿಗೆ ಅನುಗುಣವಾಗಿ ಪುನರ್ ವ್ಯವಸ್ಥೆ ಮಾಡಿದನು. ಸೇನಾ ವ್ಯವಸ್ಥೆಯನ್ನು ಪುನರ್‌ರಚಿಸಿ, ಸಶಕ್ತಗೊಳಿಸಿ, ಸುಧಾರಿಸಿ ನೇರವಾಗಿ ಮತ್ತು ಸಂಪೂರ್ಣವಾಗಿ ಸುಲ್ತಾನನ ಹತೋಟಿಗೆ ಒಳಪಡುವಂತೆ ಮಾಡಿದನು. ಈ ಕಾರ್ಯದ ಉದ್ದೇಶ ಮುಸ್ಲಿಂ ಶ್ರೀಮಂತ ವರ್ಗದವರ ಅಧಿಕಾರ ಮತ್ತು ಪ್ರಭಾವಗಳನ್ನು ಕಡಿಮೆ ಮಾಡುವುದಾಗಿತ್ತು.

ಈತನು ಆಡಳಿತದಲ್ಲಿ ಹಲವಾರು ಇಲಾಖೆಗಳನ್ನು ರಚಿಸಿ ಅನೇಕ ಸುಧಾರಣೆಗಳನ್ನು ಜಾರಿಗೆ ತಂದನು. ಆಡಳಿತದಲ್ಲಿ ಜಾರಿಗೆ ತಂದ ಹೊಸ ಹುದ್ದೆಗಳು ಈ ಕೆಳಗಿನಂತಿವೆ.

೧. ವಕೀಲ್(ಪ್ರಧಾನಮಂತ್ರಿ)

೨. ವಜೀರ್(ಆರ್ಥಿಕ ಮಂತ್ರಿ)

೩. ಸದರ್ ಜಹಾನ್(ಕಾನೂನು ಮಂತ್ರಿ)

೪. ಸಾಹಿಬ್ ಈ ಅರ್ಜ್(ದಂಡ ನಾಯಕನು)

೫. ದೀವಾನ್ ದಮ್‌ದಾರ್(ಮುದ್ರಾಧಿಕಾರಿ)

೬. ದಾಬಿರ್(ಆಡಳಿತ ಕಾರ್ಯದರ್ಶಿ) ಮತ್ತು

೭. ನಜೀಮ್ ಈ ಹಿಸಾಬತ್(ಲೆಕ್ಕಪತ್ರಾಧಿಕಾರಿ)

ಈ ಎಲ್ಲಾ ಅಧಿಕಾರಿಗಳು ಸುಲ್ತಾನನಿಗೆ ರಾಜ್ಯಾಡಳಿತದಲ್ಲಿ ನೆರವಾಗುತ್ತಿದ್ದರು. ಪ್ರಾಂತಗಳ ಆಡಳಿತವನ್ನು ಪುನರ್ ರಚಿಸಿ ರಾಜ್ಯವನ್ನು ಎಂಡು ಭಾಗಗಳನ್ನಾಗಿ ವಿಂಗಡಿಸಲಾಯಿತು. ಪ್ರಾಮಾಣಿಕರೂ, ದಕ್ಷರೂ ಆದಂತಹ ವ್ಯಕ್ತಿಗಳನ್ನು ಪ್ರಾಂತಾಧಿಕಾರಿಗಳನ್ನಾಗಿ ನೇಮಿಸಲಾಯಿತು. ಪ್ರಾಂತಾಧಿಕಾರಿಗಳಾಗಿದ್ದ ಅಧಿಕಾರಿಗಳು ಈ ಕೆಳಗಿನಂತ್ತಿದ್ದರು.

೧. ತರಫ್‌ದಾರ್(ರಾಜ್ಯಪಾಲ)

೨. ಅನಿಫ್(ಜಿಲ್ಲಾಧಿಕಾರಿ)

೩. ಜಾಗೀರ್ದಾರ(ಪಾಳೆಗಾರ)

೪. ಖಿಲ್ಲೆದಾರ(ಕಿರು ಪ್ರಾಂತಾಧಿಕಾರಿ)

೫. ದೇಸಾಯಿ(ಹಿಂದೂ ಜಹಗೀರದಾರ)

೬. ಕೊತ್ವಾಲ್(ನಗರಾಧಿಕಾರಿ)

೭. ಮುಗ್ಧಂ(ಗ್ರಾಮಾಧಿಕಾರಿ)

ಹಿಂದಿನ ಬಹಮನಿ ಸುಲ್ತಾನರು ನಿರಂತರವಾಗಿ ವಿಜಯನಗರ ಅರಸರ ವಿರುದ್ಧ ಯುದ್ಧಗಳಲ್ಲಿ ಮತ್ತು ಕಲಹಗಳಲ್ಲಿ ನಿರತರಾಗಿದ್ದುದರಿಂದ ಆಡಳಿತದ ಕಡೆ ಅಷ್ಟೊಂದು ಗಮನವಹಿಸಿರಲಿಲ್ಲ. ಈಗ ಆಡಳಿತಾಧಿಕಾರಿಯಾಗಿರುವ ಗವಾನನು ಹಣಕಾಸು, ನ್ಯಾಯಾಡಳಿತ ಮತ್ತು ಶಿಕ್ಷಣ ಕ್ಷೇತ್ರಗಳನ್ನು ಪರಾಮರ್ಶಿಸಿದನು. ಪ್ರಾಂತ್ಯಗಳ ಸಂಖ್ಯೆಗಳನ್ನೂ ಹೆಚ್ಚಿಸುವುದಷ್ಟೇ ಅಲ್ಲದೆ ಪ್ರಾಂತಾಧಿಕಾರಿಗಳ ಹೆಚ್ಚಿನ ಅಧಿಕಾರವನ್ನು ಮೊಟಕುಗೊಳಿಸಿ ಕೇಂದ್ರಾಡಳಿತವನ್ನು ಬಲಪಡಿಸಿದನು. ಪ್ರಾಂತೀಯ ಸರದಾರರ ಪರಸ್ಪರ ಅಸೂಯೆ ಮತ್ತು ಸೆಣಸಾಟಗಳನ್ನು ನಿಗ್ರಹದಲ್ಲಿಡಲು ಈ ಕ್ರಮ ಕೈಗೊಂಡನು. ಬಹಮನಿ ಸುಲ್ತಾನರ ವಿರುದ್ಧವಿದ್ದ ಗುಂಪುಗಳನ್ನು ತನ್ನ ನಿಯಂತ್ರಣದಲ್ಲಿಟ್ಟುಕೊಂಡಿದ್ದನು. ಮಿಲಿಟರಿ ಅಥವಾ ಸೈನಿಕ ವ್ಯವಸ್ಥೆಯನ್ನು ಒಂದು ವ್ಯವಸ್ಥಿತ ರೂಪದಲ್ಲಿಟ್ಟು, ಸೈನಿಕರಿಗೆ ಉತ್ತಮ ಪಗಾರ(ವೇತನ)ವನ್ನು ಕೊಟ್ಟು ಅವರಿಗೆ ಬೇಕಾದಂತಹ ಎಲ್ಲಾ ಸೌಲಭ್ಯಗಳನ್ನು ಒದಗುವಂತೆ ಮಾಡಿದನು. ಇವೆಲ್ಲವುಗಳಿಗಿಂತಲೂ ಹೆಚ್ಚಾಗಿ ಸೈನ್ಯದಲ್ಲಿ ಶಿಸ್ತಿಗೆ ಹೆಚ್ಚಿನ ಮಹತ್ವವನ್ನು ನೀಡಿದನು. ಹಿಂದಿನ ಬಹಮನಿ ಸುಲ್ತಾನರಿಂದ ಸೈನ್ಯದ ಅಧಿಕಾರವನ್ನು ತಕ್ಕ ಮಟ್ಟಿಗೆ ಕಸಿದುಕೊಂಡಿದ್ದ ಜಹಗೀರದಾರರಿಂದ ಪುನಃ ಮಿಲಿಟರಿ ಅಧಿಕಾರವನ್ನು ಕೇಂದ್ರದ ಅಂದರೆ ಸುಲ್ತಾನನ ಅಧಿಪತ್ಯಕ್ಕೆ ಒಳಪಡುವಂತೆ ಮಾಡಿದನು. ಈ ರೀತಿಯಾಗಿ ಮಹಮ್ಮದ್ ಗವಾನನು ಬಹಮನಿ ಸೈನ್ಯ ವ್ಯವಸ್ಥೆಗೆ ಒಂದು ಹೊಸ ರೂಪವನ್ನೇ ಕೊಟ್ಟನು.

ಮಹಮ್ಮದ್ ಗವಾನನು ಸುಸಂಸ್ಕೃತ ಮತ್ತು ಸುಶಿಕ್ಷಿತ ವ್ಯಕ್ತಿಯಾಗಿದ್ದು ಸಾಹಿತ್ಯ, ಕಲೆ, ಶಿಕ್ಷಣ ಮುಂತಾದವುಗಳಿಗೆ ಉದಾರವಾಗಿ ನೆರವು ನೀಡಿದ್ದನು. ವಿವಿಧ ಕವಿಗಳಿಗೆ ಮತ್ತು ವಿದ್ವಾಂಸರಿಗೆ ಬಹಮನಿ ಸಾಮ್ರಾಜ್ಯದ ಆಸ್ಥಾನದಲ್ಲಿ ಆಶ್ರಯ ಕೊಡಿಸಿದ್ದನು. ಶಿಕ್ಷಣದ ಪ್ರಸಾರಕ್ಕಾಗಿ ಹಲವಾರು ಕಡೆ 'ಮದರಸಾ'ಗಳನ್ನು ತೆರೆಯಲು ಪ್ರಾರಂಭಿಸಿದ್ದನು, ಈ ಮದರಸಾಗಳ ಪೈಕಿ ಈತನು ಬೀದರ್‌ನಲ್ಲಿ ಪ್ರಾರಂಭಿಸಿದ ಮದರಸಾವು 'ಗವಾನ ಮದರಸಾ'ವೆಂದೇ ಪ್ರಖ್ಯಾತವಾಗಿದ್ದು, ಈ ಮದರಸಾದ ಕಟ್ಟಡವು ಬಹಮನಿ ವಾಸ್ತುಶಿಲ್ಪ ಕೃತಿ ಗಳಲ್ಲೇ ಭವ್ಯ ಕಲಾಕೃತಿ ಎನಿಸಿದೆ. ಈ ಕಟ್ಟಡವು ಅಂದಿನ ಪ್ರಖ್ಯಾತ ಶಿಕ್ಷಣ ಕೇಂದ್ರವಾಗಿದ್ದು, ಅನೇಕ ಶಿಕ್ಷಣಾರ್ಥಿಗಳಿಗೆ ಮತ್ತು ಶಿಕ್ಷಕರಿಗೆ ಉಚಿತವಾಗಿ ಶಿಕ್ಷಣ, ವಸತಿ ಮತ್ತು ಊಟಗಳನ್ನು ಒದಗಿಸುತ್ತಿತ್ತು. ಈ ಮದರಸಾದ ಗ್ರಂಥಾಲಯದಲ್ಲಿ ಸುಮಾರು ಮೂರು ಸಾವಿರಕ್ಕೂ ಹೆಚ್ಚು ಲಿಖಿತ ಕೃತಿಗಳಿದ್ದವೆಂದು ತಿಳಿದುಬರುತ್ತದೆ. ಮಹಮ್ಮದ್ ಗವಾನನು ವ್ಯವಸಾಯಕ್ಕೆ ಅಪರಿಮಿತ ಪ್ರೋತ್ಸಾಹವನ್ನು ನೀಡಿದನು. ನೀರಾವರಿ ವ್ಯವಸ್ಥೆಯನ್ನು ಸುಗಮಗೊಳಿಸಿ ರೈತರಿಗೆ ಯಾವುದೇ ರೀತಿಯ ಕಿರುಕುಳ ಮತ್ತು ಕಷ್ಟಗಳು ಆಗದಂತೆ ನೋಡಿಕೊಳ್ಳುವಂತೆ ಅಧಿಕಾರಿಗಳಿಗೆ ಆಜ್ಞಾಪಿಸಿದನು. ರೈತರಿಗೆ ಭಾರವೆನಿಸುವ ಹಲವಾರು ತೆರಿಗೆಗಳನ್ನು ರದ್ದುಗೊಳಿಸಿ ಅವರಿಗೆ ಅನುಕೂಲವಾಗುವಂತೆ ಹಣಕಾಸಿನ ವ್ಯವಸ್ಥೆಯನ್ನು ಸುಧಾರಿಸಿ ಅನಗತ್ಯವಾದ ಖರ್ಚು ವೆಚ್ಚಗಳನ್ನು ನಿಲ್ಲಿಸಿದನು. ಬಹಮನಿ ರಾಜ್ಯದ ಒಳಿತಿಗಾಗಿ ಆಗಬೇಕಾದಂತಹ ಉತ್ತಮ ಕಾರ್ಯ ಗಳನ್ನೆಲ್ಲವನ್ನೂ ಕೈಗೊಂಡು ತನ್ನ ಜೀವಿತ ಕಾಲದಲ್ಲಿ ಗವಾನನು ಬಹಮನಿ ರಾಜ್ಯದಲ್ಲಿ ಕಾನೂನು, ಸುವ್ಯವಸ್ಥೆ ಮತ್ತು ಶಿಸ್ತು ನೆಲೆಸುವಂತೆ ಮಾಡಿದನು. ಮಹಮ್ಮದ್ ಗವಾನನು ಕಲಾ ಪೋಷಕನು ಮತ್ತು ಸಾಹಿತ್ಯ ಪೋಷಕನೂ ಆಗಿದ್ದನು, ಈತನು ನಿರ್ಮಿಸಿದ ಅನೇಕ ಗೋಪುರ ಮತ್ತು ಅದ್ದೂರಿ ಕಮಾನುಗಳನ್ನು ಬೀದರ್‌ನಲ್ಲಿ ಕಾಣಬಹುದು. ಈತನು ಬೀದರ್‌ನಲ್ಲಿ ಕ್ರಿ.ಶ.೧೪೭೨ರಲ್ಲಿ ನಿರ್ಮಿಸಿದ, ಮೂರು ಅಂತಸ್ತುಗಳನ್ನು ಹೊಂದಿದ್ದ ಕಾಲೇಜು 'ಮಹಮ್ಮದ್ ಗವಾನ ಮದರಸಾ' ಎಂದು ಹೆಸರು ಪಡೆದಿತ್ತು. ಇಲ್ಲಿ ಗಣಿತಶಾಸ್ತ್ರ, ವೈದ್ಯಕೀಯ ಮತ್ತು ವಿಜ್ಞಾನಕ್ಕೆ ಸಂಬಂಧಿಸಿದ ವಿಷಯಗಳನ್ನು ಕಲಿಸಲಾಗುತ್ತಿತ್ತು. ಸ್ವತಃ ಕವಿಯು ಮತ್ತು ಪಂಡಿತನಾಗಿದ್ದ ಗವಾನನು 'ದಿವಾನ್-ಇ-ಅಶ್ರಾ' ಮತ್ತು 'ರೌಜತ್-ಉಲ್-ಇನ್ಸಾ' ಎಂಬ ಕೃತಿಗಳನ್ನು ರಚಿಸಿರುವನು.

ಮಹಮ್ಮದ್ ಗವಾನನು ಅಧಿಕಾರದ ಉತ್ತುಂಗ ಶಿಖರವನ್ನೇರಿದ್ದರೂ ಸಹ ಅತ್ಯಂತ ಸರಳ ಜೀವನವನ್ನು ನಡೆಸಿದನು, ಸದಾ ಕಾಲ ಬಡವರ ಹಿತವನ್ನೇ ಬಯಸುತ್ತಿದ್ದನು. ನೀತಿವಂತನಾದ ಇವನ ಗುಣವು ಎಲ್ಲಾ ವಿಧವಾದ ಲೋಭಗಳನ್ನು ಜಯಿಸುವಲ್ಲಿ ಯಶಸ್ವಿಯಾಯಿತು. ಗವಾನನು ತನ್ನ ಜೀವನವನ್ನೇ ದೇಶದ ಮತ್ತು ಬಹಮನಿ ಸುಲ್ತಾನರ ಹಿತಕ್ಕಾಗಿ ಮುಡುಪಾಗಿಟ್ಟನು. ಇತಿಹಾಸಕಾರರ ಪ್ರಕಾರ ಹಿಂಸೆ, ರಕ್ತಪಾತ ಮತ್ತು ಮದ್ಯಪಾನಗಳಂತಹ ಕೆಟ್ಟ ದುಶ್ಚಟಗಳಿಂದ ಆವೃತ್ತವಾಗಿದ್ದ ಬೀದರ್‌ನ ಆಸ್ಥಾನದಲ್ಲಿ ನಿಷ್ಕಲ್ಮಶವು, ಸರಳವು ಮತ್ತು ಜನಹಿತ ಪರವಾದ ಕಾರ್ಯಗಳಲ್ಲಿಯೇ ಆಸಕ್ತಿ ವಹಿಸಿದ್ದ ಪ್ರಖ್ಯಾತ ವಜೀರನಾದ ಗವಾನನ ಜೀವನವನ್ನು ಗಮನಿಸಿದಾಗ, ಬಹಮನಿ ಸಾಮ್ರಾಜ್ಯದ ಏಳ್ಗೆಯು ನಿಸ್ಸಂದೇಹವಾಗಿ ಮಹಮ್ಮದ್ ಗವಾನನಿಂದಲೇ ಆಯಿತೆಂದು ಹೇಳಬಹುದು.

ಮಹಮ್ಮದ್ ಗವಾನನ ತ್ವರಿತ ಏಳ್ಗೆ, ಅದ್ವಿತೀಯ ಸ್ಥಾನಮಾನ, ಅಧಿಕಾರ-ಪ್ರಭಾವಗಳು, ವಿಚಕ್ಷಣತೆಯ ಆಡಳಿತ ಹಾಗೂ ಬಹಮನಿ ಸರಕಾರದ ಮೇಲಿನ ಆತನ ಹತೋಟಿ ಈ ಎಲ್ಲವೂ ದಖ್ಖನ್ ಸರದಾರರಿಗೆ ಮತ್ತು ಶ್ರೀಮಂತರಿಗೆ ಅಸೂಯೆ, ದ್ವೇಷ ಮತ್ತು ಕೋಪವನ್ನುಂಟು ಮಾಡಿದವು. ದಖ್ಖನ್ ಆಮೀರರು ಮತ್ತು ಪರದೇಶಿ ಸರದಾರರ ನಡುವೆ ಬದ್ಧ ದ್ವೇಷ ಬೆಳೆದಿದ್ದರೂ ಸಹ ಅದನ್ನು ಗವಾನನು ಕುಶಲ ಬುದ್ಧಿಯಿಂದ ಸ್ವಲ್ಪ ಕಾಲದಮಟ್ಟಿಗೆ ಎರಡೂ ಪಕ್ಷಗಳನ್ನು ಹತೋಟಿಯಲ್ಲಿಟ್ಟಿದನು. ಆದರೆ ಕ್ರೂರಿಗಳಾದ

ದಖ್ಖನ್‌ನ ಸರದಾರರು ಗವಾನನನ್ನು ಕೊಲೆ ಮಾಡುವ ಸಂಚನ್ನು ರೂಪಿಸಿದರು. ಗವಾನನ ಸಹಿಯ ಮುದ್ರೆಯನ್ನು ಇಟ್ಟುಕೊಂಡಿದ್ದ ಅಧಿಕಾರಿಯನ್ನು ಲಂಚ ಕೊಟ್ಟು ತಮ್ಮತ್ತ ಒಲಿಸಿಕೊಂಡು, ಗವಾನನು ಬರೆಯದೇ ಇದ್ದಂತಹ ಪತ್ರದ ಮೇಲೆ ಗವಾನನ ಮುದ್ರೆಯನ್ನು ಒತ್ತಿಸಿ, ನಂತರದಲ್ಲಿ ಆ ಪತ್ರದಲ್ಲಿ ಗವಾನನು ಒರಿಸ್ಸಾದ ರಾಜ ಪುರುಷೋತ್ತಮನಿಗೆ ಬಹಮನಿ ರಾಜ್ಯದ ಮೇಲೆ ಆಕ್ರಮಣ ಮಾಡುವಂತೆ ಬರೆದ ರಾಜದ್ರೋಹ ಪತ್ರವನ್ನು ತಯಾರಿಸಿ, ಇದನ್ನು ಬಹಮನಿ ಸುಲ್ತಾನನಿಗೆ ತೋರಿಸಿದರು. ಹಿಂದು ಮುಂದು ವಿಚಾರಿಸದೆ, ಸುಲ್ತಾನನು ಮಧ್ಯದ ಅಮಲಿನಲ್ಲಿದ್ದುದರಿಂದ ವಿವೇಚನೆ ಮಾಡದೆ, ಗವಾನನ ಶತ್ರುಗಳ ಮಾತನ್ನು ನಂಬಿ ಗವಾನನಿಗೆ ಮರಣ ದಂಡಣೆಯನ್ನು ವಿಧಿಸಿದನು. ಸುಲ್ತಾನನ ಆಜ್ಞೆಯನ್ನು ಶಾಂತ ಚಿತ್ತದಿಂದ ಸ್ವೀಕರಿಸಿದ ಮಹಮ್ಮದ್ ಗವಾನನು ಈ ರೀತಿ ಮಾತನಾಡಿದನು "ನನ್ನಂತಹ ಮುದುಕನ ಮರಣ ಅಷ್ಟೇನು ಪ್ರಾಮುಖ್ಯವಲ್ಲ, ಆದರೆ ನಿನಗೆ ಇದು ನಿನ್ನ ಸಾಮ್ರಾಜ್ಯದ ಮತ್ತು ವೈಭವದ ಅಂತ್ಯವಾಗಿ ಪರಿಣಮಿಸುತ್ತದೆ",[೪೦] ಇವನ ಈ ಅಂತಿಮ ನುಡಿಗಳು ನಿಜವಾಗಿ ಸುಲ್ತಾನನಿಗೆ ತನ್ನ ತಪ್ಪಿನ ಅರಿವಾಗುವುದರಲ್ಲಿಯೇ ಕಾಲ ಮಿಂಚಿ ಹೋಗಿದ್ದಿತು. ಸುಲ್ತಾನ್ ಮಹಮ್ಮದ್‌ಷಾನ ಆಜ್ಞೆಯಂತೆ ದಿನಾಂಕ: ೫.೪.೧೪೮೧ ರಂದು ಮಹಮ್ಮದ್ ಗವಾನನನ್ನು ಕೂಡಲೇ ಗಲ್ಲಿಗೇರಿಸಲಾಯಿತು. ಸುಲ್ತಾನನ ಈ ಮತಿಹೀನ ಅಪರಾಧದಿಂದ ಬಹಮನಿ ಸಾಮ್ರಾಜ್ಯವೇ ನಾಶವಾಯಿತು. ಈ ರೀತಿಯಾಗಿ ಮಹಾ ಧೀಮಂತನಾಗಿದ್ದಂತಹ ಮಹಮ್ಮದ್ ಗವಾನನ ಬದುಕು ಬಹಮನಿ ಸಾಮ್ರಾಜ್ಯದ ಏಳ್ಗೆಗಾಗಿ ನಿಷ್ಠೆಯಿಂದ ದುಡಿದು ಅಂತ್ಯದಲ್ಲಿ ದುರಂತದಲ್ಲಿ ಕೊನೆಗೊಂಡಿತು. ಅವನ ಸಮಾಧಿ ಬೀದರ್‌ಗೆ ಸುಮಾರು ೫ ಕಿ.ಮೀ. ದೂರದಲ್ಲಿರುವ ಗುರ್‍ನಳ್ಳಿಯಲ್ಲಿರುವ ಮಕ್ತುಲ್ ಭಾಷನ ಘೋರಿ ಗವಾನನೆಂದು ಹೇಳಲಾಗಿದೆ. ಅಚ್ಚರಿಯೆಂದರೆ ಘೋರಿಯ ಮೇಲೆ ಬೀಳುವ ಅವುಗಳ ನೆರಳು ಗವಾನನು ಜೀವನದಲ್ಲಿ ಉಂಡ ಕಹಿ ಮತ್ತು ಸಿಹಿ ಪ್ರತೀಕವಾಗಿದೆ. ಭ್ರಾಂತಿಗೊಳಗಾದ ಸುಲ್ತಾನನು ಬಹುಬೇಗನೆ ತಾನು ಮೋಸಗೊಳಿಸಲ್ಪಟ್ಟೆನೆಂದು ತಿಳಿದು ಅತ್ಯಂತ ದುಃಖತಪ್ತನಾಗಿ ಮಹಮ್ಮದ್ ಗವಾನನ ಮರಣಾನಂತರದ ಕೇವಲ ಒಂದು ವರ್ಷದಲ್ಲಿ ಅವನ ಕೊರಗಿನಲ್ಲಿಯೇ ತನ್ನ ೨೯ನೇ ವಯಸ್ಸಿನಲ್ಲಿ ಸುಲ್ತಾನನು ಕಾಲವಶನಾದನು. ಈ ರೀತಿಯಾಗಿ ಬಹಮನಿ ಸಾಮ್ರಾಜ್ಯದ ಇತಿಹಾಸದಲ್ಲಿಯೇ ವಜೀರನಾಗಿದ್ದ ಮಹಮ್ಮದ್ ಗವಾನನು ಪ್ರಥಮ ಸ್ಥಾನವನ್ನು ಪಡೆದಿರುವುದು ಪ್ರಸ್ತುತ ಅಧ್ಯಾಯದಲ್ಲಿ ನೋಡಬಹುದು.

### ೨.೩. ಬಹಮನಿ ರಾಜ್ಯದ ಆಡಳಿತ ವ್ಯವಸ್ಥೆ

ಬಹಮನಿ ಸುಲ್ತಾನರು ಕೇವಲ ಕಲಹ ಪ್ರೀಯರು ಮತ್ತು ರಕ್ತಸಿಕ್ತ ಆಡಳಿತಾಕಾರರೆಂದು ಹೆಸರುವಾಸಿಯಾಗಿದ್ದಾರೆ ಎಂದು ನಾವು ತಿಳಿದಿದ್ದೇವೆ. ಆದರೆ ದಖ್ಖನ್ ಸಂಸ್ಕೃತಿಯಲ್ಲಿ ಬಹಮನಿ ಸಾಮ್ರಾಜ್ಯದ ಸುಲ್ತಾನರ ಕೊಡುಗೆ ಅವರ ಕಲಹದಷ್ಟೇ ಮಹತ್ವಪೂರ್ಣವೆನಿಸಿಕೊಂಡಿದೆ. ಬಹಮನಿ ಸುಲ್ತಾನರ ಕೊಡುಗೆ ಸಮಾಜದ ವಿವಿಧ ವ್ಯವಸ್ಥೆಗಳಲ್ಲಿ ಕಂಡುಬಂದಿದೆ, ಅವುಗಳೆಂದರೆ ಧರ್ಮ, ಕಲೆ, ಸಮಾಜ, ಅರ್ಥವ್ಯವಸ್ಥೆ, ಆಡಳಿತ ವ್ಯವಸ್ಥೆ ಮುಂತಾದವುಗಳಲ್ಲಿ ದಖ್ಖನ್‌ನ ಸುಲ್ತಾನರು ತಮ್ಮದೇ ಆದ ಛಾಪನ್ನು ಮೂಡಿಸಿದ್ದಾರೆ. ಬಹಮನಿ ಸುಲ್ತಾನರ ಕಾಲದಲ್ಲಿದ್ದ ಸಾಮಾಜಿಕ ವ್ಯವಸ್ಥೆಗಳನ್ನು ಈ ಕೆಳಗಿನಂತೆ ವಿಸ್ತೃತವಾಗಿ ವಿವರಿಸಲಾಗಿದೆ.

#### ೨.೩.೧. ಆಡಳಿತ ವ್ಯವಸ್ಥೆ

ಬಹಮನಿ ಸುಲ್ತಾನರು ತುಘಲಕ್‌ರ ಆಡಳಿತ ಪದ್ಧತಿಯನ್ನೇ ದಖ್ಖನ್‌ನಲ್ಲಿ ಮುಂದುವರೆಸಿದರು. ಆಡಳಿತದ ಲಕ್ಷಣ ಅರಸೊತ್ತಿಗೆ ಆಗಿತ್ತು. ಮುಸ್ಲಿಂ ಆಡಳಿತ ವ್ಯವಸ್ಥೆಯಲ್ಲಿ ಉತ್ತರಾಧಿಕಾರಿ ಪದ್ಧತಿ ಇರಲಿಲ್ಲ,

ಯಾರು ಪ್ರಬಲರು ಮತ್ತು ಸಮರ್ಥರಾಗಿರುತ್ತಿದ್ದರೋ ಅವರೇ ಆಡಳಿತದ ಜವಾಬ್ದಾರಿಯನ್ನು ಹೊರುತ್ತಿದ್ದರು. ದಖ್ಖನ್ ಸಾಮ್ರಾಜ್ಯದಲ್ಲಿ ಸಾಮಾಜಿಕ ವ್ಯವಸ್ಥೆ ಸಂಪೂರ್ಣವಾಗಿ ಇಸ್ಲಾಮೀಕರಣಗೊಂಡಿರಲಿಲ್ಲ. ಬಹಮನಿ ಸಾಮ್ರಾಜ್ಯದ ಸ್ಥಾಪಕನಾದ ಹಸನ್ ಗಂಗು ತನ್ನ ಆಸ್ಥಾನದಲ್ಲಿ ಹಿಂದೂಗಳನ್ನೂ ಸಹ ಉತ್ತಮ ಹುದ್ದೆಗಳಿಗೆ ನೇಮಿಸಿಕೊಂಡಿದ್ದನು. ಇಡೀ ರಾಜ್ಯವನ್ನು 'ತರಫ್'ಗಳಾಗಿ[೪೧] ವಿಭಾಗಿಸಿ ಅವುಗಳ ಆಡಳಿತದ ಜವಾಬ್ದಾರಿಯನ್ನು ಆಮೀರರಿಗೆ ಒಪ್ಪಿಸಿದ್ದನು. ಜಹಗೀರನ್ನು ಕೈ ಬಿಡುವ ಮೂಲಕ ಫ್ಯೂಡಲ್ ಆಡಳಿತ ವ್ಯವಸ್ಥೆಯನ್ನು ಸ್ಥಾಪಿಸಿ ಅದರ ಉಸ್ತುವಾರಿಗೆ ಸೈನ್ಯವನ್ನು ನೆಲೆಗೊಳಿಸಿದನು. ಸೈಫುದ್ದೀನ್ ಘೋರಿಯನ್ನು ಪ್ರಧಾನಿಯನ್ನಾಗಿ ಮಾಡಿ ರಾಜ್ಯವನ್ನು ವಿಸ್ತರಿಸಿದನು. ರಾಜಧಾನಿ ಗುಲ್ಬರ್ಗಾವನ್ನು ಒಳಗೊಂಡಂತೆ ದೌಲತಾಬಾದಿನ ಆಜ್ಞೇಯ ಭಾಗಗಳು ಮತ್ತು ರಾಯಚೂರಿನಿಂದ ಮುದುಗಲ್‌ವರೆಗೂ ಆಡಳಿತವು ಸಂಘಟಿತಗೊಂಡಿತು. ಬೀದರ್, ಪಟನ್‌ಗಳ ಸುತ್ತಲಿನ ಪ್ರದೇಶಗಳ ನಿರ್ವಹಣೆಯನ್ನು ಮಹಮ್ಮದ್‌ಖಾನ್‌ನಿಗೆ ಮತ್ತು ಮಾಹೂರ್, ರಾಮ್‌ಗೀರ್, ಬೇರಾರ್ ಪ್ರದೇಶಗಳ ನಿರ್ವಹಣೆಯನ್ನು ಶಿಸ್ತಾನಿಯಾ ಎಂಬುವವನಿಗೆ ವಹಿಸಿದನು. ಬೀದರ್, ಕಲ್ವಾಸ್ ಮತ್ತು ತೆಲಂಗಾಣದ ಕೆಲವು ಪ್ರದೇಶಗಳನ್ನು ಆಜಂ ಹುಮಾಯನ್‌ನು ನಿರ್ವಹಿಸುತ್ತಿದ್ದನು. ಸುಲ್ತಾನರು ತಮ್ಮ ಉತ್ತರಾಧಿಕಾರಿಗಳನ್ನು ತಾವೇ ನೇಮಿಸುತ್ತಿದ್ದರು. ಒಂದು ವೇಳೆ ಪಟ್ಟಕ್ಕೇರಿದ ಸುಲ್ತಾನನು ಅಪ್ರಾಪ್ತನಾಗಿದ್ದರೆ ಅವನ ಪರವಾಗಿ ಪ್ರಧಾನಿಯೇ ಆಡಳಿತವನ್ನು ನಿರ್ವಹಿಸುತ್ತಿದ್ದನು. ಅನೇಕ ಸಲ ಸುಲ್ತಾನರ ತಾಯಿಯರಾದ ವಿಧವೆ ರಾಣಿಯರೂ ಸಹ ಆಡಳಿತದಲ್ಲಿ ಮಹತ್ವವಾದ ಪಾತ್ರವನ್ನು ವಹಿಸಿರುವುದು ಕಂಡುಬರುತ್ತದೆ.

ಅಲ್ಲಾವುದ್ದೀನ್-ಹಸನ್ ಗಂಗೂ ಬಹಮನ್‌ಷಾ ಗುಲ್ಬರ್ಗಾವನ್ನು ರಾಜಧಾನಿಯನ್ನಾಗಿ ಮಾಡಿಕೊಂಡನೆಂದು ಹೇಳುತ್ತವೆ. ಗುಲ್ಬರ್ಗಾ ಮಸೀದಿಯಲ್ಲಿ ಪರ್ಷಿಯನ್ ಶಾಸನ ಹೇಳುವ ಪ್ರಕಾರ ಈತನಿಗೆ 'ಸಿಖಂದರ್-ಇ-ಸಾನಿ-ಅಲ್-ಉದ್-ದೀನ್ ಬಹಮನ್‌ಷಾ ಆಲ-ವಲಿ ಎಂಬ ಬಿರುದು ಜೊತೆಗೆ ರಾಜ್ಯವನ್ನು ೪ ತರಫ್ ಅಥವಾ ವಿಭಾಗ ಅವುಗಳ ದಾಬೋಲದರೆಗಿನ ಮತ್ತು ಕೃಷ್ಣ ತುಂಗಾಭದ್ರಾ ಪ್ರದೇಶವನ್ನೊಳಗೊಂಡ ಅಹಸನಬಾದ್-ಗುಲ್ಬರ್ಗಾ, ದೌಲತಾಬಾದ್, ಬೀದರ್, ಕಂದಹಾರ ಪದೇಶದಿಂದ ಕೂಡಿತ್ತು ಎಂದು ನೋಡಬಹುದು.[೪೨]

ಬಹಮನಿ ಸಾಮ್ರಾಜ್ಯದ ಆಡಳಿತ ವ್ಯವಸ್ಥೆಯಲ್ಲಿ ಸುಲ್ತಾನನೇ ಕೇಂದ್ರ ಬಿಂದುವಾಗಿದ್ದು, ಆಡಳಿತ ಮತ್ತು ನ್ಯಾಯಾಂಗ ವ್ಯವಸ್ಥೆಗಳ ಮುಖ್ಯಸ್ಥನೂ ಸಹ ಆಗಿದ್ದನು. ಸುಲ್ತಾನನದೇ ರಾಜ್ಯವಾಗಿದ್ದರಿಂದ ಅವನ ಅಭಿಪ್ರಾಯಗಳೇ ಸರಕಾರವಾಗಿ ಸುಲ್ತಾನನು ತನ್ನ ಸಹಾಯಕ್ಕೆ ಮಂತ್ರಿ ಪರಿಷತ್ತನ್ನು ನೇಮಿಸಿಕೊಂಡಿದ್ದನು. ಮಂತ್ರಿ ಪರಿಷತ್ತಿನಲ್ಲಿ ವಕೀಲ್(ಪ್ರಧಾನಿ), ಅಮೀರ್-ಇ- ಜುಮ್ಲಾ(ಹಣಕಾಸು ಮಂತ್ರಿ), ವಜೀರ್ ಅಶರಫ್(ವಿದೇಶಾಂಗ ಮಂತ್ರಿ), ನಜೀರ್(ಹಣಕಾಸು ಕಾರ್ಯದರ್ಶಿ), ವಜೀರ್-ಇ-ಕುಲ್(ಲೆಕ್ಕಪತ್ರ ತಪಾಸಕ) ಮತ್ತು ಸದರ್-ಜಹಾನ್(ನ್ಯಾಯಾಂಗ ಸದಸ್ಯ) ಎಂಬ ಸದಸ್ಯರುಗಳನ್ನು ಒಳಗೊಂಡಿತ್ತು.[೪೩] ಪ್ರತಿಯೊಬ್ಬ ಮಂತ್ರಿಗೂ ಪ್ರತ್ಯೇಕ ಇಲಾಖೆ ಇದ್ದು, ತಮ್ಮ ತಮ್ಮ ಇಲಾಖೆಯಲ್ಲಿ ಅವರು ಕಾರ್ಯನಿರ್ವಹಿಸಬೇಕಾಗಿತ್ತು. ಪೇಶ್ವಾ ಎಂಬುವವರು ಪ್ರಧಾನಿಯ ಆಪ್ತ ಕಾರ್ಯದರ್ಶಿಯಾಗಿದ್ದರು. ಸುಲ್ತಾನನ ಅನುಪಸ್ಥಿತಿಯಲ್ಲಿ ಪ್ರಧಾನಿಯೇ ಕಾರ್ಯ ನಿರ್ವಹಿಸುತ್ತಿದ್ದರಿಂದ ಆತನನ್ನು 'ನಾಯಿಬ್ ಬಾದಶಾಹ' ಎಂದು ಕರೆಯಲಾಗುತ್ತಿತ್ತು. ಪ್ರತಿಯೊಬ್ಬರ ಪ್ರತಿಭೆಗೆ ಅನುಸಾರವಾಗಿ, ಪ್ರತಿಭಾವಂತ, ಯೋಗ್ಯ ಮತ್ತು ಸೈನಿಕ ವಿದ್ಯೆಯಲ್ಲಿ ವಿಶೇಷ ಅನುಭವ ಇರುವಂತಹ ವ್ಯಕ್ತಿಗಳನ್ನೇ ಮಂತ್ರಿ ಪರಿಷತ್ತಿಗೆ ನೇಮಕ ಮಾಡಿ ಕೊಳ್ಳಲಾಗುತ್ತಿತ್ತು.

ಸುಲ್ತಾನನ ದರ್ಬಾರವು ಪ್ರತಿಷ್ಠೆಯ ತಾಣವಾಗಿದ್ದು ಅತ್ಯಂತ ಬೆಲೆ ಬಾಳುವ ಹಾಸುಗಳು, ಆಸನಗಳು ಮತ್ತು ಪರದೆಗಳಿಂದ ಅಲಂಕೃತಗೊಂಡು, ಅತ್ಯಂತ ವೈಭವಯುತವಾಗಿ ಕಂಗೊಳಿಸುತ್ತಿತ್ತು. ಪ್ರತಿ ಶುಕ್ರವಾರದಂದು ಮುಂಜಾನೆಯಿಂದ ಮಧ್ಯಾಹ್ನದವರೆಗೆ ದರ್ಬಾರ ನಡೆಯುತ್ತಿತ್ತು. ಪ್ರಧಾನಿಯು ಯಾವ ಸಮಯದಲ್ಲಿಯೇ ಆಗಲಿ ಸುಲ್ತಾನನೊಡನೆ ರಾಜ್ಯದ ಆಗುಹೋಗುಗಳ ಕುರಿತು ಚರ್ಚಿಸಬಹುದಾಗಿತ್ತು. ರಾಜ್ಯದ ಮಹತ್ವ ವಿಷಯಗಳನ್ನು ಚರ್ಚಿಸಲು 'ಮಜಲೀಸ್-ಇ-ಖಲಾವತ್' ಎಂಬ ಸಲಹಾ ಮಂಡಳಿಯು ಅಸ್ತಿತ್ವದಲ್ಲಿದ್ದು ಸುಲ್ತಾನನಿಗೆ ಆಡಳಿತಕ್ಕೆ ಸಂಬಂಧಪಟ್ಟಂತಹ, ಯುದ್ಧ ಮತ್ತು ಶಾಂತಿಗೆ ಸಂಬಂಧಿಸಿದಂತಹ ಪ್ರಮುಖ ವಿಷಯಗಳ ಬಗ್ಗೆ ಸಲಹೆ ನೀಡುತ್ತಿತ್ತು. ಬಹಮನಿ ರಾಜ್ಯವನ್ನು ವಿವಿಧ ಪ್ರಾಂತ್ಯಗಳಾಗಿ ವಿಭಜಿಸಲಾಗಿದ್ದು ಅವುಗಳಿಗೆ 'ಅಶರಫ್'ಗಳೆಂದು ಕರೆಯುತ್ತಿದ್ದರು. ಪ್ರತಿಯೊಂದು ಅಶರಫ್‌ಗೆ ಒಬ್ಬ ತರಫ್‌ದಾರನನ್ನು ನೇಮಿಸಲಾಗುತ್ತಿತ್ತು. ಹಸನ್ ಗಂಗುವಿನ ಕಾಲದಲ್ಲಿ ನಾಲ್ಕು ಮುಖ್ಯ ಪ್ರಾಂತಗಳಿದ್ದರೆ, ಯುಸುಫ್‌ನ ಕಾಲದಲ್ಲಿ ಇವು ಜಗೀರು ಮತ್ತು ಜಹಗೀರದಾರ ಎಂದು ಬದಲಾವಣೆಗಳಾಗಿದ್ದವು. ಬಹಮನಿ ಕಾಲದ ನಾಲ್ಕು ಪ್ರಾಂತ್ಯಗಳೆಂದರೆ ಹಸ್ನಾಬಾದ್, ಜುನ್ನೈರ್, ಬೆರಾರ್ ಮತ್ತು ಬೀದರ್. ತರಫ್‌ದಾರರು 'ಸರ್-ಇ-ಲಷ್ಕರ್' ಮುಖಾಂತರ ಪ್ರಾಂತ್ಯದ ಶಾಂತಿ ಮತ್ತು ಸೈನ್ಯ ವ್ಯವಸ್ಥೆಯನ್ನು ನಿರ್ವಹಿಸುತ್ತಿದ್ದರು. ಬಹಮನಿ ಕಾಲದಲ್ಲಿ ಪ್ರಾಂತ್ಯಗಳು ಹಲವಾರು ಕೋಟೆಗಳನ್ನು ಹೊಂದಿದ್ದು, ಈ ಪ್ರಾಂತ್ಯದ ತರಫ್‌ದಾರರಿಗೆ ಅವರ ಸಾಮರ್ಥ್ಯಕ್ಕನುಸಾರವಾಗಿ ದರ್ಜೆಯನ್ನು ಕೊಡಲಾಗುತ್ತಿತ್ತು. ವಜೀರನಾದ ಮಹಮ್ಮದ್ ಗವಾನನು ಸಮರ್ಥ ಆಡಳಿತಗಾರನಾಗಿದ್ದು ಆಡಳಿತ ವ್ಯವಸ್ಥೆಯಲ್ಲಿ ವಿವಿಧ ಸುಧಾರಣೆಗಳನ್ನು ಮಾಡಿದನು. ರಾಜ್ಯವನ್ನು ನಾಲ್ಕು ಪ್ರಾಂತ್ಯದಿಂದ ಎಂಟು ಪ್ರಾಂತ್ಯಗಳಾಗಿ ವಿಂಗಡಿಸಿ ಸರಕಾರ(ಜಿಲ್ಲೆ) ಪರಗಣಗಳೆಂದು ವಿಭಜಿಸಿದ್ದನು. ರಾಜಧಾನಿಯು ಆಡಳಿತದ ಕೇಂದ್ರಬಿಂದುವಾಗಿದ್ದರೆ, ಗ್ರಾಮವು ಆಡಳಿತದ ಅತ್ಯಂತ ಕೊನೆಯ ಘಟಕವಾಗಿದ್ದು, ರಾಜ್ಯದಲ್ಲಿ ಪಟೇಲ್, ಕುಲಕರ್ಣಿ ಮತ್ತು ಚೌಕೀದಾರರೆನ್ನುವವರು ಗ್ರಾಮಗಳಲ್ಲಿ ಆಡಳಿತ ನಡೆಸುತ್ತಿದ್ದರು. ಇವರ ಪ್ರಮುಖ ಕಾರ್ಯಗಳೆಂದರೆ ಪಂಚಾಯತಿ ವ್ಯವಹಾರ, ಕಂದಾಯ ವಸೂಲಿ, ಲೆಕ್ಕಪತ್ರ ನಿರ್ವಹಣೆ ಮತ್ತು ಗ್ರಾಮ ರಕ್ಷಣೆಯನ್ನು ಮಾಡುವುದಾಗಿತ್ತು. ಈ ರೀತಿ ಬಹಮನಿ ಸಾಮ್ರಾಜ್ಯದ ಕಾಲದಲ್ಲಿ ಆಡಳಿತ ವ್ಯವಸ್ಥೆಯು ವಿವಿಧ ಬದಲಾವಣೆಗಳನ್ನು ಕಂಡು ಸುವ್ಯವಸ್ಥಿತವಾಗಿ ನಡೆದಿತ್ತೆಂದು ಮತ್ತು ೩ನೇ ಮಹಮದ್ ಷಾಹ ಬಹಮನಿ ಇವನು ೧೨ನೇ ಸುಲ್ತಾನನಾಗಿದ್ದನೆಂದು ಮತ್ತು ದಕ್ಷ ಆಡಳಿತಗಾರನೆಂದು ಶಾಸನದಲ್ಲಿ ತಿಳಿದುಬರುತ್ತದೆ.[೪೪]



### ೨.೩.೨. ನ್ಯಾಯಾಂಗ ವ್ಯವಸ್ಥೆ

ಬಹಮನಿ ರಾಜ್ಯಗಳ ನ್ಯಾಯಂಗ ವ್ಯವಸ್ಥೆಯು ಅತ್ಯಂತ ಶಿಸ್ತಿನಿಂದ ಕೂಡಿದ್ದಾಗಿದ್ದು, ನ್ಯಾಯಾಂಗ ಆಡಳಿತದ ಹೊಣೆಯನ್ನು ಖಾಜಿ ಮತ್ತು ಸದರ್-ಜಹಾನ್‌ರು ನಿರ್ವಹಿಸುತ್ತಿದ್ದರು.[೪೫] ಈ ಹುದ್ದೆಗಳಿಗೆ ಅರ್ಹರಾದಂತಹ ಉಲೇಮಾಗಳನ್ನು ಆಯ್ಕೆ ಮಾಡುತ್ತಿದ್ದರು. ಪ್ರತಿಯೊಂದು ಪ್ರಾಂತ್ಯದಲ್ಲೂ, ಜಿಲ್ಲೆಯಲ್ಲೂ ಮತ್ತು ತಾಲೂಕುಗಳಲ್ಲೂ ಒಬ್ಬೊಬ್ಬ ಖಾಜಿಯನ್ನು ನೇಮಿಸಲಾಗುತ್ತಿತ್ತು. ಈ ಇಬ್ಬರು ನ್ಯಾಯಾಧೀಶರು ನಾಗರಿಕ ಪ್ರಕರಣಗಳಿಗೆ ಮತ್ತು ಅಪರಾಧಿ ಪ್ರಕರಣಗಳಿಗೆ ಸಂಬಂಧಿಸಿದಂತಹ ತೀರ್ಪುಗಳನ್ನು ಖುಲಾಸೆ ಮಾಡಿ ನ್ಯಾಯ ನೀಡುವ ಅಧಿಕಾರವನ್ನು ಹೊಂದಿದ್ದರು. ಲೌಕಿಕ ವ್ಯವಹಾರಗಳ ತೀರ್ಪು ಮತ್ತು ಅಪರಾಧಗಳ ವಿಚಾರಣೆಯನ್ನು ಖಾಜಿಯು ನಿರ್ವಹಿಸುತ್ತಿದ್ದನು. ಖಾಜಿ ಕೊಟ್ಟ ತೀರ್ಪನ್ನು ಕೆಲವೊಮ್ಮೆ ಒಪ್ಪಿಗೆಗಾಗಿ ಸದರ್-ಜಹಾನ್‌ನಿಗೆ ಕಳುಹಿಸಲಾಗುತ್ತಿತ್ತು, ಆ ತೀರ್ಪನ್ನು ಸದರ್-ಜಹಾನ್ ಒಪ್ಪಿಕೊಂಡರೆ ಪ್ರಕರಣ ಅಲ್ಲಿಗೇ ಮುಕ್ತಾಯವಾಗುತ್ತಿತ್ತು. ಒಂದು ವೇಳೆ ಪ್ರಕರಣ ಅಲ್ಲಿಗೆ ಮುಗಿಯದಿದ್ದರೆ ಅಂತಿಮ ತೀರ್ಪು ನೀಡುವ ಅಧಿಕಾರ ಸುಲ್ತಾನನಿಗೆ ಸೇರಿತ್ತು. ಗ್ರಾಮ ಮಟ್ಟದಲ್ಲಿ ಮತ್ತು ತಾಲೂಕು ಮಟ್ಟದಲ್ಲಿ

ನ್ಯಾಯ ತೀರ್ಮಾನದ ಅಧಿಕಾರವನ್ನು ಅಮನ್ನ ಮತ್ತು ಠಾಣೆದಾರರು ನಿರ್ವಹಿಸುತ್ತಿದ್ದರು. ಮೊಗಲ್ ಆಡಳಿತದಲ್ಲಿದ್ದಂತೆ ಬಹುಮನಿಗಳು ಹಿಂದೂಗಳಿಗೆ ತೀರ್ಪು ನೀಡಲು ಪ್ರತ್ಯೇಕವಾಗಿ ಬ್ರಾಹ್ಮಣ ಪಂಡಿತರನ್ನು ನೇಮಿಸದೇ, ಎಲ್ಲರಿಗೂ 'ಖುರಾನ್' ಪವಿತ್ರ ಗ್ರಂಥದ ಮೂಲಕವೇ ನ್ಯಾಯ ತೀರ್ಪುಗಳನ್ನು ನೀಡಲಾಗುತ್ತಿತ್ತು. ನ್ಯಾಯಾಂಗ ವಿತರಣೆಗಾಗಿ ಸುಲ್ತಾನ್ ಫಿರೋಜ್ ಷಾನು 'ವಕೀಲ್-ಉಸ್-ಸಲ್ತನತ್'ನ ಆಧೀನಕ್ಕೆ ಸೇರಿದ್ದ 'ಸಫ್ತರಿ ಶಾಹಿ' ಎಂಬ ಕಛೇರಿಯನ್ನು ಸ್ಥಾಪಿಸಿದನು.

**೨.೩.೩. ಸೈನ್ಯಾಡಳಿತ**

ಬಹಮನಿ ಆಡಳಿತ ಕಾಲದಲ್ಲಿ ರಾಜ್ಯದ ಪ್ರತಿಷ್ಠೆಯು ಸೈನ್ಯದ ಸಂಘಟನೆಯ ಮೇಲೆ ನೆಲೆನಿಂತಿತ್ತು. ಸೈನ್ಯ ಸಂಘಟನೆಯು ಬಹಮನಿ ಸಾಮ್ರಾಜ್ಯಕ್ಕೆ ಅಂದಿನ ಕಾಲದಲ್ಲಿ ಅತ್ಯವಶ್ಯಕವಾಗಿತ್ತು. ಉತ್ತರದಲ್ಲಿ ಮಾಳ್ವಾ ಮತ್ತು ದಕ್ಷಿಣದಲ್ಲಿ ವಿಜಯನಗರದ ಅರಸರ ಆಕ್ರಮಣಗಳನ್ನು ಯಶಸ್ವಿಯಾಗಿ ಎದುರಿಸಲು ಬಹಮನಿ ಸೈನ್ಯದಲ್ಲಿ ಕೇಂದ್ರ ಮತ್ತು ಪ್ರಾಂತೀಯ ಎಂಬ ಎರಡು ಪ್ರಮುಖ ಪಡೆಗಳನ್ನು ಮಾಡಿದ್ದರು. ಕೇಂದ್ರೀಯ ಪಡೆಯ ಮುಖ್ಯಸ್ಥನಾಗಿ 'ಅಮೀರ್-ಉಲ್-ಉಮರಾ'(ಪ್ರಧಾನ ದಂಡನಾಯಕ)ನನ್ನು ನೇಮಿಸಲಾಗಿದ್ದು, ಈತನ ಕೈಕೆಳಗೆ ೧೫೦೦ ಸೈನಿಕರು ಇರುತ್ತಿದ್ದರು. ಇತರ ಕೆಳಗಿನ ಅಧಿಕಾರಿಗಳು ಸಾವಿರ, ಐದು ನೂರು, ಮುನ್ನೂರು ಹಾಗೂ ನೂರು ಸೈನಿಕರ ಪಡೆಗಳನ್ನು ನಿರ್ವಹಿಸುವ ಅಧಿಕಾರವನ್ನು ಹೊಂದಿದ್ದರು. ಈ ಅಧಿಕಾರಿಗಳಿಗೆ ಜಹಗೀರು ಅಥವಾ ಹಣದ ರೂಪದಲ್ಲಿ ಸಂಬಳವನ್ನು ಸಂದಾಯ ಮಾಡಲಾಗುತ್ತಿತ್ತು. ಸುಲ್ತಾನ್ ಹಸನ್ ಗಂಗೂ ಬಹಮನ್ ಷಾನ ಅವಧಿಯಲ್ಲಿ ಒಟ್ಟು ಸೈನ್ಯದ ಸಂಖ್ಯೆ ೫೦,೦೦೦ ಪದಾತಿ ದಳ ಮತ್ತು ೨೫,೦೦೦ ಅಶ್ವದಳವಾಗಿತ್ತು. ಮುಂದೆ ಮಹಮ್ಮದ ಷಾನ ಕಾಲದಲ್ಲಿ ಪದಾತಿ ದಳ ಹಾಗೂ ಅಶ್ವದಳದ ಸಂಖ್ಯೆ ಸುಮಾರು ಎರಡುಪಟ್ಟು ಹೆಚ್ಚಾಯಿತು.[೪೬] ಪ್ರಾಂತ್ಯದ ಸೈನ್ಯವು ತರಫ್‌ದಾರನ ನಿಯಂತ್ರಣದಲ್ಲಿದ್ದು, ಸುಲ್ತಾನನಿಗೆ ಅವಶ್ಯವಿದ್ದಾಗ ಈತನು ಸೈನ್ಯವನ್ನು ಸುಲ್ತಾನನ ರಕ್ಷಣೆಗೆ ರವಾನಿಸುತ್ತಿದ್ದನು. ಬಹಮನಿ ಸುಲ್ತಾನರ ಸೈನ್ಯಾಡಳಿತದಲ್ಲಿ 'ಸಿಡಿಮದ್ದು ವಿಭಾಗ'ವಿದ್ದು ಇದಕ್ಕೆ ಆತೀಷ್‌ಖಾನಾ ಎಂದು ಕರೆಯಲಾಗುತ್ತಿತ್ತು. ಈ ವಿಭಾಗದಲ್ಲಿ ಅನೇಕ ಹಿಂದೂ ಮತ್ತು ಮುಸ್ಲಿಂ ಸೈನಿಕರಿದ್ದರೆಂದು, ಇವರನ್ನು ಅನೇಕ ಲಷ್ಕರ್‌ಗಳಾಗಿ ವಿಂಗಡಿಸಲಾಗಿತ್ತೆಂದು ತಿಳಿದುಬರುತ್ತದೆ. ಒಂದನೇ ಮಹಮ್ಮದ್ ಷಾನು ವಿಜಯನಗರದ ವಿರುದ್ಧ ಯುದ್ಧದಲ್ಲಿ ತುಪಾಕಿಗಳನ್ನು ಉಪಯೋಗಿಸಿದ್ದನೆಂದು ಇತಿಹಾಸದಿಂದ ತಿಳಿಯುತ್ತದೆ. ಸೈನ್ಯದಲ್ಲಿ ಪ್ರಮುಖವಾಗಿ ನಾಲ್ಕು ವಿಭಾಗಗಳಿದ್ದವು, ಅವುಗಳೆಂದರೆ ಅಶ್ವಪಡೆ, ಪದಾತಿ ದಳ, ಗೋಲಂದಾಜು ಮತ್ತು ಆನೆದಳ. ಬಹಮನಿ ಸೈನ್ಯದಲ್ಲಿ ಮುಸ್ಲಿಮರಷ್ಟೇ ಅಲ್ಲದೇ ಹಿಂದೂಗಳು, ಟರ್ಕರು, ಪರ್ಷಿಯನ್ನರು, ಮಂಗೋಲರು ಮತ್ತು ಅಪ್ಘಾನರ ವಿವಿಧ ಜನಾಂಗದವರು ಹುದ್ದೆಗಳನ್ನು ಹೊಂದಿದ್ದರು. ವಿವಿಧ ಯುದ್ಧೋಪಕರಣಗಳಾದಂತಹ ಕತ್ತಿ, ಭರ್ಚಿ, ಬಿಲ್ಲುಬಾಣ, ಈಟಿ, ಸಿಡಿಮದ್ದು ಹಾಗೂ ತುಪಾಕಿಗಳನ್ನು ಉಪಯೋಗಿಸಲಾಗುತ್ತಿತ್ತೆಂದು ತಿಳಿದುಬರುತ್ತದೆ. ಗುಲ್ಬರ್ಗಾದಲ್ಲಿ ಇಂದಿಗೂ 'ಬಾಲಾ ಹಿಸಾರ್ ತೋಪು' ಮತ್ತು 'ಮಲಿಕ್ ಮೈದಾನ್ ತೋಪು'ಗಳನ್ನು ನಾವು ನೋಡಬಹುದಾಗಿದೆ. ಈ ಮೇಲಿನ ಎಲ್ಲಾ ಅಂಶಗಳನ್ನು ಗಮನಿಸಿದಾಗ ಬಹಮನಿ ಸುಲ್ತಾನರ ಆಡಳಿತ ಕಾಲದಲ್ಲಿ ಸೈನ್ಯಾಡಳಿತ ವ್ಯವಸ್ಥೆಯು ಸುವ್ಯವಸ್ಥಿತವಾಗಿಯೂ ಮತ್ತು ಸುಭದ್ರವಾಗಿಯೂ ಇತ್ತೆಂದು ತಿಳಿದುಬರುತ್ತದೆ.

**೨.೩.೪. ಕಂದಾಯ ವ್ಯವಸ್ಥೆ**

ಬಹಮನಿ ಸಾಮ್ರಾಜ್ಯದ ಆದಾಯ ಮೂಲಗಳಲ್ಲಿ ತೆರಿಗೆಗೆ ಮೊದಲ ಸ್ಥಾನ ನೀಡಿದ್ದು, ಭೂ ತೆರಿಗೆಗಳೇ ಬಹಮನಿ ಆಡಳಿತದ ಆರಂಭದಲ್ಲಿ ಪ್ರಮುಖ ಕಂದಾಯ ಮೂಲವಾಗಿತ್ತು. ಕಂದಾಯ

ವ್ಯವಸ್ಥೆಯಲ್ಲಿ ಆಗಿನ ಕಾಲದಲ್ಲಿ ಭೂಮಿಯೇ ಪ್ರಮುಖ ಪಾತ್ರವಹಿಸುತ್ತಿದ್ದುದರಿಂದ ಕೃಷಿ ಪ್ರಧಾನವಾದ ಪ್ರದೇಶಗಳಲ್ಲಿ ಭೂಕಂದಾಯವು ದೊಡ್ಡ ಮೊತ್ತದ್ದಾಗಿದ್ದು, ಅನಿವಾರ್ಯವೂ ಸಹ ಆಗಿತ್ತು. ತೆರಿಗೆ ವಿಧಿಸುವ ಮೊದಲು ಭೂಮಿಯ ಫಲವತ್ತತೆ ಮತ್ತು ಬೆಲೆಗಳ ಆಧಾರದ ಮೇಲೆ ತೆರಿಗೆಯನ್ನು ನಿರ್ಧರಿಸಲಾಗುತ್ತಿತ್ತು. ನಂತರದ ದಿನಗಳಲ್ಲಿ ಭೂಮಿಯ ಅನೇಕ ಮೂಲಗಳಿಂದ ಅನೇಕ ವಿಧದ ತೆರಿಗೆಗಳನ್ನು ಸಂಗ್ರಹಿಸಲಾಗುತ್ತಿತ್ತು, ಅವುಗಳೆಂದರೆ ಭೂಮಿಗಳ ಮೇಲೆ ತೆರಿಗೆ, ವಸ್ತುಗಳ ಮೇಲೆ ತೆರಿಗೆ, ಉದ್ಯೋಗ ತೆರಿಗೆ, ವಾಣಿಜ್ಯ ತೆರಿಗೆ, ಉದ್ದಿಮೆಗಳ ಮೇಲೆ ತೆರಿಗೆ, ಆದಾಯ ತೆರಿಗೆ ಮುಂತಾದವುಗಳು.

ಬಹಮನಿ ಆಡಳಿತ ಕಾಲದಲ್ಲಿ ಹಿಂದಿನಿಂದ ನಡೆದು ಬಂದಂತಹ ಕಂದಾಯ ಪದ್ಧತಿಯೇ ಮುಂದುವರೆದುಕೊಂಡು ಬಂದಿದ್ದು, ಆ ಸಮಯದಲ್ಲಿ ಕಂದಾಯದ ಮಟ್ಟವು ಪ್ರತಿಶತ ೧/೬ ರಷ್ಟಿತ್ತೆಂದು ತಿಳಿಯುತ್ತದೆ. ಮಹಮ್ಮದ್ ಷಾನ ಕಾಲದಲ್ಲಿ ವಜೀರನಾದ ಮಹಮ್ಮದ್ ಗವಾನನು ಆಡಳಿತದಲ್ಲಿ ಅನೇಕ ಸುಧಾರಣೆಗಳನ್ನು ಮಾಡಿದನು. ಮಹಮ್ಮದ್ ಗವಾನನ ಭೂಸುಧಾರಣಾ ನೀತಿಯಿಂದ ಭೂಮಿಯ ವ್ಯವಸಾಯ ವ್ಯವಸ್ಥೆಯಲ್ಲಿ ಮತ್ತು ಕಂದಾಯ ವ್ಯವಸ್ಥೆಯಲ್ಲಿ ಅನೇಕ ಸುಧಾರಣೆಗಳಾದವು. ಗವಾನನು ಭೂಮಾಪನವನ್ನು ಮಾಡಿ ಭೂಮಿಯ ವಿಸ್ತಾರಕ್ಕೆ ಮತ್ತು ಫಲವತ್ತತೆಗೆ ಅನುಸಾರವಾಗಿ ಕಂದಾಯವನ್ನು ನಿಗಧಿಪಡಿಸಿದನು.[೪೭] ದೇವಾಲಯ, ಮಸೀದಿ ಮುಂತಾದ ಧಾರ್ಮಿಕ ಕೇಂದ್ರಗಳಡಿಯಲ್ಲಿದ್ದ ಭೂಮಿಯನ್ನು ಕಂದಾಯದಿಂದ ಮುಕ್ತಗೊಳಿಸಿದನು.

ಆಮದು ಮತ್ತು ರಫ್ತು ಸರಕುಗಳಿಗೂ ತೆರಿಗೆ(ಸುಂಕ) ವಿಧಿಸಲಾಗುತ್ತಿತ್ತು. ಅವುಗಳ ಬೆಲೆಗಳಿಗೆ ಅನುಗುಣವಾಗಿ ತೆರಿಗೆಯನ್ನು ಆಕರಿಸಲಾಗುತ್ತಿತ್ತು. ಆನೆ, ಕುದುರೆ, ಮುಂತಾದವುಗಳಿಗೆ ಪ್ರತಿಯೊಂದಕ್ಕೆ ಒಂದು ದಿನಾರ್‌ನಂತೆ ಎಮ್ಮೆ, ಆಕಳು, ಕುರಿ ಮುಂತಾದವುಗಳಿಗೆ ತಲಾ ಒಂದು ಪಣದಂತೆ ನಿಗಧಿಪಡಿಸಲಾಗಿತ್ತು. ರೇಷ್ಮೆ ಮತ್ತು ಹತ್ತಿ ಬಟ್ಟೆಗಳ ಮೇಲೆ ತೆರಿಗೆಯನ್ನು ವಿಧಿಸಲಾಗುತ್ತಿತ್ತು. ಗಮನಿಸಬೇಕಾದ ಅಂಶವೆಂದರೆ ಉಪ್ಪು ತಯಾರಿಸಲು ತೆರಿಗೆ ನೀಡಬೇಕಾಗುತ್ತಿತ್ತು. ಹುಲ್ಲು, ಕಟ್ಟಿಗೆ ಮತ್ತು ಚಿಕ್ಕಪುಟ್ಟ ವ್ಯಾಪಾರಿ ಮಳಿಗೆಗಳಿಗೆ ತೆರಿಗೆ ವಿನಾಯತಿ ನೀಡಲಾಗಿತ್ತು. ಇವೆಲ್ಲವುಗಳ ಜೊತೆಗೆ ರಾಜ್ಯದ ಕಂದಾಯದ ಮೂಲವಾಗಿ ಬೊಕ್ಕಸಕ್ಕೆ ವಾರ್ಷಿಕ ಕಪ್ಪ, ಯುದ್ಧ ನಷ್ಟ ಕಪ್ಪ, ಯುದ್ಧದಲ್ಲಿ ಲೂಟಿಗೈದ ಸಂಪತ್ತು ಈ ಎಲ್ಲವುಗಳು ಬಹಮನಿ ರಾಜ್ಯದ ಆದಾಯದ ಮೂಲವಾಗಿದ್ದವು. ಮದುವೆಗಳಲ್ಲಿ ಮದುವೆ ಗಂಡು ಮತ್ತು ಹೆಣ್ಣಿನ ಕಡೆಯವರಿಂದ ನಿರ್ದಿಷ್ಟ ತೆರಿಗೆಯನ್ನು ಆಕರಿಸಲಾಗುತ್ತಿತ್ತು, ಒಂದು ವೇಳೆ ವಿಧವೆಯು ಮರು ಮದುವೆಯಾದರೆ ಆ ಮದುವೆಗೆ ಯಾವುದೇ ತೆರಿಗೆಯನ್ನು ವಿಧಿಸಿರಲಿಲ್ಲ. ಈ ರೀತಿಯಾಗಿ ಬಹಮನಿ ಸುಲ್ತಾನರ ಆಡಳಿತ ಕಾಲದಲ್ಲಿ ಉತ್ತರ ಮತ್ತು ದಕ್ಷಿಣದ ಮಧ್ಯಕಾಲೀನ ಆಡಳಿತ ವ್ಯವಸ್ಥೆಗಳು ಹೆಚ್ಚಾಗಿ ಜಾರಿಗೆ ಬಂದವು. ಬಹಮನಿ ಕಾಲದಲ್ಲಿ ಅತ್ಯಂತ ಶಿಸ್ತು ಮತ್ತು ವ್ಯವಸ್ಥೆಯಿಂದ ಕೂಡಿದ ಕಂದಾಯ ವಸೂಲಿ ಪದ್ಧತಿಯು ಜಾರಿಗೆ ತಂದಿದ್ದರಿಂದ ಭೂ ಮಾಲೀಕರಿಗೆ ಮತ್ತು ಕೃಷಿಕರಿಗೆ ಬಹಳ ಅನುಕೂಲವಾಯಿತೆಂದು ತಿಳಿದು ಬರುತ್ತದೆ.

### ೨.೩.೫. ಚಪರ್‌ಖಾನ್ ಮತ್ತು ಕೊತ್ವಾಲ್ ವ್ಯವಸ್ಥೆ

ಬಹಮನಿ ಆಡಳಿತ ಕಾಲದಲ್ಲಿ ಸುಲ್ತಾನರು ತಮ್ಮ ಆಡಳಿತಾವಧಿಯಲ್ಲಿ ಪತ್ರಗಳ ರವಾನೆಗಾಗಿ ಅಂಚೆ ವ್ಯವಸ್ಥೆಯನ್ನು ಮತ್ತು ರಕ್ಷಣೆಗಾಗಿ ಪೊಲೀಸ್ ವ್ಯವಸ್ಥೆಯನ್ನು ಅಚ್ಚುಕಟ್ಟಾಗಿ ಸ್ಥಾಪಿಸಿದ್ದರೆಂದು ತಿಳಿದುಬರುತ್ತದೆ. ಅಂಚೆ ಕಛೇರಿಗೆ 'ಚಪರ್‌ಖಾನ್'[೪೮] ಎಂದು ಕರೆಯಲಾಗುತ್ತಿತ್ತು. ರಾಜ್ಯದ ಪ್ರತಿ ಮೂರು ಮೈಲುಗಳಿಗೆ ಒಂದರಂತೆ ಚೌಕಿಗಳನ್ನು ಸ್ಥಾಪಿಸಿ ಆ ಮೂಲಕ ಪತ್ರಗಳನ್ನು ಕ್ರಮಬದ್ಧವಾಗಿ ರವಾನಿಸಲಾಗುತ್ತಿತ್ತು. ಪತ್ರಗಳನ್ನು ಮುಟ್ಟಿಸಲು ಪಹರೆಗಾರರನ್ನು ನೇಮಿಸಲಾಗಿತ್ತು, ಇವರ ಕೆಲಸ ಒಂದು ಸ್ಥಳದಿಂದ ಇನ್ನೊಂದು

ಸ್ಥಳಕ್ಕೆ ಸಂಚರಿಸಿ ಪತ್ರ ಮತ್ತು ಸುದ್ಧಿಗಳನ್ನು ಮುಟ್ಟಿಸುವುದಾಗಿತ್ತು. ಈ ಕೆಲಸಕ್ಕಾಗಿ ಅಂದಿನ ಕಾಲದಲ್ಲಿ ಉತ್ತಮವಾದ ತರಬೇತಿ ಹೊಂದಿದ್ದ, ವೇಗವಾಗಿ ಓಡುವ ಅಶ್ವಗಳನ್ನು ಉಪಯೋಗಿಸುತ್ತಿದ್ದರೆಂದು ತಿಳಿದುಬರುತ್ತದೆ.

ಎಲ್ಲಾ ಪ್ರಾಂತ್ಯಗಳಲ್ಲೂ, ನಗರ ಪ್ರದೇಶಗಳಲ್ಲೂ ಕೋತ್ವಾಲರನ್ನು ನೇಮಿಸಲಾಗಿತ್ತು. ಈ ಕೋತ್ವಾಲನು ಪೊಲೀಸ್ ವರಿಷ್ಠ ಅಧಿಕಾರಿಯಾಗಿದ್ದು, ರಾಜ್ಯದಲ್ಲಿ ನ್ಯಾಯ ಮತ್ತು ಶಾಂತಿ ಸುವ್ಯವಸ್ಥೆಯನ್ನು ಕಾಪಾಡುವುದು ಈತನ ಮುಖ್ಯ ಕರ್ತವ್ಯವಾಗಿತ್ತು. ಕೊತ್ವಾಲ್‌ನು ನ್ಯಾಯಾಧೀಶನಾಗಿಯೂ, ಜೈಲುಗಳ ಮುಖ್ಯಸ್ಥನಾಗಿಯೂ ಸಹ ಕಾರ್ಯನಿರ್ವಹಿಸುತ್ತಿದ್ದನು, ಇವನು ತನ್ನ ಕೈಕೆಳಗೆ ಹಲವಾರು ಮಂದಿ ಪೊಲೀಸ್ ಪೇದೆಗಳ ಈ ಕರ್ತವ್ಯ ಪಾಲನೆಗಾಗಿ ನೇಮಿಸುತ್ತಿದ್ದನೆಂದು, ರಾಜ್ಯದಲ್ಲಿ ಶಾಂತಿಯನ್ನು ಕಾಪಾಡುವುದು ಅವರ ಮುಖ್ಯ ಕೆಲಸವಾಗಿತ್ತೆಂದು ಇತಿಹಾಸದಿಂದ ತಿಳಿದುಬರುತ್ತದೆ.

### ೨.೪. ಬಹಮನಿ ರಾಜ್ಯದ ಅವನತಿ(ಕ್ರಿ.ಶ.೧೪೮೨-೧೫೩೮)

ಕೇಂದ್ರ ಸರಕಾರದ ತೀವ್ರ ದೌರ್ಬಲ್ಯ ಹಾಗೂ ಅದರ ಸರ್ವತೋಮುಖವಾದ ಅಸಮರ್ಥತೆಯಿಂದಾಗಿ ಅಲ್ಲಿನ ಪ್ರಾಂತಾಧಿಕಾರಿಗಳು ತಮ್ಮ ಅಧಿಕಾರ ವ್ಯಾಪ್ತಿಯಲ್ಲಿದ್ದ ಪ್ರದೇಶಗಳಲ್ಲಿ ಸರ್ವಶಕ್ತರಾಗುತ್ತಾ ಬಂದರು. ಪರಿಣಾಮವಾಗಿ ಅಹಮದ್‌ನಗರ, ಬಿಜಾಪುರ, ಬೀರಾರ್, ಗೋಲ್ಕಂಡ ಮತ್ತು ಬೀದರಗಳು ಒಂದಾದ ಮೇಲೆ ಒಂದರಂತೆ ಸ್ವಯಾಂಧಿಕಾರ ಪಡೆದು ಐದು ಸ್ವತಂತ್ರ ರಾಜ್ಯಗಳಾಗಿ ಸ್ಥಾಪಿತಗೊಂಡವು. ಈ ವಿಘಟನೆಗೆ ಪ್ರಥಮವಾಗಿ ನಾಂದಿ ಹಾಡಿದವನು ಜುನ್ನೂರಿನ ರಾಜ್ಯಪಾಲನಾಗಿದ್ದ ಮಲ್ಲಿಕ್ ಅಹಮದ್ ನಿಜಾಮ್-ಉಲ್-ಮುಲ್ಕ್ ಎನ್ನುವವನು. ಇವನು ಸುಲ್ತಾನ ಮಹಮದ್‌ಷಾಹ ಬಹಮನಿಯ ಪ್ರಧಾನಿಯಾಗಿದ್ದನು. ಖಾಸಿಂಬರೀದ್ ಎನ್ನುವವನ ಆಜ್ಞೆಗಳನ್ನು ತನ್ನಿಂದಲೇ ಸ್ಥಾಪಿಗೊಂಡಿದ್ದ ಅಹಮದ್ ನಗರದಲ್ಲಿ ತನ್ನದೇ ಆದ ಸ್ವತಂತ್ರ ಪ್ರಭುತ್ವ ಸ್ಥಾಪಿಸಿಕೊಂಡನು. ಇದೇ ವರ್ಷದಲ್ಲಿಯೇ ಬಿಜಾಪುರದ ರಾಜ್ಯಪಾಲನಾಗಿದ್ದ ಯೂಸುಫ್ ಆದಿಲ್‌ಖಾನನೂ, ಬೆರಾರಿನ ರಾಜ್ಯಪಾಲನಾಗಿದ್ದ ಫಾತ್-ಉಲ್-ಇಮಾವ್-ಉಲ್ ಮುಲ್ಕನೂ ಮಲ್ಲಿಕ್ ಅಹಮದನ ಮಾದರಿಯನ್ನೇ ಅನುಸರಿಸಿದನು. ಈ ರಾಜ್ಯಪಾಲರು ತಮ್ಮ ಅಧಿಕಾರ ವ್ಯಾಪ್ತಿಯಲ್ಲಿದ್ದ ಪ್ರದೇಶಗಳಲ್ಲಿ ಸಂಪೂರ್ಣ ಸ್ವತಂತ್ರರೇ ಆಗಿದ್ದು, ಬೀದರಿನಲ್ಲಿದ್ದ ಬಹಮನಿ ಸುಲ್ತಾನನಿಗೆ ನಾಮಾಮಾತ್ರಕ್ಕೆ ನಿಷ್ಠೆ ತೋರುತ್ತಿದ್ದರು. ತೆಲಂಗಾಣದ ರಾಜ್ಯಪಾಲನಾಗಿದ್ದ ಕುತುಬ್-ಉಲ್-ಮುಲ್ಕ್‌ನೂ ಸಹ ಮಹಮದ್‌ಷಾನ ಮರಣ ನಂತರ ಕ್ರಿ.ಶ.೧೫೧೮ರಲ್ಲಿ ಅವರ ಉದಾಹರಣೆಯ ಜಾಡನ್ನೇ ಅನುಸರಿಸಿದರು. ಕ್ರಿ.ಶ.೧೫೦೪ರಲ್ಲಿ ಖಾಸಿಂಬರೀದನ ಮರಣಾನಂತರ ಅವನ ಅಮೀದ್‌ಬರೀದ್ ಎಂಬುವವನು ಒಂದು ಕಾಲದಲ್ಲಿ ಉತ್ಕರ್ಷ ಸ್ಥಿತಿಗೇರಿ ಈಗ ಕ್ಷೀಣ ಗತಿಯಲ್ಲಿದ್ದ ಬಹಮನಿ ರಾಜ್ಯದ ಆಡಳಿತವನ್ನು ವಹಿಸಿಕೊಂಡನು. ಆದರೆ ಕ್ರಿ.ಶ.೧೫೨೮ ರಲ್ಲಿ ಬೀದರಿನಿಂದ ಕೊನೆಯ ಬಹಮನಿ ಸುಲ್ತಾನನಾದ ಕಲೀಮುಲ್ಲಾ ಪಲಾಯನ ಮಾಡಿದ ನಂತರ ಅಮೀರ್ ಬರೀದನು ತಮ್ಮ ತುರ್ಕಿಯ ಸುಲ್ತಾನನ ಹಿಡಿತದಿಂದ ಮುಕ್ತಗೊಂಡನು. ಅವನು ಮೊದಲು ಬಿಜಾಪುರ, ಅಲ್ಲಿಂದ ಮುಂದೆ ಅಹಮದ್ ನಗರಕ್ಕೂ ತೆರಳಿದ್ದು ಅಲ್ಲಿ ಕ್ರಿ.ಶ. ೧೫೩೮ರಲ್ಲಿ ಕೊನೆಯುಸಿರೆಳೆದನು. ಇದು ಬಹಮನಿ ಅವನತಿಗೂ ಕಾರಣವಾಯಿತು.[೪೯]

ನಂತರ ಮಹಮ್ಮದ್ ಗವಾನನ ಸ್ಥಾನಮಾನಗಳು, ಉತ್ತಮ ಆಡಳಿತವು, ಅವನು ಉತ್ತುಂಗ ಶಿಖರಕ್ಕೇರಿದ್ದು ಮುಖ್ಯವಾಗಿ ಅವನು ಪರದೇಶಿ ಶ್ರೀಮಂತನಾಗಿದ್ದುದು ಮತ್ತು ಷಿಯಾ ಪಂಗಡಕ್ಕೆ ಸೇರಿದವನಾಗಿದ್ದುದು, ದಖ್ಖನ್‌ನ ಶ್ರೀಮಂತರ ಕೋಪ ಮತ್ತು ದ್ವೇಷಗಳನ್ನು ಇಮ್ಮಡಿಗೊಳಿಸಿ, ಅವರು ಅವನನ್ನು ಮುಗಿಸುವ ಸಂಚನ್ನು ಮಾಡಿ, ಮಹಮ್ಮದ್ ಗವಾನನ ಊಹಿಸಲಾರದಂತಹ ಅತಿ ಕ್ರೂರ

ರೀತಿಯ ದುರ್ಮರಣವಾಯಿತು. ಈ ರೀತಿಯ ಮಹಮ್ಮದ್ ಗವಾನನ ದುರ್ಮರಣದಿಂದ ಉತ್ತುಂಗ ಶಿಖರಕ್ಕೇರಿದ ಬಹಮನಿ ಸಾಮ್ರಾಜ್ಯವು ಅಷ್ಟೇ ತ್ವರಿತ ಗತಿಯಲ್ಲಿ ಅದಃಪಥನಕ್ಕೀಡಾಯಿತು. ಸಮರ್ಥ ಆಡಳಿತಗಾರನಾಗಿದ್ದ ಮಹಮ್ಮದ್ ಗವಾನನ ಅಂತ್ಯದೊಂದಿಗೆ ಬಹಮನಿ ಸಾಮ್ರಾಜ್ಯವು ಅರಾಜಕತೆಯತ್ತ ದಾಪುಕಾಲಿಟ್ಟಿತು. ಬಹಮನಿ ಸಾಮ್ರಾಜ್ಯದ ಐಕ್ಯತೆ ಮತ್ತು ಭದ್ರತೆಗಳಿಗೆ ತೀವ್ರ ಧಕ್ಕೆಯಾಗಿ, ಅವ್ಯವಸ್ಥೆ ಮತ್ತು ಅರಾಜಕತೆಗಳು, ನಿಷ್ಠರಲ್ಲದ ನಾಯಕರಿಂದ ತಮ್ಮ ಕುರೂಪ ದೃಷ್ಟಿಯನ್ನು ಎಲ್ಲೆಡೆ ತೋರಿ ಬಹಮನಿ ಸಾಮ್ರಾಜ್ಯವನ್ನು ವಿಭಜನಾಕಾರಿ ದುಷ್ಟ ಶಕ್ತಿಗಳ ಕೈವಶ ಮಾಡಿದವು. ಇಂತಹ ಆತಂಕಕಾರಿ ಪರಿಸ್ಥಿತಿಯಲ್ಲಿ ಮಹಮ್ಮದ್ ಷಾನ ಮಗ ಕೇವಲ ಹನ್ನೆರಡು ವರ್ಷದವನಾದ ಷಿಹಾಬುದ್ದೀನ್ ಮಹಮ್ಮದ್‌ನು ಕ್ರಿ.ಶ.೧೪೮೨ರಲ್ಲಿ ಬಹಮನಿ ಸಾಮ್ರಾಜ್ಯದ ಸುಲ್ತಾನ ಪಟ್ಟವನ್ನು ಅಲಂಕರಿಸಿದನು.

**೭. ಷಿಹಾಬುದ್ದೀನ್ ಮಹಮ್ಮದ್(೧೪೮೨–೧೫೭೮)**

ಷಿಹಾಬುದ್ದೀನ್ ಮಹಮ್ಮದ್‌ನು ಕೇವಲ ಹನ್ನೆರಡು ವರ್ಷದ ಬಾಲಕನಾಗಿದ್ದುದರಿಂದ ರಾಜ್ಯದ ಅಧಿಕಾರವನ್ನು ನಿರ್ವಹಿಸಲು ಅಸಮರ್ಥನಾಗಿದ್ದನು. ನಿಜವಾದ ಅಧಿಕಾರವೆಲ್ಲ ಪ್ರಧಾನ ಮಂತ್ರಿಯಾಗಿದ್ದ, ಕುಟಿಲನು, ಕುತಂತ್ರಿಯೂ ಆದ ಟರ್ಕಿ ವಂಶದ ಖಾಸಿಂಬರೀದ್‌ನ ಪಾಲಾಯಿತು. ಸುಲ್ತಾನನ ಅಪ್ರಾಪ್ತ ವಯಸ್ಸು ಮತ್ತು ನಿಸ್ಸಹಾಯಕತೆಗಳನ್ನು ಪ್ರಾಂತೀಯ ಶ್ರೀಮಂತ ದಖ್ಖನ್ನಿಯರು ಮತ್ತು ರಾಜ್ಯಪಾಲರು ದುರುಪಯೋಗಪಡಿಸಿಕೊಂಡು ತಾವೇ ತಮ್ಮ ಪ್ರಾಂತ್ಯಗಳಲ್ಲಿ ಸ್ವತಂತ್ರವಾಗಿ ಆಡಳಿತ ನಡೆಸಲು ಆರಂಭಿಸಿದರು. ಪ್ರಾಂತ್ಯದ ಅಧಿಕಾರಿಗಳಾದ ಬಿಜಾಪುರದ ಯೂಸುಫ್ ಆದಿಲ್‌ಷಾ ಮತ್ತು ಬೀದರ್‌ನ ಖಾಸಿಂ ಬರೀದ್ ಪರಸ್ಪರ ಹೋರಾಡಿ ಬಹಮನಿ ರಾಜ್ಯದಿಂದ ಬೇರ್ಪಡೆಯಾಗಿ ಸ್ವತಂತ್ರರಾದರು. ಬೀರಾರ್‌ನಲ್ಲಿ ಇಮದ್ ಉಲ್ ಮುಲ್ಕನು, ಗೋಲ್ಕೊಂಡದಲ್ಲಿ ಕುತುಬ್ ಉಲ್ ಮುಲ್ಕ್‌ನು ಬಹಮನಿ ಸಾಮ್ರಾಜ್ಯದಿಂದ ದೂರ ಸರಿದು ಸ್ವತಂತ್ರರಾದರು. ಈ ರೀತಿಯಾಗಿ ಬಹಮನಿ ರಾಜ್ಯವು ಬೀದರ್ ಮತ್ತು ಸುತ್ತಮುತ್ತಲಿನ ಪ್ರದೇಶಗಳಿಗೆ ಮಾತ್ರ ಸೀಮಿತಗೊಂಡಿತು. ಇದೇ ರೀತಿ ನಡೆದು ಮಹಮ್ಮದ್ ಪ್ರಾಪ್ತ ವಯಸ್ಕನಾದಾಗ ಅವನು ಆಡಳಿತದತ್ತ ಗಮನವಹಿಸದೇ ಮದಿರೆ ಮತ್ತು ಮಾನಿನಿಯರ ಸಹವಾಸದಲ್ಲಿ ಮುಳುಗಿ ಹೋದನು. ಈ ಎಲ್ಲಾ ಪರಿಸ್ಥಿತಿಗಳ ನಡುವೆ ಪ್ರಧಾನಿಯಾದ ಖಾಸಿಂಬರೀದ್‌ನು ಸುಲ್ತಾನನನ್ನು ತನ್ನ ಕೈಗೊಂಬೆಯಾಗಿಸಿ ಕೊಂಡನು. ಷಿಹಾಬುದ್ದೀನ್ ಸುಲ್ತಾನನ ಕಾಲದಲ್ಲಿ ವಿಸ್ತಾರಗೊಂಡಿದ್ದ ಸಾಮ್ರಾಜ್ಯವು ಸಂಕುಚಿತಗೊಂಡಿತು. ಅಹ್ಮದ್‌ನಗರ, ಗೋಲ್ಕೊಂಡ ಮತ್ತು ಬಿಜಾಪುರ ಸಂಸ್ಥಾನಗಳು ತಮ್ಮ ಸ್ವತಂತ್ರ ಪ್ರಭುತ್ವವನ್ನು ಸ್ಥಾಪಿಸಿದವು. ಈ ರೀತಿಯಾಗಿ ಷಿಹಾಬುದ್ದೀನ್ ಮಹಮ್ಮದ್‌ನ ೩೬ ವರ್ಷಗಳ ಅಸಮರ್ಥ ಆಳ್ವಿಕೆಯು ಕ್ರಿ.ಶ.೧೫೧೮ರಲ್ಲಿ ಆತನ ಮರಣದೊಂದಿಗೆ ಕೊನೆಗೊಂಡಿತು.

**೮. ಅಲ್ಲಾವುದ್ದೀನ್(ಕ್ರಿ.ಶ.೧೫೨೦–೧೫೨೩)**

ನಂತರ ಷಿಹಾಬುದ್ದೀನ್ ಮಹಮ್ಮದ್‌ನ ಮರಣಾನಂತರ ಖಾಸಿಂಬರೀದ್‌ನ ಮಗನಾದ ಅಲಿಬರೀದ್‌ನು ದಿವಂಗತ ಸುಲ್ತಾನನ ಮಗನಾದ ಅಲ್ಲಾವುದ್ದೀನ್‌ನನ್ನು(ಕ್ರಿ.ಶ.೧೫೨೦–೧೫೨೩)ರ ವರೆಗೆ ಬಹಮನಿ ಸುಲ್ತಾನನನ್ನಾಗಿ ಪಟ್ಟಕ್ಕೇರಿಸಿದರು. ಅಲ್ಲಾವುದ್ದೀನ್‌ನು ತಕ್ಕಮಟ್ಟಿಕೆ ರಾಜ್ಯದ ಅಧಿಕಾರವನ್ನೆಲ್ಲಾ ತಾನೇ ಸ್ವತಂತ್ರವಾಗಿ ನಿರ್ವಹಿಸಲು ಪ್ರಾರಂಭಿಸಿದನು, ಇದರಿಂದ ತನ್ನ ಕೈಕೆಳಗಿದ್ದ ಆಡಳಿತವು ಕೈತಪ್ಪಿ ಹೋಗುವುದೆಂದು ನಿರಾಸೆಗೊಂಡ ಅಲಿಬರೀದ್‌ನು ದುರಾಲೋಚನೆಯಿಂದ ಸುಲ್ತಾನನನ್ನು ಸಿಂಹಾಸನದಿಂದ ಪದಚ್ಯುತಿಗೊಳಿಸಿದನು.

### ೯. ವಲೀಯುಲ್ಲಾ(ಕ್ರಿ.ಶ.೧೫೨೩-೧೫೨೬)

ಮಹಮ್ಮದ್‌ಷಾನ ಮತ್ತೊಬ್ಬ ಮಗನಾದ ವಲೀಯುಲ್ಲಾನನ್ನು(ಕ್ರಿ.ಶ.೧೫೨೩-೧೫೨೬)ರವರೆಗೆ ಬಹಮನಿ ಸುಲ್ತಾನನಾಗಿ ಘೋಷಿಸಿದರು. ಈತನನ್ನೂ ಸಹ ಅಲಿಬರೀದ್‌ನು ತನ್ನ ಕುತಂತ್ರದಿಂದ ಶಿರಚ್ಛೇದನ ಕ್ಕೊಳಪಡಿಸಿದನು.

### ೧೦. ಖಲಿಮುಲ್ಲಾ(ಕ್ರಿ.ಶ.೧೫೨೬-೧೫೩೮)

ವಲಿಯುಲ್ಲಾನ ನಂತರ ಅವನ ತಮ್ಮನಾದ ಖಲಿಮುಲ್ಲಾ(ಕ್ರಿ.ಶ.೧೫೨೬-೧೫೩೮)ರವರೆಗೆ ಬಹಮನಿ ಸಾಮ್ರಾಜ್ಯದ ಕೊನೆಯ ಸುಲ್ತಾನನಾಗಿದ್ದನು. ಖಲಿಮುಲ್ಲಾನು ಕುತಂತ್ರಿ ಬರೀದ್‌ನ ಆಡಳಿತದಿಂದ ವಿಮೋಚನೆ ಹೊಂದಲು ಮೊಘಲ್ ಸಾಮ್ರಾಜ್ಯದ ಸ್ಥಾಪಕನಾದ ಬಾಬರ್‌ನಿಗೆ ತನಗೆ ಸಹಾಯ ಮಾಡಿದರೆ ಬೀರಾರ್ ಮತ್ತು ದೌಲತಾಬಾದ್‌ಗಳನ್ನು ಒಪ್ಪಿಸುವುದಾಗಿ ಪತ್ರ ಬರೆದನು. ಈ ಪತ್ರವು ಗುಟ್ಟಾಗಿ ಉಳಿಯದೆ ಬಹಿರಂಗಗೊಂಡಾಗ ಖಲಿಮುಲ್ಲಾನು ಜೀವ ಭಯದಿಂದ ಅಲಿ ಬರೀದನಿಗೆ ಹೆದರಿ ಅಹ್ಮದ್‌ನಗರಕ್ಕೆ ಪಲಾಯನ ಮಾಡಿದನು. ನಂತರದ ದಿನಗಳಲ್ಲಿ ಕ್ರಿ.ಶ.೧೫೩೮ರ ವೇಳೆಗೆ ಖಲಿಮುಲ್ಲಾನು ಅಹ್ಮದ್‌ನಗರದಲ್ಲಿಯೇ ತೀರಿಕೊಂಡನೆಂದು ತಿಳಿಯುತ್ತದೆ. ಖಲಿಮುಲ್ಲಾನ ಮರಣದ ನಂತರ ಅವನ ಮಗನಾದ ಇಲ್ಹಾಮುಲ್ಲಾನು ಈ ಸಾಮ್ರಾಜ್ಯದ ಗೊಡವೆಯೇ ಬೇಡವೆಂದು ಮೆಕ್ಕಾಗೆ ಪ್ರಯಾಣಿಸಿ ಅಲ್ಲಿಂದ ಹಿಂತಿರುಗಲಿಲ್ಲ. ಇದರಿಂದ ಬಹಮನಿ ರಾಜ್ಯವು ಯಾವುದೇ ವಾರಸುದಾರರಿಲ್ಲದೆ ಅಸ್ತಂಗತವಾಗಿ ಮುಂದೆ ಐದು ಸ್ವತಂತ್ರಶಾಹಿ ರಾಜ್ಯಗಳಿಗೆ ಅಸ್ತಿತ್ವವನ್ನು ಕೊಟ್ಟಿತು. ಅವುಗಳೆಂದರೆ ಆದಿಲ್‌ಶಾಹಿ ವಂಶದ ಆಡಳಿತದಲ್ಲಿ ಬಿಜಾಪುರ, ನಿಜಾಮ್‌ಶಾಹಿ ವಂಶದ ಆಡಳಿತದಲ್ಲಿ ಅಹ್ಮದ್‌ನಗರ, ಕುತುಬ್‌ಶಾಹಿ ವಂಶದ ಆಡಳಿತದಲ್ಲಿ ಗೋಲ್ಕೊಂಡ, ಬರೀದ್‌ಶಾಹಿ ವಂಶದ ಆಡಳಿತದಲ್ಲಿ ಬೀದರ್ ಮತ್ತು ಇಮದ್‌ಶಾಹಿ ವಂಶದ ಆಶ್ರಯದಲ್ಲಿ ಬೀರಾರ್. ಈ ಎಲ್ಲಾ ರಾಜ್ಯಗಳು ಏಕತ್ರವಾಗಿದ್ದ ಮತ್ತು ವಿಸ್ತಾರವಾಗಿದ್ದ ಬಹಮನಿ ಸಾಮ್ರಾಜ್ಯವನ್ನು ಛಿದ್ರಗೊಳಿಸಿ ಬಹಮನಿ ಸಾಮ್ರಾಜ್ಯದ ತ್ವರಿತ ಅಂತ್ಯಕ್ಕೆ ಕಾರಣವಾದವು.[೫೦]

ಈ ರೀತಿಯಾಗಿ ಮಹಮ್ಮದ್ ಗವಾನನ ಕೊಲೆಯ ನಂತರ ಬಹಮನಿ ರಾಜ್ಯದ ಅವನತಿ ಆರಂಭವಾಯಿತು. ದಖ್ಖನಿ ಮತ್ತು ವಿದೇಶಿ ಮೂಲಕ ತರಫ್‌ದಾರರು ನಿರಂತರವಾಗಿ ರಾಜ್ಯದ ವಿರುದ್ಧ ದಂಗೆ ಏಳುವ ಪ್ರಯತ್ನಗಳನ್ನು ಮಾಡಹತ್ತಿದರು. ಶಿಹಾಬುದ್ದೀನ್ ಮಹಮೂದನ ಆಳ್ವಿಕೆಯು ಸುಮಾರು ೩೫ ವರ್ಷವೆಂದು ಚರಿತ್ರೆಯಲ್ಲಿ ದಾಖಲೆಯಾಗಿದೆ ಆದರೂ ಕ್ರಿ.ಶ. ೧೪೮೯ರ ಹೊತ್ತಿಗೆ, ಪಟ್ಟಕ್ಕೆ ಬಂದ ೮ ವರ್ಷಗಳಲ್ಲಿ ಆತನ ತರಫ್‌ದಾರರಾದ ನಿಜಾಮುದ್ದೀನ್ ಮುಲ್ಕ್‌ನು ಅಹಮದ್ ನಗರದ ರಾಜಧಾನಿಯಲ್ಲಿ ತನ್ನದೇ ಆದ ಸ್ವತಂತ್ರ್ಯ ರಾಜ್ಯವನ್ನು ಮತ್ತು ನಿಜಾಮಶಾಹಿಯನ್ನು ಪ್ರಾರಂಭಿಸಿದನು. ಗವಾನನ ಮರಣದ ನಂತರ ಬಿಜಾಪುರದ ರಾಜ್ಯಪಾಲನಾಗಿ ನಿಯುಕ್ತನಾದ ಯೂಸುಫ್‌ಖಾನನು ಆದಿಲ್‌ಶಾಹಿ ರಾಜ್ಯವನ್ನು ಪ್ರಾರಂಭಿಸಿದನು. ಬೀದರ್‌ನಲ್ಲಿಯೇ ಇದ್ದ ಕಾಶಿಂಬರೀದ್‌ನು ಬಹಮನಿ ಸುಲ್ತಾನರನ್ನು ತನ್ನ ಅಂಕೆಯಲ್ಲಿ ಇಟ್ಟುಕೊಂಡು ಬರೀದ್‌ಶಾಹಿಯನ್ನು ಪ್ರಾರಂಬಿಸಿದನು. ನಂತರದ ಕೆಲ ದಿನಗಳಲ್ಲಿ ಉತ್ತರದ ವರ್‍ಹಾಡಾದಲ್ಲಿ ಇಮಾದ್‌ಶಾಹಿ, ದಕ್ಷಿಣದ ಗೋವಲಕೊಂಡದಲ್ಲಿ ಕುತುಬ್‌ಶಾಹಿ ರಾಜ್ಯಗಳು ಸ್ವತಂತ್ರ ರಾಜ್ಯಗಳಾಗಿ ಹುಟ್ಟಿಕೊಂಡರು. ಈ ಸ್ವತಂತ್ರ ಸುಲ್ತಾನರು ತಮ್ಮ ಸ್ವಾತಂತ್ರ್ಯವನ್ನು ಸಾರಿಕೊಂಡರೂ ತಕ್ಷಣದಲ್ಲಿ ಬಹಮನಿ ರಾಜಸತ್ತೆಯನ್ನು ಧಿಕ್ಕರಿಸಲಿಲ್ಲ. ಕ್ರಿ.ಶ. ೧೫೧೮ರಲ್ಲಿ ಶಿಹಾಬುದ್ದೀನ್ ಮಹಮೂದನ ಮರಣದ ನಂತರ, ೨೦ ವರ್ಷಗಳ ಕಾಲ ಬಹಮನಿ ರಾಜ್ಯವು ಅಸ್ತಿತ್ವದಲ್ಲಿದ್ದು ಹೆಸರಿಗೆ ಮಾತ್ರ ನಾಲ್ಕು ಜನ ಸುಲ್ತಾನರು ಪಟ್ಟಕ್ಕೆ ಕುಳಿತಿರುವುದು ಕಂಡುಬರುತ್ತದೆ. ಇವರಲ್ಲಿ ಮಹಮೂದನ ಮೂರು ಮಕ್ಕಳಲ್ಲಿ ಹಿರಿಯನಾದ ನಾಲ್ಕನೇಯ ಅಹ್ಮದ್ ೨ ವರ್ಷ(ಕ್ರಿ.ಶ.೧೫೧೮-೧೫೨೦) ಆಳಿದರೆ, ಅಲ್ಲಾವುದ್ದೀನನು ೩

ವರ್ಷ(ಕ್ರಿ.ಶ.೧೫೨೦-೧೫೨೩) ಆಳಿದನು. ಅನಂತರ ಇವರ ಚಿಕ್ಕಪ್ಪರಾದ ವಲೀವುಲ್ಲಾ(ಕ್ರಿ.ಶ.೧೫೨೩-೧೫೨೬) ಮತ್ತು ಖಲೀಮುಲ್ಲಾರು(ಕ್ರಿ.ಶ.೧೫೨೬-೧೫೩೮) ಆಳ್ವಿಕೆ ನಡೆಸಿದರು. ಖಲೀಮುಲ್ಲಾನೊಂದಿಗೆ ಅಂದರೆ ೧೯೧ ವರ್ಷಗಳ ದಖ್ಖನ್ ಬಹಮನಿ ರಾಜ್ಯದ ಆಳ್ವಿಕೆಯು ಅಂತ್ಯಕಂಡಿತು. ಮುಂದೆ ಬಹಮನಿ ಸಾಮ್ರಾಜ್ಯವು ಒಡೆದು ಐದು ಸ್ವತಂತ್ರವಾದ ಷಾಹಿ ರಾಜ್ಯಗಳು ಅಸ್ತಿತ್ವಕ್ಕೆ ಬಂದವು. ಅವುಗಳೆಂದರೆ,

೧. ಬಿರಾರಿನ-ಇಮಾದ್ ಷಾಹಿ

೨. ಅಹ್ಮದ್‌ನಗರದ-ನಿಜಾಂಷಾಹಿ

೩. ಗೋಲ್ಕೊಂಡದ-ಕುತುಬ್ ಷಾಹಿ

೪. ಬಿಜಾಪುರದ-ಆದಿಲ್‌ಷಾಹಿ

೫. ಬೀದರ್‌ನ-ಬರೀದ್ ಷಾಹಿ

ಈ ಐದು ರಾಜ್ಯಗಳು ೧೭ನೇ ಶತಮಾನಗಳವರೆಗೆ ಅಸ್ತಿತ್ವದಲ್ಲಿದ್ದು, ಮುಂದೆ ಮೊಗಲರ ಔರಂಗಜೇಬನ ಕಾಲದಲ್ಲಿ ಆಕ್ರಮಣಕ್ಕೆ ತುತ್ತಾಗಿ ಮೊಗಲರ ಕೈವಶವಾದವು. ಹೀಗೆ ಹಂತ ಹಂತವಾಗಿ ಬಹಮನಿ ಸಾಮ್ರಾಜ್ಯವು ಅವನತಿಯನ್ನು ಕಂಡಿದರ ಕುರಿತು ಪ್ರಸ್ತುತ ಅಧ್ಯಾಯದಲ್ಲಿ ನೋಡಬಹುದು.

**ಸಮಾರೋಪ**

ಬಹಮನಿ ಸುಲ್ತಾನರ ಆಳ್ವಿಕೆಯ ಕಥನವು ದಕ್ಷಿಣ ಭಾರತದ ಸುಲ್ತಾನರುಗಳ ಇತಿಹಾಸದಲ್ಲಿ ಹಾಗೂ ದಖ್ಖನ್ ಇತಿಹಾಸದಲ್ಲಿ ಅತ್ಯಂತ ಪ್ರಮುಖವಾದದ್ದಾಗಿದೆ. ಮಧ್ಯಕಾಲೀನ ಸಂದರ್ಭದ ಮಧ್ಯಭಾರತದಲ್ಲಿ ಬಹಮನಿ ಆಳ್ವಿಕೆ ವಿಶಿಷ್ಟವಾದ ಛಾಪನ್ನು ಮೂಡಿಸಿತು. ಆಕಸ್ಮಿಕವಾಗಿ ಮತ್ತು ಅಷ್ಟೇ ಉದ್ದೇಶರಹಿತವಾಗಿ ಹುಟ್ಟಿಕೊಂಡ ಬಹಮನಿ ರಾಜ್ಯದಲ್ಲಿ ಬಹುತೇಕ ಸುಲ್ತಾನರುಗಳು ಮಧ್ಯಪಾನ, ಭೋಗ ಜೀವನ ಹಾಗೂ ರಾಜ್ಯಗಳೊಂದಿಗೆ ವಿರಸ ಇವುಗಳಲ್ಲೇ ಸಮಯ ಕಳೆದರು. ಫಿರೋಜ್ ಹಾಗೂ ಆತನ ತಮ್ಮ ಇವರಿಬ್ಬರು ಮಾತ್ರ ಇದಕ್ಕೆ ಅಪವಾದವಾದ ಸುಲ್ತಾನರಾಗಿದ್ದರು. ಆಸ್ಥಾನದಲ್ಲಿ ಯಾವುದೇ ನಿರ್ದಿಷ್ಟ ತಾತ್ವಿಕ ಪದ್ಧತಿಗಳು ಇರದಿದ್ದರಿಂದ ಮಹಮ್ಮದ್ ಗವಾನನಂತಹ ಸಮರ್ಥ ಆಡಳಿತಗಾರನೂ ಸಹ ಬಹಮನಿ ಸಾಮ್ರಾಜ್ಯದಲ್ಲಿ ಅಮಾನುಶವಾಗಿ ಕೊಲೆಗೀಡಾದನೆಂದು ಹೇಳಬಹುದು. ಬಹಮನಿಯ ಅನೇಕ ಸುಲ್ತಾನರು ಅಧಿಕಾರದ ದಾಹಕ್ಕೆ ಬಲಿಯಾದರು. ಈ ಅಧಿಕಾರ ದಾಹ ಮತ್ತು ಅವರ ದುರ್ನಡತೆಗಳು ಮುಂದೆ ಐದು ಶಾಹಿ ರಾಜ್ಯಗಳ ಹುಟ್ಟಿಗೆ ಕಾರಣವಾದವು ಮತ್ತು ತಳಹದಿಯಾದವು. ಇದೇ ಸಮಯದಲ್ಲಿ ಉತ್ತರದಲ್ಲಿ ಮೊಗಲ್ ಸಾಮ್ರಾಜ್ಯ ಸ್ಥಾಪನೆಯಾಯಿತು. ಮುಂದೆ ಬಹಮನಿಯ ನಂತರ ಹುಟ್ಟಿಕೊಂಡ ಬಿಜಾಪುರದ ಆದಿಲ್‌ಶಾಹಿ ರಾಜ್ಯವು ಎರಡು ಶತಮಾನಗಳ ಕಾಲ ದಕ್ಷಿಣ ಭಾರತದಲ್ಲಿ ಬಹಮನಿಗಿಂತ ಸಮರ್ಥವಾಗಿ ಆಡಳಿತ ನಡೆಸಿತು.

**ಕೊನೆ ಟಿಪ್ಪಣಿಗಳು**


೧. V.C. Pandey, Sociology and Education in the Indian Context. Mehra Offset Press, New Delhi, 2005, p. 123.

೨. Alexander Mikaberidze, Conflict and Conquest in the Islamic World: A Historical Encyclopedia, 2011, Vol. I, p. 977.

೩. B.V. Rao, History of Asia, New Dawn Press Inc., New Delhi, p. 301-302.

೪. Major T.W. Haig, Historic Landmarks of the Deccan. Pioneer Press, Allahabad, 1907, p.30.

೫. ಕುಂದೂರಿ ಈಶ್ವದತ್ತು(ಅನು), ಗುರುಮೂರ್ತಿ ಪೆಂಡಕೂರು, ಭಗ್ನ ವಿಜಯನಗರ ಚರಿತ್ರೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦, ಪುಟ ೨೩

೬. ಎಚ್.ಎಲ್. ನಾಗೇಗೌಡ, ಪ್ರವಾಸಿ ಕಂಡ ಇಂಡಿಯಾ, ಸಂಪುಟ ೨, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು, ೧೯೬೬, ಪುಟ ೨೫೭, ೨೫೮.

೭. Sir Henry Miers Elliot , The History of India, as Told by Its Own Historians: The Muhammadan Period. Trubner & Company, London, Vol. 8, 1877, p. 16.

೮ ವಿಶ್ವನಾಥ(ಅನು), ಪಿ.ಎಂ. ಜೋಶಿ(ಮೂಲ), ದೆಹಲಿ ಸುಲ್ತಾನರ ಅಧಿಪತ್ಯ, ಭಾಗ-೧, ಸಂಪುಟ ೧೧, ಭಾರತೀಯ ವಿದ್ಯಾಭವನ, ಬೆಂಗಳೂರು, ೨೦೦೧, ಪು. ೩೮೧-೩೮೬.

೯. ಬಿ.ಆರ್. ರಂಗಸ್ವಾಮಿ ಮತ್ತು ಷೇಕ್ ಅಲಿ, ದಕ್ಷಿಣ ಭಾರತದ ಇತಿಹಾಸ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೨೦೦೩, ಪು. ೩೨೦-೩೨

೧೦. ವಿಶ್ವನಾಥ(ಅನು), ಪಿ.ಎಂ. ಜೋಶಿ(ಮೂಲ), ದೆಹಲಿ ಸುಲ್ತಾನರ ಅಧಿಪತ್ಯ, ಭಾಗ-೧, ಸಂಪುಟ ೧೧, ಭಾರತೀಯ ವಿದ್ಯಾಭವನ, ಬೆಂಗಳೂರು, ೨೦೦೧, ಪು. ೩೮೨-೮೫

೧೧. ವಿಶ್ವನಾಥ(ಅನು), ಪಿ.ಎಂ. ಜೋಶಿ(ಮೂಲ), ದೆಹಲಿ ಸುಲ್ತಾನರ ಅಧಿಪತ್ಯ, ಭಾಗ-೧, ಸಂಪುಟ ೧೧, ಭಾರತೀಯ ವಿದ್ಯಾಭವನ, ಬೆಂಗಳೂರು, ೨೦೦೧, ಪು.೩೮೧

೧೨. ಕೆ.ಎಂ. ಮೇತ್ರಿ, 'ಸುಲ್ತಾನನ ಸುರುಳಿ' ಮೈತ್ರಿ ಪ್ರಕಾಶನ, ಬೀದರ್, ೧೯೯೪, ಪುಟ ೧,೨,೩,೪

೧೩. ವಿಶ್ವನಾಥ(ಅನು), ಪಿ.ಎಂ. ಜೋಶಿ(ಮೂಲ), ದೆಹಲಿ ಸುಲ್ತಾನರ ಅಧಿಪತ್ಯ, ಭಾಗ-೧, ಸಂಪುಟ ೧೧, ಭಾರತೀಯ ವಿದ್ಯಾಭವನ, ಬೆಂಗಳೂರು, ೨೦೦೧, ಪು. ೩೮೨-೮೪.

೧೪. ಎಂ. ಶೇಷಾದ್ರಿ(ಅನು), ಕರ್ನಾಟಕ ಪರಂಪರೆ, ಸಂಪುಟ ೨, ಮಧ್ಯಕಾಲ ಮತ್ತು ಆಧುನಿಕ ಕಾಲ, ಮೈಸೂರು, ೧೯೭೦, ಪು. ೫೮.

೧೫. K.A.Nilakanta Sastri, A History of South India from Preshistoric Times to the Fall of Vijayanagar, Oxford University Press-1966, Published by John Brown Oup, Bombay, 1966, pp-288-295.

೧೬. L.Prasad, Studies in Ancient and Medieval India, Cosmos Book hive(P) Ltd., 2012.

೧೭. ಬಿ.ಆರ್. ರಂಗಸ್ವಾಮಿ ಮತ್ತು ಷೇಕ್ ಅಲಿ, ದಕ್ಷಿಣ ಭಾರತದ ಇತಿಹಾಸ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೨೦೦೩, ಪು.೩೨೬

೧೮. H.K.Sherwani, The Bahmanis of the Deccan, Manager of Publications, Saood Manzil, Hyderabad, Vol I, 1942, p.60

೧೯. H.K.Sherwani, The Bahmanis of the Deccan, Manager of Publications, Saood Manzil, Hyderabad, Vol I, 1942, p.67

೨೦. H.K.Sherwani, The Bahmanis of the Deccan, Manager of Publications, Saood Manzil, Hyderabad, Vol I, 1942, p.68

೨೧. ಕೆ.ವಿ.ಮುನ್ಸಿ, ದೆಹಲಿ ಸುಲ್ತಾನರ ಆಧಿಪತ್ಯ, ಭಾಗ-೧, ಸಂಪುಟ-೬, ಭಾರತೀಯ ವಿಧ್ಯಾಭವನ, ಬೆಂಗಳೂರು, ೨೦೦೫, ಪುಟ ೩೮೪.

೨೨. ಕೆ.ವಿ.ಮುನ್ಸಿ, ದೆಹಲಿ ಸುಲ್ತಾನರ ಆಧಿಪತ್ಯ, ಭಾಗ-೧, ಸಂಪುಟ-೬, ಭಾರತೀಯ ವಿಧ್ಯಾಭವನ, ಬೆಂಗಳೂರು, ೨೦೦೫, ಪುಟ ೩೮೫.

೨೩. Suryanath Kamath, Concise History of Karnataka, Jupiter Books, MCC, Publications, Bangalore, 1980, p.191

೨೪. ಅಮರೇಶ ಮುದಗಲ್, 'ಇತಿಹಾಸ ಇಂಚರ'-೧೨ ವಿಜಯನಗರ ಕಾಲದ ದೋ-ಅಬ್ ಪ್ರದೇಶ ಪುಟ ೯೮-೯೯. ಅದಿತಿ ಪ್ರಕಾಶನ, ೨೦೦೭(ಸಂಶೋಧನಾ ಪ್ರಬಂಧ).

೨೫. ಕೆ.ವಿ. ಮುನ್ಷಿ, ದೆಹಲಿ ಸುಲ್ತಾನರ ಆಧಿಪತ್ಯ, ಭಾಗ-೧, ಸಂಪುಟ-೬, ಭಾರತಿ ವಿದ್ಯಾಭವನ, ಬೆಂಗಳೂರು, ೨೦೦೪, ಪುಟ ೩೮೭.

೨೬. Gazetter of the Bombay Presidencey, Government Central Press, Bombay, Vol.XX, 1884, p.277.

೨೭. H.K.Sherwani,The Bahmanis of the Deccan, Manager of Publications, Saood Manzil, Hyderabad, Vol I, 1942, p.129.

೨೮. H.K.Sherwani, The Bahmanis of the Deccan, Manager of Publications, Saood Manzil, Hyderabad, Vol I, 1942, p.145.

೨೯. ಕೆ.ವಿ.ಮುನ್ಷಿ, ದೆಹಲಿ ಸುಲ್ತಾನರ ಆಧಿಪತ್ಯ, ಭಾಗ-೧, ಸಂಪುಟ-೬, ಭಾರತಿ ವಿದ್ಯಾಭವನ, ಬೆಂಗಳೂರು, ೨೦೦೪, ಪುಟ ೩೮೯-೩೯೧.

೩೦. ಎನ್. ವೆಂಕಟರಮಣಯ್ಯ(ಮೂಲ), ಗುರುಮೂರ್ತಿ ಪೆಂಡಕೂರ್(ಅನು), ವಿಜಯನಗರ ಚರಿತ್ರೆ, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು, ೨೦೧೦, ಪು. ೫೮-೫೯-೬೦.

೩೧. Suryanath Kamath, Concise History of Karnataka, Jupiter Books, MCC, Publications, Bangalore, 1980, p.193.

೩೨. K.A.Nilakanta Sastri, A History of South India from Pre-historic Times to the Fall of Vijayanagara(4th edition), Oxford University Press, Medrass, 1975, pp.227-228.

೩೩. David Abraham and Nick Edwards, The Rough Guide to South India. Sterling Publishers Pvt, Ltd., New Delhi,Vol.I, p.268.

೩೪. J.L.Mehta., Advanced Study in the History of Medieval India. Sterling Publishers Pvt.Ltd., New Delhi, Vol.I, 1987, p.268.

೩೫. Suryanath Kamath, Concise History of Karnataka, Jupiter Books, MCC, Publications, Bangalore, 1980, p.194.

೩೬. H.K.Sherwani, The Bahmanis of the Deccan, Manager of Publications, Saood Manzil, Hyderabad, Vol I, 1942, p.175.

೩೭. H.K.Sherwani, Mahmud Gawan The Great Bahmani Wazir, Kitabistan, Allahabad, p.154-160

೩೮. H.K.Sherwani, The Bahmanis of the Deccan, Manager of Publicatons, Saood Manzil, Hyderabad, Vol I, 1942, p.144-145.

೩೯. H.K.Sherwani, The Bahmanis of the Deccan, Manager of Publicatons, Saood Manzil, Hyderabad, Vol I, 1942, p.335.

೪೦. R.S.Chourasia, History of Medieval India, Atlantic Publishers, New Delhi, 2002, p104

೪೧. H.K.Sherwani, The Bahmanis of the Deccan, Manager of Publications, Saood Manzil, Hyderabad, Vol I, 1942, p.50.

೪೨. ಹನುಮಂತರಾಯ, ಗುಲ್ಬರ್ಗಾ ಜಿಲ್ಲೆಯ ರೈತ ಚಳುವಳಿ: ಚಾರಿತ್ರಿಕ ಅಧ್ಯಯನ, ಎಂ.ಫಿಲ್ ಅಪ್ರಕಟಿತ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯-೧೦, ಪುಟ ೨೧.

೪೩. Yajdani G, Bidar Its History and Monuments, London, 1947, p-129.

೪೪. Suryanath Kamath, Consise History of Karnataka, Jupiter Books, MCC Publications, Bangalore, 1980, p 197.

೪೫. ಬಿ.ಆರ್.ರಂಗಸ್ವಾಮಿ(ಸಂ.ಸಂ.) ಮತ್ತು ಷೇಕ್ ಅಲಿ(ಪ್ರ.ಸಂ.), ದಕ್ಷಿಣ ಭಾರತದ ಇತಿಹಾಸ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೨೦೦೩, ಪು.೪೦೬-೪೦೭.

೪೬. Suryanath Kamath, Consise History of Karnataka, Jupiter Books, MCC Publications, Bangalore, 1980, p 198.

೪೭. Suryanath Kamath, Consise History of Karnataka, Jupiter Books, MCC Publications, Bangalore, 1980, p.196.

೪೮. M.A.Nayeem, Hyderabad, Philatelic History, Philaterlic Congress of India, 1980, p. 3-4

೪೯. ಎ.ಕೆ.ಮಜುಂದಾರ್(ಮೂಲ), ವಿ.ವಿ.ನರಸಿಂಹಮೂರ್ತಿ(ಅನು), ಮೊಗಲ್ ಸಾಮ್ರಾಜ್ಯ, ಭಾಗ-೨ ಸಂ.೧೨, ಭಾರತೀಯ ವಿದ್ಯಾಭವನ, ಬೆಂಗಳೂರು, ೨೦೦೩, ಪುಟ ೧೬೮, ೧೬೯.

೫೦. H.K.Sherwani, The Bahmanis of the Deccan, Manager of Publicatons, Saood Manzil, Hyderabad, Vol I, 1942, p.146-147.

ಅಧ್ಯಾಯ-ಮೂರು

## ಬಹಮನಿ ಕಾಲದ ಸಾಮಾಜಿಕ ವ್ಯವಸ್ಥೆ

## ಅಧ್ಯಾಯ–೩

# ಬಹಮನಿ ಕಾಲದ ಸಾಮಾಜಿಕ ವ್ಯವಸ್ಥೆ

### ಪ್ರಸ್ತಾವನೆ

ಬಹಮನಿ ಸುಲ್ತಾನರು ಸೂಫಿ ಸಂತರ ಬೋಧನೆಗಳಿಂದ ತೀವ್ರ ಪ್ರಭಾವಕ್ಕೊಳಗಾಗಿದ್ದರು. ತಮ್ಮ ಪ್ರಾಬಲ್ಯ ಮತ್ತು ಸುಲ್ತಾನರ ಮೇಲೆ ಮೇಲುಗೈ ಸಾಧಿಸುವುದರ ಮುಖಾಂತರ ಸೂಫಿಗಳು ಸಮಾಜದಲ್ಲಿರುವ ಸಾಮಾಜಿಕ ಪಿಡುಗುಗಳಾದ ಕುಡಿತ, ವೇಶ್ಯಾವಾಟಿಕೆ, ಭಿಕ್ಷಾಟನೆ, ದರೋಡೆ ಇನ್ನೂ ಮುಂತಾದವುಗಳನ್ನು ಸಮಾಜದಿಂದ ಕಿತ್ತೊಗೆಯಲು ಪ್ರಯತ್ನಿಸಿದರು. ಬಹಮನಿ ಸುಲ್ತಾನರು ಪರ್ಶಿಯಾ, ಇರಾನ್, ಇರಾಕ್ ಮತ್ತು ಮಧ್ಯಪ್ರಾಚ್ಯ ಪ್ರದೇಶಗಳಿಂದ ಆಗಮಿಸಿದ ವಿದ್ವಾಂಸರು, ಚಿತ್ರಕಲೆ, ಅನೇಕ ಬುದ್ದಿಜೀವಿಗಳಿಗೆ ಕೂಡ ಪ್ರೋತ್ಸಾಹ ನೀಡಿರುವುದನ್ನು ನಾವು ಸ್ಮರಿಸಬಹುದು. ಹೀಗೆ ಬಹಮನಿ ಸಾಮ್ರಾಜ್ಯವು ಪ್ರಗತಿಪರ ಸಾಮಾಜಿಕ ಮತ್ತು ಸಾಂಸ್ಕೃತಿಕ ಅಭಿವೃದ್ಧಿಗಳಿಗೆ ಮುಂದಾಗಿರುವುದನ್ನು ಕಾಣಬಹುದಾಗಿದೆ.

ದಖ್ಖನ್ನಿನಲ್ಲಿ ಬಹಮನಿಯ ಆಡಳಿತವು ಸಾಮಾಜಿಕ ಮತ್ತು ಸಾಂಸ್ಕೃತಿಕ ಸಂಸ್ಥೆಗಳು ಹಾಗೂ ಚಟುವಟಿಕೆಗಳಿಗೆ ಹೊಸ ಆಯಾಮ ಒದಗಿಸಿಕೊಟ್ಟಿತು. ಬಹಮನಿ ಸುಲ್ತಾನರು ಗುಲ್ಬರ್ಗಾ ಮತ್ತು ಬೀದರ್ ಈ ಎರಡೂ ರಾಜಧಾನಿಗಳಲ್ಲಿ ಸೂಫಿ ಸಂತರಿಗೆ ಪ್ರಧಾನ ಸ್ಥಾನಮಾನ ನೀಡಿದ್ದರು. ಬಹಮನಿ ಸಾಮ್ರಾಜ್ಯದ ರಾಜಕೀಯ ಮತ್ತು ಆರ್ಥಿಕ ಸಂಸ್ಥೆಗಳು ಹೆಚ್ಚಾಗಿ ತಮ್ಮ ಹಿಂದಿನ ಪೂರ್ವಾಧಿಕಾರಿಗಳು ಉತ್ತರ ಭಾರತದ ಮಾದರಿಯ ಆಧಾರಗಳ ಮೇಲೆ ನಿಂತಿದ್ದರೆ, ಸಾಮಾಜಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳು ಸೂಫಿ ಸಂತರ ಸುತ್ತಲೂ ಸುತ್ತುತ್ತಿದ್ದವು. ಇವರು ಉಳಿದ ಯೋಗಿಗಳನ್ನು ಮೇಲ್ದರ್ಜೆಗೇರಿಸಲು ಶಕ್ತಿ ತುಂಬಿದರು. ಐತಿಹಾಸಿಕ ಮುಲಾಧಾರಗಳು ಸಾಕ್ಷೀಕರಿಸುವಂತೆ ಚಿಸ್ತಿ ಮತ್ತು ಜುನ್ಯೆದಿ ಸಂತರ ಆಜ್ಞೆಗಳು ಬಹಮನಿ ಸಾಮ್ರಾಜ್ಯದಲ್ಲಿ ನೆಲೆಸಿದ್ದವು. ಅವುಗಳು ವಿವಿಧ ನಗರಗಳಲ್ಲಿ ಹಲವು ಮಟ್ಟಗಳಲ್ಲಿ ತಮ್ಮ ಖಿಲಾಫ ಮತ್ತು ಮುರೀದಗಳ ಮೂಲಕ ಕಾರ್ಯಾಚರಣೆಯಲ್ಲಿದ್ದವು ಎಂದು ಹೇಳಬಹುದು.

ಮಧ್ಯಕಾಲೀನ ಕರ್ನಾಟಕದ ಸಮಾಜವು ಸಹ ಪ್ರಾಚೀನ ಸಮಾಜದ ಆಚಾರ–ವಿಚಾರ ಪದ್ಧತಿಗಳನ್ನು ಯಥಾರೀತಿ ಮುಂದುವರೆಸದೇ, ಅವುಗಳಲ್ಲಿ ಕೆಲವು ಬದಲಾವಣೆ ಮತ್ತು ಕಟ್ಟುನಿಟ್ಟುಗಳನ್ನು ಮಾಡಿಕೊಂಡಿತು. ಇಂಥ ಬದಲಾವಣೆಗಳಿಗೆ ಕಾರಣ ಈ ಕಾಲಘಟ್ಟದಲ್ಲಿ ಮುಸ್ಲಿಮರು, ವಿದೇಶಿಯರು ರಾಷ್ಟ್ರೀಯ ಹಾಗೂ ಪ್ರಾಂತೀಯ ಹಂತಗಳಲ್ಲಿ ಕಾಣಿಸಿಕೊಂಡಿದ್ದು, ಇಲ್ಲಿಗೆ ಬಂದ ಇತರೆ ಧರ್ಮೀಯರು ತಮ್ಮ ಧರ್ಮ, ಸಂಸ್ಕೃತಿಗಳನ್ನು ಪ್ರಚುರಪಡಿಸುವುದರೊಂದಿಗೆ ಭಾರತೀಯ ಸಂಸ್ಕೃತಿ ಧರ್ಮದ ನೀತಿ ನಿಯಮಗಳು ಹಾಳು ಮಾಡುತ್ತವೆ ಎಂಬ ಭಾವನೆಗಳು ಸ್ಥಳೀಯರಲ್ಲಿ ಬೆಳೆಯತೊಡಗಿದವು. ಅದಕ್ಕಾಗಿ ಧರ್ಮ ಮತ್ತು ಸಂಸ್ಕೃತಿ ರಕ್ಷಣೆ ಮಾಡಲು ಇಲ್ಲಿನ ಸಮಾಜ ಬಹು ಬಗೆಯ ನಿರ್ಬಂಧಗಳನ್ನು ರೂಪಿಸಿತು.

ಒಂದು ಪ್ರಾಂತ್ಯದ ಸಾಮಾಜಿಕ ರಚನೆಯು ಅನೇಕ ಅಂಶಗಳಿಂದ ನಿರ್ಧರಿಸಲ್ಪಡುತ್ತದೆ. ಅವುಗಳೆಂದರೆ, ಪ್ರಾದೇಶಿಕ ವಿಸ್ತಾರಗಳು, ಜಾತಿ ಕಟ್ಟುಪಾಡುಗಳು, ಧರ್ಮಗಳು, ನಂಬಿಕೆಗಳು, ಪಂಥಗಳು, ಭಾಷೆ, ಜನಾಂಗ ಮತ್ತು ಪರಿಸರಗಳನ್ನು ಗಮನಿಸಿ ಆ ಸಮಾಜದ ರಚನೆಯನ್ನು ವಿವರಿಸಬಹುದು. ಸಾಮಾಜಿಕ ವ್ಯವಸ್ಥೆಯ ಕ್ಷೇತ್ರವು ವಿಶಾಲವಾದ ಕ್ಷೇತ್ರವನ್ನು ಒಳಗೊಂಡಿದ್ದು, ಜೀವನದ ಆಲೋಚನಾ ವಿಧಾನ, ಸ್ವಭಾವಗಳು, ನೀತಿಗಳು, ಕುಟುಂಬದ ಸ್ವರೂಪ, ಸಮಾಜದಲ್ಲಿನ ಆಚಾರ-ವಿಚಾರಗಳು, ಹಬ್ಬಗಳು, ಜಾತ್ರೆಗಳು, ಉಡುಗೆ-ತೊಡುಗೆಗಳು ಮತ್ತು ಅವರ ಸಾಮಾಜಿಕ ಜೀವನದ ಮೇಲೆ ಅವಲಂಬಿತವಾಗಿದೆ. ಸಮಾಜ ವ್ಯವಸ್ಥೆಯ ಮೇಲೆ ಹಲವಾರು ಅಂಶಗಳು ಪ್ರಭಾವ ಬೀರುತ್ತವೆ, ಅವು ರಾಜಕೀಯ ಆದರ್ಶಗಳಾಗಿರಬಹುದು, ಆರ್ಥಿಕ ಪರಿಸ್ಥಿತಿಗಳಾಗಿರಬಹುದು, ಸಾಂಸ್ಕೃತಿಕ ಚಟುವಟಿಕೆಗಳಾಗಿರಬಹುದು ಅಥವಾ ಧಾರ್ಮಿಕ ಪದ್ಧತಿಗಳಾಗಿರಬಹುದು ರಾಜ್ಯದ ಈ ಎಲ್ಲಾ ಅಂಶಗಳು ಆ ಸಮಾಜದ ವ್ಯವಸ್ಥೆಯನ್ನು ಬಿಂಬಿಸುತ್ತವೆ.

## ೩.೧. ಸಾಮಾಜಿಕ ರಚನೆ

ಭಾರತೀಯ ಸಾಮಾಜಿಕ ರಚನೆಯನ್ನು ಕುರಿತು ಅರ್ಥೈಸುವುದು ಸುಲಭದ ಮಾತಲ್ಲ, ಆಧುನಿಕ ಕಾಲದಿಂದ ಕಾಲಕ್ಕೆ ಸಂಕೀರ್ಣಗೊಂಡಿರುವುದು ಮಾತ್ರವಲ್ಲದೆ, ಆಂತರಿಕವಾಗಿ ಹಲವು ಸಾಂಸ್ಕೃತಿಕ ವೈರುಧ್ಯವನ್ನು ಸೃಷ್ಟಿಸಿಕೊಂಡಿದೆ. ಅವುಗಳನ್ನು ಚಾರಿತ್ರಿಕ ಕಾಲಘಟ್ಟದಲ್ಲಿ ನಿಂತು ಚರ್ಚಿಸುವುದು ಕಷ್ಟಸಾಧ್ಯ; ಪ್ರಾಚೀನ ಸಮಾಜವು ರೂಪಿಸಿಕೊಂಡಿರುವ ಬಹುತೇಕ ರೂಢಿ ಸಂಪ್ರದಾಯಗಳು ಇಂದಿಗೂ ಮುಂದುವರಿಯುತ್ತಿವೆ. ಈ ಅವಧಿಯಲ್ಲಿ ವಿವಿಧ ಮತ ಪಂಥಗಳು, ಸಾಮಾಜಿಕ ಮತ್ತು ಧಾರ್ಮಿಕ ಅಂದೋಲನಗಳು ಸಮಾಜದ ಮೇಲೆ ಮಹತ್ತರವಾದ ಪರಿಣಾಮ ಬೀರಿವೆ.  ಈ ಹಿನ್ನಲೆಯಲ್ಲಿ ಸಾಮಾಜಿಕ ರಚನೆಯನ್ನು ಕುರಿತು ಪ್ರತ್ಯೇಕವಾಗಿ ಇಲ್ಲಿ ಚರ್ಚಿಸಲಾಗಿದೆ.

ಬಹಮನಿ ಸುಲ್ತಾನರ ಆಡಳಿತದ ಅವಧಿಯಲ್ಲಿ ಸಾಮಾಜಿಕ ಜೀವನವು ಏರುಪೇರಾಗಿದ್ದಿತು. ರಾಜರ ಅಂತಃಕಲಹಗಳಿಂದ ನಿರಂತರ ಸಂಭವಿಸುತ್ತಿದ್ದ ದಂಗೆಗಳು, ಒಳಸಂಚುಗಳು ಮತ್ತು ಪಿತೂರಿಗಳು ಸಮಾಜದ ಶಾಂತ ಪರಿಸ್ಥಿತಿಯನ್ನು ಕದಡಿದ್ದವು. ಜನರು ಸುಲ್ತಾನರ ಆಡಳಿತಕ್ಕೆ ಹೊಂದಿಕೊಂಡು, ತಮ್ಮ ತಮ್ಮ ವೃತ್ತಿಗಳಲ್ಲಿ ನಿಶ್ಚಿಂತೆಯಾಗಿ ತಮ್ಮ ಜೀವನವನ್ನು ಸಾಗಿಸುತ್ತಿದ್ದರು. ಬಹಮನಿ ಸುಲ್ತಾನರಿಗೆ ಪ್ರಜೆಗಳು ಎಂದೂ ಸಮಸ್ಯೆಯಾಗಿರಲಿಲ್ಲ, ಬದಲಾಗಿ ಆಧಾರ ಸ್ತಂಭವಾಗಿದ್ದರು. ಪ್ರಜೆಗಳಿಂದ ರಾಜ್ಯದ ಸಂಪತ್ತು, ಬೊಕ್ಕಸಕ್ಕೆ ಹಾಗೂ ಸೈನ್ಯಕ್ಕೆ ಸದಾಕಾಲ ನೆರವು ದೊರೆಯುತ್ತಿತ್ತು. ಕೃಷಿಕರಿಗೆ ಮತ್ತು ಸಾಮಾನ್ಯ ಜನರಿಗೆ ತಮ್ಮ ಜೀವನವನ್ನು ನಡೆಸಲು ಯಾವ ಸೌಲಭ್ಯಗಳು ಬೇಕೋ ಅವೆಲ್ಲವನ್ನು ಅವರಿಗೆ ಸುಲ್ತಾನರು ಒದಗಿಸುತ್ತಿದ್ದರು.

ಬಹಮನಿ ರಾಜ್ಯದಲ್ಲಿ ಸಾಮಾಜಿಕ ಜೀವನವು ಸಾಂಪ್ರದಾಯಿಕ ನೆಲೆಗಟ್ಟಿನ ಮೇಲೆ ನೆಲೆಯೂರಿತ್ತು. ಸಮಸ್ತ ಸಾಮಾಜಿಕ ವ್ಯವಸ್ಥೆಗಳಿಗೆ ಕುಟುಂಬವೇ ಕೇಂದ್ರಬಿಂದುವಾಗಿದ್ದು, ಮನುಷ್ಯನ ಸಕಲ ಕಾರ್ಯಗಳು ಈ ಕೇಂದ್ರದಿಂದಲೇ ಉದಯಿಸುತ್ತಿದ್ದವು. ಕುಟುಂಬವು ಒಂದು ಸಮಗ್ರ ಘಟಕವಾಗಿ, ಅದರಲ್ಲಿ ಎಲ್ಲರೂ ಬೆಸೆದುಕೊಂಡು ಸಹಕರಿಸಿ ಕೆಲಸ ನಿರ್ವಹಿಸಬೇಕಾಗಿತ್ತು. ಕುಟುಂಬದ ಸಮಗ್ರತೆಯ ಮೇಲೆ ಮನುಷ್ಯನ ಏಳುಬೀಳುಗಳು ನಿಶ್ಚಯಿಸಲ್ಪಡುತ್ತವೆ. ಸಮಾಜದಲ್ಲಿ ಕುಟುಂಬದ ಸ್ಥಾನ ಎಷ್ಟು ಬಲವಾಗಿದೆ? ಜನರು ಕುಟುಂಬಕ್ಕೆ ಹೇಗೆ ನಿಷ್ಠುರಾಗಿದ್ದಾರೆ? ಹೇಗೆ ಶಿಸ್ತಿನಿಂದ ನಡೆದುಕೊಂಡಿದ್ದಾರೆ? ಹೇಗೆ ಕಷ್ಟ-ಸುಖಗಳಿಗೆ ಸ್ಪಂಧಿಸುತ್ತಿದ್ದಾರೆ? ಎನ್ನುವುದು ಒಂದು ಸಾಮಾಜಿಕ ವ್ಯವಸ್ಥೆಯಲ್ಲಿ ಬಹಳ ಮುಖ್ಯವಾಗುತ್ತದೆ. ಸಾಮಾಜಿಕ

ವ್ಯವಸ್ಥೆಯು ದೈಹಿಕ, ಜೈವಿಕ, ಸಾಮಾಜಿಕ ಹಾಗೂ ತಾತ್ವಿಕ ಪರಿಗಣನೆಗಳನ್ನು ಹೊಂದಿರುವಂತಹ ಪ್ರಾಚೀನವಾದ ಸಂಸ್ಥೆ. ಮನುಷ್ಯನು ಸಂಘ ಜೀವಿಯಾಗಿದ್ದು ತಾನು ಉಳಿಯಬೇಕೆಂದು ತನ್ನ ಜೊತೆ ತನ್ನ ಕುಟುಂಬವನ್ನು ಬೆಳೆಸಿದನು. ಕುಟುಂಬದ ಎಲ್ಲರೂ ಸೇರಿ ಶ್ರಮವಹಿಸಿ ಹಂಚಿಕೆ ಮಾಡಿಕೊಂಡು ತಮ್ಮ ತಮ್ಮ ದುಡಿಮೆಯನ್ನು ಹಂಚಿಕೊಂಡರು.[೧]

ಬಹಮನಿ ರಾಜ್ಯದಲ್ಲಿ ಇಸ್ಲಾಂ ಧರ್ಮಕ್ಕೆ ಮತ್ತು ಸಂಸ್ಕೃತಿಗಳಿಗೆ ಅತ್ಯಂತ ಹೆಚ್ಚು ಪ್ರೋತ್ಸಾಹ ಮತ್ತು ಮಹತ್ವವನ್ನು ನೀಡಲಾಗಿತ್ತು. ಪ್ರಜೆಗಳ ಮಧ್ಯೆ ಜಾತಿ ವಿಚಾರದಲ್ಲಿ ಹೆಚ್ಚಿನ ಮತ್ಸರವಿಲ್ಲದಿದ್ದರೂ ಸಹ ಸುಲ್ತಾನನ ಆಸ್ಥಾನದಲ್ಲಿ ಮತ್ತು ಸುತ್ತಮುತ್ತಲು ಅವರ ಧರ್ಮದ ಮತ್ತು ಪಂಗಡದ ಅಧಿಕಾರಿಗಳು ಮತ್ತು ಜನರೇ ತುಂಬಿರುತ್ತಿದ್ದರು. ಉತ್ತರ ಭಾರತದಿಂದ ಅನೇಕ ಮಹಮದೀಯ ಸಂತರು ಹಾಗೂ ಮುಸ್ಲಿಂ ಅನುಯಾಯಿಗಳು ಬಹಮನಿ ರಾಜ್ಯಕ್ಕೆ ವಲಸೆ ಬಂದಿದ್ದರು. ಈ ಸಮಯದಲ್ಲಿ ಮತಾಂತರ ಕಾರ್ಯವೂ ಸಹ ನಡೆದಿತ್ತೆಂದು ಹೇಳಲಾಗುತ್ತದೆ. ಸೂಫಿ ಪಂಥದ ಖ್ವಾಜಾ ನಿಜಾಮುದ್ದೀನ್ ಔಲಿಯ ಮತ್ತು ಅವನ ಶಿಷ್ಯರು ಮತಾಂತರ ಕಾರ್ಯದಲ್ಲಿ ತೊಡಗಿದ್ದರೆಂದು ತಿಳಿದುಬರುತ್ತದೆ.[೨] ಮುಸ್ಲಿಂ ಸಮುದಾಯದಂತೆ ಬಹಮನಿ ರಾಜ್ಯದಲ್ಲಿ ಹೆಚ್ಚಿನ ಜನರು ಹಿಂದೂ ಧರ್ಮದವರಾಗಿದ್ದರು. ಇಷ್ಟೇ ಅಲ್ಲದೆ ಲಿಂಗಾಯತ, ಜೈನ, ಕ್ರೈಸ್ತ, ಯಹೂದಿ ಮತ್ತಿತರ ಪಂಗಡಗಳ ಜನರೂ ಸಹ ಬಹಮನಿ ರಾಜ್ಯದಲ್ಲಿ ನೆಲೆಸಿದ್ದರೆಂದು ಇತಿಹಾಸದಿಂದ ತಿಳಿದುಬರುತ್ತದೆ.

### ೩.೧.೧. ಬಹಮನಿ ಕಾಲದಲ್ಲಿ ಹಿಂದೂ ಸಾಮಾಜಿಕ ರಚನೆ

ಬಹಮನಿ ಕಾಲದಲ್ಲಿ ಹಿಂದೂ ಸಾಮಾಜಿಕ ರಚನೆ ಜನಸಂಖ್ಯೆಗೆ ಹೋಲಿಸಿದರೆ ಬಹಮನಿ ರಾಜ್ಯದಲ್ಲಿ ಅಧಿಕ ಸಂಖ್ಯಾತರು ಹಿಂದೂಗಳಾಗಿದ್ದು ಮುಸ್ಲಿಮರು ಅಲ್ಪಸಂಖ್ಯಾತರಾಗಿದ್ದರು.[೩] ಬಹಮನಿ ಆಳ್ವಿಕೆಯ ಪೂರ್ಣಾವಧಿಯ ಕಾಲದಲ್ಲಿ ಅಲ್ಲಿಯ ಸಾಮಾಜಿಕ ವ್ಯವಸ್ಥೆ ತಕ್ಕಮಟ್ಟಿಗೆ ಕ್ರಮಬದ್ಧವಾಗಿತ್ತು ಎಂದು ಹೇಳಬಹುದು. ವೈದಿಕ ಧರ್ಮವಲ್ಲದೆ ದಖ್ಖನ್ನಿನಲ್ಲಿ ಬೇರೆ ಹಲವು ಪಂಥಗಳು ಸಹ ಇದ್ದವು, ಇವುಗಳಲ್ಲಿ ಪ್ರಮುಖವಾದದ್ದು ಭಾಗವತ ಪಂಥ. ಇದಲ್ಲದೆ ನಾಥ ಸಂಪ್ರದಾಯ ಮತ್ತು ಮಹಾನುಭಾವ ಪಂಥಗಳು ಬಹಳಷ್ಟು ಅನುಯಾಯಿಗಳನ್ನು ಹೊಂದಿದ್ದು, ಆ ಕಾಲದಲ್ಲಿ ಪ್ರಬಲವಾಗಿದ್ದವು.

### ೧. ಜಾತಿ ಪದ್ಧತಿ

ಬಹಮನಿ ರಾಜ್ಯದಲ್ಲಿ ಹಿಂದೂ ಸಾಮಾಜಿಕ ಜೀವನವು ಸಾಂಪ್ರದಾಯಿಕ ನೆಲೆಗಟ್ಟಿನ ಮೇಲೆ ನೆಲೆ ನಿಂತಿತ್ತು. ಹಿಂದೂ ಧರ್ಮಶಾಸ್ತ್ರಗಳ ಪ್ರಕಾರ ಕುಟುಂಬ, ಜಾತಿ, ವಿವಾಹ, ಧರ್ಮ ಹೀಗೆ ಅನೇಕ ಅಂಶಗಳು ಬೆಳೆದುಬಂದಿದ್ದವು. ಬಹಮನಿ ಕಾಲದಲ್ಲಿಯೂ ಸಹ ಇವುಗಳಲ್ಲಿ ಯಾವುದೇ ತರಹದ ಬದಲಾವಣೆ ಆಗಿರಲಿಲ್ಲ, ಆಗಲೂ ಸಹ ಅವಿಭಕ್ತ ಕುಟುಂಬಗಳೇ ಹೆಚ್ಚಾಗಿದ್ದವು. ಜಾತಿ ವ್ಯವಸ್ಥೆ ಪದ್ಧತಿ ಜಾರಿಯಲ್ಲಿದ್ದು ಮುಖ್ಯವಾಗಿ ನಾಲ್ಕು ವರ್ಗಗಳಿದ್ದವು. ಬ್ರಾಹ್ಮಣರು ಈ ವ್ಯವಸ್ಥೆಯಲ್ಲಿ ಮೇಲ್ತುದಿಯಲ್ಲಿದ್ದು, ಶೂದ್ರರು ಅತ್ಯಂತ ಕೆಳ ದರ್ಜೆಯಲ್ಲಿದ್ದರು. ಬಹಮನಿ ಆಡಳಿತದ ಹದಿನಾಲ್ಕನೇ ಶತಮಾನದಲ್ಲಿ ಬ್ರಾಹ್ಮಣರು ಪುರೋಹಿತ್‌ಶಾಹಿ ವರ್ಗಕ್ಕೆ ಸೇರಿದವರಾಗಿದ್ದು, ಶೂದ್ರರು ಶೋಷಣೆಗೀಡಾಗಿದ್ದರು, ಹೀಗಾಗಿ ಸಾಮಾಜಿಕ ಒಡನಾಟ ಜಟಿಲವಾಗಿತ್ತೆಂದು ಹೇಳಬಹುದು. ಬೀದರ್ ಮತ್ತು ಬಿಜಾಪುರಗಳಲ್ಲಿ ಬ್ರಾಹ್ಮಣರು ಉನ್ನತ ಹುದ್ದೆಗಳನ್ನು ಹೊಂದಿ ಬಹಮನಿ ರಾಜ್ಯದ ಮುಖ್ಯ ಇಲಾಖೆಗಳಾಗಿದ್ದ ಹಣಕಾಸು ಮತ್ತು ಲೆಕ್ಕಪತ್ರ ಇಲಾಖೆಗಳನ್ನು ನಿರ್ವಹಿಸುತ್ತಿದ್ದರು.[೪] ಧಾರ್ಮಿಕ ವಿಧಿ–ವಿಧಾನಗಳಲ್ಲಿಯೂ ಮತ್ತು ಸಾಮಾಜಿಕ ಅಗ್ರಹಾರಗಳ ಮೇಲ್ವಿಚಾರಣೆಯನ್ನೂ ಸಹ ಬ್ರಾಹ್ಮಣರೇ ನೋಡಿಕೊಳ್ಳುತ್ತಿದ್ದರು.

**೨. ವಿವಾಹ ಪದ್ಧತಿ**

ಹಿಂದೂಗಳಲ್ಲಿ ವಿವಾಹವು ಪ್ರಧಾನ ಸಂಸ್ಕಾರವಾಗಿದ್ದು ಬಹಮನಿ ಕಾಲದಲ್ಲಿ ಎಂಟು ಬಗೆಯ ವಿವಾಹಗಳು ನಡೆಯುತ್ತಿದ್ದವೆಂದು ತಿಳಿಯುತ್ತದೆ. ಹಿಂದೂ ಸಂಪ್ರದಾಯದ ಪ್ರಕಾರ ಕನ್ಯಾದಾನವನ್ನು ಶ್ರೇಷ್ಠ ದಾನವೆಂದು ಪರಿಗಣಿಸಲ್ಪಡುತ್ತಿತ್ತು. ಅಂತರ್ಜಾತಿಯ ವಿವಾಹಗಳಿಲ್ಲದಿದ್ದರೂ ಬಂಧುಗಳಲ್ಲಿ ಅಥವಾ ಸ್ವಜಾತಿಯ ವರ–ವಧುಗಳಲ್ಲಿ ವಿವಾಹ ಸಂಬಂಧಗಳು ಏರ್ಪಡುತ್ತಿದ್ದವು. ಇವುಗಳಲ್ಲಿ ಬಾಲ್ಯವಿವಾಹಗಳೇ ಹೆಚ್ಚಾಗಿ ಪ್ರಚಲಿತದಲ್ಲಿದ್ದವು. ಬಹಮನಿ ಮುಸ್ಲಿಂರ ಆಗಮನದಿಂದ ಈ ಪದ್ಧತಿ ಇನ್ನೂ ಹೆಚ್ಚಾಯಿತೆಂದು ತಿಳಿದುಬರುತ್ತದೆ. ಏಕಪತ್ನಿತ್ವ ಅಸ್ತಿತ್ವದಲ್ಲಿದ್ದು, ಶ್ರೀಮಂತ ವರ್ಗದವರು ಹೆಚ್ಚು ಪತ್ನಿಯರನ್ನು ಹೊಂದಿದ್ದರು. ವರದಕ್ಷಿಣೆ ಪದ್ಧತಿ ಹಾಗೂ ವಿವಾಹ ವಿಚ್ಛೇಧನ ಪದ್ಧತಿಯೂ ಸಹ ಮಧ್ಯಯುಗದ ದಖ್ಖನ್ ಕಾಲದಲ್ಲಿ ಅಸ್ತಿತ್ವದಲ್ಲಿದ್ದವು. ವಿವಾಹ ವಿಚ್ಛೇಧನ ಪಡೆಯಬೇಕಾದರೆ ಕೆಲವು ನಿಯಮಗಳಿದ್ದು, ಪತಿಯು ಲೈಂಗಿಕವಾಗಿ ಅಸಮರ್ಥನಾಗಿದ್ದರೆ, ಮಾನಸಿಕವಾಗಿ ಮತ್ತು ದೈಹಿಕವಾಗಿ ರೋಗಪೀಡಿತನಾಗಿದ್ದರೆ ಅಂತಹವನಿಂದ ಪತ್ನಿ ವಿಚ್ಛೇಧನ ಪಡೆಯಬಹುದಾಗಿತ್ತು, ಅದೇ ರೀತಿ ಪತ್ನಿಯು ಚರಿತ್ರಹೀನಳಾಗಿದ್ದರೆ ಅಥವಾ ಬಂಜೆಯಾಗಿದ್ದರೆ ಪತಿಯು ವಿಚ್ಛೇಧನವನ್ನು ಪಡೆದು ಎರಡನೇ ಮದುವೆಯನ್ನು ಮಾಡಿಕೊಳ್ಳಲು ಅವಕಾಶವಿತ್ತು.[೫]

**೩. ಆಹಾರ ಪದ್ಧತಿ**

ಬಹಮನಿಯರ ಕಾಲದಲ್ಲಿ ದಖ್ಖನ್ ಪ್ರಾಂತ್ಯದಲ್ಲಿ ಆಹಾರ ಮತ್ತು ಬೆಳೆಗಳಲ್ಲಿಯೂ ಸಹ ಅಷ್ಟೇನು ವ್ಯತ್ಯಾಸಗಳಿರಲಿಲ್ಲ. ಹಿಂದೂ ಸಮಾಜದವರು ಅಕ್ಕಿ, ಜೋಳ, ಮೆಕ್ಕೆಜೋಳ, ಹಣ್ಣು–ಹಂಪಲುಗಳು, ಹಾಲಿನ ಉತ್ಪನ್ನಗಳು ಮುಂತಾದವುಗಳನ್ನು ಆಹಾರವಾಗಿ ಸೇವಿಸಿದರೆ ಹಿಂದೂಗಳೇತರರು ಮಾಂಸಾಹಾರಿಗಳಾಗಿದ್ದರು. ಹಬ್ಬದ ದಿನಗಳಲ್ಲಿ ವಿಶೇಷವಾದ ಸಿಹಿಯೂಟವನ್ನು ಸೇವಿಸುತ್ತಿದ್ದು, ನಶೆ ಬರುವ ಪಾನೀಯಗಳನ್ನು ಸೇವಿಸುವುದು ಒಂದು ವಿಶೇಷ ಹವ್ಯಾಸವಾಗಿತ್ತೆಂದು ತಿಳಿದುಬರುತ್ತದೆ.

**೪. ಉಡುಗೆ ಪದ್ಧತಿ**

ಬಹಮನಿ ಕಾಲದಲ್ಲಿ ಸಾಮಾನ್ಯ ವರ್ಗದ ಜನರು ಹೆಚ್ಚಾಗಿ ಹತ್ತಿ ಬಟ್ಟೆಗಳನ್ನೇ ಧರಿಸುತ್ತಿದ್ದರು. ಪುರುಷರು ಧೋತಿ, ನಿಲುವಂಗಿ ಮತ್ತು ಪಂಚೆಗಳನ್ನು ಧರಿಸಿದರೆ, ಸ್ತ್ರೀಯರು ಹೆಚ್ಚಾಗಿ ಸೀರೆಗಳನ್ನು ಧರಿಸುತ್ತಿದ್ದರು. ರೇಷ್ಮೆಯಂತಹ ಬೆಲೆಬಾಳುವ ವಸ್ತ್ರಗಳ ವಿನ್ಯಾಸವನ್ನು ಶ್ರೀಮಂತರು ಮತ್ತು ರಾಜಪರಿವಾರದವರು ಬಳಸುತ್ತಿದ್ದರು. ಆಭರಣಗಳಾದಂತಹ ಬಳೆ, ಉಂಗುರ, ಚಿನ್ನದ ಸರಗಳು, ತೋಳುಪಟ್ಟಿ, ಕಡಗ, ಕಾಲುಂಗುರ, ಸೊಂಟಪಟ್ಟಿ, ಮೂಗುತಿ, ಕಿವಿಯೋಲೆ ಮುಂತಾದ ಆಭರಣಗಳನ್ನು ಉಪಯೋಗಿಸುತ್ತಿದ್ದರೆಂದು ತಿಳಿಯುತ್ತದೆ.

ಬಹಮನಿ ಕಾಲದಲ್ಲಿ ಸಾಮಾನ್ಯ ವರ್ಗದ ಜನರು ಹೆಚ್ಚಾಗಿ ಹತ್ತಿ ಬಟ್ಟೆಗಳನ್ನೇ ಧರಿಸುತ್ತಿದ್ದರು. ಪುರುಷರು ಧೋತಿ, ನಿಲುವಂಗಿ ಮತ್ತು ಪಂಚೆಗಳನ್ನು ಧರಿಸಿದರೆ, ಸ್ತ್ರೀಯರು ಹೆಚ್ಚಾಗಿ ಸೀರೆಗಳನ್ನು ಧರಿಸುತ್ತಿದ್ದರು. ರೇಷ್ಮೆಯಂತಹ ಬೆಲೆಬಾಳುವ ವಸ್ತ್ರಗಳ ವಿನ್ಯಾಸವನ್ನು ಶ್ರೀಮಂತರು ಮತ್ತು ರಾಜಪರಿವಾರದವರು ಬಳಸುತ್ತಿದ್ದರು. ಆಭರಣಗಳಾದಂತಹ ಬಳೆ,ಉಂಗುರ, ಚಿನ್ನದ ಸರಗಳು, ತೋಳುಪಟ್ಟಿ, ಕಡಗ, ಕಾಲುಂಗುರ, ಸೊಂಟಪಟ್ಟಿ, ಮೂಗುತಿ, ಕಿವಿಯೋಲೆ ಮುಂತಾದ ಆಭರಣಗಳನ್ನು ಉಪಯೋಗಿಸುತ್ತಿದ್ದರೆಂದು ತಿಳಿಯುತ್ತದೆ.

**೫. ಧಾರ್ಮಿಕ ಪದ್ಧತಿ**

ಧರ್ಮ ಮತ್ತು ದೇವರ ಹೆಸರಿನಲ್ಲಿ ಬಹಮನಿ ಕಾಲದಲ್ಲಿಯೂ ಸಹ ಹಿಂದೂ ಸಂಪ್ರದಾಯದಂತೆ ಅನೇಕ ಕಾರ್ಯಕ್ರಮಗಳು ಮತ್ತು ಉತ್ಸವಗಳು ನಡೆಯುತ್ತಿದ್ದವು. ಅಂದಿನ ದಿನಗಳಲ್ಲಿ ಹಬ್ಬ, ಉತ್ಸವ, ಜಾತ್ರೆಗಳು ಸಮಾಜದ ಕ್ರಿಯಾಶೀಲ ಮತ್ತು ಮನರಂಜನೆಯ ಪ್ರತೀಕವಾಗಿದ್ದವು. ಹಿಂದೂಗಳು ಹೋಳಿ, ಮಹಾನವಮಿ, ರಥಸಪ್ತಮಿ, ದೀಪಾವಳಿ, ಶಿವರಾತ್ರಿ, ರಾಮನವಮಿ, ದಸರಾ, ಕೃಷ್ಣಾಷ್ಟಮಿ ಮುಂತಾದ

ಹಬ್ಬಗಳನ್ನು ಸಂಭ್ರಮದಿಂದ ಆಚರಿಸುತ್ತಿದ್ದರು. ಸಾಮಾನ್ಯವಾಗಿ ಜನರು ತಮಗೆ ಇಷ್ಟವಾದಂತಹ ಪದಾರ್ಥಗಳನ್ನು ಕೊಳ್ಳಲು ಹೆಚ್ಚಿನ ಸಂಖ್ಯೆಯಲ್ಲಿ ಜಾತ್ರೆಗಳನ್ನೇ ಅವಲಂಭಿಸುತ್ತಿದ್ದರು. ಪ್ರಾಚೀನ ಕಾಲದಿಂದಲೂ ಜಾತ್ರೆಗಳು ಅಸ್ತಿತ್ವದಲ್ಲಿದ್ದು, ಬಹಮನಿ ಸಾಮ್ರಾಜ್ಯದಲ್ಲಿಯೂ ಸಹ ಜಾತ್ರೆಗಳಿಗೆ ಬಹಳ ಪ್ರೋತ್ಸಾಹ ದೊರೆಯುತ್ತಿತ್ತು.[೬] ಜಾತ್ರೆಗಳ ಸಮಯದಲ್ಲಿ ಕೋಲಾಟ, ನಾಟಕ, ಹಾಡು, ಕುಣಿತಗಳಂತಹ ಅನೇಕ ಮನರಂಜನಾ ಕಾರ್ಯಕ್ರಮಗಳು ಜರುಗುತ್ತಿದ್ದವು. ಇಂತಹ ಜಾತ್ರೆಗಳ ಮೂಲಕವಾಗಿಯೇ ಹಿಂದೂ ಸಮಾಜವು ತನ್ನ ಹೊರ ನೋಟದ ಶ್ರೀಮಂತಿಕೆಯನ್ನು ಪ್ರದರ್ಶಿಸುವುದನ್ನು ನಾವು ಕಾಣಬಹುದು.

### ೩.೧.೨. ಬಹಮನಿ ಕಾಲದಲ್ಲಿ ಮುಸ್ಲಿಂ ಸಾಮಾಜಿಕ ರಚನೆ

ಮಧ್ಯಯುಗೀನ ದಖ್ಖನ್‌ದಲ್ಲಿ ಮುಸ್ಲಿಮರು ಅಲ್ಪಸಂಖ್ಯಾತರಾಗಿದ್ದರು. ಆಡಳಿತ ನಡೆಸುವ ಮತ್ತು ಆಳ್ವಿಕೆ ಮಾಡುವ ವರ್ಗವಾಗಿಯೇ ದಖ್ಖನ್ ಸಾಮಾಜಿಕ ಜೀವನದಲ್ಲಿ ಮುಸ್ಲಿಮರು ಗುರುತಿಸಿಕೊಂಡಿದ್ದರು. ಇಸ್ಲಾಂ ಧರ್ಮದ ಪ್ರಕಾರ ಮುಸ್ಲಿಂ ಸಮುದಾಯದಲ್ಲಿ ಪಿತೃ ಪ್ರಧಾನ ಕುಟುಂಬ ವ್ಯವಸ್ಥೆಯೇ ಪ್ರಮುಖವಾಗಿ ಅನುಸರಿಸಲ್ಪಡುತ್ತಿತ್ತು. ದಾನ, ಧರ್ಮ, ಸಮಾನತೆ, ಭ್ರಾತೃತ್ವ, ಸಹಕಾರ ಮುಂತಾದವುಗಳು ಇಸ್ಲಾಂ ಧರ್ಮದ ಮೂಲತತ್ವಗಳಾಗಿದ್ದವು. ಇಸ್ಲಾಂ ಸಮುದಾಯಕ್ಕೆ ಭಾರತೀಯ ಸಮಾಜದಲ್ಲಿ ತನ್ನತನವನ್ನು ಕಾಯ್ದುಕೊಳ್ಳುವುದು ಮಧ್ಯಯುಗದಲ್ಲಿ ಅನಿವಾರ್ಯವಾಗಿತ್ತು, ಅದಕ್ಕಾಗಿ ಎಷ್ಟೋ ಸಲ ಅದು ಸಂಘರ್ಷಕ್ಕಿಳಿಯಬೇಕಾಯಿತು, ಇದು ಅವಶ್ಯಕವೂ ಆಗಿತ್ತು. ಮುಸ್ಲಿಮರಿಗೆ ಅಲ್ಲಿಯ ಸಾಮಾಜಿಕ ಸಂಪ್ರದಾಯ ಮತ್ತು ನಡವಳಿಕೆಗಳಿಗೆ ಹೊಂದಿಕೊಳ್ಳಲು ಅರ್ಧ ಶತಮಾನವೇ ಹಿಡಿಯಿತೆಂದು ತಿಳಿದುಬರುತ್ತದೆ.

#### ೧. ಜಾತಿ ವರ್ಗಗಳು

ಬಹಮನಿ ಕಾಲದಲ್ಲಿ ದಖ್ಖನ್ ಮುಸ್ಲಿಮರನ್ನು ಮುಖ್ಯವಾಗಿ ನಾಲ್ಕು ವರ್ಗಗಳಾಗಿ ವಿಂಗಡಿಸಲಾಗಿತ್ತು, ಅವುಗಳೆಂದರೆ ಆಡಳಿತ ವರ್ಗ(ಅಧಿಕಾರಿಗಳು ಮತ್ತು ದಂಡನಾಯಕರು), ವ್ಯಾಪಾರಿಗಳು, ಗುಲಾಮರು ಮತ್ತು ಧಾರ್ಮಿಕ ಮುಖಂಡರು. ಹಿಂದೂಗಳಂತೆ ಜಾತಿ ವರ್ಗವಿಲ್ಲದಿದ್ದರೂ ಸಹ ಶಿಯಾ, ಸುನ್ನಿ, ಶೇಖ, ಸೈಯ್ಯದ್ ಮೊದಲಾದ ಉಪ ಪಂಗಡಗಳಿದ್ದವು.[೭] ಇವರಲ್ಲಿ ಕೆಲವರು ಮತಾಂತರಿಗಳಾಗಿದ್ದರೆ, ಮತ್ತೆ ಕೆಲವರು ಸ್ಥಳೀಯ ಸ್ತ್ರೀಯರನ್ನು ಮದುವೆಯಾಗಿ ಜನಾಂಗೀಯ ಮಿಶ್ರಣವಾಗಿದ್ದರು.

ಗುಲಾಮ ವರ್ಗದವರನ್ನು ಬಿಟ್ಟರೆ ಉಳಿದೆಲ್ಲಾ ವರ್ಗದವರು ಶ್ರೀಮಂತರಾಗಿದ್ದರು. ಗುಲಾಮರಿಗೆ ಅರಮನೆ ಸೇವೆಗಳಲ್ಲಿ ಅಥವಾ ಆಮೀರರ ಸೇವೆಗಳಲ್ಲಿ ಅವಕಾಶ ದೊರಕಿದ್ದು, ಊಟ, ವಸತಿ ಮತ್ತು ಉತ್ತಮ ಜೀವನವನ್ನು ಒದಗಿಸಲಾಗುತ್ತಿತ್ತು. ಗುಲಾಮಗಿರಿಯು ಮುಸ್ಲಿಂ ಸಮುದಾಯದಲ್ಲಿ ಸಾಮಾನ್ಯವಾದ ಅಂಶವಾಗಿದ್ದಿತು. ಗುಲಾಮರು ಸಹ ಉತ್ತಮ ಹುದ್ದೆಗಳನ್ನು ಬಹಮನಿ ಕಾಲದಲ್ಲಿ ಅಲಂಕರಿಸಿದ್ದರು. ಈ ವ್ಯವಸ್ಥೆ ಬಹಮನಿ ಸುಲ್ತಾನರಿಂದಲೇ ಆರಂಭವಾಯಿತೆಂದು ಮತ್ತು ಸುಲ್ತಾನರು ದೊಡ್ಡ ಸಂಖ್ಯೆಯಲ್ಲಿ ಗುಲಾಮರನ್ನು ಹೊಂದಿದ್ದರೆಂದು ಇತಿಹಾಸದಿಂದ ತಿಳಿಯಬಹುದು.

ಬಹಮನಿ ಕಾಲದಲ್ಲಿ ಸಂಪತ್ತು ಐಶಾರಾಮಿ ಜೀವನಕ್ಕೆ ದಾರಿಮಾಡಿಕೊಟ್ಟಿತ್ತು. ಮುಸ್ಲಿಮರಿಗೆ ಸಮಾಜದಲ್ಲಿ ಯಾವ ಕೊರತೆಯೂ ಇಲ್ಲದ್ದರಿಂದ ಐಶಾರಾಮಿ ಜೀವನ ಕಳೆಯಲು ಪ್ರಾರಂಭಿಸಿದರು. ವೈಭವಯುತ ಜೀವನ, ಕುಡಿತ, ಜೂಜುಗಳಂತಹ ಶ್ರೀಮಂತಿಕೆಯ ಹವ್ಯಾಸಗಳು ಬಹಮನಿಯರ ಸಾಮಾಜಿಕ ಜೀವನದಲ್ಲಿ ಹಾಸುಹೊಕ್ಕಾಗಿದ್ದವು. ಮಧ್ಯ ಸೇವನೆಯು ಶ್ರೀಮಂತ ಮುಸ್ಲಿಮರಲ್ಲಿ ಸಾಮಾನ್ಯವಾದ ಅಂಶವಾಗಿದ್ದು, ಸುಲ್ತಾನರು, ಆಮೀರರು ಜೊತೆಗೆ ಗುಲಾಮರು ಸಹ ಕುಡಿತದ ಹವ್ಯಾಸವನ್ನು ಹೊಂದಿದ್ದರೆಂದು ಇತಿಹಾಸದಿಂದ

ತಿಳಿದುಬರುತ್ತದೆ. ಜೂಜು ಸಮಾಜದಲ್ಲಿ ಸಾಮಾನ್ಯ ಹಾಗೂ ಶ್ರೀಮಂತ ವರ್ಗದವರ ಹವ್ಯಾಸವಾಗಿದ್ದು, ಶ್ರೀಮಂತರು ಹೆಚ್ಚಾಗಿ ಜೂಜಿನಲ್ಲೇ ಕಾಲ ಕಳೆಯುತ್ತಿದ್ದರು. ಬಹಮನಿ ಆಸ್ಥಾನದಲ್ಲಿ ಸುಲ್ತಾನರಂತೆ ಮಂತ್ರಿಗಳೂ ಸಹ ಪ್ರತಿಭಾಶಾಲಿಯಾಗಿದ್ದುದು ತಿಳಿದು ಬರುತ್ತದೆ. ಅನೇಕ ಕವಿಗಳು, ಪಂಡಿತರು, ಕಲಾವಿದರು ಸುಲ್ತಾನರ ಆಶ್ರಯದಲ್ಲಿದ್ದರು. 'ಕಿಸ್ಲಖಾನ್' ಎಂಬ ಪಂಡಿತನು ಎಷ್ಟೊಂದು ಬುದ್ಧಿವಂತನಾಗಿದ್ದನೆಂದರೆ ಅಮೀರ ಖುಸ್ರೂ ಇವನ ಪಾಂಡಿತ್ಯವನ್ನು ಹೊಗಳಿ ಯಾವ ತಾಯಿಯೂ ಇವನಂತಹ ಇನ್ನೊಬ್ಬ ವ್ಯಕ್ತಿಗೆ ಜನ್ಮ ನೀಡಿರಲಾರಳು ಎಂದು ಪ್ರಶಂಶಿಸಿದ್ದಾನೆ. ಬಹಮನಿ ಕಾಲದ ಮತ್ತೊಬ್ಬ ಬುದ್ಧಿಶಾಲಿ ಆಡಳಿತಗಾರ ಮತ್ತು ಮಂತ್ರಿಯೆಂದರೆ ಮಹಮ್ಮದ್ ಗವಾನನು ಎಂದು ಪ್ರಸ್ತುತ ಅಧ್ಯಾಯದಿಂದ ತಿಳಿದುಬರುತ್ತದೆ.

**೨. ವಿವಾಹ ಪದ್ಧತಿ**

ಬಹಮನಿ ಸಾಮ್ರಾಜ್ಯದ ಮುಸ್ಲಿಂ ಸಮಾಜದಲ್ಲಿ ಬಹುಪತ್ನಿತ್ವವು ಜಾರಿಯಲ್ಲಿದ್ದು ಕೇವಲ ನಾಲ್ಕು ಪತ್ನಿಯರಿಗೆ ಸೀಮಿತಗೊಳಿಸಲಾಗಿತ್ತು ಹಾಗೂ ಸಚ್ಚರಿತ್ರೆ ಮತ್ತು ಶುದ್ಧ ಕುಟುಂಬ ಜೀವನಕ್ಕೆ ಹೆಚ್ಚಿನ ಮಹತ್ವವನ್ನು ನೀಡಲಾಗುತ್ತಿತ್ತು. ಅನಾಚಾರ ಮತ್ತು ವ್ಯಭಿಚಾರವನ್ನು ಪೂರ್ಣವಾಗಿ ನಿಷೇಧಿಸಿದ್ದಲ್ಲದೇ ಅಂತಹ ಕೃತ್ಯ ಎಸೆಗಿದವರನ್ನು ಶಿಕ್ಷೆಗೆ ಒಳಪಡಿಸುತ್ತಿದ್ದರು. ಪಿತೃಪ್ರಧಾನ ಕುಟುಂಬ ವ್ಯವಸ್ಥೆ ಜಾರಿಯಲ್ಲಿದ್ದು ಸ್ತ್ರೀಯರಿಗೆ ಗೌರವವಿದ್ದರೂ ಸಹ ಅಲ್ಪಸ್ವಾತಂತ್ರ್ಯವನ್ನು ಕೊಡಲಾಗಿತ್ತು. ಮುಸ್ಲಿಂ ಸಮಾಜದಲ್ಲಿ ಸ್ತ್ರೀಯರಿಗೆ ಆಸ್ತಿಯಲ್ಲಿ ಅಗ್ರವಾದ ಪಾಲನ್ನು ಕೊಡುತ್ತಿದ್ದರು. ಇದರರ್ಥ ಮುಸ್ಲಿಂ ಸಮಾಜದಲ್ಲಿ ಒಬ್ಬ ಸ್ತ್ರೀಯು ಮಗಳಾಗಿಯೂ, ಹೆಂಡತಿಯಾಗಿಯೂ ಮತ್ತು ತಾಯಿಯಾಗಿಯೂ ಆಸ್ತಿಯಲ್ಲಿ ಪಾಲು ಹೊಂದಿದ್ದಳು. ಇಷ್ಟೆಲ್ಲಾ ಆಸ್ತಿ ಅವಳಿಗೆ ದೊರಕಿದರೂ ಸಹ ಸಮಾಜದಲ್ಲಿ ಮನೆಯ ನಾಲ್ಕು ಗೋಡೆಗಳು ಅವಳ ಕಾರ್ಯಕ್ಷೇತ್ರವಾಗಿದ್ದವು.

'ಖುರಾನ್'ನ ಪ್ರಕಾರ ಎಲ್ಲ ಪತ್ನಿಯರಿಗೂ ಸಮಾನವಾಗಿ ಪ್ರೀತಿ, ಗೌರವ ಮತ್ತು ಸ್ಥಾನಮಾನಗಳನ್ನು ಕಲ್ಪಿಸಿಕೊಡಬೇಕಾಗಿತ್ತು. ಇಲ್ಲಿಯೂ ಸಹ ವಿವಾಹ-ವಿಚ್ಛೇಧನೆಗೆ ಅವಕಾಶಗಳಿದ್ದು ಸ್ತ್ರೀ-ಪುರುಷರಿಬ್ಬರೂ ವಿಚ್ಛೇಧನಕ್ಕೆ ಇಷ್ಟಪಟ್ಟರೆ ಒಂದು ತಿಂಗಳ ನಂತರ 'ತಲಾಖ್' ಎಂದು ಮೂರು ಬಾರಿ ಘೋಷಿಸಿಕೊಂಡಾಗ ಅದು ಊರ್ಜಿತವಾಗುತ್ತಿತ್ತು. ವಿಚ್ಛೇಧನೆ ಪಡೆಯಬೇಕಾದರೆ ಹಿಂದೂ ಸಮಾಜದಂತೆ ಇಲ್ಲಿ ಯಾವುದೇ ನಿರ್ಬಂಧಗಳಿರಲಿಲ್ಲ. ಮುಸ್ಲಿಂ ಸಮಾಜದಲ್ಲಿ ದುಷ್ಟರ ಮತ್ತು ಕಾಮುಕರ ದೃಷ್ಟಿಯಿಂದ ಸ್ತ್ರೀಯರನ್ನು ರಕ್ಷಿಸುವ ಉದ್ದೇಶದಿಂದ 'ಪರದಾ' ವ್ಯವಸ್ಥೆಯನ್ನು ಕಡ್ಡಾಯವಾಗಿಸಿದ್ದರು.[೮] ಕಲಿಕೆಯ ವಿಷಯದಲ್ಲಿಯೂ ಸಹ ಸ್ತ್ರೀಯರಿಗೆ ಪ್ರತ್ಯೇಕತೆ ಇತ್ತೆಂದು ಚರಿತ್ರೆ ಹೇಳುತ್ತದೆ.

**೩. ಆಹಾರ ಪದ್ಧತಿ**

ಮುಸ್ಲಿಂ ಸಮುದಾಯದಲ್ಲಿ ಉಳಿದೆಲ್ಲಾ ಆಹಾರಗಳಿಗಿಂತ ಮಾಂಸಾಹಾರದ ಸೇವನೆಯು ಹೆಚ್ಚಿನ ಪ್ರಮಾಣದಲ್ಲಿತ್ತು. ಹಣ್ಣು, ತರಕಾರಿಗಳು ಸೇರಿದಂತೆ ಮದ್ಯ ಸೇವನೆಯು ಸಾಮಾನ್ಯವಾಗಿ ಕಂಡುಬರುತ್ತಿತ್ತು. ಇದಲ್ಲದೆ ಗೋದಿ, ಬೇಳೆ ಮತ್ತು ಜೋಳಗಳಿಂದ ಮಾಡಿದ ಖೀರು, ಚಪಾತಿ, ಲಾಡು, ಹಪ್ಪಳ ಮುಂತಾದ ಹಲವು ಬಗೆಯ ವ್ಯಂಜನಗಳು ಊಟದ ರುಚಿಯನ್ನು ಹೆಚ್ಚಿಸಿದ್ದವು. ಹಬ್ಬ-ಹರಿದಿನಗಳಲ್ಲಿ ಎಲೆ ಅಡಿಕೆಯ ತಾಂಬೂಲ ಸೇವನೆ ಮುಕ್ತಾಯ ಹಂತವಾಗಿತ್ತು. ಬಹಮನಿ ಕಾಲದ ದಖ್ಖನ್ ಮುಸ್ಲಿಮರ ಜೀವನಶೈಲಿ ಶ್ರೀಮಂತಿಕೆಯಿಂದ ಕೂಡಿದ್ದಾಗಿತ್ತು.

**೪. ಉಡುಗೆ ಪದ್ಧತಿ**

ಮುಸ್ಲಿಮರ ಉಡುಗೆ-ತೊಡುಗೆಗಳು ಹಿಂದೂಗಳಿಗಿಂತ ಹೆಚ್ಚು ವಿಭಿನ್ನವಾಗಿರಲಿಲ್ಲ. ಸ್ಥಳೀಯ ಪದ್ಧತಿಗಳನ್ನು ಅಂದರೆ ರೇಷ್ಮೆ ಅಥವಾ ಹತ್ತಿಯಿಂದ ತಯಾರಿಸಿದ ಉಡುಗೆಗಳನ್ನು ಮುಸ್ಲಿಮರು ಧರಿಸುವುದನ್ನು

ಮೈಗೂಡಿಸಿಕೊಂಡಿದ್ದರು, ಅದರಲ್ಲೂ ವಿಭಿನ್ನ ಮುಸ್ಲಿಂ ಗಂಡಸರು ಬಿಗಿಯಾದ ಚಲ್ಲಣ, ನಿಲುವಂಗಿ ಮತ್ತು ರುಮಾಲು ಅಥವಾ ಟೋಪಿ ಧರಿಸುತ್ತಿದ್ದರು. ಮುಸ್ಲಿಂ ಹೆಂಗಸರು ಒಳ ಚಲ್ಲಣ, ಅದರ ಮೇಲೆ ಉದ್ದವಾದ ನಿಲುವಂಗಿ ಮತ್ತು ಚೋಲಿ ಧರಿಸಿ ಇವುಗಳನ್ನು ದುಪ್ಪಟದಿಂದ ಮುಚ್ಚಿಕೊಳ್ಳುತ್ತಿದ್ದರು. ಮುಸ್ಲಿಂ ಮಹಿಳೆಯರಿಗೆ ಪರದಾ ಕಡ್ಡಾಯವಾಗಿತ್ತು.

**೫. ಧಾರ್ಮಿಕ ಪದ್ಧತಿ**

ಬಹಮನಿ ಕಾಲದಲ್ಲಿ ಇಸ್ಲಾಂ ಧರ್ಮೀಯರು ಸಮಾನತೆ ಮತ್ತು ನ್ಯಾಯದ ಆಧಾರದ ಮೇಲೆ ಒಂದು ಸಾಮಾಜಿಕ ರಚನೆಯನ್ನು ವ್ಯವಸ್ಥೆ ಮಾಡಿಕೊಂಡಿದ್ದರು. ಅದರ ಮುಖ್ಯವಾದ ತತ್ವಗಳೆಂದರೆ ದೇವರಲ್ಲಿ ನಂಬಿಕೆ ಇಡುವುದು, ಸಮಾನತೆ ಮತ್ತು ಸೋದರಿಕೆ ಭಾವವನ್ನು ಎಲ್ಲರಲ್ಲೂ ಹುಟ್ಟಿಸುವುದರಿಂದ ಈ ವ್ಯವಸ್ಥೆಯು ಮಹತ್ವಪೂರ್ಣವಾದ ಸಾಮಾಜಿಕ ಮೌಲ್ಯವನ್ನು ಪಡೆದಿತ್ತು. ನಿಮ್ಮ ನೆರೆಹೊರೆಯವರನ್ನು ಪ್ರೀತಿಸು ಎನ್ನುವುದು ಅದರ ಮುಖ್ಯ ಕರೆಯಾಗಿದ್ದು, ಅವಶ್ಯಕವಿದ್ದವರಿಗೆ ಸೇವೆ ಮಾಡುವ ಕಲ್ಯಾಣ ಗುಣವಿಲ್ಲದ ಧರ್ಮವು ವ್ಯರ್ಥ ಮತ್ತು ನಿಷ್ಪ್ರಯೋಜಕ, ದಾನ(ಜಕಾತ್) ಎನ್ನುವುದು ಕಡ್ಡಾಯವಾಗಿ ಪ್ರತಿಯೊಬ್ಬ ಮುಸ್ಲಿಮನು ಮಾಡಬೇಕೆಂದು, ಧರ್ಮದ ಮೂಲಕ ಪವಾಡಗಳನ್ನು ಮಾಡುತ್ತೇವೆಂದು ನಂಬಿಸುವವರು ಅರೆ ಮುಸ್ಲಿಮರೆಂದು ಪೂರ್ಣ ಮುಸ್ಲಿಮರು ಯಾವತ್ತಿಗೂ ನೇರವಾದ ವಿಧಾನದಿಂದ ಅನ್ನವನ್ನು ದುಡಿದು ಸಂಪಾದಿಸಬೇಕೆಂದು ಅವರ ಧರ್ಮ ಹೇಳುತ್ತದೆ. ದೇವರ ಹತ್ತಿರ ಹೋಗಬೇಕೆಂದರೆ ಮನುಷ್ಯನು ದೇವರನ್ನು(ಖುದಾ) ಮನಸ್ಸಿನಲ್ಲೇ ಅರಸಬೇಕೆಂದು ಇಸ್ಲಾಂ ಧರ್ಮ ಹೇಳುತ್ತದೆ. ಮುಸ್ಲಿಂ ಧರ್ಮದ ಪ್ರಕಾರ ಯಾರ ನಾಲಿಗೆಯಿಂದ ಮತ್ತು ಕೈಗಳಿಂದ ಬೇರೆಯವರು ಕ್ಷೇಮವಾಗಿರುತ್ತಾರೆಯೋ ಅವನೇ ನಿಜವಾದ ಮುಸ್ಲಿಂ. ಸಂಪತ್ತಿನ ಸಂಗ್ರಹವನ್ನು ಇಸ್ಲಾಂ ಧರ್ಮವು ಖಂಡಿಸಿದ್ದು, ಸ್ವಚ್ಛಂದ ಜೀವನವನ್ನು ನಿಷೇಧಿಸಿತ್ತು. ತಮ್ಮ ಬಳಿ ಇರುವ ಹೆಚ್ಚಿನ ಹಣವನ್ನು ಇತರರ ಸೇವೆಗೆ ಯಾವುದೇ ಪ್ರತಿಫಲವಿಲ್ಲದೆ ಕೊಡಬೇಕೆಂದು ಮುಸ್ಲಿಂ ಧರ್ಮವು ಹೇಳುತ್ತದೆ. ಉತ್ತಮ ಜೀವನವನ್ನು ಅನುಸರಿಸಬೇಕೆಂದು ತನ್ನ ಅನುಯಾಯಿಗಳಿಗೆ ನಿರ್ಬಂಧವನ್ನು ವಿಧಿಸಿ ಬ್ರಹ್ಮಚಾರ್ಯವನ್ನು ವಿರೋಧಿಸಿ ವಿವಾಹವನ್ನು ಪ್ರೋತ್ಸಾಹಿಸಿತು. ವಿವಾಹವಾಗಿ ಚಾರಿತ್ರ್ಯ ಶುದ್ಧಿಯನ್ನು ಕಾಪಾಡಿಕೊಳ್ಳುವ ವಿಧಾನವನ್ನು ಮತ್ತು ವ್ಯಭಿಚಾರಕ್ಕೆ ಉಗ್ರವಾದ ಶಿಕ್ಷೆಯನ್ನು ಇಸ್ಲಾಂ ಧರ್ಮವು ವಿಧಿಸಿತು. ಬಹಮನಿ ಸುಲ್ತಾನರು ಇಸ್ಲಾಂ ಧರ್ಮದ ಅನುಯಾಯಿಗಳಾಗಿದ್ದರು. ಬಹಳಷ್ಟು ಷಿಯಾ ಪಂಥೀಯರು ಧಾರ್ಮಿಕ ಸಹಿಷ್ಣುತೆ ಕಂಡುಬರುವ ಮಹತ್ ಕಾರ್ಯಗಳನ್ನು ಮಾಡಿರುವುದು ಆ ಕಾಲದಲ್ಲಿ ಕಂಡುಬರುವುದಿಲ್ಲ. ಇಸ್ಲಾಂ ಧರ್ಮದವರಿಗೆ ದೊರೆತ ಪ್ರೋತ್ಸಾಹ ಬೇರೆ ಧರ್ಮದವರಿಗೆ ಸಿಗಲಿಲ್ಲ. ಬಹಮನಿ ಕಾಲದಲ್ಲಿ ಸರಳ ಧರ್ಮವಾದ ಇಸ್ಲಾಂ ಧರ್ಮವು ಕೆಳವರ್ಗದ ಜನರನ್ನು ಬಹಳ ಆಕರ್ಷಿಸಿತು. ಆ ಸಮಯದಲ್ಲಿ ಬಹುಸಂಖ್ಯಾತರು ಸುನ್ನಿ ಮುಸ್ಲಿಮರಾಗಿದ್ದರು, ಇವರು ಪ್ರವಾದಿ ಮಹಮ್ಮದ್‌ನ ನಂತರ ಬಂದ ಮೂವರು ಖಲೀಫರನ್ನು ಅವರ ಉತ್ತರಾಧಿಕಾರಿಗಳೆಂದು ಭಾವಿಸಿದ್ದರು, ಇವರಷ್ಟೇ ಅಲ್ಲದೆ ಆ ಕಾಲದಲ್ಲಿ ಪರ್ಷಿಯಾದಿಂದ ಬಂದ ಹೆಚ್ಚಿನ ಜನತೆ ಷಿಯಾ ಪಂಗಡಕ್ಕೆ ಸೇರಿದವರಾಗಿದ್ದರು. ಈ ಪಂಗಡದವರು ಮೊದಲಿನ ಮೂವರು ಖಲೀಫರನ್ನು ನ್ಯಾಯಬಾಹಿರ ಉತ್ತರಾಧಿಕಾರಿಗಳೆಂದು ತಿಳಿದಿದ್ದರು. ಪ್ರವಾದಿಯವರ ನೈಜ ಉತ್ತರಾಧಿಕಾರಿಯು ಅವರ ಅಳಿಯ ಅಲಿ ಮತ್ತು ಅವರ ವಂಶಸ್ಥರೆಂದು ಇವರು ನಂಬಿದ್ದರು. ಈ ಕಾರಣದಿಂದಾಗಿ ಷಿಯಾ ಪಂಗಡದವರು ದಖ್ಖನ್ ಪ್ರದೇಶದ ಮುಸ್ಲಿಮರಲ್ಲಿ ವ್ಯಾಪಕವಾಗಿ ಸೇರ್ಪಡೆಯಾಗಿದ್ದರು. ಮುಸ್ಲಿಮರು ದತ್ತಾತ್ರೇಯನನ್ನು ಷಾಫಕೀರ್ ಎಂಬ ಹೆಸರಿನಿಂದ ಬಹಮನಿ ಕಾಲದಲ್ಲಿ ಆರಾಧಿಸುತ್ತಿದ್ದರು ಹಾಗೂ ಮುಸ್ಲಿಂ ಸಮುದಾಯದಲ್ಲಿ ಸೂಫಿ ಪಂಥವು ಆ ಕಾಲದಲ್ಲಿ ಪ್ರಬಲವಾಗಿತ್ತು.

### ೬. ಮನರಂಜನೆ

ಬಹಮನಿ ಸಾಮ್ರಾಜ್ಯದಲ್ಲಿ ಹಬ್ಬ–ಉತ್ಸವಗಳು ವಿಜೃಂಭಣೆಯಿಂದ ನಡೆಯುತ್ತಿದ್ದು, ಬಹುತೇಕ ಹಬ್ಬಗಳನ್ನು ಹಿಂದೂ ಮತ್ತು ಮುಸ್ಲಿಮರು ಕೂಡಿಯೇ ಆಚರಿಸುತ್ತಿದ್ದರು. ಬಹಮನಿ ಸುಲ್ತಾನರು ಉರುಸುಗಳನ್ನು ಆಚರಿಸುವುದನ್ನು ಜಾರಿಗೆ ತಂದರು. 'ಈದ್–ಉಲ್–ಫತ್ರ್', 'ಈದ್–ಎ–ಅಜಾ', 'ಶಬ್–ಎ–ಬರಾತ್', 'ಮೊಹರಂ' ಮುಂತಾದವುಗಳು ಅಂದಿನ ಕಾಲಿನ ಮುಸ್ಲಿಮರ ಪ್ರಮುಖ ಹಬ್ಬಗಳಾಗಿದ್ದವು. ಹಬ್ಬದ ದಿನಗಳಲ್ಲಿ ದಾನ–ಧರ್ಮ ಮಾಡುವುದು ಮತ್ತು ಪರಸ್ಪರರನ್ನು ವಂದಿಸುವುದು ವಾಡಿಕೆಯಲ್ಲಿದ್ದಿತು. ಒಟ್ಟಾರೆಯಾಗಿ ದಖ್ಖನ್ ಸಾಮಾಜಿಕ ವ್ಯವಸ್ಥೆಯಲ್ಲಿ ಚೈತನ್ಯವು ಕೂಡಿಕೊಂಡು ಹೊಸ ಸಾಮಾಜಿಕ ಸಂಕೀರ್ಣತೆಗೆ ದಾರಿಮಾಡಿಕೊಟ್ಟಿದ್ದಿತು.[೧೦] ಹಿಂದೂ–ಮುಸ್ಲಿಂ ಬಾಂಧವರ ಬೆರೆಯುವಿಕೆಯಿಂದ ಸಾಮಾಜಿಕ ಜೀವನ ವಿಧಾನದಲ್ಲಿಯೂ ಗಮನಾರ್ಹ ಬದಲಾವಣೆಗಳು ಕಂಡುಬಂದವು. ಈ ರೀತಿಯಾಗಿ ದಖ್ಖನ್ ಸಾಮಾಜಿಕ ಜೀವನ ವ್ಯವಸ್ಥೆಯು ಅತ್ಯಂತ ಸರಳ, ಸುಗಮ ಮತ್ತು ಸಾಮರಸ್ಯದಿಂದ ಕೂಡಿದ್ದಾಗಿತ್ತು ಎಂದು ತಿಳಿಯಬಹುದು.

### ೩.೨. ಸಾಮಾಜಿಕ ಸಂಸ್ಥೆಗಳು

### ೩.೨.೧. ಗುಲ್ಬರ್ಗಾದಲ್ಲಿಯ ಸಾಮಾಜಿಕ ಸಂಸ್ಥೆಗಳು

ಇಸ್ಲಾಂ ಸಮಾಜವು ತನ್ನದೇ ಆದ ಕಲೆಯ ಲಕ್ಷಣಗಳನ್ನೊಳಗೊಂಡ ಉತ್ಕೃಷ್ಟ ವಾಸ್ತುಶಿಲ್ಪವನ್ನು ಹೊಂದಿದೆ. ಈ ಸಮಾಜದ ಕಲೆಯು ಆಲಂಕಾರಿಕ ಮತ್ತು ವ್ಯಕ್ತಿನಿಷ್ಟ ಹಾಗೂ ಸೂಕ್ಷ್ಮವಾಗಿದ್ದು, ಮನುಷ್ಯ ಆಕೃತಿಯ ಚಿತ್ರಗಳಿಗೆ ಆಸ್ಪದ ಕೊಡದೆ ಮುಸ್ಲಿಂ ಕಲೆಯು ರೇಖಾಗಣಿತದ ಮತ್ತು ಸಸ್ಯರೂಪದ ಚಿತ್ರಗಳಲ್ಲಿ ಬಳ್ಳಿಗಳನ್ನು ಪ್ರಧಾನವಾಗಿ ಉಪಯೋಗಿಸಿ ವಿಶಿಷ್ಟ ವಾಸ್ತುಶಿಲ್ಪವನ್ನು ಮೂಡಿಸಿದೆ. ಮುಸ್ಲಿಂ ಕಲೆಯು ಹಿಂದು ಕಲೆಯಷ್ಟು ಸಮೃದ್ಧವೂ, ಜಟಿಲವೂ ಆಗಿಲ್ಲದಿದ್ದರೂ, ಸರಳತೆ, ಮಾಧುರ್ಯ, ಸಹಜತೆಗಳು, ಚಿತ್ರಿತ ಶಕ್ತಿ ಮತ್ತು ಪ್ರಮಾಣ ಬದ್ಧತೆಗಳೊಂದಿಗೆ ಸೇರಿ ಇಡೀ ಇಸ್ಲಾಂ ರಚನೆಯು ವಿಶಿಷ್ಟವಾಗಿ ಆಕರ್ಷಣೀಯವಾಗಿರುತ್ತದೆ.[೧೧] ಈ ಮೇಲಿನ ಎಲ್ಲಾ ಲಕ್ಷಣಗಳನ್ನೊಳಗೊಂಡ ಬಹಮನಿ ಸಾಮ್ರಾಜ್ಯದ ಮುಸ್ಲಿಂ ವಾಸ್ತುಶಿಲ್ಪಗಳಲ್ಲಿ ಹಾಗೂ ಸಾಮಾಜಿಕ ಸಂಸ್ಥೆಗಳಲ್ಲಿ ಕೋಟೆ, ಕೊತ್ತಲಗಳು, ಅರಮನೆಗಳು, ಮಸೀದಿಗಳು ಹಾಗೂ ದರ್ಗಾಗಳು(ಗೋರಿ) ಪ್ರಮುಖವಾದವುಗಳಾಗಿವೆ.

### ೧. ಮಸೀದಿಗಳು

ಮುಸ್ಲಿಂ ಧಾರ್ಮಿಕ ಕಟ್ಟಡಗಳಲ್ಲಿ ಬಹಳ ಮುಖ್ಯವಾದವುಗಳೆಂದರೆ ಗುಲ್ಬರ್ಗಾ ನಗರದಲ್ಲಿ ಅನೇಕ ಕಟ್ಟಡಗಳು, ಮಸೀದಿಗಳು ಮತ್ತು ಗೋರಿಗಳು ಇಂದಿಗೂ ಕಾಣಸಿಗುತ್ತವೆ. ಗುಲ್ಬರ್ಗಾದ ಪೂರ್ವಕ್ಕೆ ಮಸೀದಿಗಳು, ಸಮಾದಿಗಳು ನಿರ್ಮಿತವಾಗಿವೆ. ಬಂದೇನವಾಜ್ ಮಸೀದಿಯು ಇದೆ. ಮಸೀದಿಗಳನ್ನು ಮುಸ್ಲಿಂರ ಪ್ರಾರ್ಥನಾ ಮಂದಿರಗಳು. ಈ ಧರ್ಮದ ಸ್ಥಾಪಕರು ಅರೇಬಿಯಾದ ಮದೀನಾದಲ್ಲಿ ವಾಸಿಸುತ್ತಿದ್ದ ಮನೆಯ ವಿಸ್ತೃತ ರೂಪವೇ ಮಸೀದಿಯ ಕಲ್ಪನೆಗೆ ಮೂಲವಾಗಿದೆ.[೧೨] ಮಸೀದಿಯ ಮುಖ್ಯವಾದ ಭಾಗವೆಂದರೆ ಕಂಬಗಳಿಂದ ಕೂಡಿದ ಕೈಸಾಲೆಯಿಂದ ಸುತ್ತುವರೆಯಲ್ಪಟ್ಟ ವಿಸ್ತಾರವಾದ ಒಳ ಅಂಗಳ. ಪ್ರಾರ್ಥನೆಯು ಯಾವ ಆವರಣವೂ ಇಲ್ಲದೇ ಬಯಲಿನಲ್ಲಿ ನಡೆಯಬೇಕೆಂಬುದು ಇವರ ಮುಖ್ಯ ಉದ್ದೇಶವಾಗಿದ್ದರೂ ಸಹ, ಮನುಷ್ಯನ ಸಹಜ ಪ್ರವೃತ್ತಿಯಂತೆ ಪ್ರಾರ್ಥನೆಗೂ ಕಟ್ಟಡವನ್ನು ಕಟ್ಟಲು ಉದ್ದೇಶಿಸಿತು. ಮಧ್ಯದಲ್ಲಿ ವಿಸ್ತಾರವಾದ ಅಂಗಳವನ್ನು ಬಿಟ್ಟು ಸುತ್ತಲು ಕಂಬಗಳುಳ್ಳ ಕೈಸಾಲೆಗಳನ್ನು ಕಟ್ಟಿರುವುದು ಮಸೀದಿಯ ಕಟ್ಟಡದ ಮೊದಲಸೆಯ ಘಟ್ಟ. ಪ್ರಾರ್ಥನೆಗೆ ಮುನ್ನ ಕೈಕಾಲು ತೊಳೆಯುವುದಕ್ಕಾಗಿ ಅಂಗಳದಲ್ಲಿ ಒಂದು

ಕೊಳ ನಿರ್ಮಿಸಲಾಯಿತು. ಒಂದು ಕೇಂದ್ರೀಕೃತ ಗುರಿಯನ್ನು ಸೂಚಿಸುವುದಕ್ಕಾಗಿ ಮೆಕ್ಕಾದ ಕಡೆ ಇರುವ ಕೈಸಾಲೆಗಳನ್ನು ವಿಸ್ತರಿಸಿ, ಕಂಬಗಳಿಂದ ಕೂಡಿದ ಮಂಟಪವನ್ನಾಗಿ ಪರಿವರ್ತಿಸಲಾಯಿತು. ಈ ಮಂಟಪದ ಕೊನೆಯಲ್ಲಿ ಗೋಡೆ ಮತ್ತು ಕಮಾನು ಗೂಡು ನಿರ್ಮಿಸಲಾಗಿದೆ. ಪ್ರಾರ್ಥನೆಯ ದಿಕ್ಕನ್ನು ಸೂಚಿಸುವ ಇದನ್ನು ಮಿಹ್‌ರಾಬ್ ಎಂದು ಕರೆಯುತ್ತಾರೆ. ಮಿಹ್‌ರಾಬ್‌ನ ಬಲಭಾಗದಲ್ಲಿ ಮಿಂಬರ್ ಎಂಬ ಎತ್ತರವಾದ ಉಪದೇಶದ ವೇದಿಕೆ ನಿರ್ಮಿತವಾಯಿತು. ಈ ಮಂಟಪದ ಅಲ್ಪ ಭಾಗಕ್ಕೆ ತೆರೆ ಹಾಕಿ ಮುಸ್ಲಿಂ ಸ್ತ್ರೀಯರಿಗೆ ಅಲ್ಲಿ ಅವಕಾಶ ಕಲ್ಪಿಸಿ ಕೊಡಲಾಯಿತು. ಮಂಟಪದ ಮುಂಭಾಗದಲ್ಲಿ ಎತ್ತರವಾದ ವೇದಿಕೆಯನ್ನು ನಿರ್ಮಿಸಿ ಅದರ ಮೇಲೆ ನಿಂತು ಮುಸ್ಲಿಂ ಅನುಯಾಯಿಗಳನ್ನು ಪ್ರಾರ್ಥನೆಗೆ ಬರುವಂತೆ ಕೂಗಿ ಎತ್ತರಿಸಿರುವ ವ್ಯವಸ್ಥೆ ಬೆಳೆಯಿತು. ಈ ವೇದಿಕೆಗಳೇ ಮುಂದಿನ ದಿನಗಳಲ್ಲಿ 'ಮಿನಾರ್'ಗಳ ಬೆಳವಣಿಗೆಗೆ ಕಾರಣವಾದವು. ಪ್ರಾರ್ಥನಾ ಮಂದಿರಕ್ಕೆ ಗಾಂಭೀರ್ಯತೆಯನ್ನು ತಂಡುಕೊಡುವುದಕ್ಕಾಗಿ ಆಕರ್ಶಕವಾದ ಮುಖ ದ್ವಾರಗಳು ಮತ್ತು ಮಿಹ್‌ರಾಬ್‌ನ ಮೇಲೆ ಬೃಹದಾಕಾರವಾದ ಗೋಪುರಗಳು ನಿರ್ಮಾಣವಾದವು. ಈ ರೀತಿಯಾಗಿ ಕ್ರಮೇಣ ಮಸೀದಿಗಳು ಹಿಂದಿನ ರೂಪವನ್ನು ಪಡೆದು ನಿಂತಿವೆ.

**ಜಾಮೀ ಅಥವಾ ಜುಮ್ಮಾ ಮಸೀದಿ(೧೩೬೭)**

ಜುಮ್ಮಾ ಮಸೀದಿಯನ್ನು ಬಹಮನಿ ಸುಲ್ತಾನನಾದ ಫಿರೋಜ ಬಹಮನ್ ಷಾನು ನಿರ್ಮಿಸಿದನು. ಈ ಕಟ್ಟಡದ ಪ್ರಧಾನ ಶಿಲ್ಪಿ ರಫಿಕಜ್ವಿನ್. ಈ ಮಸೀದಿಯು ಗುಲ್ಬರ್ಗಾ ಕೋಟೆಯ ಮಧ್ಯ ಭಾಗದಲ್ಲಿದೆ. ಇಲ್ಲಿರುವ ಒಂದು ಶಾಸನದ ಪ್ರಕಾರ ಈ ಮಸೀದಿಯು ೧೩೬೭ರಲ್ಲಿ ಪೂರ್ಣಗೊಂಡಿತೆಂದು ತಿಳಿಯುತ್ತದೆ. ಇಡೀ ಭಾರತದಲ್ಲಿಯೇ ಇದು ವಿಶಿಷ್ಟ ಮಾದರಿಯಲ್ಲಿ ಕಟ್ಟಿದ ಮಸೀದಿಯಾಗಿದೆ. ಏಕೆಂದರೆ ಇತರ ಮಸೀದಿಗಳಿಗಿರುವಂತೆ ಮೇಲ್ಛಾವಣಿ ಇಲ್ಲದೆ, ತೆರೆದ ಒಳಾಂಗಣ ಇದಕ್ಕಿಲ್ಲ. ಮಸೀದಿಯ ಇಡೀ ರಚನೆ ಮೇಲ್ಛಾವಣಿಯನ್ನು ಒಳಗೊಂಡ ಕಟ್ಟಡವಾಗಿದೆ. ಮುಸ್ಲಿಂ ಮಸೀದಿಗಳ ನಿರ್ಮಾಣ ತತ್ವಕ್ಕೆ ಇದು ವ್ಯತಿರಿಕ್ತವಾಗಿದೆ. ಉತ್ತರ ಪರ್ಶಿಯಾದ ಕಜ್ವಿನ್ ಪಟ್ಟಣದ ರಫಿ ಎಂಬ ವಾಸ್ತುಶಿಲ್ಪಿಯ ನೇತೃತ್ವದಲ್ಲಿ ಈ ಕಟ್ಟಡದನಿರ್ಮಾಣ ನಡೆಯಿತೆಂದು ಇಲ್ಲಿ ತಿಳಿದುಬರುತ್ತದೆ.[೧೩] ರೋಮಿನಲ್ಲಿರುವ ಬಸಿಲಿಕ್ ಮಾದರಿಯನ್ನು ಅನುಸರಿಸಿ ಈತನು ಕಮಾನಿನ ಮೇಲ್ಛಾವಣಿಯನ್ನು ಮತ್ತು ಎತ್ತರವಾದ ಗೋಪುರವನ್ನುಳ್ಳ ಓಳಸಭಾಂಗಣವನ್ನು ನಿರ್ಮಿಸಲು ಉದ್ದೇಶ ಪಟ್ಟನು. ಹೀಗಾಗಿ ಪರ್ಶಿಯಾ ಮತ್ತು ಭಾರತದ ಮಸೀದಿಗಳಲ್ಲಿನ ಬೇಕಾದ ಅಂಶಗಳನ್ನು ತೆಗೆದುಕೊಂಡು ತನ್ನದೇ ಆದ ಸ್ವತಂತ್ರ ಮಾದರಿಯಲ್ಲಿ ಕಜ್ವಿನ್‌ನು ಈ ಮಸೀದಿಯನ್ನು ನಿರ್ಮಿಸಿದನು.

ಈ ಮಸೀದಿಯು ೨೧೬ ಅಡಿ ಉದ್ದ, ೧೭೬ ಅಡಿ ಅಗಲದ ದೀರ್ಘ ಚತುರಾಕಾರದ ಮೇಲೆ ನಿರ್ಮಾಣವಾಗಿದೆ. ಮಸೀದಿಯ ಮೂರು ಕಡೆಗಳಲ್ಲಿ ವಿಸ್ತಾರವಾದ ಕೈ ಸಾಲೆಗಳಿವೆ. ಪಶ್ಚಿಮದ ಕಡೆಗೆ ಪ್ರಾರ್ಥನೆಗೆ ಮೀಸಲಾದ ವಿಸ್ತಾರವಾದ ಮಂಟಪವಿದೆ. ಇದರ ಮೇಲ್ಛಾವಣಿಯ ಮೇಲೆ ದೊಡ್ಡ ಗೋಪುರ ನಿರ್ಮಾಣವಾಗಿದೆ. ಇವೆಲ್ಲವುಗಳ ಮಧ್ಯದಲ್ಲಿರುವ ಒಳಾಂಗಣ ಮಾತ್ರ ಇತರ ಮಸೀದಿಗಳಲ್ಲಿರುವಂತೆ ಛಾವಣಿ ಇಲ್ಲದ ಬಯಲು ಪ್ರದೇಶವಾಗಿಲ್ಲ. ಮಸೀದಿಯು ೬೮ ಹಜಾರಗಳಿಂದ ಮತ್ತು ಚಾಚು ಪೀಠಗಳ ಸಾಲುಗಳಿಂದ ಕೂಡಿದ್ದು, ಅರ್ಧಗೋಳಾಕೃತಿಯ ಮೇಲ್ಛಾವಣಿಯಿಂದ ಆವೃತವಾಗಿವೆ. ಈ ಮೇಲ್ಛಾವಣಿಯಿಂದಾಗಿ ಒಳಾಂಗಣವೆಲ್ಲಾ ವಿಸ್ತಾರವಾದ ಮಂಟಪವಾಗಿ ಪರಿವರ್ತಿತವಾಗಿದೆ. ಕಟ್ಟಡದ ಮೇಲೆ ಎತ್ತರವಾಗಿ ನಿಲ್ಲಿಸಿರುವ ಗುಮ್ಮಟವು ಕಟ್ಟಡದ ಸೌಂದರ್ಯವನ್ನು ಹೆಚ್ಚಿಸಿದೆ ಮತ್ತು ಮಸೀದಿಗೆ ಒಂದು ಗಂಭೀರತೆಯನ್ನು ತಂದುಕೊಟ್ಟಿದೆ.

ತೆರೆದ ಅಂಗಳಗಳುಳ್ಳ ಮಸೀದಿಗಳಿಗಿಂತ ಇದು ವಿಶಿಷ್ಟವಾಗಿದ್ದು, ಹೆಚ್ಚು ಅನುಕೂಲಕರವಾಗಿದೆ. ಇದು ಮುಸ್ಲಿಂ ಸಂಪ್ರದಾಯಕ್ಕೆ ವಿರುದ್ಧವಾಗಿದ್ದು, ಇಂತಹ ಮಸೀದಿಗಳು ಮತ್ತಾವ ಕಡೆಯೂ ನಿರ್ಮಾಣವಾಗಿಲ್ಲ. ಜುಮ್ಮಾ ಮಸೀದಿಯ ಹೊರ ಭಾಗದಲ್ಲಿ ಕಮಾನುಗಳುಳ್ಳ ದ್ವಾರಗಳಿವೆ. ಗಾರೆಯಿಂದ ನಿರ್ಮಿಸಲ್ಪಟ್ಟ ಜಾಲಂದರದ ಕಿಟಕಿಗಳನ್ನು ಪರದೆಗಳಂತೆ ದ್ವಾರಗಳ ಬಳಿ ಅಳವಡಿಸಲಾಗಿದೆ. ಈ ಬೃಹತ್ ಮಸೀದಿಯಲ್ಲಿ ೫೦೦೦ ಜನರು ಕುಳಿತು ಪ್ರಾರ್ಥನೆ ಮಾಡುವ ವ್ಯವಸ್ಥೆ ಮಾಡಲಾಗಿದೆ. ಈ ಕಾರಣದಿಂದಾಗಿ ಜುಮ್ಮಾ ಮಸೀದಿಯು ಇಡೀ ದಕ್ಷಿಣ ಭಾರತದಲ್ಲಿ ಬೃಹತ್ ಮಸೀದಿ ಎಂಬ ಕೀರ್ತಿಗೆ ಪಾತ್ರವಾಗಿದೆ. ಈ ಮಸೀದಿಯ ಮತ್ತೊಂದು ವಿಶೇಷವೆಂದರೆ ಇಲ್ಲಿ ಎತ್ತರದ ವೇದಿಕೆ ಅಥವಾ ಮಿನ್‌ಬರ್ ಇಲ್ಲದಿರುವುದು. ಈ ಮಸೀದಿಯಲ್ಲಿ ಕೈಕಾಲು ತೊಳೆಯುವ ಸಲುವಾಗಿ ನೀರಿನ ಕೊಳ ಅಥವಾ ಮತ್ತೇನು ವ್ಯವಸ್ಥೆ ಇಲ್ಲದಿರುವುದು ಇದರ ಮತ್ತೊಂದು ವಿಶೇಷ ಲಕ್ಷಣವಾಗಿದೆ. ಇನ್ನೊಂದು ವಿಶೇಷವೆಂದರೆ ಈ ಮಸೀದಿಯನ್ನು ಬಹಮನಿ ಸುಲ್ತಾನರು ರಾಜಕೀಯ ಗುಪ್ತಾಲೋಚನೆಗಳಿಗೆ ಬಳಸುತ್ತಿದ್ದರು.

**ಷಾ ಬಜಾರ್ ಮಸೀದಿ(೧೩೭೫)**

ಷಾ ಬಜಾರ್ ಮಸೀದಿಯನ್ನು ಬಹಮನಿ ಸುಲ್ತಾನನಾದ ಒಂದನೇ ಮಹಮ್ಮದ ಬಹಮನ್ ಷಾನು ನಿರ್ಮಿಸಿದನು. ಗುಲ್ಬರ್ಗಾ ನಗರದಲ್ಲಿ ಇದು ಮೊಟ್ಟಮೊದಲ ಮಸೀದಿಯೆನಿಸಿದೆ. ಈ ಮಸೀದಿಯ ಗೋಡೆಗಳು ಎತ್ತರವಾಗಿಲ್ಲದೆ ಕುಳ್ಳಾಗಿವೆ. ಈ ಮಸೀದಿಯ ಸಭಾಂಗಣವನ್ನು ೧೫ ಅಂಕಣಗಳನ್ನಾಗಿ ವಿಭಾಗ ಮಾಡಿದ್ದಾರೆ. ಮಸೀದಿಯ ಸುತ್ತಲೂ ಸಣ್ಣ ಕಿಂಡಿಗಳನ್ನು ಅಳವಡಿಸಲಾಗಿದೆ. ಈ ಮಸೀದಿಯಲ್ಲಿ ತುಘಲಕ್ ಮನೆತನದ ಮತ್ತು ಆ ಕಾಲದ ವಾಸ್ತುಶಿಲ್ಪವನ್ನು ನಾವು ಕಾಣಬಹುದು.[೧೪]

**೨. ದರ್ಗಾಗಳು**

ಬೃಹತ್ ಶಿಲಾಯುಗದ ಮಾನವರು ತಮ್ಮ ಸಾಮಾಜಿಕ ಅಂತಸ್ತಿಗೆ ತಕ್ಕಂತೆ ತಮ್ಮ ಗೋರಿಗಳನ್ನು (ಸಮಾಧಿಗಳನ್ನು) ಕಟ್ಟಿಸಿದಂತೆ, ಮುಸ್ಲಿಂ ಸುಲ್ತಾನರು ಸಹ ತಮ್ಮ ಮತ್ತು ತಮ್ಮ ರಾಣಿಯರು, ಮಕ್ಕಳ ಹಾಗೂ ಸಂತರ ಗೋರಿಗಳನ್ನು ವಿಭಿನ್ನವಾದ ರೀತಿಯಲ್ಲಿ ಕಟ್ಟಿಸಿರುವುದನ್ನು ನಾವು ನೋಡುತ್ತೇವೆ. ದರ್ಗಾಗಳು ಹಿಂದೂ-ಮುಸ್ಲಿಂ ಸಾಮರಸ್ಯವಾದಿಗಳಿಗೆ ಎದ್ದು ಕಾಣುವಂತಹ ರಚನೆಗಳು. ಗದ್ದುಗೆಗಳ ವಾಸ್ತು ರಚನೆಯು ಸೂಫಿಕರಣಕ್ಕೆ ಒಳಗಾದ ನಂತರ ಸಮಾಧಿಗಳು ಹಾಗೂ ಗೋರಿಗಳು ಮತ್ತು ಮಠಗಳು ಇಸ್ಲಾಮಿಕ್ ಎಂದು ಕರೆಯಲಾಗುವ 'ಇಂಡೋಸಾರ್ಸೆನಿಕ್'[೧೫] ರಚನೆಯನ್ನು ಪಡೆದುಕೊಂಡಿವೆ. ಸೂಫಿಗಳ ಸಮಾಧಿಗಳು ಉತ್ತರ-ದಕ್ಷಿಣಕ್ಕೆ ಮಲಗಿರುವ ಆಕಾರದಲ್ಲಿದ್ದರೆ, ಸೂಫಿಯ ಶಿಷ್ಯನಾದ ಸಂತನಿಗೆ ಕುಳ್ಳಿರಿಸಿದ ರೀತಿಯಲ್ಲಿ ಸಮಾಧಿ ಇರುತ್ತದೆ. ಸಮಾಧಿ ಕಟ್ಟಡದ ಹೊರ ರೂಪ ಮಾತ್ರ ಗುಂಬಜವನ್ನುಳ್ಳದ್ದಾಗಿದ್ದು ಒಂದೇ ರೀತಿಯಲ್ಲಿ ಕಾಣುತ್ತದೆ. ಇಸ್ಲಾಂ ವಾಸ್ತುವಿನಲ್ಲಿ ಕರ್ನಾಟಕದ ಸಾವಳಗಿ, ಶಿವಯೋಗಿ, ತಿಂತಿಣಿ ಮೌನಪ್ಪ, ಶಿರಹಟ್ಟಿ ಪಕ್ಕೀರಸ್ವಾಮಿ, ಕೊಡೇಕಲ್ ಬಸವಣ್ಣ, ದಿಗ್ಗಿ ಸಂಗಮನಾಥ, ನಾಯಕನಹಟ್ಟಿ ತಿಪ್ಪೇಸ್ವಾಮಿ, ಸಾಲೋಟಗಿ ಶಿವಯೋಗಿ, ಜಲದುರ್ಗದ ಸಂಗಮನಾಥ, ಮಾಡ್ಯಾಳದ ಅಲ್ಲಮಪ್ರಭು, ಮುಂತಾದ ಗದ್ದುಗೆ ಅಥವಾ ದರ್ಗಾಗಳು ಗುರುವಾದ ಸೂಫಿಯ ತೋರು ಗದ್ದುಗೆಯ ಮೇಲಿದ್ದು ಕೆಳಗಡೆ ಸಂತರ ಗದ್ದುಗೆ ಇರುತ್ತದೆ. ದಿಗ್ಗಿ ಸಂಗಮನಾಥನ ಸಮಾಧಿಯ ಮೇಲೆ ಚಂದಾ ಸಾಹೇಬನ ಹಾಗೂ ಸಾವಳಗಿ ಶಿವಲಿಂಗನ ಮೇಲೆ ಖ್ವಾಜಾ ಬಂದೇನವಾಜ್‌ನ ಮತ್ತು ಮೋನಪ್ಪಯ್ಯನ ಮೇಲೆ ಮಹಮ್ಮದ್ ಪೈಗಂಬರರ ತೋರು ಗದ್ದುಗೆಗಳಿವೆ. ಇಂದಿಗೂ ಸಹ ಗುಲ್ಬರ್ಗಾ, ಬಿಜಾಪುರ, ಬೀದರ್, ಬಳ್ಳಾರಿ, ರಾಯಚೂರು ಜಿಲ್ಲೆಗಳಲ್ಲಿ ಹಿಂದೂ ಹಾಗೂ ಮುಸ್ಲಿಮರು ಸೂಫಿಗಳ ಪ್ರಭಾವದಿಂದ ದರ್ಗಾಗಳಲ್ಲಿ ಉರುಸುಗಳನ್ನು

ಮಾಡುತ್ತಾರೆ. ಬಂದೇನವಾಜರ ಜಾತ್ರೆಗಳನ್ನು ಆಚರಿಸುವರು. ಮೊಹರಂ ಸಂದರ್ಭದಲ್ಲಿ ಹಾಗೂ ಬ್ರಕೀದ್ ಮತ್ತು ರಮಜಾನ್‌ದಲ್ಲಿ ದರ್ಗಾಕ್ಕೆ ಪೂಜೆಗಳು-ಹರಿಕೆಗಳು ಸಲ್ಲಿಸುವುದು ಸಾಮಾನ್ಯವಾಗಿ ಕಾಣುತ್ತದೆ.

ಬಹಮನಿ ಸಾಮ್ರಾಜ್ಯದಲ್ಲಿ ದರ್ಗಾಗಳು ಮತ್ತು ಸಮಾಧಿಗಳು ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುತ್ತವೆ. ಬಹಮನಿ ಸುಲ್ತಾನರು ಸೂಫಿ ಸಂತರ ಭಕ್ತರಾಗಿದ್ದು, ಇವರ ಕಾಲದಲ್ಲಿ ಪರ್ಶಿಯಾ ದೇಶದಿಂದ ಬಂದ ಸೂಫಿ ಸಂತರು ರಾಜ್ಯದಲ್ಲಿ ನೆಲೆಸಿದ್ದರು. ಇವರ ದರ್ಗಾಗಳು ಭಕ್ತರನ್ನು ಆಕರ್ಷಿಸುವ ಕೇಂದ್ರಗಳಾಗಿ ಗುಲ್ಬರ್ಗಾ ಹಾಗೂ ಬೀದರ್ ನಗರಗಳಲ್ಲಿ ಇಂದಿಗೂ ಕಂಡುಬರುತ್ತವೆ. ಬಹಮನಿ ರಾಜ್ಯದಲ್ಲಿ ಕಂಡು ಬರುವ ಮುಖ್ಯ ದರ್ಗಾಗಳೆಂದರೆ,

ಬಂದೇನವಾಜ್ ದರ್ಗಾ- ಹಜರತ್ ಗೇಸುದರಾಜನ ದರ್ಗಾ

ಶೇಖ್‌ಖ್ವಾಜಾ ದರ್ಗಾ- ಶೇಖ್ ಶಿರಾಜುದ್ದೀನ್ ಜುನ್ಯೆದಿ ದರ್ಗಾ

ಹಜರತ್ ಸೈಯದ್ ಷಾಹ- ಕಮಲ ಮುಜ್ರೌದ ದರ್ಗಾ

ಸೈಯದ್ ಹಜರತ್ ರುಕ್ಮುದ್ದೀನ್ ತೋ ದರ್ಗಾ- ಇದು ಗುಲ್ಬರ್ಗಾ ನಗರದ ಫೀರಾಪುರ ಸಮೀಪದ ಎತ್ತರದ ಗುಡ್ಡದ ಮೇಲಿದೆ.

ಖಾದರ್ ಭಾಷಾ ದರ್ಗಾ(ಈ ದರ್ಗಾದಲ್ಲಿ ಎರಡು ಗೋರಿಗಳಿವೆ).

ಮೌಲಾನ್ ಷಾಹಾ ಖಾದರ ಹಿಮತ್ತುಲ್ಲಾ ದರ್ಗಾ(೧೪ನೇ ಶತಮಾನ) ಇದು ನಗರದ ಸುಲ್ತಾನಪುರದಲ್ಲಿದೆ.

ಸಿದ್ಧಿ ಅಂಬರ ದರ್ಗಾ(ಇದು ಖ್ವಾಜಾ ಬಂದೇನವಾಜದರ್ಗಾದ ಹಿಂದುಗಡೆ ಇದೆ)

ಖುಂಜಮಾಸ 'ಬಿ' ದರ್ಹಾ(ಮಹಿಳಾ ದದರ್ಗಾ ೧೪ನೇ ಶತಮಾನ) ಇದು ನಗರದ ಸಮೀಪ ಕಪೂನೂರಿನಲ್ಲಿದೆ.

ಖ್ವಾಜಾ ಬಂದೇನವಾಜನ ಮಗನ ದರ್ಗಾ(ತಂದೆಯ ದರ್ಗಾದ ಬದಿಯಲ್ಲಿಯೇ ಇದೆ)

ಶೇಖ ಐರಾಜುದ್ಧೀನ್ ಜುನ್ಯೆದಿ ಖಾದ್ರಿ ದರ್ಗಾ

ಮೊಗಧರ್ಮ್‌ಹವೇ ಖುಂದುಮೀರ್ ಜುನ್ಯೆದಿಖಾದ್ರಿ ದರ್ಗಾ

ರಾಹೋಜ ಫೀರ್ ದರ್ಗಾ

ಸಿದ್ಧಿ ಭಾಷಾ ದರ್ಗಾ

ಶಾಯ್ಕೆ ಜುನ್ಯೆದಿಯ ದರ್ಗಾ- ಹಸನ್ ಗಂಗು ಮತ್ತು ಆತನ ಮಗ ಮಹಮ್ಮದ್ ಷಾನ ಗುರು

ಅಕ್ಬರ್ ಹುಸೇನ್ ದರ್ಗಾ

ಮುನ್ನಾವರ ದರ್ಗಾ

ಸೇರ-ಎ-ಸುಲ್ತಾನ ದರ್ಗಾ

ಹಜರತ್ ಕಂಜಾವು ದರ್ಗಾ(ಮಹಿಳಾ ದರ್ಗಾ)

ಹೀಗೆ ೭೦ಕ್ಕಿಂತ ಹೆಚ್ಚು ದರ್ಗಾಗಳು ಬಹಮನಿ ರಾಜ್ಯದಲ್ಲಿ ಕಾಣಸಿಗುತ್ತವೆ.[೧೬]

ದರ್ಗಾದಲ್ಲಿ ಪ್ರಮುಖವಾಗಿ ನಾಲ್ಕು ಪ್ರಕಾರಗಳನ್ನು ನಾವು ಕಾಣಬಹುದು, ಅವುಗಳೆಂದರೆ ನೆಲದ ಮೇಲಿರುವ ದರ್ಗಾಗಳು, ಗುಡ್ಡದ ಮೇಲಿರುವ ದರ್ಗಾಗಳು, ಬಯಲು ದರ್ಗಾಗಳು ಮತ್ತು ಇತರ ಸಾಮಾನ್ಯ ದರ್ಗಾಗಳು. ಬಹಮನಿ ಷಾಹಿಗಳು ಆಳಿದ ಸಾಮ್ರಾಜ್ಯದಲ್ಲಿ ದರ್ಗಾಗಳು ಸಾಮಾನ್ಯವಾಗಿ ನೆಲದ ಮೇಲಿರುವ ದರ್ಗಾಗಳಾಗಿವೆ, ಅವುಗಳಲ್ಲಿ ಪ್ರಮುಖವಾದವುಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

## ೧. ಬಂದೇನವಾಜ ದರ್ಗಾ(ಗೇಸುದರಾಜನ ದರ್ಗಾ) (೧೪೨೨)

ದರ್ಗಾವು ಸೂಫಿ ಪಂಥದ ಅತ್ಯಂತ ಜನಪ್ರಿಯ ಸಂತನಾದ ಗೇಸುದರಾಜನ ದರ್ಗಾ. ಈ ದರ್ಗಾದಲ್ಲಿ ಅನೇಕ ಸೂಫಿ ಸಂತರ ಸಮಾಧಿಗಳು, ಮಸೀದಿಗಳು, ಮದ್ರಸಾಗಳು, ಅರೇಬಿಕ್ ಧರ್ಮಶಾಲೆಗಳು, ಖನ್‌ಖಾನ್‌ಗಳು ಸೇರಿಕೊಂಡಿವೆ. ಈ ದರ್ಗಾದ ನಿರ್ಮಾಣ ೧೫ನೇ ಶತಮಾನದಿಂದ ೧೭ನೇ ಶತಮಾನದವರೆಗೆ ನಡೆಯಿತೆಂದು ತಿಳಿದುಬರುತ್ತದೆ. ಈ ಬೃಹತ್ ದರ್ಗಾದಲ್ಲಿ ಕನ್ನಡಿಗಳ ಅಲಂಕಾರಗಳು, ವರ್ಣಾಲಂಕಾರಗಳು, ಕಲಾತ್ಮಕ ಗೋಪುರಗಳು, ಎತ್ತರವಾದ ಗುಮ್ಮಟಗಳು, ವರ್ಣರಂಜಿತವಾಗಿ ಕಟ್ಟಲ್ಪಟ್ಟಿದ್ದು ದರ್ಗಾದ ಆಕರ್ಷಣೆಯನ್ನು ಹೆಚ್ಚಿಸಿದೆ. ಬಂದೇನವಾಜ ದರ್ಗಾದ ಬಳಿ ಚಿಕ್ಕ ಮಸೀದಿ ಇದೆ, ಇದನ್ನು ಬಿಜಾಪುರದ ದಳಪತಿ ಅಫ್ಜಲ್‌ಖಾನ್‌ನು ಕಟ್ಟಿಸಿದ್ದನೆಂದು ತಿಳಿದುಬರುತ್ತದೆ. ಈ ಮಸೀದಿಯಲ್ಲಿ ಪ್ರಾಣಿಗಳಿಂದ ಅಲಂಕೃತವಾದ ಗಾರೆಯ ಕಮಾನುಗಳನ್ನು ನಾವು ಕಾಣಬಹುದು.[೧೭]

ಬಂದೇನವಾಜ ಗೇಸುದರಾಜನು ದೆಹಲಿಯ ಪ್ರಸಿದ್ಧ ಚಿಸ್ತಿ ಸೂಫಿ ಸಂತರಾದ ನಾಸಿರುದ್ದೀನ್‌ನ ಶಿಷ್ಯರು. ಬಂದೇನವಾಜ ಎಂದರೆ 'ಮೊರೆಹೊಕ್ಕವರ ಪೊರೆಯುವವನು' ಮತ್ತು ಗೇಸುದರಾಜ ಎಂದರೆ 'ಉದ್ದ ಕೇಶವುಳ್ಳವನು'. ಇವೆರಡು ಬಿರುದುಗಳು ಇವನ ನಿಜನಾಮಗಳು. ಸಂಸ್ಕೃತ, ಅರಬ್ಬಿ, ಪಾರಸಿ, ದಖ್ಖನಿ ಹೀಗೆ ಬಹು ಭಾಷೆಗಳನ್ನು ಬಲ್ಲಂತಹ ಬಂದೇನವಾಜರು ಗುಲ್ಬರ್ಗಾಕ್ಕೆ ಬಂದು ನೆಲೆಸಿದರು. ಗುಲ್ಬರ್ಗಾದಲ್ಲಿಯ ಖಾನ್‌ಖಾವು ಅವರ ವಿದ್ಯಾಕೇಂದ್ರವಾಯಿತು, ಈಗಲೂ ಸಹ ಈ ದರ್ಗಾದಲ್ಲಿ ಒಂದು ದೊಡ್ಡ ಪುಸ್ತಕ ಬಂಡಾರವನ್ನು ನಾವು ಕಾಣುತ್ತೇವೆ. ಅಂದಿನ ಕಾಲದಲ್ಲಿ ಬಂದೇನವಾಜರ ಜೊತೆ ಚರ್ಚಿಸಲು ಹಾಗೂ ಕಲಿಯಲು ದೇಶದ ನಾನಾ ಮೂಲೆಗಳಿಂದ ಆಡಳಿತಗಾರರು, ವಿದ್ವಾಂಸರು ಹಾಗೂ ಶಿಷ್ಯರು ಬರುತ್ತಿದ್ದರು. ಬಂದೇನವಾಜರು ಸ್ಥಳೀಯ ಹಿಂದೂ ಸಂತರ ಜೊತೆ ಕೂಡ ಚರ್ಚೆ ನಡೆಸುತ್ತಿದ್ದರೆಂದು ಚರಿತ್ರೆಯಿಂದ ತಿಳಿದುಬರುತ್ತದೆ.[೧೮]

ಬಂದೇನವಾಜರನ್ನು ಮೊದಲ ಬಾರಿಗೆ ದಖ್ಖನ್‌ಗೆ ಸುಲ್ತಾನನಾದ ಫಿರೋಜ್ ಷಾನು ದೌಲತಾಬಾದಿಗೆ ಹೋಗಿ ಎದುರುಗೊಂಡು ಕರೆ ತಂದಿರುತ್ತಾನೆ. ಈತನಿಗಾಗಿ ದೊಡ್ಡ ಖಾನ್‌ಖಾವನ್ನೇ ಕಟ್ಟಿಸಿ ವಸತಿ ವ್ಯವಸ್ಥೆಯನ್ನು ಮಾಡಿರುತ್ತಾನೆ. ಬಹಮನ್ ಷಾಹಿ ದೊರೆಗಳು ಬಂದೇನವಾಜ ಗೇಸುದರಾಜನ ಮಾರ್ಗದರ್ಶನ ಪಡೆಯದೇ ಆಡಳಿತ ನಡೆಸುತ್ತಿರಲಿಲ್ಲ. ಅನೇಕ ಶರಣರು, ಸೂಫಿಗಳು ಮತ್ತು ಸಂತರು ಬಂದೇನವಾಜರೊಂದಿಗೆ ಆಧ್ಯಾತ್ಮಿಕ ಚರ್ಚೆ ಮಾಡಲು ಬಂದು ಅವರ ಆಶೀರ್ವಾದ ಮತ್ತು ಸಲಹೆಗಳನ್ನು ಪಡೆಯುತ್ತಿದ್ದರು. ಬಹಮನಿ ಮತ್ತು ಬಿಜಾಪುರದ ದೊರೆಗಳು ಸೂಫಿ ಸಂತರಿಗೆ ಆಶ್ರಯ ನೀಡಿ ಅವರ ಮಾರ್ಗದರ್ಶನ ಪಡೆಯುತ್ತಿದ್ದರು ಮತ್ತು ದೀಕ್ಷೆಯನ್ನು ಸಹ ಪಡೆಯುತ್ತಿದ್ದರು. ಸಂತರ ಮರಣಾನಂತರ ಅವರಿಗಾಗಿ ದರ್ಗಾಗಳನ್ನು ಕಟ್ಟಿಸುತ್ತಿದ್ದರು.

ಸೂಫಿ ಸಂತರ ಇತಿಹಾಸದಲ್ಲಿ ಅಗ್ರಗಣ್ಯರೆನಿಸಿರುವ ಖ್ವಾಜಾ ಬಂದೇನವಾಜ ಗೇಸುದರಾಜರು 'ಹಿಂದುಲ್‌ವಲಿ'(ದಕ್ಷಿಣದ ಭಗವಂತನ ಮಿತ್ರ) ಎಂಬ ಬಿರುದನ್ನು ಪಡೆದಿದ್ದರು. ಗೇಸುದರಾಜರು, ಮಹಮ್ಮದ್ ಬಿನ್ ತುಘಲಕ್‌ನು ರಾಜಧಾನಿಯನ್ನು ದೆಹಲಿಯಿಂದ ದೌಲತಾಬಾದ್‌ಗೆ ವರ್ಗಾಯಿಸಿದಾಗ ತಮ್ಮ ಅನುಯಾಯಿಯೊಂದಿಗೆ ದಕ್ಷಿಣ ಭಾರತಕ್ಕೆ ಬಂದರು. ೧೪೦೧ರಲ್ಲಿ ಗುಲ್ಬರ್ಗಾವನ್ನು ತಮ್ಮ ಆಧ್ಯಾತ್ಮಿಕ ನೆಲೆಯನ್ನಾಗಿ ಮಾಡಿಕೊಂಡರು. ಈ ಸಂತರು ದಖ್ಖನಿ(ಉರ್ದು) ಭಾಷೆಯಲ್ಲಿ ೧೦೪ ಗ್ರಂಥಗಳನ್ನು ಬರೆದಿದ್ದಾರೆ.[೧೯] ಇಷ್ಟೇ ಅಲ್ಲದೆ ಇವರು ೧೦೪ ವರ್ಷಗಳವರೆಗೆ ಜೀವಿಸಿದ್ದರೆಂಬುದು ವೈಶಿಷ್ಟ್ಯವೆನಿಸುತ್ತದೆ. ಕ್ರಿ.ಶ. ೧೪೨೨ರಲ್ಲಿ ಬಂದೇನವಾಜರು ಮರಣವನ್ನು ಹೊಂದಿದರು. ಇವರ ನೆನಪಿಗಾಗಿ ೧೪೨೨ರಲ್ಲಿ ಕಟ್ಟಿಸಿದ ಸಮಾಧಿಯೇ 'ಬಂದೇನವಾಜ್ ದರ್ಗಾ' ಎಂದು ಪ್ರಸಿದ್ಧಿಯನ್ನು ಹೊಂದಿದೆ.

ಈ ದರ್ಗಾವು ಗುಲ್ಬರ್ಗಾ ನಗರದ ರೋಜ್‌ಬುರ್ಜಾ ಸಮೀಪದಲ್ಲಿದ್ದು ಚೌಕಾಕಾರದ ಬೃಹತ್ ಕಟ್ಟಡವಾಗಿದ್ದು ಎತ್ತರವಾದ ಗೊಮ್ಮಟವನ್ನು ಹೊಂದಿದೆ. ಈ ದರ್ಗಾಕ್ಕೆ ಮೂರು ಕಮಾನುಗಳುಳ್ಳ ಪ್ರವೇಶ ದ್ವಾರಗಳಿದ್ದು, ದ್ವಾರದ ಗೋಡೆಗಳಲ್ಲಿ ಎರಡು ಕಮಾನುಗಳ ಸಾಲುಗಳಿವೆ. ಇದು ನೋಡಲು ಎರಡಂತಸ್ತಿನ ಕಟ್ಟಡಗಳಂತೆ ಕಾಣುತ್ತದೆ. ಇದು ಒಳಗಡೆ ಮೂರು ಗೋರಿಗಳನ್ನು ಹೊಂದಿದ್ದು ನಡುವಿನದು ಬಂದೇನವಾಜರ ದರ್ಗಾವಾಗಿರುತ್ತದೆ. ಕ್ರಿ.ಶ. ೧೫ನೇ ಶತಮಾನದಲ್ಲಿ ಗುಲ್ಬರ್ಗಾದ ಬಹಮನಿ ಸುಲ್ತಾನನಾದ ಅಹ್ಮದ್ ಷಾನು, ವಲಿಗಳ ಮಜಾರದ(ಗೋರಿ) ಮೇಲೆ ಅಮೃತಶಿಲೆಯಿಂದ ಭವ್ಯವಾದ ದರ್ಗಾ ಶರೀಫನ್ನು ನಿರ್ಮಿಸಿರುವನು. ಕ್ರಿ.ಶ. ೧೬೪೦ರಲ್ಲಿ ಬಿಜಾಪುರದ ಸುಲ್ತಾನನಾದ ಎರಡನೇ ಇಬ್ರಾಹಿಂನು ಈ ದರ್ಗಾಕ್ಕೆ ವಿಶಾಲವಾದ ಮಂದಿರವನ್ನು ಕಟ್ಟಿಸಿರುವನು. ಹೀಗೆ ಕಾಲಕಾಲಕ್ಕೆ ವಿಸ್ತೀರ್ಣಗೊಳ್ಳುತ್ತಾ ಬಂದು, ಅನೇಕ ಬಜಾರ ಸಮಾಧಿಗಳು, ಮಸೀದಿಗಳು, ಮದರಸಾಗಳು, ವಿಶ್ರಾಂತಿ ಕೋಣೆಗಳು, ವಿಶಾಲವಾದ ಒಳಾಂಗಣಗಳು ಮತ್ತು ಭವ್ಯವಾದ–ಸುಂದರವಾದ ದ್ವಾರಗಳಿಂದ ಕೂಡಿವೆ.

ದಕ್ಷಿಣ ಭಾರತದ ಇಸ್ಲಾಮಿಕ್ ಕೇಂದ್ರಗಳಲ್ಲಿ ಖ್ವಾಜಾ ಬಂದೇನವಾಜರ ದರ್ಗಾ ಶರೀಫವು ಒಂದಾಗಿದೆ. ಈ ದರ್ಗಾದ ಮುಂಭಾಗವು ಎರಡು ಅಂತಸ್ತುಗಳನ್ನು ಹೊಂದಿದ್ದು, ಕಮಾನು ಗೋಡೆಗಳಿಂದ ಆಲಂಕೃತವಾಗಿದೆ. ಗುಮ್ಮಟದೊಳಗಿನ ವರ್ಣಾಲಂಕಾರಗಳು ಬಹಳ ಸುಂದರವಾಗಿ, ಬಜಾರದ(ಸಮಾಧಿ) ಮೇಲಿರುವ ಮೇಲುಕಟ್ಟು ಕನ್ನಡಿ ಹರಳುಗಳಿಂದ ಮತ್ತು ಮುತ್ತುಗಳಿಂದ ಶೃಂಗರಿಸಲ್ಪಟ್ಟಿದೆ. ಅಲ್ಲಿರುವ ಎಲ್ಲಾ ಮಜಾರಗಳಿಗಿಂತಲೂ ಸಂತ ಗೇಸುದರಾಜ ವಲಿಗಳ ಮಜಾರದ ಶಿಲ್ಪ ಕಲೆಯು ಬಹಳ ಅಲಂಕೃತವಾಗಿದ್ದು ಆಕರ್ಷಣೀಯವಾಗಿದೆ.

**೨. ಶೇಖ್ ರೌಜಾ–ಶೇಖ್ ಶಿರಾಜುದ್ದೀನ್ ಜುನೈದಿ ದರ್ಗಾ(೧೩೫೦)**

ಈ ಸೂಫಿ ಸಂತರು ಬಹಮನಿ ರಾಜ್ಯದ ಆರಂಭಿಕ ಕಾಲದಲ್ಲಿ ಅಂದರೆ ಕ್ರಿ.ಶ. ೧೩೫೦ರಲ್ಲಿ ಗುಲ್ಬರ್ಗಾಕ್ಕೆ ಬಂದು ನೆಲೆಸಿದ್ದರು. ಇವರ ದರ್ಗಾ ಗುಲ್ಬರ್ಗಾದ ಷಾ ಬಜಾರದ ಮಸೀದಿಯ ಹಿಂಭಾಗದಲ್ಲಿದೆ. ಮೂಲದಲ್ಲಿ ಇದು ಸಂತನ ಗೋರಿ ಮತ್ತು ಮಸೀದಿಯಿಂದ ಕೂಡಿತ್ತು, ನಂತರದಲ್ಲಿ ಸಂತನ ಸಮಾಧಿಯ ಪಕ್ಕದಲ್ಲಿ ಇನ್ನೂ ಹಲವರ ಸಮಾಧಿಗಳು ಮತ್ತು ಗೋರಿಗಳು ಕೂಡಿಕೊಂಡು ಒಂದು ಸಂಕೀರ್ಣವಾಗಿ ಬೆಳೆದಿದೆ. ಈ ದರ್ಗಾಕ್ಕೆ ಒಂದು ಮಹಾದ್ವಾರವಿದ್ದು, ಇದನ್ನು ಬಿಜಾಪುರದ ಆದಿಲ್‌ಶಾಹಿ ಸುಲ್ತಾನನಾದ ಯೂಸುಫ್ ಅದಿಲ್‌ಖಾನ್ ಕಟ್ಟಿಸಿದ್ದಾನೆ.[೨೦]

ಬಹಮನಿ ರಾಜ್ಯದ ಆರಂಭಿಕ ಸುಲ್ತಾನರ ಸಮಾಧಿಗಳು ಈ ಸಂತನ ದರ್ಗಾದ ದಕ್ಷಿಣಕ್ಕೆ ಇರುವವು. ಸಂತನ ಅನುಯಾಯಿಗಳ ಸಮಾಧಿಗಳು ದರ್ಗಾದ ಸುತ್ತಲೂ ಕಂಡುಬರುತ್ತವೆ. ಈ ದರ್ಗಾವು ಒಂದು ಧಾರ್ಮಿಕ ಕೇಂದ್ರವಾಗಿ ಬೆಳೆದು ಬಂದಿದೆ. ಈ ದರ್ಗಾವು ೧೪ನೇ ಶತಮಾನದ ಕೊನೆಯ ಭಾಗದ ಕಟ್ಟಡ ಶೈಲಿಯಲ್ಲಿದೆ. ಈ ಭವ್ಯವಾದ ಕಟ್ಟಡಕ್ಕೆ ಎರಡು ಎತ್ತರವಾದ ವೃತ್ತಾಕಾರದ ಮೆಟ್ಟಿಲುಗಳಿರುವ ಸ್ತಂಭ ಗೋಪುರಗಳಿವೆ ಹಾಗೂ ಎರಡು ಅಂತಸ್ತಿನ ಮುಂಭಾಗವು ಮತ್ತು ಕಮಾನು ಪ್ರವೇಶ ದ್ವಾರಗಳು ಈ ದರ್ಗಾಕ್ಕೆ ಇವೆ.

**೩. ಹಜರತ್ ಸೈಯದ್ ಷಾಹ ಕಮಲ್ ಮುಜ್ರೌದ ದರ್ಗಾ**

ಈ ದರ್ಗಾವು ಹಜರತ್ ಗೇಸುದರಾಜನ ದರ್ಗಾದ ಆಜ್ಞೇಯ ದಿಕ್ಕಿನಲ್ಲಿದೆ. ಮೈದುಲ್ಲಾ ಓಣಿಯಲ್ಲಿ ಇರುವ ಹಜರತ್ ಕಮಲ್ ಮುಜ್ರೌದರ ದರ್ಗಾ ಪ್ರಸಿದ್ಧ ಸ್ಥಳವಾಗಿದೆ. ಇದನ್ನು ಶಿಲೆಯಿಂದ ಕಟ್ಟಲಾಗಿದೆ, ಗೊಮ್ಮಟವಿದ್ದು ಚೌಕಾಕಾರದ ಗೋಡೆಗಳಿವೆ, ಗಾರೆಯ ಲೇಪನವಿದ್ದು ಗೊಮ್ಮಟದ ಕೋಣೆಯನ್ನು ಎತ್ತರವಾದ

ಜಗಲಿಯ ಮೇಲೆ ಕಟ್ಟಲಾಗಿದೆ. ಇದಕ್ಕೆ ಉತ್ತರ ಮತ್ತು ದಕ್ಷಿಣದ ಗೋಡೆಗಳಲ್ಲಿ ಕಮಾನುಗಳುಳ್ಳ ಎರಡು ದ್ವಾರಗಳಿವೆ. ಆಳ ಗೂಡುಗಳುಳ್ಳ ಕಮಾನುಗಳಿಗೆ ಆಯತಾಕಾರದ ಚೌಕಟ್ಟಿನ ಬಾಗಿಲಿದೆ. ಗೋಡೆಯ ನಡುವೆ ಕಿಟಕಿ ಇದ್ದು, ಕಮಾನುಗಳು ಶಿಲಾಕಟ್ಟೆಯ ಮೇಲಿನ ಅರೆಕಂಬಗಳ ಮೇಲಿವೆ. ಇನ್ನೆರಡು ಗೋಡೆಗಳಲ್ಲಿ ಕಮಾನುಗಳನ್ನು ತೋರಿಸಲಾಗಿದೆ. ಇವೆಲ್ಲದರ ನಡುವೆ ಒಳಗಡೆ ಕಮಲ್ ಮುಜಾೖದರ ಗೋರಿ ಇದೆ. ನಾಲ್ಕು ಗೋಡೆಗಳಿಗೂ ಎತ್ತರವಾದ ಕಮಾನುಗಳಿದ್ದು, ತುದಿಗಳಿಗೆ ಸಮಾನವಾಗಿ ಮೂಲೆಗಳುಳ್ಳ ಕಮಾನುಗಳಿವೆ. ಇದು ಎಂಟು ಮುಖಗಳುಳ್ಳ ಕಮಾನುಗಳ ಕಟ್ಟಡವಾಗಿದೆ, ಈ ಕಮಾನುಗಳ ಮೇಲೆ ಗೊಮ್ಮಟವನ್ನು ಇರಿಸಲಾಗಿದೆ. ಈ ಗೋಡೆ ಮತ್ತು ಗೊಮ್ಮಟಗಳಿಗೆ ಸುಣ್ಣದ ಲೇಪನವಿದ್ದು, ಇಳಿಜಾರಾದ ಗೋಡೆಗಳಿಗೆ ಚಪ್ಪಟೆ ಗೊಮ್ಮಟಗಳ ಲಕ್ಷಣಗಳಿವೆ. ಮಾಳಿಗೆ ಹಂಚಿನ ಗೋಡೆಯನ್ನು ಜೀರ್ಣೋದ್ಧಾರ ಮಾಡಲಾಗಿದೆ. ಇದು ೧೫ನೇ ಶತಮಾನದ ಸರಳವಾದ ಸಮಾಧಿ ಭವನವಾಗಿದೆ. ಈ ದರ್ಗಾದ ಸಮೀಪದಲ್ಲಿ ಸಣ್ಣ ಮಸೀದಿ ಮತ್ತು ಇನ್ನಿತರ ಕಟ್ಟಡಗಳಿವೆ. ಮಸೀದಿಯಲ್ಲಿ ೫೩ ಅಳತೆಯ ಗುಮ್ಮಟವುಳ್ಳ ಅಂಕಗಳ ಪ್ರಾರ್ಥನಾ ಅಂಗಳವಿದೆ. ಅಂಗಳದ ತುಂಬಾ ಗಚ್ಚು-ಗಾರೆಯಿಂದ ಮಾಡಿದ ಅಲಂಕಾರ, ತುಂಬಿದ ಕಮಾನು, ಗೊಂಬೆಗಳು, ರೇಖಾ ಗಣಿತದ ವಿನ್ಯಾಸಗಳು, ಎಲೆ ಬಳ್ಳಿಯ ಅಲಂಕಾರಗಳು ಇಡೀ ಕಟ್ಟಡವನ್ನು ಸುಂದರಗೊಳಿಸಿವೆ.[೨೦]

**೪. ಸೈಯದ್ ಹಜರತ್ ರುಕ್ಮದ್ದೀನ್ ತೋಲ್ ದರ್ಗಾ**

ಈ ದರ್ಗಾವು ಫೀರಾಪುರದ ಎತ್ತರದ ಗುಡ್ಡದ ಮೇಲಿದೆ. ಇಲ್ಲಿ ಹಜರತ್ ರುಕ್ಮದ್ದೀನ್ ತೋಲ್ ಸಂತರ ಬೃಹತ್ ಮಜಾರ(ಗೋರಿ) ತೆರೆದ ಬಯಲಿನಲ್ಲಿದೆ. ಬಜಾರವನ್ನು ನಯವಾದ ಟ್ರ್ಯಾಪ್ ಶಿಲೆಯಿಂದ ನಿರ್ಮಿಸಲಾಗಿದೆ. ಏಕಶಿಲೆಯಂತೆ ಕಾಣುವ ಇದು ಆಯತಾಕಾರದಲ್ಲಿ ಎತ್ತರವಾಗಿದ್ದು, ಮೇಲ್ಭಾಗವು ಕಮಾನಿನ ಆಕಾರದಲ್ಲಿದೆ. ಈ ಬಜಾರದ ಎದುರುಗಡೆಗೆ ಮತ್ತೊಂದು ಬೃಹತ್ ಗೋರಿ ಇದ್ದು, ಇದು ಹಜರತ್ ಷಾಹ ಖಾದ್ರಿಯವರದಾಗಿದೆ. ಇದಲ್ಲದೆ ಬ್ರಾಹ್ಮಣ ಮತ್ತು ರುಕ್ಮದ್ದೀನ್ ತೋಲ್ ಸಂತರ ಶಿಷ್ಯೆ, ಹಾಗೂ ಇನ್ನೂ ಕೆಲವು ಗೋರಿಗಳು ಇಲ್ಲಿವೆ. ಇಲ್ಲಿಯ ಗುರು-ಶಿಷ್ಯರ ಮಜಾರಗಳನ್ನು ಹಿಂದೂ-ಮುಸ್ಲಿಂ ಜನಾಂಗದವರಿಬ್ಬರೂ ಗೌರವಾಧರಗಳಿಂದ, ಹಿಂದೂಗಳಂತೆ ಮಡಿ-ಉಡಿಗಳಿಂದ, ಕಾಯಿ-ಕರ್ಪೂರಗಳಿಂದ, ತೆಂಗಿನಕಾಯಿಯೊಂದಿಗೆ ಪೂಜಿಸುವರು. ಇವರ ಜೀವನ ಚರಿತ್ರೆಯು ತುಂಬಾ ಕುತೂಹಲಕಾರಿಯಾಗಿದೆ. ಈ ಬೃಹತ್ ಬಜಾರವು ಹಾಗೂ ದರ್ಗಾವು ಹಜರತ್ ಬಂದೇನವಾಜರ ಸಮಕಾಲೀನದ್ದಾಗಿದೆ.[೨೨]

**೫. ಖಾದರ್ ಭಾಷಾ ದರ್ಗಾ**

ಈ ದರ್ಗಾವು ಗುಲ್ಬರ್ಗಾದ ಸುಲ್ತಾನಪುರ ರಸ್ತೆಯ ಪಕ್ಕದಲ್ಲಿದೆ ಗುಲ್ಬರ್ಗಾ ನಗರದ ಸಮೀಪದ ಊರಾದ ಸುಲ್ತಾನಪುರ ರಸ್ತೆಯ ಪಕ್ಕದ ಒಂದು ಹೊಲದಲ್ಲಿ ಖಾದರ್ ಭಾಷಾ ದರ್ಗಾ ನಿರ್ಮಿಸಲಾಗಿದೆ. ಈ ದರ್ಗಾವನ್ನು ಉತ್ತರದ ಅಧಿಷ್ಠಾನದ ಮೇಲೆ ಕಟ್ಟಲಾಗಿದೆ.[೨೩] ಆದರೆ ಈ ಕಟ್ಟಡವು ದುಃಸ್ಥಿತಿಯಲ್ಲಿದೆ. ದರ್ಗಾದ ಸುತ್ತಲೂ ಪ್ರದಕ್ಷಿಣ ಪಥ ಇರುವುದು ವಿಶೇಷವಾಗಿದೆ. ಈ ಕಟ್ಟಡದಲ್ಲಿ ಎರಡು ಗೋರಿಗಳಿದ್ದು, ಒಂದೇ ಸಾಲಿನಲ್ಲಿ ಎತ್ತರದಲ್ಲಿ ದಕ್ಷಿಣಾಭಿಮುಖವಾಗಿದೆ. ಈ ಕಟ್ಟಡದ ಉತ್ತರಕ್ಕೆ ಕಮಾನುಗಳುಳ್ಳ ದ್ವಾರಗಳಿವೆ, ಪ್ರತಿ ದ್ವಾರದ ಅಗಲ ೧.೫೦ ಮೀಟರ್ ಇದ್ದು, ಈ ದ್ವಾರಗಳಲ್ಲಿ ಎರಡು ಹಿಂಚಾಚು ಮತ್ತು ಮುಂಚಾಚುಗಳಿವೆ. ಇಲ್ಲಿಯೂ ಒಳಗಡೆ ಸ್ಕ್ರಂಚಸ್‌ಗಳಿವೆ, ಕಮಾನುಗಳನ್ನು ಅರೆಕಂಬಗಳ ಮೇಲೆ ಕೂಡ್ರಿಸಲಾಗಿದೆ. ಮೇಲ್ಗಡೆಗೆ ಮೂಲೆಗಳಲ್ಲಿ ನಾಲ್ಕು ಆಳವಾದ ಕಮಾನುಗಳಿವೆ. ಮೂರು ಗೋಡೆಗಳಲ್ಲಿಯೂ ಕಮಾನುಗಳಿವೆ, ಆದರೆ ಪಶ್ಚಿಮದ ಗೋಡೆಯ ನಡು ಭಾಗದಲ್ಲಿ ಕಮಾನಿನಾಕಾರದ ಗೂಡಿರುವುದು ವಿಶೇಷ. ಈ ಎಲ್ಲಾ ಕಮಾನುಗಳು

ಒಂದೇ ಎತ್ತರ ಮತ್ತು ನಮೂನೆಗಳಲ್ಲಿವೆ. ಇದೇ ಮಾದರಿಯನ್ನು ಇಲ್ಲಿಯ ಮಹಿಳಾ ದರ್ಗಾದಲ್ಲೂ ಕಾಣಬಹುದು. ಈ ಕಮಾನುಗಳ ತುದಿಯಲ್ಲಿ ವೃತ್ತಾಕಾರದ ಪಟ್ಟಿಕೆಗಳು, ರೇಖಾಲಂಕಾರ ಹಾಗೂ ಹೂ ಬಳ್ಳಿಗಳನ್ನು ಅಲಂಕಾರಗೊಳಿಸಿ ಅದರ ಮೇಲೆ ಅರ್ಧವೃತ್ತಾಕಾರದ ಗುಂಬಜವನ್ನು ಏರಿಸಲಾಗಿದೆ. ಇದರ ಬುಡದಲ್ಲಿ ಚೂಪಾದ ಪಟ್ಟಿಕೆಗಳಿವೆ. ಗೊಮ್ಮಟದ ಪಟ್ಟಿಕೆಯ ಮೇಲೆ ಕಮಾನುಗಳ ಅಲಂಕಾರಗಳಿವೆ. ಗೊಮ್ಮಟದ ನಡುವೆ ಎರಡು ವೃತ್ತಗಳಿವೆ ಮತ್ತು ಗೊಮ್ಮಟದ ಒಳಭಾಗದಲ್ಲಿ ಇದ್ದಂತಹ ಅರೆಕಂಬಗಳನ್ನು ತೆಗೆದು ಹಾಕಲಾಗಿದೆ. ತಳಪಾಯ ಚೌಕಾಗಿ ಇದ್ದು, ಇದರ ಗೋಡೆಯನ್ನು ಎಂಟು ಮುಖಗಳಲ್ಲಿ ಕಟ್ಟಿರುವುದು ವಿಶೇಷ. ತಲಾ ಒಂದರ ಅಳತೆಯು ೪.೨೫ ಮೀಟರ್ ಇದ್ದು, ಮೂಲೆಗಳ ಹೊರ ಗೋಡೆ ಗಳ ಮೇಲೆ ಕಮಾನುಗಳಿವೆ. ಆಳವಿಲ್ಲದ ಗೂಡು ತಳಪಾಯದಿಂದ ೧.೨೦ ಮೀಟರ್ ಎತ್ತರದಲ್ಲಿದೆ. ಮೂಲೆ ಕಮಾನುಗಳ ಗೂಡುಗಳ ಮೇಲೆ, ಬಾಗಿಲುಗಳ ಮೇಲೆ ಮತ್ತು ಪಶ್ಚಿಮ ಗೋಡೆಗಳಲ್ಲಿ ವೃತ್ತಪಟ್ಟಿಕೆಗಳಲ್ಲಿ ರೇಖಾ ಲಂಕಾರವನ್ನು ಕಾಣಬಹುದು. ಪಶ್ಚಿಮ ಗೋಡೆಯ ಮೇಲೆ, ಕಮಾನಿನ ಮೇಲೆ ಮತ್ತು ಮೂಲೆ ಗೋಡೆಗಳ ಮೇಲೆ ಇಳಿಜಾರಾದ ಸಜ್ಜಾಗಳನ್ನು ನಿರ್ಮಿಸಲಾಗಿದ್ದು ಸಜ್ಜಾಗಳ ಮೇಲೆ ತೆನೆಗಳು ಹಾಗೂ ಮಿನಾರೇಟ್ಸ್‌ಗಳಿವೆ.

**೬. ಮೌಲಾನಾ ಷಾಹ ಖಾದರ್ ರಹಿಮತುಲ್ಲಾ ದರ್ಗಾ**

ಈ ದರ್ಗಾವು ನಗರದ ಬದಿಯಲ್ಲಿರುವ ಸುಲ್ತಾನಪುರದಲ್ಲಿದೆ. ಈ ದರ್ಗಾದ ತಳಪಾಯವು ಚೌಕಾಕಾರವಾಗಿದ್ದು, ಒಳಗಡೆ ಮೌಲಾನಾ ಷಾಹ ಖಾದರ್ ರಹಿಮತುಲ್ಲಾನಾ ಗೋರಿ ಇದೆ. ದರ್ಗಾದ ಹೊರಗಡೆಯೂ ಕೆಲವು ಗೋರಿಗಳಿವೆ. ಈ ದರ್ಗಾದ ಕಾಲಮಾನ ಕ್ರಿ.ಶ. ೧೪ನೇ ಶತಮಾನ ಎಂದು ಹೇಳಲಾಗಿದೆ.

**೭. ಸಿದ್ಧಿ ಅಂಬರ್ ದರ್ಗಾ**

ನಗರದಲ್ಲಿರುವ ಖ್ವಾಜಾ ಹಜರತ್ ಬಂದೇನವಾಜ ದರ್ಗಾದ ಹಿಂದುಗಡೆ ಈ ದರ್ಗಾ ಇದೆ. ಚೌಕಾಕಾರದಲ್ಲಿರುವ ಈ ದರ್ಗಾಕ್ಕೆ ದಕ್ಷಿಣದಲ್ಲಿ ಕಮಾನುಗಳುಳ್ಳ ಪ್ರವೇಶ ದ್ವಾರವಿದೆ. ಈ ಕಮಾನುಗಳ ಮೇಲೆ ತೋರಣದ ಅಲಂಕಾರವನ್ನು ಗಾರೆಯಿಂದ ನಿರ್ಮಿಸಲಾಗಿದೆ. ದಕ್ಷಿಣದ ಕಮಾನು ದ್ವಾರದ ಫಲಕಗಳಲ್ಲಿ ಸರಳ ಶಾಖೆಗಳಿವೆ, ಇದರ ಮೇಲೆ ಶಕೀಲ್ ಅಂಬರ್ ಕ್ಯಾಲಿಗ್ರಾಫಿ ಬರವಣಿಗೆ ಇದೆ. ದ್ವಾರದ ದಕ್ಷಿಣದ ಗೋಡೆಗೆ ಒಂದೇ ಎತ್ತರದ ಎರಡು ಕಮಾನುಗಳಿದ್ದು ಹೆಚ್ಚಾಗಿ ಅಲಂಕಾರಗಳಿಂದ ಕೂಡಿವೆ. ಈ ದರ್ಗಾದ ಒಳಗಡೆ ಸಿದ್ಧಿ ಅಂಬರ್ ಮತ್ತು ಅವರ ಕುಟುಂಬದ ನಾಲ್ಕು ಗೋರಿಗಳನ್ನು ಉತ್ತರ–ದಕ್ಷಿಣವಾಗಿ ಕಟ್ಟಲಾಗಿದೆ. ತಲಾ ಒಂದರಂತೆ ಗೋಡೆಯ ಬದಿಯಲ್ಲಿ ಕಮಾನುಗಳಿವೆ. ಕಮಾನುಗಳು ಒಂದೇ ಎತ್ತರದಲ್ಲಿದ್ದು, ಅಲಂಕೃತವಾಗಿದ್ದು, ಗೋಡೆಗಳ ಮಾಳಿಗೆಯ ಪ್ಯಾರಾಪೆಟ್ ಮೇಲೆ ಕಮಾನಿನಾಕಾರದ ತೆನೆಗಳು ಮತ್ತು ಮೂಲೆಗಳ ಮೇಲೆ ಅಲಂಕೃತ ಮಿನಾರೇಸ್ಟ್‌ಗಳಿವೆ. ಅಷ್ಟಪಟ್ಟಿಕೆಯ ಮೇಲೆ ವೃತ್ತ ಗೋಡೆಯನ್ನು ಏರಿಸಿ, ಅದರ ಮೇಲ್ಗಡೆ ಗೊಮ್ಮಟವನ್ನು ನಿರ್ಮಿಸಿದ್ದಾರೆ. ಈ ದರ್ಗಾದ ಮುಂದುಗಡೆ ಕೆಲವು ಮಹಿಳೆಯರ ಮತ್ತು ಮಕ್ಕಳ ಗೋರಿಗಳಿವೆ.

**೮. ಖುಂಜಮಾಸಬೀ ದರ್ಗಾ(ಮಹಿಳಾ ದರ್ಗಾ)**

ಈ ದರ್ಗಾವು ಗುಲ್ಬರ್ಗಾ ನಗರದ ಸಮೀಪವಿರುವ ಕಪನೂರಿನಲ್ಲಿ ಕ್ರಿ.ಶ.೧೪೧೪ರಲ್ಲಿ ನಿರ್ಮಿಸಲಾಗಿದೆ. ಈ ದರ್ಗಾದ ವಿಶೇಷವೆಂದರೆ, ನಾಯಿ ಕಡಿಸಿಕೊಂಡವರು ಈ ದರ್ಗಾದ ಬಾವಿಯ ನೀರನ್ನು ಮೂರು ಬಾರಿ ಕುಡಿದರೆ ಗುಣಮುಖವಾಗುವರೆಂದು ನಂಬಿಕೆ ಹಾಗೂ ಆಚರಣೆ ಇಂದಿಗೂ ಉಳಿದುಕೊಂಡಿದೆ. ಈ ದರ್ಗಾದ ಒಳಗಡೆ ಹೆಂಗಸರ ಸಮಾಧಿಗಳಿದ್ದು, ದರ್ಗಾದ ದಕ್ಷಿಣಕ್ಕೆ ಕೆಲವು ಗೋರಿಗಳಿವೆ. ಈ

ಸ್ಮಾರಕ ಕಟ್ಟಡವು ಚೌಕಾಕಾರವಾಗಿದ್ದು(೧೫ ಚ.ಮೀ.) ಎತ್ತರದ ಜಗಲಿಯ ಮೇಲೆ ಕಟ್ಟಲಾಗಿದೆ. ಇದರ ಒಳಗಡೆ ಹಜರತ್ ಬೀಬೀ ಕಮಲ ಸುಲ್ತಾನ ಖುಂಜಮಾಸ ಮತ್ತು ಅವಳ ಮಗ ಸೈಯ್ಯದ್ ಖ್ವಾಜಾ ಕರೀಮುಲ್ಲಾ ಹುಸೇನಿಯ ಗೋರಿಗಳಿವೆ. ಬೀಬಿ ಕಮಲಳ ಗೋರಿಯು ಎತ್ತರವಾಗಿದ್ದು, ಬಜಾರದ ಮೇಲ್ಭಾಗವು ಕಮಾನಿನಂತಿದೆ. ಈ ದರ್ಗಾಕೆ ಮೂರು ಕಮಾನುಗಳುಳ್ಳ ದ್ವಾರಗಳಿದ್ದು, ಕಮಾನುಗಳ ಮೇಲೆ ಜಲ್ಲಿಗಳನ್ನು ಕೂಡಿಸಲಾಗಿದೆ. ನಾಲ್ಕು ಗೋಡೆಗಳಲ್ಲಿ ಹಾಗೂ ನಾಲ್ಕು ಮೂಲೆಗಳಲ್ಲಿ ನಾಲ್ಕು ಕಮಾನುಗಳಿವೆ, ಒಟ್ಟಾರೆ ಇಲ್ಲಿ ಎಂಟು ಮುಖಗಳಿವೆ. ಅಷ್ಟಪಟ್ಟಿಯ ಮೇಲೆ ಗೋಡೆ, ಅದರ ಮೇಲ್ಗಡೆ ಗುಮ್ಮಟವನ್ನು ಏರಿಸಲಾಗಿದೆ. ಗೊಮ್ಮಟದ ಮೇಲ್ಗಡೆ ಕಳಸವಿದ್ದು, ಪ್ಯಾರಾಪೆಟ್‌ನಲ್ಲಿ ಕಮಾನಿನ ತೆನೆಗಳು ಹಾಗೂ ಮೂಲೆಗಳಲ್ಲಿ ಮಿನಾರೇಟ್ಸ್‌ಗಳಿವೆ. ಹೊರಗಿನ ಸುತ್ತಲಿನ ಭಾಗವು ಪ್ರದಕ್ಷಣಾ ಪಥವನ್ನು ನೆನಪಿಸುತ್ತದೆ.[೨೫]

**೩. ಸಮಾಧಿಗಳು**

**೧. ಹಸನ್ ಗಂಗೂ ಮತ್ತು ಇತರರ ಸಮಾಧಿಗಳು(೧೩೭೫)**

ಈ ಸಮಾಧಿಗಳು ಗುಲ್ಬರ್ಗಾದ ಪಶ್ಚಿಮ ಭಾಗದಲ್ಲಿವೆ. ಈ ಕಟ್ಟಡಗಳು ಸರಳ ಹಾಗೂ ಸಣ್ಣ ಗಾತ್ರದ ಗುಮ್ಮಟಗಳಿಂದ ಕೂಡಿದ್ದು, ಹೆಚ್ಚಿನ ಅಲಂಕಾರಗಳು ಕಂಡುಬರುವುದಿಲ್ಲ. ಈ ಗುಮ್ಮಟಗಳು ತುಘಲಕ್ ಶೈಲಿಯಲ್ಲಿದ್ದು, ಈ ಕಟ್ಟಡಗಳಲ್ಲಿ ಮೂರು ಸಮಾಧಿಗಳನ್ನು ನಾವು ಕಾಣಬಹುದು-ಹಸನ್ ಗಂಗೂ ಬಹಮನ್ ಷಾ, ಒಂದನೇ ಮಹಮ್ಮದ್ ಮತ್ತು ಮೂರನೇಯ ಗುಂಬಜ್.

**೨. ಹಫ್ತ್ ಅಥವಾ ಸುಲ್ತಾನರ ಸಾತ್ ಗುಂಬಜ್(೧೩೭೮-೧೪೨೨)**

ಇಲ್ಲಿ ಏಳು ಗುಂಬಜ್‌ಗಳಿದ್ದು ಗುಲ್ಬರ್ಗಾ ನಗರದ ಪೂರ್ವ ಭಾಗದಲ್ಲಿವೆ. ಈ ಗುಂಬಜ್‌ಗಳಲ್ಲಿ ಮುಜಾಹಿದ್, ದಾವುದ್, ಫಿರೋಜ್ ಮತ್ತು ಅವನ ಬಂಧುಗಳ ಸಮಾಧಿಗಳು ಕಂಡುಬರುತ್ತವೆ. ಇಲ್ಲಿಯ ಸಮಾಧಿಗಳು ಸರಳವಾಗಿದ್ದು, ಫಿರೋಜನ ಸಮಾಧಿಯು ಇದ್ದುದರಲ್ಲೇ ಉತ್ತಮ ಮಟ್ಟದ್ದಾಗಿದೆ. ಈ ಸಮಾಧಿಯು ೧೫೮ ಅಡು ಉದ್ದ, ೭೮ ಅಡಿ ಎತ್ತರವುಳ್ಳದ್ದಾಗಿದೆ. ಪರ್ಸಿಬ್ರೌನ್‌ರ ಪ್ರಕಾರ ಇದೊಂದು ಬೃಹತ್ ಸಮಾಧಿಯಾಗಿದೆ.[೨೬] ಫಿರೋಜ್‌ನ ಸಮಾಧಿಯಲ್ಲಿ ಮಾತ್ರ ಅಲಂಕಾರದ ವಿನ್ಯಾಸಗಳು ಕಂಡುಬರುತ್ತವೆ. ಈ ಸಾತ್ ಗುಂಬಜ್ ತುಘಲಕ್ ವಾಸ್ತು ಶೈಲಿಯಲ್ಲಿದ್ದು, ಇವುಗಳ ಮೇಲಿನ ಮಾಡುಗಳಲ್ಲಿ ಮತ್ತು ದ್ವಾರಗಳಲ್ಲಿ ರೇಖಾ ವಿನ್ಯಾಸಗಳು, ತಾವರೇ ಮುಂತಾದ ಬಳ್ಳಿಗಳು, ಇತರ ಬಳ್ಳಿಗಳ ಕಲಾಕೃತಿಗಳು ಕಂಡುಬರುತ್ತವೆ. ಗುಮ್ಮಟದ ಮೇಲ್ಭಾಗದಲ್ಲಿ ವರ್ಣಾಲಂಕಾರದ ಕುರುಹುಗಳನ್ನು ನಾವು ಕಾಣಬಹುದು.

**೩.೨.೨. ಬೀದರ್‌ದಲ್ಲಿರುವ ಸಾಮಾಜಿಕ ಸಂಸ್ಥೆಗಳು**

ಬಹಮನಿ ಸುಲ್ತಾನನಾದ ಅಹ್ಮದ್‌ಷಾನು ೧೪೨೫ರಲ್ಲಿ ಗುಲ್ಬರ್ಗಾದಿಂದ ಬೀದರಿಗೆ ತನ್ನ ರಾಜಧಾನಿಯನ್ನು ಬದಲಾಯಿಸಿದನು. ಈ ಸಮಯವು ಅಲ್ಲಿಯ ಕಟ್ಟಡಗಳ ನಿರ್ಮಾಣಕ್ಕೆ ಒಂದು ಹೊಸ ಪ್ರಚೋದನೆಯನ್ನು ಕೊಟ್ಟಿತು. ಬೀದರ್‌ನಲ್ಲಿ ನಿರ್ಮಿತವಾದ ವಾಸ್ತುಶಿಲ್ಪದ ಪ್ರಮುಖ ಮಾದರಿಗಳೆಂದರೆ, ಸುತ್ತಲು ಕಟ್ಟಿದ ಕೋಟೆ, ಅಂದದ ಅರಮನೆಗಳು, ಕೋಟೆಯೊಳಗಿನ ಎರಡು ಮಸೀದಿಗಳು, ಮದರಸಾ ಎಂದು ಕರೆಯಲಾಗುವ ವಿದ್ಯಾಸಂಸ್ಥೆಯ ಒಂದು ಕಟ್ಟಡ ಮತ್ತು ಸುಲ್ತಾನರ ಸಮಾಧಿಗಳು. ಬೀದರಿನ ಕೋಟೆ ಗುಲ್ಬರ್ಗಾ ಕೋಟೆಗಿಂತ ದೊಡ್ಡದಿದ್ದು, ಇಲ್ಲಿನ ಕೆಲವು ಅಂಶಗಳು ಗುಲ್ಬರ್ಗಾಕ್ಕಿಂತ ಮಿಗಿಲಾಗಿವೆ. ಬೀದರ್‌ನ ಕೋಟೆಯ ಒಳಗಿರುವ ಅರಮನೆಯ ಅವಶೇಷಗಳು ಬಹಮನಿ ಸುಲ್ತಾನರ ರಾಜವೈಭವಕ್ಕೆ ಸಾಕ್ಷಿಯಾಗಿ ಇಂದಿಗೂ ಉಳಿದುಕೊಂಡಿವೆ. ರಂಗೀನ್ ಮಹಲ್, ಜನಾನಾ ಮಹಲ್, ದರ್ಬಾರ್ ಮಹಲ್, ದಿವಾನ್-ಎ-ಆಮ್, ಮುಂತಾದ ಕಟ್ಟಡಗಳ ರಚನೆ ಮತ್ತು ವರ್ಣರಂಜಿತ ಅಲಂಕಾರಗಳು ಪರ್ಶಿಯಾ ದೇಶದ ಪ್ರಭಾವವನ್ನು ತೋರಿಸುತ್ತವೆ.

ಬಹಮನಿ ರಾಜ್ಯದ ಎರಡನೇ ರಾಜಧಾನಿಯಾದ ಬೀದರಿನಲ್ಲಿ ಗುಲ್ಬರ್ಗಾಕ್ಕೂ ಮಿಗಿಲಾದಂತಹ ಕಲಾವೈಶಿಷ್ಟ್ಯವನ್ನು ನಾವು ಕಾಣುತ್ತೇವೆ. ಇಲ್ಲಿಯ ಕಟ್ಟಡಗಳು ಕಲೆ ಮತ್ತು ವಾಸ್ತುಶಿಲ್ಪ ವೈಖರಿಗೆ ಹೆಸರುವಾಸಿಯಾಗಿವೆ. ಇಲ್ಲಿಯ ಅರಮನೆಗಳು, ದರ್ಬಾರುಗಳು, ಸಮಾಧಿಗಳು, ಮದ್ರಸಾಗಳು ಮುಂತಾದ ಕಟ್ಟಡಗಳು ಭಾರತೀಯ ಮತ್ತು ಸೆರಾಸಾನಿಕ್ ಶೈಲಿಯ ಸಮ್ಮಿಲನವಾಗಿ ಮೂಡಿಬಂದಿವೆ. ಈ ಎಲ್ಲಾ ಕಟ್ಟಡಗಳಲ್ಲಿ 'ಸೋಲಾ ಕಂಭ ಮಸೀದಿ'(೧೬ ಕಂಭ) ವೈಶಿಷ್ಟ್ಯಪೂರ್ಣವಾಗಿದೆ.[೨೬] ಇಲ್ಲಿಯ ಅರಮನೆಗಳು ಕಾರಂಜಿಗಳನ್ನು, ಸ್ನಾನಗೃಹಗಳನ್ನು, ಕೊಳಗಳನ್ನು ಮುಂತಾದ ಐಶಾರಾಮಿ ಸೌಲಭ್ಯಗಳನ್ನು ಹೊಂದಿದ್ದವು. ಇವುಗಳ ಅವಶೇಷಗಳನ್ನು ನಾವು ಇಂದಿಗೂ ಕಾಣಬಹುದು.

ಬೀದರಿನ ಕೋಟೆಯನ್ನು ಶಾಬುದ್ದೀನ್ ಅಹ್ಮದನು ನಿರ್ಮಿಸಿದ್ದು, ಈ ಕೋಟೆಯ ಸುತ್ತಳತೆ ೩ ಕಿ.ಮೀ. ಇದ್ದು, ೭ ಹೆಬ್ಬಾಗಿಲುಗಳನ್ನು ಹೊಂದಿದೆ. ಪ್ರಧಾನ ಹೆಬ್ಬಾಗಿಲನ್ನು ಶಾರ್ಜಾ ದರವಾಜಾ ಎಂದು ಕರೆಯುತ್ತಿದ್ದರಂತೆ. ಏಕೆಂದರೆ ಈ ಹೆಬ್ಬಾಗಿಲ ಎರಡು ಬದಿಗಳಲ್ಲೂ ಹುಲಿಗಳ ಚಿತ್ರವನ್ನು ಚಿತ್ರಿಸಲಾಗಿದೆ. ಇನ್ನೊಂದು ದರವಾಜಾವಾದ ಗುಂಬಜ ದರವಾಜಾವನ್ನು ಪರ್ಶಿಯನ್ ಮಾದರಿಯ ಕಮಾನುಗಳಿಂದ ಅಲಂಕೃತಗೊಳಿಸಲಾಗಿದೆ. ಈ ಕೋಟೆಯ ಒಳ ಭಾಗದಲ್ಲಿ ತಖ್ತ್ ಮಹಲ್, ದಿವಾನ್-ಎ-ಆಮ್ ಮತ್ತು ರಂಗೀನ್ ಮಹಲ್‌ಗಳನ್ನು ನಿರ್ಮಿಸಲಾಗಿದೆ. ಈ ಕೋಟೆಯು ಇಂದಿಗೂ ಉತ್ತಮ ಸ್ಥಿತಿಯಲ್ಲಿರುವುದು ನಾವು ಕಾಣಬಹುದು.

**೧. ಮಸಿದಿಗಳು**

**೧. ಜಮೀ ಮಸೀದಿ ಮತ್ತು ಸೋಲಾ ಕಂಭ ಮಸೀದಿ**

ಬೀದರಿನಲ್ಲಿರುವ ಎರಡು ಮಸೀದಿಗಳಾದ ಜಮೀ ಮಸೀದಿ ಮತ್ತು ಸೋಲಾ ಕಂಭ ಮಸೀದಿಗಳಲ್ಲಿ ರಾಜಮಹಲ್‌ಗಳಲ್ಲಿ ಎಷ್ಟು ಆಡಂಬರ ಕಾಣುತ್ತದೆಯೋ, ಅದಕ್ಕಿಂತಲೂ ಮಿಗಿಲಾದ ಸರಳತೆ ಈ ಮಸೀದಿಗಳಲ್ಲಿ ಗೋಚರಿಸುತ್ತದೆ. ಸೋಲಾ ಕಂಭ ಮಸೀದಿಯನ್ನು ಮಹಮ್ಮದ್ ಬಿನ್ ತುಘಲಕ್‌ನ ಕಾಲದಲ್ಲಿ ಎಂದರೆ ೧೩೨೭ರಲ್ಲಿ ನಿರ್ಮಾಣ ಮಾಡಲಾಗಿದೆ. ಇದು ಪುರಾತನವಾದುದಲ್ಲದೇ ವಿಶಾಲವಾಗಿಯೂ ಇದೆ. ಈ ಮಸೀದಿಯಲ್ಲಿ ಭಾರೀ ಗಾತ್ರದ ೧೬ ಕಂಭಗಳಿವೆ, ಈ ಕಂಭಗಳು ದ್ವಾರದಲ್ಲಿ ಪ್ರಮುಖವಾಗಿ ಎದ್ದು ಕಾಣುತ್ತವೆ, ಆದ್ದರಿಂದಲೇ ಈ ಮಸೀದಿಯನ್ನು ಸೋಲಾ ಕಂಭ ಮಸೀದಿ ಎಂದು ಕರೆಯಲಾಗಿದೆ. ಈ ಮಸೀದಿಯ ಮುಖ್ಯ ದ್ವಾರವು ಯಾವ ಅಲಂಕಾರವೂ ಇಲ್ಲದೆ ಸರಳವಾಗಿದ್ದು, ಮಸೀದಿಯ ಗುಮ್ಮಟ ಚಪ್ಪಟೆಯಾಗಿದೆ. ಮಸೀದಿಯ ಮುಂಭಾಗದಲ್ಲಿ ವಿಶಾಲವಾದ ಲಾಲಭಾಗ ಎಂಬ ವಿಶಾಲವಾದ ಸುಂದರ ಉದ್ಯಾನವನವಿದೆ. ಈ ಎರಡು ಮಸೀದಿಗಳು ಸಂಪ್ರದಾಯಬದ್ಧವಾದ ರೀತಿಯಲ್ಲಿ ನಿರ್ಮಾಣವಾಗಿದ್ದು, ಮೇಲ್ಛಾವಣಿ ಇಲ್ಲದ ವಿಸ್ತಾರವಾದ ಒಳಾಂಗಣದಿಂದ ಕೂಡಿದ್ದು ಮಸೀದಿಗೆ ಇರಬೇಕಾದ ಇತರ ಕೈಸಾಲೆಗಳು, ಪಶ್ಚಿಮದ ಮಂಟಪ, ಕಮಾನಿನ ಗೂಡುಗಳು(ಮೆಹ್‌ರಾಬ್), ಗೋಪುರಗಳು, ಎಲ್ಲವೂ ಪ್ರಮಾಣ ಬದ್ಧವಾಗಿಯೂ ಮತ್ತು ಸಂಪ್ರದಾಯಬದ್ಧವಾಗಿಯೂ ಇವೆ. ಸೋಲಾ ಕಂಭದ ಮೇಲಿರುವ ಗೋಪುರವನ್ನು ೧೬ ಅಂಚುಗಳುಳ್ಳ ಮತ್ತು ಕಮಾನಿನ ಬಾಗಿಲುಗಳನ್ನುಳ್ಳ ಎತ್ತರವಾದ ವರ್ತುಲಾಕಾರದ ಸ್ತಂಭದ ಮೇಲೆ ನಿಲ್ಲಿಸಲ್ಪಟ್ಟಿದೆ.[೨೭]

**೨. ತಖ್ತ್ ಮಹಲ್(ಅರಮನೆ) ಕ್ರಿ.ಶ.೧೪೨೪**

ಬೀದರಿನಲ್ಲಿರುವ ಈ ಅರಮನೆಯನ್ನು ಶಿಹಾಬುದ್ದೀನ್ ಸುಲ್ತಾನನು ಕ್ರಿ.ಶ.೧೪೨೪ರಲ್ಲಿ ಕಟ್ಟಿಸಿದನು. ಈ ಅರಮನೆಯು ಉತ್ತರಾಭಿ ಮುಖವಾಗಿದ್ದು, ವಿಷಾಲಮಂಟಪ ಮತ್ತು ಕೋಣೆಗಳಿಂದ ಅಲಂಕೃತಗೊಂಡಿದೆ.

ಪಶ್ಚಿಮದಲ್ಲಿ ಎರಡನೇ ಮಹಾದ್ವಾರವಿದ್ದು, ದ್ವಾರದ ಮೇಲೆ ಸೆರಾಮಿಕ್(ಪಿಂಗಾಣಿ) ಬಿಲ್ಲೆಗಳಿಂದ ಅಲಂಕೃತಗೊಳಿಸಲಾಗಿದೆ. ದ್ವಾರಗಳ ಮೇಲ್ಭಾಗದಲ್ಲಿ ಹುಲಿ ಮತ್ತು ಸೂರ್ಯ/ಶಂಸ್‌ನ ರಾಜ ಚಿನ್ಹೆಗಳು ಕಂಡುಬರುತ್ತವೆ. ಅರಮನೆಯ ಗೋಡೆಗಳು ಮತ್ತು ಕಿಟಗಿಗಳ ಮೇಲೆ ಗಾರೆ ಮತ್ತು ಗಚ್ಚಿನ ಅಲಂಕೃತವಾದ ಗೂಡುಗಳಿವೆ. ಮಹಲ್‌ನ ದಕ್ಷಿಣ ಭಾಗದಲ್ಲಿ ಈಜುಗೊಳ್ಳವಿದೆ. ಇಂದು ಈ ಅರಮನೆಯ ಬಹು ಭಾಗವು ಶಿಥಿಲಾವಸ್ತೆಯಲ್ಲಿ ಕಂಡುಬರುತ್ತದೆ.[೨೮]

**೩. ದಿವಾನ್-ಎ-ಆಮ್(ಸಾರ್ವಜನಿಕ ಸಭಾಭವನ) ೧೪ನೇ ಶತಮಾನ**

ಇದು ಒಂದು ಸಾರ್ವಜನಿಕ ಸಭಾಭವನವಾಗಿದ್ದು, ಇದನ್ನು ೧೪ನೇ ಶತಮಾನದ ಕೊನೆಯಲ್ಲಿ ನಿರ್ಮಿಸಲಾಗಿದೆ. ಈ ಭವನದಲ್ಲಿ ವಿಶಾಲವಾದ ಸಭಾಂಗಣವಿದ್ದು, ಕುಶಲ ಕೆತ್ತನೆಯ ಮರದ ಕಂಭಗಳಿವೆ. ಈ ಭವನವು ಪಿಂಗಾಣಿಯ ಸುಂದರವಾದ ಚದರ ಬಿಲ್ಲೆಗಳಿಂದ ಅಲಂಕೃತಗೊಂಡಿದ್ದಿತ್ತು. ಗೋಡೆಗಳ ಮೇಲ್ಭಾಗದಲ್ಲಿ ಪಾರ್ಶಿ ಶೈಲಿಯ ಕ್ಯಾಲಿಗ್ರಾಫಿ ಬರವಣಿಗೆಗಳನ್ನು, ರೇಖಾ ವಿನ್ಯಾಸಗಳನ್ನು, ಹೂವು ಬಳ್ಳಿಗಳನ್ನು ಚಿತ್ರಿಸಿರುವುದನ್ನು ಕಾಣಬಹುದು. ಇಂದು ಮರದ ಕಂಭಗಳು ಕಣ್ಮರೆಯಾಗಿದ್ದು ಭವನವು ಶಿಥಿಲಾವಸ್ಥೆಯಲ್ಲಿದೆ.[೨೯]

**೪. ರಂಗೀನ್ ಮಹಲ್(ಅರಮನೆ) ಕ್ರಿ.ಶ. ೧೫೨೦**

ಈ ಮಹಲನ್ನು ಬಾರೀದ್ ಮನೆತನದ ಖಾಸಿಂ ಕ್ರಿ.ಶ. ೧೫೨೦ರಲ್ಲಿ ಕಟ್ಟಿಸಿದನು. ಈ ಮಹಲ್ ಮರದ ಕೆತ್ತನೆಗಳಿಂದಲೂ, ಬಣ್ಣ ತುಂಬಿದ ಚಿತ್ರಗಳಿಂದಲೂ ಕೂಡಿದ್ದು ಆಕರ್ಷಕವಾಗಿದೆ. ಈ ಅರಮನೆಯಲ್ಲಿ ಹಿಂದೂ-ಮುಸ್ಲಿಂ ಶೈಲಿಗಳು ಸಮ್ಮಿಲಿತಗೊಂಡಿರುವುದನ್ನು ನಾವು ಕಾಣಬಹುದು. ಇಂದಿಗೂ ಈ ಮಹಲ್ ಉತ್ತಮ ಸ್ಥಿತಿಯಲ್ಲಿದೆ.[೩೦]

**೫. ಗವಾನ್ ಮದ್ರಸಾ(ಕಾಲೇಜು) ಕ್ರಿ.ಶ. ೧೪೭೨**

ಈ ಮದ್ರಸಾವನ್ನು ನಿರ್ಮಿಸಿದವನು ಬಹಮನಿ ಸಾಮ್ರಾಜ್ಯದ ಪ್ರಧಾನಮಂತ್ರಿಯಾಗಿದ್ದ ಮಹಮ್ಮದ್ ಗವಾನನು ನಿರ್ಮಿಸಿದನು. ಈ ಮಾದರಿಯ ಕಟ್ಟಡಗಳು ಪರ್ಶಿಯಾದ ಖುರಾಸಾನ್ ಪ್ರಾಂತದಲ್ಲಿ ಕಂಡುಬರುತ್ತವೆ. ಈ ಮದ್ರಸಾವು ಭವ್ಯವಾದ ಮೂರು ಅಂತಸ್ತುಗಳ ಕಟ್ಟಡವಾಗಿದ್ದು, ಅರೇಬಿಕ್ ಮತ್ತು ಧರ್ಮಶಾಸ್ತ್ರ ಅಧ್ಯಯನದ ಸಂಸ್ಥೆ ಅಥವಾ ಕಾಲೇಜು ಆಗಿದ್ದಿತು. ಚೌಕಾಕಾರದ ಈ ಕಟ್ಟಡದ ಮಧ್ಯ ಭಾಗದಲ್ಲಿ ವಿಶಾಲವಾದ ಅಂಗಳವಿದೆ. ಒಳ ಭಾಗದ ಕಾರಿಡಾರ್‌ನಲ್ಲಿ ಅಲಂಕೃತ ಕಂಭಗಳು, ಪ್ರವೇಶ ದ್ವಾರಗಳನ್ನು ನಿರ್ಮಿಸಲಾಗಿದೆ. ನಾಲ್ಕು ದಿಕ್ಕುಗಳ ದ್ವಾರಗಳ(ಐವಾನ್) ಮೇಲ್ಭಾಗದಲ್ಲಿ ಗುಮ್ಮಟಗಳನ್ನು ರಚಿಸಲಾಗಿದೆ. ಮದ್ರಸಾದ ಎರಡು ಮೂಲೆಗಳಲ್ಲಿ ಅಂದರೆ ಈಶಾನ್ಯ ಮತ್ತು ಆಗ್ನೇಯ ಮೂಲೆಗಳಲ್ಲಿ ಸುಮಾರು ೭೦ ಅಡಿ ಎತ್ತರದ ಮಿನಾರ್‌ಗಳಿದ್ದವೆಂದು ತಿಳಿದು ಬರುತ್ತದೆ. ಈಗ ಈಶಾನ್ಯ ಭಾಗದ ಮಿನಾರ್ ಮಾತ್ರ ಉಳಿದುಕೊಂಡಿದೆ. ಮದ್ರಸಾದ ಸ್ತಂಭ ಗೋಪುರ ಮತ್ತು ಪ್ರವೇಶ ದ್ವಾರಗಳನ್ನು ವರ್ಣಮಯ ಪಿಂಗಾಣಿ ಬಿಲ್ಲೆಗಳಿಂದ ಅಲಂಕರಿಸಲಾಗಿದೆ.[೩೧]

**೬. ಬಹಮನಿ ಸುಲ್ತಾನರ ಸಮಾಧಿಗಳು**

ಬಹಮನಿ ಸುಲ್ತಾನರ ಸಮಾಧಿ-ಸ್ಮಾರಕಗಳನ್ನು ಬೀದರ್ ನಗರದ ಪಶ್ಚಿಮ ಭಾಗದಲ್ಲಿ ನಾವು ಕಾಣುತ್ತೇವೆ. ಈ ಸಮಾಧಿಗಳು ಬಹಮನಿ ವಂಶದ ಹಿರಿಮೆಯನ್ನು ವ್ಯಕ್ತಪಡಿಸುವ ಕಟ್ಟಡಗಳಾಗಿವೆ. ಇಲ್ಲಿ ಇಂತಹ ೧೨ ಸಮಾಧಿ-ಸ್ಮಾರಕಗಳನ್ನು ನಾವು ನೋಡಬಹುದು. ಎಲ್ಲವೂ ಸ್ವಲ್ಪ ಹೆಚ್ಚು-ಕಡಿಮೆ ಒಂದೇ ರೀತಿಯಾಗಿದ್ದು, ಇವು ಸಂಪ್ರದಾಯ ಬದ್ಧವಾಗಿ ನಿರ್ಮಿತವಾಗಿದ್ದು ಒಂದೇ ಸಮಾಧಿಯನ್ನುಳ್ಳ ಏಕ

ಸ್ಮಾರಕ ಸಮಾಧಿ ಮಂದಿರಗಳಾಗಿವೆ. ಇವು ಸರಳವಾದ ಸ್ಮಾರಕವಾಗಿದ್ದು, ದಪ್ಪ ಗೋಡೆ, ದುಂಡಾದ ಗುಮ್ಮಟ ಹಾಗೂ ಕಮಾನುಗಳಿಂದ ಕೂಡಿವೆ. ಗುಮ್ಮಟಗಳ ತಳ ಭಾಗದಲ್ಲಿ ವರ್ಣಮಯ ಅಲಂಕಾರಗಳಿದ್ದು, ಗುಮ್ಮಟದ ಒಳ ಛಾವಣಿಯಲ್ಲಿ ವರ್ಣಮಯ ಬಿಲ್ಲೆಗಳನ್ನು ಜೋಡಿಸಲಾಗಿದೆ. ಈ ಬಿಲ್ಲೆಗಳ ಮೇಲೆ ಖುರಾನ್‌ನ ವಾಖ್ಯೆಗಳನ್ನು ಕೆತ್ತಲಾಗಿದೆ. ದ್ವಾರ ಭಾಗಗಳಲ್ಲಿ ಗಾರೆಯಿಂದ ಬಳ್ಳಿಯ ಚಿತ್ರಗಳನ್ನು ಮೂಡಿಸಲಾಗಿದೆ. ಈ ಸಮಾಧಿಗಳಲ್ಲಿ ಅಲಿ ಬರೀದ್ ಷಾನ ಸಮಾಧಿಯು ಉತ್ತಮ ಸ್ಥಿತಿಯಲ್ಲಿದೆ. ಈ ಸಮಾಧಿಗಳ ಮೇಲಿನ ಗೋಪುರಗಳ ಆಕಾರ ಸ್ವಲ್ಪಮಟ್ಟಿಗೆ ಬದಲಾಗಿದ್ದು, ಟಾರ್‌ಟಾರ್ ಗೋಪುರಗಳೆಂದು ಪ್ರಸಿದ್ಧವಾದ ಈ ಗೋಪುರಗಳು ಮುಂದಿನ ಮುಸ್ಲಿಂ ವಾಸ್ತುಶಿಲ್ಪದಲ್ಲಿ ಪ್ರಮುಖ ಪಾತ್ರ ವಹಿಸಿದವು.

**೧. ಅಷ್ಟೂರು ಸಮಾಧಿ**

ಬೀದರ್ ಬಳಿಯ ಅಷ್ಟೂರು ಬಹಮನಿ ಸುಲ್ತಾನರ ಸಮಾಧಿಗಳ ಸ್ಥಳವಾಗಿದ್ದು, ಇಲ್ಲಿ ಪರ್ಶಿಯನ್ ಶೈಲಿಯು ಪ್ರಧಾನವಾಗಿ ಕಂಡುಬರುತ್ತದೆ. ಇಲ್ಲಿಯ ಗುಮ್ಮಟಗಳು ಬೃಹಧಾಕಾರವಾಗಿಯೂ, ದುಂಡಾಗಿಯೂ ಇವೆ. ೧೪೩೬ರಲ್ಲಿ ನಿರ್ಮಾಣಗೊಂಡ ಶಹಾಬುದ್ದೀನ್ ಅಹ್ಮದ್‌ನ ಸಮಾಧಿಯು ಅತ್ಯಂತ ಸುಂದರವಾಗಿದೆ. ಇದು ಮೂರು ಅಂತಸ್ತುಗಳಿಂದ ಕೂಡಿದ್ದು, ಕಲಾ ಲಿಪಿಯ ಸಾಲುಗಳಿಂದ ಕಂಗೊಳಿಸುತ್ತದೆ. ಪಿಂಗಾಣಿಯ ವರ್ಣಮಯ ಬಿಲ್ಲೆಗಳು ಈ ಸಮಾಧಿಯ ಭವ್ಯತೆಯನ್ನು ಹೆಚ್ಚಿಸಿವೆ. ಇಲ್ಲಿಯ ಮೂಲೆ ಕಂಭಗಳು ೧೬ ಮುಖಗಳಿಂದ ಕೂಡಿದ್ದು, ನೋಡಲು ಆಕರ್ಷಕವಾಗಿದ್ದು, ಹೂಬಳ್ಳಿ, ಎಲೆ ಬಳ್ಳಿ, ರೇಖಾ ವಿನ್ಯಾಸ, ಕೆಂಪು– ಹಸಿರು–ಚಿನ್ನದ ಬಣ್ಣಗಳಿಂದ ಕೂಡಿವೆ. ಎರಡನೇ ಅಹ್ಮದ್‌ನ ಸಮಾಧಿಯು ಐದು ಎತ್ತರವಾದ ಕಮಾನುಗಳಿಂದ ಅಲಂಕೃತಗೊಂಡಿದೆ.[೨]

ಅಷ್ಟೂರಿನಲ್ಲಿರುವ ಮತ್ತೊಂದು ಸುಂದರವಾದ ಸಮಾಧಿ ಎಂದರೆ, ಸೂಫಿ ಸಂತನಾದ ಖಲೀಲನಿಗೆ ಸೇರಿದ್ದು. ಈ ಸಮಾಧಿಯಲ್ಲಿ ಕಲಾ ಲಿಪಿಯಲ್ಲಿ ರಚಿಸಿರುವ ಬರಹಗಳಿವೆ. ಈ ಕಟ್ಟಡಗಳ ನಿರ್ಮಾಣ ಹಾಗೂ ಕಲಾ ಲಿಪಿ ರಚನೆಯಲ್ಲಿ ಪರ್ಶಿಯಾದ ಶಿಲ್ಪಿಗಳು ಮತ್ತು ಕಲಾವಿದರು ಪ್ರಮುಖ ಪಾತ್ರ ವಹಿಸಿದ್ದರೆಂದು ತಿಳಿದುಬರುತ್ತದೆ.

## ೩.೩. ಶಿಕ್ಷಣ ಮತ್ತು ಸಾಹಿತ್ಯ

### ೩.೩.೧. ಶಿಕ್ಷಣ ಪದ್ಧತಿ

ಅನಾದಿ ಕಾಲದಿಂದಲೂ ಕೇವಲ ಶಿಕ್ಷಣದಿಂದ ಮಾತ್ರ ಮಾನವನ ಏಳ್ಗೆ ಸಾಧ್ಯವೆಂಬುದು ಎಲ್ಲರಿಗೂ ತಿಳಿದ ವಿಷಯ. ಈ ಶಿಕ್ಷಣವು ಇಸ್ಲಾಂ ಸ್ವರೂಪದ್ದಿರಬಹುದು, ಹಿಂದೂ ಸ್ವರೂಪದ್ದಿರಬಹುದು ಅಥವಾ ಬೇರೆ ಯಾವುದೇ ಸ್ವರೂಪವನ್ನು ಹೊಂದಿರಬಹುದು, ಆದರೆ ಮನುಷ್ಯನನ್ನು ಪರಿಪೂರ್ಣತೆಯತ್ತ ನಡೆಸುವುದೇ ಶಿಕ್ಷಣ.

**೧. ಮುಸ್ಲಿಂ ಶಿಕ್ಷಣ ಪದ್ದತಿ**

ಮುಸ್ಲಿಂ ಸಂಪ್ರದಾಯಗಳು ಭಾರತದಲ್ಲಿ ಮುಸ್ಲಿಂ ಶಿಕ್ಷಣ ಪದ್ಧತಿಯ ತಿರುಳಾಗಿದ್ದವು. ಈ ಸಂಪ್ರದಾಯಗಳು ಮಂಗೋಲಿಯನ್ನರ ಆಕ್ರಮಣದ ತರುವಾಯ ಪಂಡಿತರು ಹಾಗೂ ವಿದ್ಯಾವಂತರಿಂದ ಭಾರತದಲ್ಲಿ ಊರಲ್ಪಟ್ಟವು. ಅದರ ಸ್ಥಾಪನೆಯ ಒಂದು ಶತಮಾನದೊಳಗೆ ಆರಂಭದಲ್ಲಿಯ ದೆಹಲಿಯ ಸುಲ್ತಾನರ ಆಳ್ವಿಕೆಯು ಮುಸ್ಲಿಂ ಶಿಕ್ಷಣವನ್ನು ಆರಂಭಿಸಿತು. ಅಲ್ಲಾವುದ್ದೀನ್ ಖಿಲ್ಜಿ ಆಡಳಿತದಲ್ಲಿ ಬುಖಾರ್, ಸಮರ್ಕಂದ, ಇರಾಕ್, ಕ್ವಾರಝ್ಮದ ಪಂಡಿತರು ಸಾಹಿತ್ಯಕ ವಿಷಯಗಳಲ್ಲಿ ಮಾರ್ಗದರ್ಶನ ಮತ್ತು ಪ್ರೇರಣೆಗಾಗಿ ಭಾರತದತ್ತ ನೋಡುತ್ತಿದ್ದರು. ಅಮೀರ್ ಖುಸ್ರಾವ್ ಭಾರತದ ವಿದ್ಯಾಪದ್ಧತಿಯು ರಾಯ್ ಇಪ್ಪಹಾನ್ ಮತ್ತು ರಮ್

ಮುಂತಾದ ವಿದ್ಯಾಕೇಂದ್ರಗಳಿಗಿಂತ ಉತ್ತಮ ಮಟ್ಟದೆಂದು ಮನ್ನಿಸಿದ್ದನು. ಜಿಯವುದ್ದೀನ್ ಬರಣಿಯವರ ಹೇಳಿಕೆಯಂತೆ, ಈ ದೇಶದ ಪಂಡಿತರು ಫಘ್ರೂಲಿ ಮತ್ತು ರಾಝೀಗಳ ಉನ್ನತಿಯನ್ನು ಪಡೆದಿದ್ದರು. ಕ್ರಿ.ಶ, ೧೪ನೇ ಶತಮಾನದಲ್ಲಿ ದೆಹಲಿಗೆ ಸಂದರ್ಶನ ನೀಡಿದ ಒಬ್ಬ ಅರಬ್ ಪ್ರವಾಸಿಯ ಹೇಳಿಕೆಯಂತೆ ಕೇವಲ ದೆಹಲಿಯಲ್ಲಿಯೇ ಒಂದು ಸಾವಿರ ಮದ್ರಸಾ(ಪಾಠಶಾಲೆ)ಗಳಿದ್ದವೆಂದು ಈ ಅಧ್ಯಯನದಿಂದ ತಿಳಿಯುತ್ತದೆ.[೩೩]

ಮುಸ್ಲಿಂ ಶಿಕ್ಷಣ ಪದ್ದತಿಯ ಲಕ್ಷಣವೆಂದರೆ, ಆಧ್ಯಾತ್ಮದಲ್ಲಿ ಸಂಪ್ರಾದಾಯತ್ವ ಮತ್ತು ರಚನೆಯಲ್ಲಿ ಧಾರ್ಮಿಕತೆ, ಅದರ ಮೂಲ ಉದ್ದೇಶ ನಂಬುಗೆಗಳ ಗಟ್ಟಿಯನ್ನು ನೆಲೆಗೊಳಿಸುವುದು. ವಿದ್ಯಾಬ್ಯಾಸ ಕ್ರಮವನ್ನು ಸ್ಥೂಲವಾಗಿ ಎರಡು ಕವಲುಗಳಾಗಿ ವಿಂಗಡಿಸಬಹುದು. ಮನ್ಕೊಲಾತ್ ಮತ್ತು ಮಕುಲಾತ್ ಒಂದನೆಯದು ಸಂಪ್ರದಾಯ–ವಿಜ್ಞಾನ ಪಂಗಡ ಎರಡನೆಯದು ತರ್ಕ ವಿಜ್ಞಾನ ಪಂಗಡ, ತಫನೀರ್ ವ್ಯಾಖ್ಯೆ ಅಹಾದಿಶ್(ಸಂಪ್ರದಾಯಗಳು) ಫಿಖ್(ಕಟ್ಟಳೆ) ಚರಿತ್ರೆ ಮತ್ತು ಸಾಹಿತ್ಯ, ಇವು ಸಂಪ್ರದಾಯ ವಿಜ್ಞಾನಿಗಳಿಗೆ ಸೇರಿದ್ದವು. ತರ್ಕ(ಮಂತಿಕ್) ತತ್ವಜ್ಞಾನ(ಹಿತ್ಮತ್) ವೈದ್ಯವಿಜ್ಞಾನ(ತಿಬ್ಬ) ಗಣಿತಶಾಸ್ತ್ರ(ರಿಯಾಜೀ) ಮತ್ತು ಖಗೋಳ ವಿಜ್ಞಾನ(ಹೈಯತ್)ಗಳು ತಾರ್ತಿಕ ವಿಜ್ಞಾನಕ್ಕೆ ಸೇರಿದ್ದವು. ಶಿಕ್ಷಣದ ಮೊದಲಿನ ಹಂತಗಳಲ್ಲಿ ಸಂಪ್ರದಾಯಶಾಸ್ತ್ರಗಳು ವ್ಯಾಸಂಗಕ್ಕೆ ಹೆಚ್ಚು ಮಹತ್ವವಿತ್ತು. ಆದರೆ ಮೆಲ್ಲಗೆ ತರ್ಕ ವಿಜ್ಞಾನದ ವಿಷಯಗಳು ಹೆಚ್ಚು ಆಕರ್ಷಣೆ ಪಡೆಯಲು ಆರಂಭವಾಯಿತು. ವೈಜ್ಞಾನಿಕ ಹಾಗೂ ತಾಂತ್ರಿಕ ಮುನ್ನಡೆಗಾಗಿ ಒಂದೇ ದಾರಿ ಮಾಡಿಕೊಡಲು ಸಾಧ್ಯವಿದ್ದ ಮಟ್ಟಗೆ ಮೇಲಿನ ಒತ್ತಡವು ಪ್ರಾಯೋಗಿಕ ಹಾಗೂ ಪ್ರಚೋದಕ ರೀತಿಗಳ ಬೆಳವಣಿಗೆಯನ್ನು ಸಾಗಿಸಲಿಲ್ಲ.[೩೪]

ಬಹಮನಿ ಸುಲ್ತಾನರ ಕಾಲದಲ್ಲಿ ಶಿಕ್ಷಣಕ್ಕೆ ಅತಿ ಹೆಚ್ಚಿನ ಪ್ರೊತ್ಸಾಹ ದೊರೆಯಿತು, ವಿಶೇಷವಾಗಿ ಮಹಮ್ಮದ್ ಗವಾನನ ಕಾಲದಲ್ಲಿ ಎಂದು ಹೇಳಬಹುದು. ಬಹಮನಿ ಸುಲ್ತಾನರು ಶಾಹಿ ಶಿಕ್ಷಣ ವ್ಯವಸ್ಥೆಯಲ್ಲಿ ಇಸ್ಲಾಂ ಸ್ವರೂಪವನ್ನು ಮಾತ್ರ ಅಳವಡಿಸಿಕೊಂಡಿದ್ದರೂ ಸಹ ಮಹಮ್ಮದ್ ಗವಾನನು ಬೀದರ್‌ನಲ್ಲಿ ತಾನು ಸ್ಥಾಪಿಸಿದ 'ಗವಾನ್ ಮದರಸಾ'ದಲ್ಲಿ ಎಲ್ಲಾ ವಿಧದ ಶಿಕ್ಷಣ ಪದ್ಧತಿಗಳು ಅಳವಡಿಕೆಯಲ್ಲಿದ್ದು ಗವಾನನು ವಿವಿಧ ಶಾಸ್ತ್ರಗಳಿಗೆ ಶಿಕ್ಷಣದಲ್ಲಿ ಆದ್ಯತೆ ನೀಡುವ ಪ್ರಯತ್ನವನ್ನು ಮಾಡಿದ್ದನು.

ಬಹಮನಿ ಆಡಳಿತ ಕಾಲದಲ್ಲಿ ವಿದ್ಯಾಭ್ಯಾಸಕ್ಕೆ ಪ್ರೊತ್ಸಾಹ ನೀಡಿದ ಮೊದಲ ಸುಲ್ತಾನನೆಂದರೆ ಎರಡನೇ ಮಹಮ್ಮದ್‌ಷಾ. ಈತನು ಗುಲ್ಬರ್ಗಾ, ಬೀದರ್, ಕಂದಾರ, ಎಲಿಜಾಪುರ ಮತ್ತು ದೌಲತಾಬಾದ್‌ಗಳಲ್ಲಿ ಇಸ್ಲಾಮಿ ಶಾಲೆಗಳನ್ನು ತೆರೆದು ಅಲ್ಲಿ ಹಲವಾರು ಇಸ್ಲಾಮಿ ಪಂಡಿತರನ್ನು ನೇಮಿಸಿದ್ದನು. ಶಿಕ್ಷಣಾರ್ಥಿಗಳಿಗೆ ವಿದ್ಯಾರ್ಥಿ ವೇತನವನ್ನು ಕೊಡುವ ವ್ಯವಸ್ಥೆಯನ್ನು ಮಾಡಿದ್ದನು. ಮಹಮ್ಮದ್ ಷಾನು ೧೩೭೮ರಲ್ಲಿ ಅನಾಥರಿಗಾಗಿಯೇ ಮದರಸಾವೊಂದನ್ನು ಸ್ಥಾಪಿಸಿದನು, ಅಲ್ಲಿ ಅನಾಥ ಮಕ್ಕಳಿಗೆ ಮತ್ತು ಇತರರಿಗೂ ಸಹ ಉಚಿತ ವಸತಿ ಮತ್ತು ಶಿಕ್ಷಣಕ್ಕೆ ಅವಕಾಶ ಕಲ್ಪಿಸಿಕೊಟ್ಟಿದ್ದನು. ಈ ಶಾಲೆಗಳಲ್ಲಿ ಖುರಾನ್, ತರ್ಕ, ಸೂಫಿ ಪಂಥದ ತತ್ವಗಳು ಮುಂತಾದವು ಶಿಕ್ಷಣದ ಪ್ರಮುಖ ವಿಷಯಗಳಾಗಿದ್ದವೆಂದು ತಿಳಿಯುತ್ತದೆ. ಇದೇ ರೀತಿಯಾಗಿ ಎರಡನೇ ಮಹಮ್ಮದ್ ಷಾನು ಅನೇಕ ಸೈನಿಕ ಶಿಕ್ಷಣ ಶಾಲೆಗಳನ್ನೂ ಸಹ ಸ್ಥಾಪಿಸಿದ್ದನು ಮತ್ತು ಈ ಶಾಲೆಗಳಲ್ಲಿ ಹೆಚ್ಚಾಗಿ ಮುಸ್ಲಿಂ ವರ್ಗಕ್ಕೆ ಸೇರಿದ ಸೈನಿಕರು ಶಿಕ್ಷಣ ಪಡೆಯುತ್ತಿದ್ದರೆಂದು ಇತಿಹಾಸದಿಂದ ತಿಳಿದುಬರುತ್ತದೆ. ಬಹಮನಿ ಸಾಮ್ರಾಜ್ಯದ ಉಗಮದ ಕಾಲದಲ್ಲಿ, ಭಾರತದ ಮೇಲೆ ಅನೇಕ ಮುಸ್ಲಿಂ ದಾಳಿಗಳಾದವು. ಭಾರತೀಯ ಸಂಸ್ಕೃತಿ, ಶಿಕ್ಷಣ, ಸಾಮಾಜಿಕ ಮತ್ತು ರಾಜಕೀಯ

ವ್ಯವಸ್ಥೆಗಳ ಮೇಲೆ ಈ ದಾಳಿಗಳು ಗಂಭೀರ ಪರಿಣಾಮವನ್ನು ಬೀರಿದವು. ಈ ಕಾರಣದಿಂದಾಗಿ ಬಹಮನಿ ಸಾಮ್ರಾಜ್ಯದ ಪ್ರಾಂತ್ಯಗಳಲ್ಲಿ ಹಿಂದೂ-ಮುಸ್ಲಿಂ ಸಂಗಮದ ವಿಶಿಷ್ಟ ಹಾಗೂ ವಿಶಾಲ ಸಂಸ್ಕೃತಿ ಬೆಳವಣಿಗೆ ಹೊಂದಲು ಬುನಾದಿ ಹಾಕಿದಂತಾಯಿತೆಂದು ಹೇಳಬಹುದು.

ಬಹಮನಿ ಸುಲ್ತಾನರ ಆಡಳಿತ ಕಾಲದಲ್ಲಿ ಶಿಕ್ಷಣಕ್ಕೆ ಅತಿ ಹೆಚ್ಚಿನ ಪ್ರೋತ್ಸಾಹ ದೊರೆತ ಸಮಯವೆಂದರೆ ಮಂತ್ರಿಯಾದ ಮಹಮ್ಮದ್ ಗವಾನನ ಕಾಲದಲ್ಲೆಂದು ಹೇಳಬಹುದು. ಮಹಮ್ಮದ್ ಗವಾನನು ೧೪೫೮ ರಿಂದ ೧೪೮೧ರ ವರೆಗೆ ಸುಲ್ತಾನರ ಕೆಳಗೆ ವಜೀರನಾಗಿಯೂ ಮತ್ತು ಆಡಳಿತ ಪ್ರತಿನಿಧಿಯಾಗಿಯೂ ರಾಜ್ಯಭಾರ ಮಾಡಿದನು. ಈ ಕಾಲದಲ್ಲಿ ಬಹಮನಿ ಸಾಮ್ರಾಜ್ಯದಲ್ಲಿ ಶಿಕ್ಷಣ ಕ್ಷೇತ್ರವು ಅಪಾರ ಪ್ರಗತಿಯನ್ನು ಹೊಂದಿ, ಶಿಕ್ಷಣಾಸಕ್ತರ ತೃಷೆಯನ್ನು ನೀಗಿಸುವಲ್ಲಿ ಯಶಸ್ವಿಯಾಯಿತೆಂದು ಹೇಳಬಹುದು. ಗವಾನನು ೧೪೭೧ರಲ್ಲಿ ತನ್ನ ಸ್ವಂತ ಹಣದಿಂದ ಬೀದರ್‌ನಲ್ಲಿ ಒಂದು ಮದರಸಾವನ್ನು ನಿರ್ಮಿಸಿದನು.[೩೫] ಈ ಮದರಸಾದಲ್ಲಿ ವಿದ್ಯಾಭ್ಯಾಸಕ್ಕೆ ಅತಿ ಹೆಚ್ಚಿನ ಸೌಲಭ್ಯಗಳನ್ನು ಕಲ್ಪಿಸಿಕೊಟ್ಟನು. ಇಲ್ಲಿ ಉಚಿತ ಶಿಕ್ಷಣ ವ್ಯವಸ್ಥೆಗೆ ಪ್ರಮುಖ ಆದ್ಯತೆ ನೀಡಲಾಗಿದ್ದು, ದೇಶ ವಿದೇಶಗಳಿಂದ ಶಿಕ್ಷಣಾರ್ಥಿಗಳಾಗಿ ವಿದ್ಯಾರ್ಥಿಗಳು ಬೀದರ್‌ಗೆ ವಲಸೆ ಬಂದಿದ್ದರು. ಮಹಮ್ಮದ್ ಗವಾನನು ಸ್ಥಾಪಿಸಿದ ಈ ಮದರಸಾಕ್ಕೆ ಅಂದಿನ ಕಾಲದಲ್ಲಿ ವಿಶ್ವಮಾನ್ಯತೆ ದೊರೆಯಿತು. ಈ ಮದರಸಾವು ಅಥವಾ ಉನ್ನತ ಶಿಕ್ಷಣ ಕೇಂದ್ರವು ಅಲ್ಪ ಸಮಯದಲ್ಲಿಯೇ ಖ್ಯಾತಿಯ ಉನ್ನತ ಶಿಖರವನ್ನು ಮುಟ್ಟಿತು. ಇಲ್ಲಿ ಗವಾನನು ವಿದ್ಯಾರ್ಥಿಗಳಿಗೆ ಶಿಕ್ಷಣವನ್ನು ಬೋಧಿಸಲು ತತ್ವಶಾಸ್ತ್ರಜ್ಞರನ್ನು, ಪಂಡಿತರನ್ನು ಮಾತ್ರವಲ್ಲದೇ ವಿಜ್ಞಾನಿಗಳನ್ನೂ ಸಹ ನೇಮಿಸಿದ್ದನು. ಕೆಲವೊಂದು ಸಲ ಗವಾನನು ತಾನೇ ಸ್ವತಃ ವಿದ್ಯಾರ್ಥಿಗಳಿಗೆ ಬೋಧನೆ ಮಾಡುತ್ತಿದ್ದನೆಂದು ಇತಿಹಾಸದಿಂದ ತಿಳಿಯುತ್ತದೆ. ಈ ಶಿಕ್ಷಣ ಕೇಂದ್ರದಲ್ಲಿ ಇಸ್ಲಾಂ ಸಾಹಿತ್ಯ ಮತ್ತು ಸಂಸ್ಕೃತಿ, ಪರ್ಷಿಯನ್ ಭಾಷೆ, ಅರೇಬಿಕ್ ಭಾಷೆ, ಖುರಾನ್ ತತ್ವ, ಖಗೋಳಶಾಸ್ತ್ರ, ಗಣಿತಶಾಸ್ತ್ರ, ವಿಜ್ಞಾನಶಾಸ್ತ್ರ, ಸೈನ್ಯಶಾಸ್ತ್ರ ಹೀಗೆ ಅನೇಕ ವಿಷಯಗಳನ್ನು ಕಲಿಸಿಕೊಡಲಾಗುತ್ತಿತ್ತು. ಈ ಮದರಸಾದಲ್ಲಿ ಮೂರು ಸಾವಿರಕ್ಕೂ ಅಧಿಕ ವಿಶಿಷ್ಟ ಗ್ರಂಥಗಳನ್ನೊಳಗೊಂಡ ಗ್ರಂಥ ಭಂಢಾರವಿತ್ತು. ಈ ವಿದ್ಯಾಸಂಸ್ಥೆಯಲ್ಲಿ ಎಲ್ಲಾ ಕಾಲಕ್ಕೂ ವಾಸಕ್ಕೆ ಯೋಗ್ಯವಾದಂತಹ ಖೋಲಿಗಳಿದ್ದು, ಅದಕ್ಕಾಗಿಯೇ ಮೂರು ಅಂತಸ್ತಿನ ಕಟ್ಟಡವನ್ನು ಕಟ್ಟಲಾಗಿತ್ತು. ಈ ಕಟ್ಟಡವು ೩೬ ಖೋಲಿಗಳನ್ನು ಹೊಂದಿದ್ದು, ಪ್ರತಿಯೊಂದು ಖೋಲಿಯಲ್ಲಿ ಮೂರು ಮಂದಿ ವಿದ್ಯಾರ್ಥಿಗಳಂತೆ ಒಟ್ಟು ೧೦೮ ವಿದ್ಯಾರ್ಥಿಗಳ ವಸತಿಗೆ ಅನುಕೂಲ ಮಾಡಿಕೊಡಲಾಗಿತ್ತು. ಪ್ರಾಧ್ಯಾಪಕರಿಗಾಗಿಯೇ ಬೇರೊಂದು ಕಟ್ಟಡವಿದ್ದು, ಇಲ್ಲಿ ಒಂದು ಕೊಠಡಿಯಲ್ಲಿ ಎರಡು ಮಂದಿ ಪ್ರಾಧ್ಯಾಪಕರಿರುವಂತೆ ಒಟ್ಟು ೧೨ ಜನ ಪ್ರಾಧ್ಯಾಪಕರಿಗೆ ವಸತಿ ಸೌಲಭ್ಯ ಕಲ್ಪಿಸಿಕೊಡಲಾಗಿತ್ತು. ಇಂದಿಗೂ ಸಹ ಬೀದರ್‌ನಲ್ಲಿ ಈ ಬಣ್ಣ-ಬಣ್ಣದ ಹಂಚುಗಳಿಂದ ಕೂಡಿದ ಗವಾನನ ಮಹಾವಿದ್ಯಾಲಯದಲ್ಲಿ ನಾವು ಕಾಣಬಹುದು.

ದಖ್ಖನ್‌ರ ಆಡಳಿತ ಕಾಲದಲ್ಲಿ ಇಸ್ಲಾಂ ಶಿಕ್ಷಣವು ಹೆಚ್ಚಿನ ಬೆಳವಣಿಗೆಯನ್ನು ಕಂಡಿತು. ಈ ಕಾಲದಲ್ಲಿ ಹಿಂದೂ ದೇವಾಲಯಗಳಂತೆ ಮಸೀದಿಗಳು ಸಹ ಶಿಕ್ಷಣ ಕೇಂದ್ರಗಳಾಗಿ ಕಾರ್ಯ ನಿರ್ವಹಿಸಲಾರಂಭಿಸಿದವು. ಈ ಶಿಕ್ಷಣ ಕೇಂದ್ರಗಳನ್ನು 'ಮುಕ್ತಾಬ್ಸ್' ಎಂದು ಕರೆಯಲಾಗುತ್ತಿತ್ತು. ಮುಕ್ತಾಬ್ ಮತ್ತು ಮದರಸಾ ಎರಡರಲ್ಲೂ ವಿವಿಧ ಶಾಸ್ತ್ರಗಳನ್ನು ಬೋಧಿಸುತ್ತಿದ್ದು, ಇಲ್ಲಿ ಸ್ತ್ರೀಯರಿಗೆ ಮಾತ್ರ ವಿದ್ಯಾಭ್ಯಾಸಕ್ಕೆ ಅವಕಾಶವಿರಲಿಲ್ಲ. ಸ್ತ್ರೀಯರಿಗೆ ಪ್ರತ್ಯೇಕವಾಗಿ ಮಸೀದಿಗಳ ಆಶ್ರಯದಲ್ಲಿ ಶಾಲೆಗಳನ್ನು ಸ್ಥಾಪಿಸಲಾಗಿತ್ತು. ಈ ಅಂಶವನ್ನು ನೋಡಿದಾಗ ದಖ್ಖನ್‌ದಲ್ಲಿ ಮುಸ್ಲಿಂ ಸ್ತ್ರೀಯರಿಗೆ ಶಿಕ್ಷಣಕ್ಕೆ ಅಷ್ಟೊಂದು ಮಹತ್ವವನ್ನು ನೀಡಿರಲಿಲ್ಲವೆಂದು ತಿಳಿದುಬರುತ್ತದೆ.

## ೨. ಹಿಂದು ಶಿಕ್ಷಣ ಪದ್ಧತಿ

ಮಧ್ಯಕಾಲೀನ ಯುಗದ ದಖ್ಖನ್ ಪ್ರದೇಶದ ಬಹಮನಿ ಸಾಮ್ರಾಜ್ಯದಲ್ಲಿ ಹಿಂದೂ ಶಿಕ್ಷಣಕ್ಕೂ ಪ್ರಾಮುಖ್ಯತೆ ದೊರಕಿದ್ದಿತು. ಭಾರತದ ಮೇಲೆ ಆರಂಭಗೊಂಡ ಮುಸ್ಲಿಂ ದಾಳಿಗಳು ಭಾರತೀಯ ಸಂಸ್ಕೃತಿ, ಶಿಕ್ಷಣ ಮತ್ತು ರಾಜಕೀಯ ವ್ಯವಸ್ಥೆಯ ಮೇಲೆ ಗಂಭೀರ ಪರಿಣಾಮವನ್ನು ಬೀರಿದವು. ಅದಾಗ್ಯೂ ಸಹ ಬಹಮನಿ ಕಾಲವು ಹಿಂದೂ–ಮುಸ್ಲಿಂ ಸಂಗಮದ ವಿಶಿಷ್ಟ ವಿಶಾಲ ಸಂಸ್ಕೃತಿ ಬೆಳವಣಿಗೆ ಹೊಂದಲು ಪ್ರಮುಖ ಕಾರಣವಾಯಿತು. ಹಿಂದೂ ಶಿಕ್ಷಣಕ್ಕೆ ಸಂಬಂಧಿಸಿದಂತೆ ಅಂದಿನ ಕಾಲದಲ್ಲಿ ದೇವಾಲಯಗಳು, ಮಠಗಳು, ಅಗ್ರಹಾರಗಳು, ಬ್ರಹ್ಮಪುರಿಗಳು, ಘಟಿಕಾಸ್ಥಾನಗಳು, ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಕೇಂದ್ರಗಳಾಗಿ ಕಾರ್ಯನಿರ್ವಹಿಸುತ್ತಿದ್ದವೆಂದು ತಿಳಿದುಬರುತ್ತದೆ.

ಬಹಮನಿ ರಾಜ್ಯದಲ್ಲಿ ಮೊದಲಿನಿಂದಲೂ ನೆಲೆನಿಂತಿದ್ದ ಹಿಂದೂ ಶಿಕ್ಷಣದಲ್ಲಿ ಕನ್ನಡಕ್ಕೆ ಪ್ರಾಮುಖ್ಯತೆ ದೊರಕಿತ್ತು. ಅಕ್ಷರಗಳನ್ನು ಕಲಿಸುವ ಹಳ್ಳಿಯ ಶಾಲೆಗಳಿಂದ ಹಿಡಿದು ಉನ್ನತವಾದ ಶಿಕ್ಷಣವನ್ನು ಕೊಡುವ ವಿದ್ಯಾಪೀಠದವರೆಗೆ ವಿವಿಧ ರೀತಿಯ ಮತ್ತು ಅನೇಕ ತರಗತಿಯ ವಿದ್ಯಾ ಸಂಸ್ಥೆಗಳು ಅಲ್ಲಿ ಬೆಳೆದುಬಂದಿದ್ದವು. ಈ ವಿದ್ಯಾಪೀಠಗಳಲ್ಲಿ ಸಂಸ್ಕೃತ, ಕನ್ನಡ ಮುಂತಾದ ಭಾಷೆಗಳಲ್ಲಿ ಕಾವ್ಯ, ಶಾಸ್ತ್ರ, ಸಾಹಿತ್ಯ, ವೇದಾಂತ, ಮೊದಲಾದ ವಿಷಯಗಳ ಅಧ್ಯಯನಕ್ಕೆ ಪ್ರಾಮುಖ್ಯತೆ ಇದ್ದಿತು. ಈ ಎಲ್ಲಾ ಶಿಕ್ಷಣ ಸಂಸ್ಥೆಗಳು ಹಿಂದೂ ಸಾಮಂತರ, ನಾಯಕರ, ಕೆಲವೊಂದು ಸುಲ್ತಾನರ ಮತ್ತು ಧನಿಕರ ಅಸಂಖ್ಯಾತ ದಾನಗಳಿಂದ ಪೋಷಿತಗೊಂಡಿದ್ದವು.

ಸಾಮಾನ್ಯವಾಗಿ ಪ್ರತಿಯೊಂದು ಹಳ್ಳಿಗೂ ಒಂದು ಪ್ರಾಥಮಿಕ ಶಾಲೆಯು ಕಂಡುಬರುತ್ತಿತ್ತು, ದೊಡ್ಡ ಊರುಗಳಲ್ಲಿ ಮತ್ತು ಪಟ್ಟಣಗಳಲ್ಲಿಯೂ ಸಹ ಹೆಚ್ಚಿನ ಉಚ್ಚ ತರಗತಿಯ ಶಿಕ್ಷಣದ ವ್ಯವಸ್ಥೆಯು ಇದ್ದಿತು. ಧರ್ಮಪೀಠಗಳು, ಮಠಗಳು, ನಾಮಾಂಕಿತ ದೇವಾಲಯಗಳು ಇವೆಲ್ಲವುಗಳಲ್ಲಿ ಧಾರ್ಮಿಕ ಶಿಕ್ಷಣವಲ್ಲದೆ, ಲೌಕಿಕ ವಿದ್ಯೆಗಳ ವ್ಯಾಸಂಗವು ನಡೆಯುತ್ತಿತ್ತು. ಅಗ್ರಹಾರಗಳು, ಬ್ರಹ್ಮಪುರಿಗಳು, ಘಟಿಕಾಸ್ಥಾನಗಳು ಕೇವಲ ಜ್ಞಾನ ಸಂವರ್ಧನೆಗಾಗಿ ಏರ್ಪಟ್ಟ ಸ್ವತಂತ್ರವಾದ ಪ್ರಾದೇಶಿಕ ವಿದ್ಯಾನಿಲಯಗಳಾಗಿದ್ದವು. ಸಾಮಾನ್ಯವಾಗಿ ಈ ವಿದ್ಯಾನಿಲಯಗಳಲ್ಲಿ ವಿದ್ಯಾದಾನದೊಂದಿಗೆ ವಿದ್ಯಾರ್ಥಿಗಳಿಗೆ ಉಚಿತ ಆಹಾರಾದಿ ವಸತಿ ಸೌಕರ್ಯಗಳು ಏರ್ಪಾಡಾಗಿರುತ್ತಿದ್ದವು. ಇವುಗಳನ್ನು ಈಗಿನ ಛತ್ರಾಲಯಗಳಿಗೆ ಎಂದರೆ ವಸತಿ ವಿಶ್ವವಿದ್ಯಾಲಯಗಳಿಗೆ ಹೋಲಿಸಬಹುದು. ಈ ಛತ್ರಾಲಯಗಳು ಕಲಿಸುವ ಮತ್ತು ಪರೀಕ್ಷಿಸುವ ಸಾಮಾಜಿಕ ಸಂಘಗಳಾಗಿದ್ದವು. ಈ ಹಿಂದೂ ವಿದ್ಯಾಲಯಗಳ ಲಾಭವನ್ನು ಪಡೆಯುವುದಕ್ಕೋಸ್ಕರ ದೇಶ–ವಿದೇಶಗಳಿಂದ ಜ್ಞಾನ ಭಿಕ್ಷುಗಳು ವಿದ್ಯಾಲಯಗಳಿಗೆ ಆಗಮಿಸುತ್ತಿದ್ದರು.[೩೬]

## ೩.೩.೨. ಸಾಹಿತ್ಯ

ಬಹಮನಿ ಸುಲ್ತಾನರು ಶಿಕ್ಷಣ ಮತ್ತು ಸಾಹಿತ್ಯಕ್ಕೆ ಹೆಚ್ಚಿನ ಆದ್ಯತೆ ನೀಡಿದ್ದರಿಂದ ಹಲವಾರು ಭಾಷೆಯ ಸಾಹಿತ್ಯದ ಅಭಿವೃದ್ಧಿಗೆ ಕಾರಣವಾಯಿತು. ದಕ್ಷಿಣ ಭಾರತದಲ್ಲಿ ದೆಹಲಿ ಸುಲ್ತಾನರ ಆಕ್ರಮಣಗಳಿಂದ ಮತ್ತು ದೌಲತಾಬಾದ್ ರಾಜಧಾನಿಯನ್ನು ಸ್ಥಾಪಿಸಿದ ನಂತರ ಅರೇಬಿಕ್, ಪರ್ಶಿಯನ್, ಉರ್ದು ಭಾಷೆಗಳ ವಿವಿಧ ಪ್ರಕಾರದ ಸಾಹಿತ್ಯ ಕೃತಿಗಳು ರಚನೆಯಾದವು. ಮುಂದೆ ಬಹಮನಿ ರಾಜ್ಯ ವಿಭಜನೆಗೊಂಡ ನಂತರ ಪ್ರತಿಯೊಂದು ರಾಜ್ಯ ಮನೆತನದವರು ಅನೇಕ ವಿದ್ವಾಂಸರಿಗೆ ರಾಜಾಶ್ರಯ ನೀಡಿ, ವಿದ್ವತ್‌ಪೂರ್ಣ ಗ್ರಂಥಗಳ ಬರವಣಿಗೆಗೆ ಪ್ರೋತ್ಸಾಹ ನೀಡಿದರು. ಬಹಮನಿ ರಾಜ್ಯದಲ್ಲಿ ಪರ್ಶಿಯನ್, ಉರ್ದು ಮತ್ತು ದಖನಿ ಭಾಷೆಗಳಲ್ಲಿ ಗ್ರಂಥಗಳು ರಚನೆಯಾದವು. ಇವು ಸಮಕಾಲೀನ ರಾಜಕೀಯ, ಧಾರ್ಮಿಕ, ಸಾಮಾಜಿಕ,

ನಗರಜೀವನ ಮತ್ತು ಶೈಕ್ಷಣಿಕ ಅಂಶಗಳ ಬಗ್ಗೆ ಬೆಳಕು ಚೆಲ್ಲುತ್ತವೆ. ಷೇಕ್-ಉಲ್-ಮಾಷೇರ್, ನಿಜಾಮ್-ಉದ್-ದೀನ್-ಬರನಿ, ಹಕೀಂ-ಜಹಿರುದ್-ದೀನ್-ತಬ್ರಿಜಿ, ಬಹರ್‌ಖಾನ್ ಮುಂತಾದವರು ಅಂದಿನ ಪ್ರಮುಖ ವಿದ್ವಾಂಸರಾಗಿ ಗುರುತಿಸಿಕೊಂಡಿದ್ದರು.[೩೭]

ಪಾಶ್ಚಿಮಾತ್ಯ ಹಾಗೂ ಅರಬ್ ದೇಶಗಳೊಂದಿಗೆ ಬಹಮನಿ ಸಾಮ್ರಾಜ್ಯವು ನಿಕಟ ಸಂಬಂಧವನ್ನು ಹೊಂದಿದ್ದಿತು. ಈ ಕಾರಣಕ್ಕಾಗಿ ಬಹಮನಿ ರಾಜ್ಯದ ಕಾಲದಲ್ಲಿ ಪರ್ಶಿಯನ್, ಉರ್ದು, ಅರಬ್ಬೀ ಭಾಷೆಗಳು ಮತ್ತು ಸಾಹಿತ್ಯ ಅಭಿವೃದ್ಧಿ ಹೊಂದಿದವು.[೩೮] ಆ ದಿನಗಳಲ್ಲಿ ಪರ್ಶಿಯನ್ ಭಾಷೆಯೇ ಪ್ರಮುಖ ಶಿಕ್ಷಣದ ಮಾಧ್ಯಮವಾಗಿತ್ತು. ರಾಜ್ಯದ ಸರಕಾರಿ ಭಾಷೆಯೂ ಸಹ ಪರ್ಶಿಯನ್ ಆಗಿತ್ತು. ದೊಡ್ಡ ಸಂಖ್ಯೆಯಲ್ಲಿ ದಕ್ಷಿಣಕ್ಕೆ ವಲಸೆ ಬಂದ ಪರ್ಶಿಯನ್‌ರು ಸಂಪರ್ಕ ಮಾಧ್ಯಮವಾಗಿ ಪರ್ಶಿಯನ್ ಭಾಷೆಯನ್ನು ಪ್ರಚಾರಕ್ಕೆ ತಂದರು. ಇದೇ ಸಮಯದಲ್ಲಿ ಅರಬ್ಬೀ ಭಾಷೆಯು ಸಹ ಹೆಚ್ಚಿನ ಮಹತ್ವವನ್ನು ಪಡೆದು ಪ್ರಚಲಿತ ಭಾಷೆಯಾಯಿತು.

**೧. ಪರ್ಶಿಯನ್ ಸಾಹಿತ್ಯ**

ಬಹಮನಿ ಸಾಮ್ರಾಜ್ಯದ ಸ್ಥಾಪಕನಾದ ಅಲ್ಲಾವುದ್ದೀನ್ ಹಸನ್ ಗಂಗೂ ಬಹಮನ್‌ಷಾನು ಮೂಲದಿಂದ ಪರ್ಶಿಯನ್ನಾಗಿದ್ದರಿಂದ, ಪರ್ಶಿಯನ್ ಕವಿಗಳಿಗೆ, ವಿದ್ವಾಂಸರಿಗೆ ಮತ್ತು ಪಂಡಿತರಿಗೆ ಹೆಚ್ಚಿನ ಪ್ರೋತ್ಸಾಹವನ್ನು ನೀಡಿ ಆಶ್ರಯದಾತನಾಗಿದ್ದನು. ಆಸ್ಥಾನ ಕವಿಯಾದಂತಹ ಇಸಾಮಿಯು 'ಫತೂಹ-ಉಸ್-ಸಾಲತಿನ್' ಎಂಬ ಕೃತಿಯನ್ನು ರಚಿಸಿದ್ದಾನೆ. ಇಸಾಮಿಯು ಆಸ್ಥಾನ ಕವಿಯಾಗಿದ್ದರೆ ಇತರ ಕವಿಗಳಾದ ಮಹಮ್ಮದ್ ಬದಕ್ಷಿ, ಶರೀಫ್ ಸಮರಕಂದಿ, ಮುಫ್ತಿ ಅಹಮದ ಹರವಿ, ಲುತಫುಲ್ಲಾ ಶಿರಾಜಿ, ಮೂಯಿನುದ್ದೀನ್ ಹರವಿ, ನಾಜಿರುದ್ದೀನ್ ಶಿರಾಜಿ, ಹಕಿಂ ಅಲಿಮ್ ಉದ್ದೀನ್ ತಬ್ರೀಜಿ, ಐನುದ್ದೀನ್ ಬಿಜಾಪುರಿ, ಮುಂತಾದ ಶ್ರೇಷ್ಠ ಕವಿಗಳು ಮತ್ತು ಪಂಡಿತರು ಬಹಮನಿ ಸುಲ್ತಾನನ ಆಸ್ಥಾನದಲ್ಲಿ ಆಶ್ರಯ ಪಡೆದಿದ್ದರು.[೩೯]

ಹಸನ್ ನಂತರ ಬಂದ ಮಹಮ್ಮದ್‌ಷಾನು ಸಹ ವಿದ್ವಾಂಸನಾಗಿದ್ದನು. ಕವಿ ಜನಾಶ್ರಯನಾಗಿದ್ದ ಮಹಮ್ಮದ ಷಾನು ಅನೇಕ ವಿದೇಶಿ ಪಂಡಿತರನ್ನು ದಖ್ಖನ್ ಪ್ರದೇಶಕ್ಕೆ ಆಕರ್ಷಿಸಲು ಕಾರಣಕರ್ತರಾಗಿದ್ದನು. ಸುಲ್ತಾನನಿಂದ ಆಮಂತ್ರಿತರಾದ ಪ್ರಸಿದ್ಧ ಕವಿ ಹಾಫೀಸ್, ಸುಲ್ತಾನನು ಈತನಿಂದ ಬಹಳ ಪ್ರಭಾವಿತಗೊಂಡಿದ್ದನು. ಪ್ರಸಿದ್ಧ ಕವಿಯಾದ ಫಿರೋಜ್ ಷಾನು ಘಜಲ್ ಮತ್ತು ದ್ವಿಪದಿಗಳನ್ನು ರಚಿಸಿದನು ಮತ್ತು ಈತನ ಕಾವ್ಯನಾಮ 'ಉರುಜಿ' ಎಂಬುದಾಗಿತ್ತು.[೪೦] ನಂತರ ಸಿಂಹಾಸನಕ್ಕೆ ಬಂದ ಶಿಹಾಬುದ್ದೀನ್ ಅಹ್ಮದ್ ಷಾ ಸ್ವತಃ ವಿದ್ವಾಂಸನಾಗಿದ್ದನು. ಖ್ಯಾತ ಸೂಫಿ ಸಂತರಾದ ಗೇಸುದರಾಜರು ಈತನ ಆಶ್ರಯದಲ್ಲಿದ್ದರು. ಗೇಸುದರಾಜರು ಅನೇಕ ಕಾವ್ಯಗಳನ್ನು ರಚಿಸಿದ್ದಾರೆ. ಶಿಹಾಬುದ್ದೀನ್ ಸ್ವತಃ ಕವಿಯೂ, ಪಂಡಿತನೂ ಆಗಿದ್ದು ಕವಿಗಳ, ಪಂಡಿತರ ಮತ್ತು ಚರಿತ್ರೆಕಾರರ ಆಶ್ರಯದಾತನಾಗಿದ್ದನು. ಪ್ರಸಿದ್ಧ ಚರಿತ್ರಕಾರರಾದ ಆಜಾದಿ, ದಾವುದ್ ಬಿದರಿ, ಮುಂತಾದವರು ಈತನ ಆಸ್ಥಾನದಲ್ಲಿದ್ದರೆಂದು ತಿಳಿದುಬರುತ್ತದೆ. ಮೂರನೆಯ ಮಹಮ್ಮದನ ಕಾಲದಲ್ಲಿಯೂ ಸಹ ಅನೇಕ ವಿದ್ವಾಂಸರು ಬೆಳಕಿಗೆ ಬಂದರು. ಪ್ರಧಾನಿಯಾಗಿದ್ದ ಮಹಮ್ಮದ್ ಗವಾನನು ಬಹಮನಿ ರಾಜ್ಯವನ್ನು ಶಿಕ್ಷಣ ಮತ್ತು ಸಾಹಿತ್ಯದಲ್ಲಿ ಶ್ರೀಮಂತವಾಗಿಸಿದನು. ಅನೇಕ ವಿದ್ವಾಂಸರಾದಂತಹ ಜಲಾಲುದ್ದೀನ್ ದವಾನಿ, ಅಬ್ದುಲ್ ರೆಹಮಾನ್ ಜಾಮೀ, ಉಬೈದುಲ್ಲಾ ಆಹ್‌ರಾರ್, ಶಂಸುದ್ದೀನ್ ಸಖೂರ್ ಮತ್ತು ಜಫರ್-ನಾಮಾದ ಕತೃವಾದಂತಹ ಶರೀಫ್ ಉದ್ದೀನ್ ಯಜ್ಡಿ ಅಂತಹ ಮಹಾನ ವಿದ್ವಾಂಸರು ಬಹಮನಿ ರಾಜ್ಯದೆಡೆಗೆ ಆಕರ್ಷಿತಗೊಂಡಿದ್ದರು. ಅನೇಕ ಸಂಸ್ಕೃತ ಕಾವ್ಯಕೃತಿಗಳು,

ಬಹಮನಿ ಸುಲ್ತಾನರ ಕಾಲದಲ್ಲಿ ಪರ್ಶಿಯನ್ ಭಾಷೆಗೆ ಭಾಷಾಂತರಗೊಂಡವು. ಇವುಗಳಲ್ಲಿ ಪ್ರಮುಖವಾದವುಗಳೆಂದರೆ ಹಿಂದೂ ವೈದ್ಯಶಾಸ್ತ್ರ, ತತ್ವಶಾಸ್ತ್ರ, ಖಗೋಳಶಾಸ್ತ್ರ, ಜೋತಿಷ್ಯಶಾಸ್ತ್ರ, ಗಣಿತಶಾಸ್ತ್ರ ಮುಂತಾದವುಗಳು.

ಬಿಜಾಪುರದ ಸುಲ್ತಾನರು ಸಹ ಸಾಹಿತ್ಯಾಸಕ್ತಿಗಳಾಗಿದ್ದು, ಅನೇಕ ಕವಿ–ವಿದ್ವಾಂಸರಿಗೆ ಆಶ್ರಯ ನೀಡಿ ಸಾಹಿತ್ಯ ಮತ್ತು ಭಾಷೆಯ ಬೆಳವಣಿಗೆಗೆ ಕಾರಣೀಭೂತರಾದರು. ಫೆರಿಸ್ತಾರ ಹೇಳಿಕೆಯ ಪ್ರಕಾರ ಅದಿಲ್‌ಶಾಹಿ ನಿರ್ಮಾತೃವಾದ ಯೂಸುಫ್‌ನು ಸ್ವತಃ ಪಂಡಿತನಾಗಿದ್ದನು. ಅನೇಕ ಘಜಲ್‌ಗಳನ್ನು ಸಹ ಈತನು ರಚಿಸಿದ್ದಾನೆ. ಇಸ್ಲಾಯಿಲ್ ಅದಿಲ್‌ಖಾನನು ಸಹ 'ವಫಾಯಿ' ಎಂಬ ಕಾವ್ಯನಾಮದಿಂದ ಪ್ರಸಿದ್ಧ ಹೊಂದಿದ್ದನು. ಈ ಕಾಲದಲ್ಲಿ ಅನೇಕ ಪಂಡಿತರಾದ ಫತುಲ್ಲಾ ಶಿರಾಜಿ, ಅಹ್ಮದ್ ಜಿಲಾನಿ, ಇಸ್ಫಹಾನಿ, ಕಾಸಿಂ ಇಂಜು, ರಫಿಯುದ್ದೀನ್ ಸಿರಾಜಿ, ಅಫ್ಜಲ್ ಖಾನ್ ಸಿರಾಜಿ ಮುಂತಾದವರು ಅಂದಿನ ಪ್ರಸಿದ್ಧ ಪಂಡಿತರೆನಿಸಿದ್ದರು. ಶಿಯಾಗಳಾದ ಇವರಿಗೆ ಹೊನ್ನುಗಳನ್ನು ದಾನವಾಗಿ ನೀಡುತ್ತಿದ್ದರೆಂದು ಫೆರಿಸ್ತಾ ತಿಳಿಸಿದ್ದಾನೆ.[೪೧]

ಸ್ವತಃ ಫೆರಿಸ್ತಾನು ಇಬ್ರಾಹಿಂ ಆದಿಲ್‌ಶಾಹನ ಆಸ್ಥಾನ ಕವಿಯಾಗಿದ್ದನು. ಫೆರಿಸ್ತಾನು ಖ್ಯಾತ ಕೃತಿಯಾದ 'ಗುಲ್ಶನ್–ಎ–ಇಬ್ರಾಹಿಂ'ವನ್ನು ಬರೆದಿದ್ದಾನೆ. 'ರೌಜ–ಉತ್–ಉಸ್–ಸಫಾ' ಎಂಬ ಗ್ರಂಥವನ್ನು ರಫಿಯುದ್ದೀನ್ ಶಿರಾಜಿಯು, 'ಗುಲ್ಜಾರಿ–ಇ–ಇಬ್ರಾಹಿಂ' ಮುಂತಾದ ಕೃತಿಗಳನ್ನು ಜುಹೂರಿಯು, 'ಕಿತಾಬ್–ಎ–ನವರಸ್' ಕೃತಿಯನ್ನು ಸ್ವತಃ ಇಬ್ರಾಹಿಂ ಅದಿಲ್‌ಶಾಹನು ರಚಿಸಿ ಪ್ರಸಿದ್ಧರಾಗಿದ್ದಾರೆ. ಬಹಮನಿ ಕಾಲದಲ್ಲಿ ಗದ್ಯ ಮತ್ತು ಪದ್ಯಗಳೆರಡರಲ್ಲಿಯೂ ಕೃತಿಗಳು ರಚಿತಗೊಂಡವು. ಮಹಮ್ಮದ್ ನಾಮಿ ಎಂಬ ಪ್ರಸಿದ್ಧ ಕವಿಯು ಇಬ್ರಾಹಿಂನ ಆಸ್ಥಾನದಲ್ಲಿದ್ದು 'ಬಸಾತಿನೆ–ಉಸ್–ಸಲಾತಿನ್' ಎಂಬ ಕೃತಿಯನ್ನು ರಚಿಸಿ ಅದರಲ್ಲಿ ಬಿಜಾಪುರದ ಮಹತ್ವದ ಘಟನೆಗಳನ್ನು ವಿವರಿಸಿದ್ದಾನೆ. ಹಕೀಮ್ ರುಕ್ನುದ್ದೀನ್, ಅಬುಲ್ ಮಾಲಿ, ಮುಂತಾದ ಶ್ರೇಷ್ಠ ಕವಿಗಳು ಆದಿಲ್‌ಷಾನ ಆಸ್ಥಾನದಲ್ಲಿದ್ದರೆಂದು ಚರಿತ್ರೆ ಹೇಳುತ್ತದೆ.

ಮಧ್ಯಕಾಲೀನ ಯುಗದಲ್ಲಿ ಯಾತ್ರಿಕರಾಗಿ ಬಂದ ಅನೇಕ ಮುಸ್ಲಿಂ ಕವಿಗಳು ಮತ್ತು ಪಂಡಿತರು ಅಂದಿನ ದಿನಗಳ ಬಗ್ಗೆ ಮಾಹಿತಿಯನ್ನು ನೀಡಿದ್ದಾರೆ. 'ಸಿರಾಜ್–ಉಲ್–ತಾವರಿಖ್'ನ್ನು ರಚಿಸಿದ ಮುಲ್ಲಾ ಮಹಮ್ಮದ್ ಲಾರಿ, 'ತಾರೀಖ್–ಎ–ಮಹಮ್ಮದ್‌ಶಾಹಿ'ಯನ್ನು ರಚಿಸಿದ ಅಬ್ದುಲ್ ಹುಮ್ದಾನಿಯ, 'ಪತುವಾ–ಉಸ್–ಸಾಲತೀನ್'ವನ್ನು ರಚಿಸಿದ ಇಸಾಮಿಯಾ ಮತ್ತು ಅಜಾರಿಯವರು ರಚಿಸಿದ 'ಬರಹಾನ್ ನಾಮಾ' ಮುಂತಾದ ಅನೇಕ ಐತಿಹಾಸಿಕ ಕೃತಿಗಳು ಮತ್ತು ಇತಿಹಾಸಕಾರರು ಆ ಕಾಲದ ಚರಿತ್ರೆಯ ನಿರ್ಮಾಣಕ್ಕೆ ಕಾರಣಕರ್ತರಾದರು. ಅನೇಕ ಚರಿತ್ರೆಕಾರರಾದಂತಹ ಮುಲ್ಲಾ ದಾವುದ್, ಅಬುಲ್ ಫಜಲ್, ಬದೌನಿ, ಸೈಯದ್ ಅಲಿ ತಬತಬಾ, ಫೆರಿಸ್ತಾ ಮುಂತಾದವರು ಪ್ರಸಿದ್ಧಿ ಪಡೆದವರು. ಫೆರಿಸ್ತಾರವರು ಬರೆದಂತಹ 'ಬುಲ್ಶನ್–ಎ–ಇಬ್ರಾಹಿಂ' ಕೂಡ ಪ್ರಮುಖ ಐತಿಹಾಸಿಕ ಗ್ರಂಥವೆಂದು ಪ್ರಸಿದ್ಧ ಹೊಂದಿದೆ. ಈ ಗ್ರಂಥದಲ್ಲಿ ಬಹಮನಿ ಸುಲ್ತಾನರ ಮತ್ತು ಅದಿಲ್‌ಶಾಹಿಗಳ ಪ್ರಮುಖ ಘಟನೆಗಳ ಸಚಿತ್ರ ವಿವರಣೆಯನ್ನು ನೋಡಬಹುದು. ಷಿರಾಜಿ ವಿರಚಿತ ಕೃತಿಯಾದ 'ತಜಕಿರಾತ–ಉಲ್–ಮುಲ್ಕ್' ಪ್ರಸಿದ್ಧಿಯಾಗಿದೆ. ಎರಡನೇ ಇಬ್ರಾಹಿಂ ಮುಂತಾದವರ ಸಮಕಾಲೀನ ಸುಲ್ತಾನರುಗಳ ಜೀವನ ಮತ್ತು ವಿವರಣೆ ಇದರಲ್ಲಿದೆ. ಬಹಮನಿ ಕಾಲದಲ್ಲಿ ರಚಿತವಾದ ಇತರ ಕೃತಿಗಳೆಂದರೆ ಮಹಮ್ಮದ್ ಘಜನಿ ಬರೆದ 'ಘುತುಹತ್–ಎ–ಅದಿಲ್‌ಶಾಹಿ', ಜುಹೂರಿ ಬರೆದ 'ಮಹಮ್ಮದ್–ನಾಮಾ', ನೂರುಲ್ಲಾ ಬರೆದ 'ತಾರೀಖ–ಎ– ಅಲಿಅದಿಲ್‌ಶಾಹಿ' ಮುಂತಾದವುಗಳು.[೪೨]

**೨. ಅರೇಬಿಕ್ ಸಾಹಿತ್ಯ**

ಅರೇಬಿಯನ್ ಹೆಸರು ಆಲಿಫ್ ಲೈಲಾ ವಾಲೈಲಾ ಎಂಬುದು ಅರೇಬಿಕ್ ಹೆಸರು.[೪೩] ಬಹಮನಿ ಸುಲ್ತಾನರು ಅರಬ್ ಮತ್ತು ಪರ್ಶಿಯಾ ರಾಷ್ಟ್ರಗಳೊಂದಿಗೆ ವ್ಯಾಪಾರಿ ಸಂಬಂಧಗಳನ್ನು ಬೆಳೆಸಿದ ಕಾರಣಕ್ಕಾಗಿ ಅರೇಬಿಕ್ ಸಾಹಿತ್ಯ ಮತ್ತು ಭಾಷೆಯು ಮಧ್ಯಕಾಲೀನ ಯುಗದಲ್ಲಿ ಭಾರತದಲ್ಲಿ ಅಭಿವೃದ್ಧಿ ಹೊಂದಲು ಮುಖ್ಯ ಕಾರಣವಾಯಿತು. ಸುಲ್ತಾನರು ಸಹ ಈ ಭಾಷೆಯ ಅಭಿವೃದ್ಧಿಗೆ ಕಾರಣಕರ್ತರೆನಿಸುತ್ತಾರೆ. ಬಹಮನಿ ರಾಜ್ಯದ ಸ್ಥಾಪಕ ಹಸನ್ ಗಂಗೂವಿನ ಆಶ್ರಯ ಪಡೆದಿದ್ದ ವಿದ್ವಾಂಸರಾದ ಮಹಮ್ಮದ್ ಬದಕ್ಷಿ ಮತ್ತು ಶರೀಫ್ ಸಮರಕಂದಿ ಅರೇಬಿಕ್ ಭಾಷೆಯಲ್ಲಿ ಪಂಡಿತರು ಮತ್ತು ಖಗೋಳತಜ್ಞರು ಆಗಿದ್ದರು. ಪ್ರಖ್ಯಾತ ಪಂಡಿತ ಜುನ್ಯೆದಿಯು ಸಹ ಇದೇ ಕಾಲದಲ್ಲಿದ್ದನು. ಜುನ್ಯೆದಿಯು 'ಅತ್ವಾರ-ಉಲ್-ಅಬ್ರಾರ್' ಎಂಬ ಕೃತಿಯನ್ನು ರಚಿಸಿದನು.[೪೪] ಬಹಮನಿ ಸುಲ್ತಾನರಾದಂತಹ ಫಿರೋಜ್ ಷಾ, ಅಹ್ಮದ್ ಷಾ ಮತ್ತು ಮಹಮ್ಮದ್‌ಷಾ ಸ್ವತಃ ಅರೇಬಿಕ್ ಭಾಷೆಯಲ್ಲಿ ಪಾಂಡಿತರಾಗಿದ್ದರು. ಫಿರೋಜ್ ಷಾನು ಇಸ್ಲಾಂ ನ್ಯಾಯ, ತರ್ಕ, ಗಣಿತ, ತತ್ವ ಹಾಗೂ ಖುರಾನ್‌ಗಳ ಮೇಲೆ ವಿಶೇಷ ಅಧ್ಯಯನವನ್ನು ಸಹ ಮಾಡಿದ್ದನೆಂದು ತಿಳಿದುಬರುತ್ತದೆ. ಫಿರೋಜ್ ಷಾನ ಗುರುವಾದ ಫಜಲುಅಂಜು ಇದೇ ಅವಧಿಯಲ್ಲಿ ಪ್ರಸಿದ್ಧಿಗೆ ಬಂದನು. ಸಂತ ಗೇಸೂದರಾಜರು ಅರೇಬಿಕ್ ಭಾಷೆಯಲ್ಲಿ ಅನೇಕ ಕೃತಿಗಳನ್ನು ಮತ್ತು ಗ್ರಂಥಗಳನ್ನು ರಚಿಸಿದ್ದಾರೆ. ಖುರಾನ್ ಮೇಲೆ ವ್ಯಾಖ್ಯಾನ, ತರ್ಕ-ತತ್ವ ಹಾಗೂ ಜ್ಞಾನಗಳ ಮೇಲೆ ಹಲವಾರು ಕೃತಿಗಳನ್ನು ಸಹ ಗೇಸೂದರಾಜರು ರಚಿಸಿದ್ದಾರೆ. ಈ ಕಾಲದ ಪ್ರಸಿದ್ಧ ಪಂಡಿತನಾದ ಮಹಮ್ಮದ್ ಗವಾನನು ಸಹ ಅನೇಕ ಅರಬ್ಬೀ ಪದ್ಯಗಳನ್ನು ರಚಿಸಿದ್ದಾನೆ. ಮಧ್ಯಕಾಲೀನ ಭಾರತದಲ್ಲಿ ಬೀದರ್ ಪ್ರಸಿದ್ಧ ಪಡೆದ ಪರ್ಶಿಯನ್ ಮತ್ತು ಅರೇಬಿಕ್ ಶಿಕ್ಷಣ ಕೇಂದ್ರವಾಗಿತ್ತು, ಇಲ್ಲಿ ಅರಬ್ಬೀ ಭಾಷೆಗೆ ಸಂಬಂಧಿಸಿದ ಅನೇಕ ದೊಡ್ಡ ಗ್ರಂಥಗಳ ಬಂಢಾರವೇ ಇತ್ತೆಂದು ಇತಿಹಾಸದಿಂದ ತಿಳಿಯುತ್ತದೆ. ಬಿಜಾಪುರದಲ್ಲಿಯೂ ಸಹ ಅರೇಬಿಕ್ ಪಂಡಿತರಿದ್ದರು. ಮದೀನಾ ಮೂಲದ ಪ್ರಸಿದ್ಧ ಅರೇಬಿಕ್ ಪಂಡಿತ ಸಿಬಘತ್-ಉಲ್ಲಾನು ಬಿಜಾಪುರದ ಒಂದನೆಯ ಸುಲ್ತಾನನಾದ ಇಬ್ರಾಹಿಂಷಾನ ಆಶ್ರಯದಲ್ಲಿದ್ದನೆಂದು ತಿಳಿದುಬರುತ್ತದೆ. ಖ್ಯಾತ ಪಂಡಿತ ಹಬೀಬುಲ್ಲಾ ಕೂಡಾ ಅರೇಬಿಕ್ ತತ್ವಜ್ಞಾನಿಯಾಗಿದ್ದನು. ಹೀಗಾಗಿ ಬಹಮನಿ ರಾಜ್ಯದ ಆಡಳಿತ ಸಮಯದಲ್ಲಿ ಅರೇಬಿಕ್ ಮತ್ತು ಪರ್ಶಿಯನ್ ಭಾಷೆಗಳ ಅನೇಕ ಗ್ರಂಥಗಳು ರಚಿಸಲ್ಪಟ್ಟವು.

**೩. ಉರ್ದು ಸಾಹಿತ್ಯ**

ದಖ್ಖನ್ ಪ್ರದೇಶದಲ್ಲಿ ಮುಸ್ಲಿಂ ಜನರ ಜನಸಾಮಾನ್ಯ ಭಾಷೆ ಉರ್ದುವಾಗಿತ್ತು. ಹೀಗಾಗಿ ಬಹಮನಿ ಸಾಮ್ರಾಜ್ಯದ ಸಮಯದಲ್ಲಿ ಉರ್ದು ಭಾಷೆ ಮತ್ತು ಸಾಹಿತ್ಯಗಳು ಪ್ರವರ್ಧಮಾನಕ್ಕೆ ಬಂದವು. ಸೂಫಿ ಸಂತರು ಸಹ ಸಾಮಾನ್ಯ ಭಾಷೆಯಾದ ಉರ್ದುವಿನಲ್ಲಿಯೇ ಧಾರ್ಮಿಕ ಚಳುವಳಿಯನ್ನು ಪ್ರಾರಂಭಿಸಿದರು. ಉರ್ದು ಭಾಷೆಯು ದಖ್ಖನ್ ಪ್ರದೇಶವಲ್ಲದೇ ಉತ್ತರಕ್ಕೂ ಸಹ ವಿಸ್ತಾರಗೊಂಡಿತು. ಪರ್ಶಿಯನ್, ಅರೇಬಿಕ್, ಹಿಂದಿ ಮತ್ತು ಮರಾಠಿ ಭಾಷೆಗಳ ಸಮ್ಮಿಶ್ರಣವೇ ಉರ್ದು ಎಂದು ಹೇಳಲಾಗುತ್ತಿತ್ತು. ಸಂತ ಗೇಸೂದರಾಜರು ಪ್ರಥಮ ಬಾರಿಗೆ ಪುರಾತನ ಉರ್ದು ಭಾಷೆಯಲ್ಲಿ 'ಮಿಜಾಜ್-ಉಲ್-ಅಶಿಕಿನ್' ಮತ್ತು 'ಶಿಕಾರ್-ನಾಮಾ' ಎಂಬ ಕೃತಿಗಳನ್ನು ರಚಿಸಿದರು.[೪೫] ಸಂಸ್ಕೃತದಲ್ಲಿಯೂ ಸಹ ಗೇಸೂದರಾಜರು ಪಂಡಿತರಾಗಿದ್ದರು. ಬಹಮನಿ ರಾಜ್ಯದ ಕಾಲದಿಂದಲೇ ಈ ಭಾಷೆಯು ಆರಂಭವಾಯಿತು. ಪ್ರಸಿದ್ಧ ಸೂಫಿ ಸಂತ ಖ್ವಾಜಾ ಬಂದೇನವಾಜ್ ಗೇಸೂದರಾಜರನ್ನು ಈ ಭಾಷೆಯ ಪ್ರಥಮ ದಾಕ್ಷಿಣಾತ್ಯ ಲೇಖಕನೆಂದು ಒಪ್ಪಿಕೊಳ್ಳಲಾಗಿದೆ. ಬಹಮನಿಯರ ಕಾಲದಲ್ಲಿಯೇ ದಖನಿ ಹಿಂದಿಯಲ್ಲಿ ನಿಜಾಮಿ ಎಂಬ ಕವಿಯು ಶಕ

೧೩೮೩ರಲ್ಲಿ "ಕದಮ್‌ರಾಮ್ ಔರ್ ಪದಮ್" ಎಂಬ ಮೊದಲ ಕಥನ ಕಾವ್ಯವನ್ನು ರಚಿಸಿದನು.[೪೬] ಗೇಸೂದರಾಜರ ಮಗ ಅಕ್ಬರ್ ಹುಸೇನಿಯೂ ಸಹ ಉರ್ದು ಭಾಷೆ ಮತ್ತು ಸಾಹಿತ್ಯದ ಪಂಡಿತನಾಗಿದ್ದು ಉರ್ದು ಭಾಷೆ ಶ್ರೀಮಂತಗೊಳ್ಳಲು ಕಾರಣನಾದನು. ಇಷ್ಟೇ ಅಲ್ಲದೆ ಅಕ್ಬರ್ ಹುಸೇನಿಯು ಉರ್ದುವಿನಲ್ಲಿ ಸೂಫಿ ಚಳುವಳಿಯ ಕುರಿತು ಕೃತಿಯನ್ನು ರಚಿಸಿದ್ದಾನೆ. ಉರ್ದು ಭಾಷೆಯಲ್ಲಿ ಅನೇಕ ದ್ವಿಪದಿಗಳನ್ನು ನಿಜಾಮಿಯು ಪಂಡಿತನ್ನು ರಚಿಸಿದ್ದಾನೆ. ಉರ್ದುಭಾಷೆಯ ಪುರಾತನ ಕಾವ್ಯಗಳನ್ನು ಆಶ್ರಫನು ರಚಿಸಿರುವುದಾಗಿ ತಿಳಿಯುತ್ತದೆ. ಬಹಮನಿ ಕಾಲದಲ್ಲಿ ಕುರೇಶಿ ಬಿದರಿ ಎನ್ನುವ ಪಂಡಿತನೂ ಕೂಡ ಅನೇಕ ಉರ್ದು ದ್ವಿಪದಿಗಳನ್ನು ರಚಿಸಿರುವುದಾಗಿ ತಿಳಿದುಬರುತ್ತದೆ.

**೪. ಕನ್ನಡ ಸಾಹಿತ್ಯ**

ಬಹಮನಿ ಸಾಮ್ರಾಜ್ಯದ ಅವಧಿಯಲ್ಲಿ ಬಹುತೇಕ ಜನರು ಕನ್ನಡ ಭಾಷೆಯನ್ನೇ ಮಾತನಾಡುತ್ತಿದ್ದುದರಿಂದ ಕನ್ನಡ ಸಾಹಿತ್ಯವು ಹೆಚ್ಚಾಗಿಯೇ ಪ್ರವರ್ಧಮಾನಕ್ಕೆ ಬಂದಿತೆಂದು ಹೇಳಬಹುದು. ೧೩-೧೪ನೇ ಶತಮಾನದ ಸಾಹಿತ್ಯಗಳು ಕನ್ನಡವನ್ನು ಶ್ರೀಮಂತಗೊಳಿಸಿದವು. ಅದೇ ದಿನಗಳಲ್ಲಿ ಕಥೆ, ಕಾವ್ಯ, ಭಕ್ತಿ ಗೀತೆಗಳು, ವಚನಗಳು ಮುಂತಾದ ಕನ್ನಡ ಸಾಹಿತ್ಯಗಳು ರಚಿಸಲ್ಪಟ್ಟವು. ವೀರಶೈವ ಧರ್ಮದ ಪ್ರವರ್ತಕರಾದ ಶ್ರೀ ಬಸವೇಶ್ವರರ ಬಗ್ಗೆಯೂ ಅನೇಕ ಕೃತಿಗಳು ಮತ್ತು ಪುಸ್ತಕಗಳು ರಚಿಸಲ್ಪಟ್ಟವು. ಭೀಮಕವಿಯ 'ಬಸವ ಪುರಾಣ', ಲಕ್ಕಣ್ಣನ 'ಶಿವತತ್ವ ಚಿಂತಾಮಣಿ', ಜಕ್ಕಣಾರ್ಯನ 'ನೂರೊಂದು ಸ್ಥಳ', ಗುರಬಸವರು ಬರೆದ 'ಸಪ್ತಕಾವ್ಯ' ಮುಂತಾದ ಕೃತಿಗಳು ಮತ್ತು ನಿಜಗುಣ ಶಿವಯೋಗಿ ಹಾಗೂ ತೋಂಟದ ಸಿದ್ಧಲಿಂಗ ಸ್ವಾಮಿಗಳು ರಚಿಸಿದ ಕೃತಿಗಳೂ ಸಹ ಅಂದಿನ ಕಾಲದಲ್ಲಿ ಕನ್ನಡ ಸಾಹಿತ್ಯವನ್ನು ಪ್ರಸಿದ್ಧಿಗೊಳಿಸಿದವು. ವೈಷ್ಣವ ಧರ್ಮದಲ್ಲಿ ಪ್ರಸಿದ್ಧರಾದ ನರಹರಿ ತೀರ್ಥ, ಕನಕದಾಸ ಹಾಗೂ ಪುರಂದರದಾಸರು ಸಹ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದವರಲ್ಲಿ ಪ್ರಮುಖರೆನಿಸಿದ್ದಾರೆ.[೪೭]

ಬಹಮನಿ ಕಾಲದಲ್ಲಿ ಅನೇಕ ಸಂಸ್ಕೃತ ಕಾವ್ಯ-ಕೃತಿಗಳು ಪರ್ಷಿಯನ್ ಭಾಷೆಗೆ ಭಾಷಾಂತರಗೊಂಡವು, ಅವುಗಳಲ್ಲಿ ಮುಖ್ಯವಾದವುಗಳೆಂದರೆ ಹಿಂದೂ ವೈದ್ಯಶಾಸ್ತ್ರ, ತತ್ವಶಾಸ್ತ್ರ, ಖಗೋಳಶಾಸ್ತ್ರ, ಜ್ಯೋತಿಷ್ಯಶಾಸ್ತ್ರ ಮತ್ತು ಗಣಿತಶಾಸ್ತ್ರಗಳು. ಗುಲ್ಬರ್ಗಾದ ಖ್ವಾಜಾ ಬಂದೇನವಾಜನು ಉರ್ದು ಭಾಷೆಯಲ್ಲಿ ಸಾಹಿತ್ಯಗಳನ್ನು ರಚಿಸಿದವರಲ್ಲಿ ಮೊದಲಿಗನು. ಬಿಜಾಪುರದ ಶಾಮಿರಂಜಿ, ಬಿದರೆಯ ನಿಜಾಮ್ ಬಿದರಿ, ಫಿರೋಜ್ ಬಿದರಿ ಮುಂತಾದವರು ಉರ್ದು ಭಾಷೆಯಲ್ಲಿ ಕಥೆ-ಕವನಗಳನ್ನು ರಚಿಸಿದರು. ಖುರೈಷಿ ಬಿದರಿ ಎಂಬ ಕವಿ ಕೋಕಶಾಸ್ತ್ರವನ್ನು ಉರ್ದು ಭಾಷೆಗೆ ಭಾಷಾಂತರಿಸಿ, ಇದಕ್ಕೆ 'ಭೋಗಪಾಲ' ಎಂದು ಹೆಸರಿಟ್ಟನು. ಅಬ್ದುಲ್ ಕವಿಯು 'ಇಬ್ರಾಹಿಂ ನಾಮಾ'ವನ್ನು ಮತ್ತು ಫಿರೋಜ್ ಬಿದರಿ 'ಫೀರತ್ ನಾಮಾ' ಎಂಬ ೧೨೦ ದ್ವಿಪದಿಗಳ 'ಮಸ್ನವಿ'ಯನ್ನು ರಚಿಸಿದ್ದರು. ಇದೇ ಕಾಲದಲ್ಲಿ 'ತಾರೀಖ್-ಇ-ಫೆರಿಸ್ತಾ' ಎಂಬ ಪ್ರಸಿದ್ಧ ಕೃತಿಯು ಮುಸಲ್ಮಾನರ ಇತಿಹಾಸವನ್ನು ಸವಿಸ್ತಾರವಾಗಿ ಚಿತ್ರಿಸುತ್ತದೆ. 'ದಿ ರೈಜ್ ಆಫ್ ಎ ಮಹಮ್ಮದನ್ ಡೈನಾಸ್ಟಿ' ಎಂಬುದು ಈ ಕೃತಿಯ ಇಂಗ್ಲಿಶ್ ಅನುವಾದವಾಗಿದ್ದು, ಇದನ್ನು ಪ್ರಸಿದ್ಧ ಫೆರಿಸ್ತಾ ಕವಿಯು ರಚಿಸಿರುವನು. ದಖ್ಖನ್ ಆಡಳಿತ ಕಾಲಕ್ಕೆ ಸಂಬಂಧಿಸಿದಂತಹ ಹಲವಾರು ಗ್ರಂಥಗಳನ್ನು ಇಂದಿಗೂ ಸಹ ಲಾಹೋರ್, ಕರಾಚಿ ಹಾಗೂ ಬ್ರಿಟಿಷ್ ವಸ್ತುಸಂಗ್ರಹಾಲಯಗಳಲ್ಲಿ ಸಂಗ್ರಹಿಸಿಡಲಾಗಿದ್ದು, ಇವೆಲ್ಲವುಗಳು ಉರ್ದು, ಪರ್ಷಿಯನ್ ಮತ್ತು ಹಿಂದಿ ಭಾಷೆಗಳಲ್ಲಿವೆ. ಅದೇ ರೀತಿ ಸೂಫಿ ಪಂಥದ ಬಗ್ಗೆ ರಚಿಸಿರುವ ಅನೇಕ ಗ್ರಂಥಗಳೂ ಸಹ ಸಂಗ್ರಹದಲ್ಲಿವೆ ಎಂದು ತಿಳಿದುಬರುತ್ತದೆ. ಬಹಮನಿ ಪ್ರಭಾವದಿಂದ ಕನ್ನಡ ಭಾಷೆಯು ಉರ್ದು ಮತ್ತು ಪರ್ಶಿಯನ್ ಮೂಲದ ಪದಗಳನ್ನು ಪಡೆಯಿತು.ಉದಾ:ಫಿರಂಗಿ,

ಹಬಸಿ,ತುರಕ, ಜಬರ, ಜಂಗಿ, ವಜೀರ, ಹವಾಲ, ಸುರತ್ರಾಣ ಮುಂತಾದವು. ದಖ್ಖನ್‌ನಲ್ಲಿ ಕನ್ನಡ ಭಾಷೆಯೂ ಸಹ ಪ್ರಭಾವಿ ಭಾಷೆಯಾಗಿದ್ದು, ೧೩-೧೪ನೇ ಶತಮಾನಗಳಲ್ಲಿ ವೀರಶೈವ ಸಾಹಿತ್ಯವು ಕಥೆ, ಕಾವ್ಯ, ಭಕ್ತಿ ಗೀತೆಗಳು, ವಚನಗಳು ಮುಂತಾದವುಗಳಿಂದ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿತ್ತು. ವೀರಶೈವ ಧರ್ಮದ ಪ್ರವರ್ತಕರಾದ ಬಸವೇಶ್ವರರ ಕುರಿತಾಗಿ ಅನೇಕ ಕೃತಿಗಳು ಆ ಕಾಲದಲ್ಲಿ ರಚಿತಗೊಂಡಿದ್ದವು. ಈ ರೀತಿಯಾಗಿ ಬಹಮನಿ ಆಡಳಿತ ಕಾಲದಲ್ಲಿ ಎಲ್ಲಾ ವಿಧದ ಭಾಷೆ ಮತ್ತು ಸಾಹಿತ್ಯಗಳು ಪ್ರವರ್ಧಮಾನಕ್ಕೆ ಬಂದವೆಂದು ಹೇಳಬಹುದು.

### ೩.೪. ಗುಲಾಮಗಿರಿ ಪದ್ಧತಿ

ಗುಲಾಮಗಿರಿ ಪದ್ಧತಿಯು ಮುಸ್ಲಿಂ ಸಮಾಜದಲ್ಲಿ ಒಂದು ಸಾಮಾನ್ಯ ಲಕ್ಷಣವಾಗಿತ್ತು. ಮಧ್ಯಕಾಲೀನ ಯುಗದ ಭಾರತದ ದಕ್ಷಿಣ ರಾಜ್ಯವಾದ ಬಹಮನಿ ಸಾಮ್ರಾಜ್ಯದಲ್ಲಿಯೂ ಸಹ ಗುಲಾಮಗಿರಿ ಪದ್ಧತಿಯು ಸಾಮಾನ್ಯವಾಗಿತ್ತು. ೧೨ನೇ ಶತಮಾನದ ಮುಂಚಿನಿಂದಲೂ ಗುಲಾಮಗಿರಿ ಪದ್ಧತಿಯು ಅಸ್ತಿತ್ವದಲ್ಲಿತ್ತೆಂದು ಮೂಲಗಳಿಗೆ ತಿಳಿದುಬರುತ್ತದೆ. ನಿಕಿಟಿನ್‌ರವರು ಗುಲಾಮಗಿರಿ ಪದ್ಧತಿಯ ಬಗ್ಗೆ ಹೇಳುತ್ತಾ "ಬೀದರನಲ್ಲಿ ಕಪ್ಪು ಜನರ ವ್ಯಾಪಾರ ನಡೆದಿತ್ತು, ಇವರನ್ನು ಪ್ರಾಣಿಗಳಂತೆ ಕುದುರೆಗಳ ಜೊತೆ ಸಾಗಿಸುತ್ತಿದ್ದರಂತೆ".[೪೮] ದಕ್ಷಿಣದಲ್ಲಿ ಗುಲಾಮರನ್ನು ಇಟ್ಟುಕೊಳ್ಳಲು ಅನೇಕ ಕಾರಣಗಳಿದ್ದವು. ದಕ್ಷಿಣ ಸಂಸ್ಥಾನಗಳಲ್ಲಿ ಹೆಚ್ಚಾಗಿ ಹತ್ತಿಯ ವ್ಯವಸಾಯವಿದ್ದು ಈ ವ್ಯವಸಾಯಕ್ಕೆ ಹೆಚ್ಚಿನ ಕಾರ್ಮಿಕರ ಅವಶ್ಯಕತೆವಿದ್ದು ಕಡಿಮೆ ದರದಲ್ಲಿ ಕಾರ್ಮಿಕರು ಬೇಕಾಗಿದ್ದರು. ಈ ಅವಶ್ಯಕತೆಯನ್ನು ಪೂರೈಸಲು ಗುಲಾಮರನ್ನು ಸೇವೆಗೆ ಇಟ್ಟುಕೊಳ್ಳಲಾಯಿತು.

ಬಹಮನಿ ಸುಲ್ತಾನರ ಕಾಲದಲ್ಲಿ ಸುಲ್ತಾನರು ಮತ್ತು ಶ್ರೀಮಂತ ವರ್ಗದವರು ಪುರುಷ ಹಾಗೂ ಮಹಿಳಾ ಗುಲಾಮರನ್ನು ಇಟ್ಟುಕೊಳ್ಳುವುದು ಸಾಮಾನ್ಯವಾದ ಅಂಶವಾಗಿತ್ತು. ಸಾಮಾನ್ಯವಾಗಿ ರಾಜನ ಗುಲಾಮರ(ಬಂದಗಾನ್-ಎ-ಖಾಸ್)[೪೯] ಸಂಖ್ಯೆ ಹೆಚ್ಚಾಗಿ ಕಂಡುಬರುತ್ತಿತ್ತು. ಸಾಮಾನ್ಯ ಉಪಯುಕ್ತ ಸೇವಾ ಮೂಲದವರು ಮತ್ತು ಕೆಲವೊಮ್ಮೆ ದ್ರವ್ಯರೂಪದ ಆದಾಯದ ಮೂಲದವರು ಆಗಿದ್ದಂತಹ ಗುಲಾಮರು ತಮ್ಮ ಒಡೆಯರನ್ನು ಚೆನ್ನಾಗಿ ನೋಡಿಕೊಳ್ಳುತ್ತಿದ್ದರು ಮತ್ತು ಸೇವೆ ಮಾಡುತ್ತಿದ್ದರು. ಇದೇ ರೀತಿ ಬಹಮನಿ ಕಾಲದಲ್ಲಿ ಸುಲ್ತಾನರು ಮತ್ತು ಶ್ರೀಮಂತರೂ ಸಹ ತಮ್ಮ ಕೆಳಗಿನ ಗುಲಾಮರ ಯೋಗಕ್ಷೇಮಕ್ಕಾಗಿ ಹಲವಾರು ಕಾರ್ಯಕ್ರಮಗಳನ್ನು ಜಾರಿಗೆ ತಂದರು. ಕೆಲ ಸಮಯಗಳ ನಂತರ ಈ ಧಣಿಗಳು ತಮ್ಮ ಗುಲಾಮರನ್ನು ಬಿಡುಗಡೆ ಸಹ ಮಾಡುತ್ತಿದ್ದರು. ಇವರಲ್ಲಿ ಕೆಲವು ಗುಲಾಮರು ತಮ್ಮ ಬುದ್ಧಿಶಕ್ತಿ, ವೈಯಕ್ತಿಕ ಶಕ್ತಿ ಮತ್ತು ಸಾಮರ್ಥ್ಯಗಳಿಂದ ರಾಜಕೀಯವಾಗಿ ಮತ್ತು ಸಾಮಾಜಿಕವಾಗಿ ಉನ್ನತ ಹುದ್ದೆಗಳಿಗೆ ಮತ್ತು ಗೌರವಗಳಿಗೆ ಪಾತ್ರರಾಗುತ್ತಿದ್ದರು. ಇಂಥವರಲ್ಲಿ ಪ್ರಬಲರಾದವರು ಆದಿಲ್‌ಖಾನ್ ಮತ್ತು ಮಲಿಕ್‌ಹಸನ್ ಇವರು ಗುಲಾಮರಾಗಿಯೇ ಇದ್ದು ನಂತರದಲ್ಲಿ ಸ್ವತಂತ್ರವಾದ ಸಾಮ್ರಾಜ್ಯಗಳನ್ನು ಸ್ಥಾಪಿಸಿದರು.

ಅನೇಕ ಗುಲಾಮರನ್ನು ಹೊರ ದೇಶಗಳಿಂದ ಆಮದು ಮಾಡಿಕೊಳ್ಳುವ ಪದ್ಧತಿಯೂ ಸಹ ಜಾರಿಯಲ್ಲಿತ್ತು. ಹೆಚ್ಚಿನ ಸಂಖ್ಯೆಯ ಭಾರತೀಯ ಸೇವಕರು ವಿಶೇಷವಾಗಿ ಬಲಿಷ್ಠ ದೇಹದಾರ್ಢ್ಯವುಳ್ಳ ಅಸ್ಸಾಂ ಸೇವಕರ ಜೊತೆಗೆ, ಚೀನಾ, ತುರ್ಕಿಸ್ತಾನ ಮತ್ತು ಪರ್ಶಿಯಾಗಳಿಂದಲೂ ಸಹ ಸೇವಕ-ಸೇವಕಿಯರನ್ನು ಕರೆಯಿಸಿಕೊಳ್ಳುತ್ತಿದ್ದರು.[೫೦] ಇಂತಹ ಗುಲಾಮರ ಬೆಲೆಗಳು ಯುದ್ಧಗಳ ಸಮಯದಲ್ಲಿ ಮತ್ತು ಕ್ಷಾಮಗಳ ಸಮಯದಲ್ಲಿ ಏರುಪೇರಾಗುತ್ತಿದ್ದವು. ಅಂದಿನ ಕಾಲದಲ್ಲಿ ಗುಲಾಮಗಿರಿ ಪದ್ಧತಿಯು ಸುಲ್ತಾನರ ಮತ್ತು ಶ್ರೀಮಂತ ವರ್ಗದವರ ಅನುಕೂಲಕ್ಕಾಗಿಯೇ ಇದ್ದರೂ ಸಹ, ಇದು ಸಾಮಾಜಿಕವಾಗಿ ಹಲವಾರು

ದುಷ್ಪರಿಣಾಮಗಳನ್ನು ಉಂಟು ಮಾಡಿತು. ಗುಲಾಮಗಿರಿ ಪದ್ಧತಿಯು ಸಾಮಾಜಿಕ ಜೀವನದ ಪ್ರಗತಿರಹಿತತೆಯ ಮತ್ತು ಅನಾರೋಗ್ಯ ಬೆಳವಣಿಗೆಯ ಚಿನ್ಹೆಯಾಗಿದ್ದಿತೆಂದು ಹೇಳಬಹುದು.

ಗುಲಾಮ ವರ್ಗದವರನ್ನು ಬಿಟ್ಟರೆ ಉಳಿದೆಲ್ಲಾ ವರ್ಗದವರು ಶ್ರೀಮಂತರಾಗಿದ್ದರು. ಗುಲಾಮರಿಗೆ ಅರಮನೆ ಸೇವೆಗಳಲ್ಲಿ ಅಥವಾ ಆಮೀರರ ಸೇವೆಗಳಲ್ಲಿ ಅವಕಾಶ ದೊರಕಿದ್ದು, ಊಟ, ವಸತಿ ಮತ್ತು ಉತ್ತಮ ಜೀವನವನ್ನು ಒದಗಿಸಲಾಗುತ್ತಿತ್ತು. ಗುಲಾಮಗಿರಿಯು ಮುಸ್ಲಿಂ ಸಮುದಾಯದಲ್ಲಿ ಸಾಮಾನ್ಯವಾದ ಅಂಶವಾಗಿದ್ದಿತು. ಗುಲಾಮರು ಸಹ ಉತ್ತಮ ಹುದ್ದೆಗಳನ್ನು ಬಹಮನಿ ಕಾಲದಲ್ಲಿ ಅಲಂಕರಿಸಿದ್ದರು. ಈ ವ್ಯವಸ್ಥೆ ಬಹಮನಿ ಸುಲ್ತಾನರಿಂದಲೇ ಆರಂಭವಾಯಿತೆಂದು ಮತ್ತು ಸುಲ್ತಾನರು ದೊಡ್ಡ ಸಂಖ್ಯೆಯಲ್ಲಿ ಗುಲಾಮರನ್ನು ಹೊಂದಿದ್ದರೆಂದು ಇತಿಹಾಸದಿಂದ ತಿಳಿಯಬಹುದು.

ಗುಲಾಮರು ಸುಲ್ತಾನರ ಅಥವಾ ಅರಸರ ಸೇವೆಗಳಲ್ಲಾಗಲ್ಲೀ, ಅಮೀರರ ಸೇವೆಗಳಲ್ಲಾಗಲೀ ನಿರತರಾಗಿರುತ್ತಿದ್ದರು. ಅವರಿಗೆ ಊಟ ಮತ್ತು ಉತ್ತಮ ಜೀವನ ಸಾಗಿಸಲು ಯಾವ ಕೊರತೆಯೂ ಇರಲಿಲ್ಲ, ಮೇಲಾಗಿ ಮುಸ್ಲಿಂ ಸಮಾಜದಲ್ಲಿ ದೆಹಲಿ ಸುಲ್ತಾನರಿಂದ ನಡೆದು ಬಂದಂತಹ ಗುಲಾಮಗಿರಿ ಪದ್ಧತಿಯು ಸಾಮಾನ್ಯವಾಗಿತ್ತು. ಕೆಲವು ಗುಲಾಮರು ಉನ್ನತ ಹುದ್ದೆಯನ್ನೂ ಸಹ ಅಲಂಕರಿಸಿದ್ದರು. ಬಹಮನಿ ಸಾಮ್ರಾಜ್ಯದಲ್ಲಿಯೂ ಸಹ ಮಹತ್ವದ ಗುಲಾಮರೆಂದರೆ ಮಹಮ್ಮದ್ ಗವಾನ್, ಯುಸುಫ್ ಆದಿಲ್ ಖಾನ್, ಮಲ್ಲಿಕ್ ಹಸನ್, ಖಾಸಿಂ ಬರೀದ್ ಮುಂತಾದವರು.[೨೬] ಬಹಮನಿ ರಾಜ್ಯದಲ್ಲಿ ವೈಭವಯುತ ಜೀವನ, ಕುಡಿತ, ಜೂಜುಗಳು ಶ್ರೀಮಂತರ ಜೀವನದಲ್ಲಿ ಹಾಸುಹೊಕ್ಕಾಗಿದ್ದವು. ಕುಡಿತದ ಹವ್ಯಾಸವು ಸಾಮಾನ್ಯವಾಗಿ ಎಲ್ಲಾ ಜನರಲ್ಲಿಯೂ ಕಂಡುಬರುತ್ತಿತ್ತು.[೩೦]

**೩.೫. ಭಕ್ತಿ ಪಂಥ**

ಇವರ ಕಾಲದಲ್ಲಿ ದಖ್ಖನ್ನಿನ ಸಾಮಾಜಿಕ ಜೀವನದಲ್ಲಿ ತೀವ್ರ ಬದಲಾವಣೆ ಉಂಟಾಗಿ ಪ್ರಗತಿಯತ್ತ ಮುನ್ನಡೆದಿತ್ತು. ಇವರು ಅಧಿಕಾರ ಸ್ಥಾಪಿಸುವ ಪೂರ್ವದಲ್ಲೇ ಸಾಮಾಜಿಕ ಅಂದೋಲನ ಆರಂಭವಾಗಿದ್ದವು. ಭಕ್ತಿ ಪಂಥವು ವೈಷ್ಣವ ಮತ್ತು ವೀರಶೈವ ರೂಪಗಳಲ್ಲಿ ಜನಪ್ರಿಯ ಚಳುವಳಿಗಳಾಗಿ ಮಾರ್ಪಟ್ಟವು. ಬಹುತೇಕ ಜನರು ಈ ಪಂಥದ ಪ್ರಭಾವಕ್ಕೊಳಗಾಗಿದ್ದರು, ರಾಮಾನುಜಾಚಾರ್ಯರು ಮತ್ತು ಮಧ್ವಾಚಾರ್ಯರ ಭೋಧನೆಗಳು, ಸಾಮಾಜಿಕ ಮತ್ತು ಧಾರ್ಮಿಕ ಕಟ್ಟುಪಾಡುಗಳನ್ನು ಸಡಿಲಗೊಳಿಸಲು ಕಾರಣವಾದವು. ಬಸವೇಶ್ವರರ ಸಾಮಾಜಿಕ ತತ್ವಗಳು ಸಾಮಾಜಿಕ ಕ್ಷೇತ್ರದಲ್ಲಿ ಕ್ರಾಂತಿಯೆಬ್ಬಿಸಿ, ಬ್ರಾಹ್ಮಣರ ಪರಮಾಧಿಕಾರವನ್ನು ಧಿಕ್ಕರಿಸಿತು. ಬಸವೇಶ್ವರರ ಪಂಥವು ಸಾಮಾಜಿಕ ಕಂದಾಚಾರ, ಮೂಡನಂಬಿಕೆ, ಜಾತಿಪದ್ಧತಿಗಳನ್ನು ನಿರ್ಮೂಲನ ಮಾಡಿ ಸಾಮಾಜಿಕ ಸಮಾನತೆ ಸ್ಥಾಪಿಸಲು ಅವರ ನಾಯಕತ್ವದಲ್ಲಿ ಒಂದು ಹೊಸ ವೀರಶೈವ ಪಂಥವೇ ಉದಯವಾಯಿತು. ಈ ಪಂಥದ ಭಾವನೆಗಳು ಇಸ್ಲಾಂ ಧರ್ಮದಲ್ಲಿ ಜನಜನಿತವಾಗಿದ್ದು, ವೀರಶೈವ ಮತ ಇಸ್ಲಾಂ ಧರ್ಮದಿಂದ ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ಪ್ರಭಾವಗೊಂಡಿದ್ದತೆಂದು ಹಲವರು ಅಭಿಪ್ರಾಯಪಟ್ಟಿದ್ದಾರೆ. ಹೀಗೆ ಇಸ್ಲಾಂ ರಾಜ್ಯಸ್ಥಾಪನೆಯು ದಖ್ಖನ್ನಿನ ಹಿಂದೂಧರ್ಮ ಮತ್ತು ಸಮಾಜದ ತೀವ್ರ ಬದಲಾವಣೆಗೆ ಪ್ರೇರಣೆ ನೀಡಿತು. ಇದೇ ರೀತಿಯಲ್ಲಿ ಮುಸ್ಲಿಮರು ಸಹ ಅನೇಕ ಹಿಂದೂ ಸಂಪ್ರದಾಯಗಳನ್ನು ಅಳವಡಿಸಿಕೊಂಡರು. ಇದರಿಂದ ಎರಡೂ ಸಮಾಜಗಳ ನಡುವೆ ಸಾಂಸ್ಕೃತಿಕ ಸಾಮರಸ್ಯ ಜರುಗಿಸಲು ಅವಕಾಶವಾಯಿತು. ಈ ಸಾಂಸ್ಕೃತಿಕ ಸಾಮರಸ್ಯಕ್ಕೆ ಶ್ರಮಿಸದ ಮುಸ್ಲಿಂ ಸಂತರಲ್ಲಿ ಖ್ವಾಜಾ ಬಂದೇನವಾಜ್, ಷೇಕ್ ಸಿರಾಜುದ್ದೀನ್ ಮುಖ್ಯಸ್ಥರು ಇವರಿಗೆ ಹಿಂದೂ ಮತ್ತು ಮುಸ್ಲಿಂ ಅನುಯಾಯಿಗಳಿದ್ದರು.[೩೧]

ಭಕ್ತಿಪಂಥದ ಕಲಾವಧಿಯಲ್ಲಿ ಮಧ್ಯಭಾರತ ಸಾಮ್ರಾಜ್ಯವಾದ ಅದರಲ್ಲಿಯೂ ಮುಖ್ಯವಾಗಿ ಬಹಮನಿ ಸಾಮ್ರಾಜ್ಯದ ಪತನ ಮತ್ತು ಅಂತರ್ ಯುದ್ಧಗಳು, ಅನಾಯಕತ್ವದಿಂದ ಆರಾಜಕತೆ, ದರೋಡೆಗಳು ಮತ್ತು ಕ್ಷಾಮ, ಸಾಂಕ್ರಾಮಿಕ ರೋಗಗಳಿಂದ ಸಮಾಜದಲ್ಲಿ ನೆಮ್ಮದಿಯೆಂಬುದೇ ಇರಲಿಲ್ಲ. ಇಂತಹ ಹೊತ್ತಿನಲ್ಲಿ ಭಕ್ತಿ ಪಂಥದ ಕವಿಗಳು, ದಾಸರು, ಸುಧಾರಕರು ಮತ್ತು ಸೂಫಿಗಳು, ಜನಸಾಮನ್ಯರಾಗಿ, ಜನಸಾಮನ್ಯರ ಮನೆ ಬಾಗಿಲಿಗೆ ಹೊಗಿ ತಮ್ಮ ತತ್ವಗಳಿಂದ ಕಾಯಕದ ಅನಿಶ್ಚತತೆಯನ್ನು ಬೋಧಿಸಿ, ಮನಸ್ಸನ್ನು ಅಲೌಕಿಕದ ಕಡೆಗೆ ತಿರುಗಿಸಲು ಯತ್ನಿಸಿದರು. ನೀತಿಪರವಾದ, ಭಕ್ತಿಪರವಾದ ಹಾಡುಗಳಿಂದ ಅಂತ್ಯಗೊಂಡಿದ್ದ, ಮನಸ್ಸುಗಳಿಗೆ ನೆಮ್ಮದಿಯನ್ನು ನೀಡಿದರು. ಹರಿದಾಸರು ಸರಳವಾಗಿ ಕನ್ನಡದಲ್ಲಿ ಹಾಡು ರಚಿಸಿ, ಹಾಡುತ್ತ ಬೀದಿ–ಬೀದಿಯಲ್ಲಿ ಸಂಗೀತವನ್ನು ಹರಿಸಿದರು. ತತ್ವಪಾದಕಾರರು ಕೂಡ ವ್ಯಕ್ತಿಗತವಾಗಿಯೂ, ಸಾಮೂಹಿಕವಾಗಿಯೂ ಹಾಡಿ ಆ ಸಮಯದಲ್ಲಿ ಬಹಮನಿ ಸಮಾಜದಲ್ಲಿದ್ದ ದುಗುಡವನ್ನು ಕಡಿಮೆ ಮಾಡಲು ಪ್ರಯತ್ನಿಸಿದರು. ಈ ಶತಮಾನದ ಪ್ರಾರಂಭದಲ್ಲಿಯೂ ಹರಿದಾಸರ ತತ್ವಪದಕಾರರ ಏಕತಾರಿಯನಾದ ಬತ್ತದಂತೆ ಹಳ್ಳಿ–ಹಳ್ಳಿಗಳ ಬೀದಿಯಲ್ಲಿ ತುಂಬಿರುತ್ತಿತ್ತು. ಕೆಲ ಶತಮಾನಗಳ ಕಾಲ ಒಂದೇ ಅಂಗಳದಲ್ಲಿ 'ಹಿಂದೂ' ಮತ್ತು 'ಮುಸ್ಲಿಂ' ಜನ ಸಮುದಾಯ ಕೂಡಿ ಬಾಳುವ ಅನಿವಾರ್ಯತೆ ಏರ್ಪಟ್ಟಿತು. ಈ ಸೌಹಾರ್ಧತೆಗೆ ಕಾರಣರಾದವರು ಭಕ್ತಿ ಪಂಥದ ಕವಿಗಳು, ಸುಧಾರಕರು, ದಾಸರು ಮತ್ತು ಸೂಫಿಗಳು.

ದಖ್ಖನ್ ಬಹಮನಿ ಜನಸಮುದಾಯಗಳಲ್ಲಿ ತಮ್ಮ ಮುಕ್ತ ಧಾರ್ಮಿಕತೆಯಿಂದ ಬೆರೆತು ಜಾತಿಮತವನ್ನು ಮೀರಿ ನಿಲ್ಲುವ ಶಕ್ತಿಯನ್ನು ಸೃಷ್ಠಿಸಿದರು. ಆದರೂ ರಾಜಕೀಯ ಒತ್ತಡಗಳಿಗೆ ಒಳಗಾಗಿ ಇಲ್ಲಿಯ ಕೆಳವರ್ಗದ ಜನರು ಮುಸ್ಲಿಮರಾಗಿ ಮತಾಂತರ ಹೊಂದಿದ್ದರೂ, ಅವರನ್ನು ಅನ್ಯ ಹೊಸ ಧಾರ್ಮಿಕತೆ ತೀವ್ರವಾಗಿ ಪ್ರಭಾವಿಸಲಿಲ್ಲ. ಮತಾಂತರಗೊಂಡ ಕೆಳವರ್ಗದವರ, ದಲಿತರ ಮನಸ್ಸು ಮೂಲತಃ ಮುಕ್ತವಾದದ್ದೇ, ಇದರಿಂದಾಗಿ 'ಇಸ್ಲಾಂ' ಧರ್ಮಕ್ಕೆ ಮತಾಂತರವಾಗಿ ಮುಸ್ಲಿಮರಾದರೂ ಅವರಲ್ಲಿದ್ದ 'ಹಿಂದೂ' ಕೆಳವರ್ಗದವರ, ದಲಿತರ ಜೊತೆ ಬೆರೆಯುವುದು ಸಹಜವಾಗಿತ್ತು. ಒಬ್ಬರ ಸಂಪ್ರದಾಯ, ಆಚರಣೆ, ವ್ಯವಹಾರ, ಮೂಂತಾದವುಗಳ ಪ್ರಭಾವ–ಪರಿಣಾಮಗಳು ಮತ್ತೊಬ್ಬರ ಮೇಲೆ ಆದದ್ದು, ಸ್ವಾಭಾವಿಕವಾಯಿತು. ಮುಸ್ಲಿಂರು ಮೋಹರಂ, ಉರುಸು ಮುಂತಾದ ಮತ ಸಂಬಂಧಿ ಕ್ರಿಯೆಗಳಾದರೂ, ಅವುಗಳ ಆಚರಣೆಯಲ್ಲಿ ಸಂಭ್ರಮ ಮನರಂಜನೆಗಳಿರುವುದರಿಂದ ಮುಸ್ಲಿಮೇತರರೂ ಸಹಜವಾಗಿಯೇ ಭಾಗಿಯಾದರು. ಹಾಗೆಯೇ ಮುಸ್ಲಿಮೇತರರ ಜಾತ್ರೆ, ಮದುವೆ, ಹಬ್ಬಗಳಲ್ಲಿ ಮುಸ್ಲಿಮರು ಭಾಗಿಯಾದರು. ಭಾಗಿಯಾಗುವುದು ತೋರಿಕೆಗಾಗಿಯೂ ಆಗಿರಲಿಲ್ಲ, ತಾತ್ಕಾಲಿಕವಾಗಿಯೂ ಆಗಿರಲಿಲ್ಲ. ಅದು ತಮ್ಮ ಬದುಕಿನ ಅಂಗವಾಯಿತು. ಈ ಎರಡು ಸಮುದಾಯಗಳಲ್ಲಿ ತಮ್ಮ ತಮ್ಮ ಮಹಾಪುರುಷರ ಬಗ್ಗೆ ಪೂಜ್ಯಭಾವನೆ ಹೊಂದಿದ್ದು, ಇಂಥ ಮಹಾ ಪುರುಷರ ಉತ್ಸವಗಳು ಸಮಾನ ಮನಸ್ಕರಾಗಿ ಭಕ್ತಿ ಸಲ್ಲಿಸುವುದನ್ನು ಕಾಣುತ್ತೇವೆ. ಇದರಿಂದಾಗಿ ಅನೇಕ ಹಳ್ಳಿಗಳಲ್ಲಿ ಕೆಳವರ್ಗದವರರಲ್ಲಿ ಹೆಸರುಗಳು ಕೂಡ ಬೆರೆತು ಹೊಗಿರುವುದನ್ನು ಕಾಣುತ್ತೇವೆ.

ಈ ಪ್ರಾಂತ್ಯದಲ್ಲಿ ಈ ಹೊತ್ತಿನವರೆಗೂ ಇಂದಿನ ಐಕ್ಯತೆ ಹಾಸು ಹೊಕ್ಕಾಗಿರುವುದು ಕೆಲವೇ ಕೆಳವರ್ಗ ದವರಿಂದ ಮಾತ್ರ ಎಂಬುದು ಅಷ್ಟೇಸತ್ಯ. ಈ ಸೌಹಾರ್ಧತೆ ತುಂಬಾ ಸಂಕೀರ್ಣವಾದದ್ದು, ಖ್ವಾಜಾ ಬಂದೇನವಾಜ್, ಶಿಶುನಾಳ ಷರೀಫ, ಶಿರಹಟ್ಟಿ ಫಕೀರೇಶ್ವರ ಈ ಸ್ಥಳಗಳೆ ಜೀವಂತ ಸಾಕ್ಷಿಗಳಾಗಿವೆ. ಮುಸ್ಲಿಮರು ಕನ್ನಡ ಸಾಹಿತ್ಯವನ್ನು ಮುಸ್ಲಿಮೇತರರು ಉರ್ದು ಸಾಹಿತ್ಯ ರಚಿಸಿರುವುದು ಕೇವಲ ರಾಜಕೀಯ ಕಾರಣಗಳಲ್ಲಿ ಎಂಬುದು ಸತ್ಯ. ಮೋಹರಂ ಪದಗಳು. ಲಾವಣಿಗಳು, ಕಥನಗೀತೆಗಳು, ಒಗಟು, ಗಾದೆಗಳು ಮುಂತಾದ ಮೌಖಿಕ ಸಾಹಿತ್ಯ ಸೃಷ್ಠಿಗೆ ಕಾರಣವಾದದ್ದು ಎಂದು ಪ್ರಸ್ತುತ ಅಧ್ಯಾಯದಿಂದ ತಿಳಿಯಬಹುದು.

ಮುಸ್ಲಿಮರ ಆಗಮನ ರಾಜಕೀಯ ಹಾಗೂ ಧಾರ್ಮಿಕ ದಾಳಿಗಳು ಹಿಂದುಗಳನ್ನು ಅನೇಕ ಕಷ್ಟಗಳಿಗೆ ಗುರಿಮಾಡಿದವು. ಇಸ್ಲಾಂ ಹಾಗೂ ಹಿಂದೂಧರ್ಮಗಳು ಸಮಾಜಕ್ಕೆ ದೊಡ್ಡ ಸವಾಲಾಗಿ ನಿಂತವು. ಮುಸ್ಲಿಮರಿಂದಾಗಿ ಹಿಂದೂಗಳು ತಮ್ಮ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ಸ್ಥಾನಮಾನಗಳನ್ನು ಕಳೆದುಕೊಳ್ಳುವಂತಾಯಿತು. ಹಾಗಾದಾಗ ಅವರು ಧರ್ಮಕ್ಕೆ ಶರಣಾಗಿ ಪರಲೋಕ ಚಿಂತನೆಯಲ್ಲಿ ತೊಡಗಿ ಮೋಕ್ಷ ಸಾಧನೆಗಾಗಿ ಉನ್ನತ ಮಾರ್ಗವಾದ ಭಕ್ತಿಮಾರ್ಗವನ್ನು ಅವಲಂಭಿಸಿ ಶಾಂತಿ ಮತ್ತು ಸೌಹಾರ್ಧತೆಯನ್ನು ಕಾಪಾಡಿಕೊಂಡರು. ಈ ರೀತಿಯಾಗಿ ಭಕ್ತಿ ಚಳುವಳಿಗೆ ಹೊಸ ಚಾಲನೆ ದೊರೆಯಿತು. ಮಧ್ಯಕಾಲೀನ ಯುಗದಲ್ಲಿ ಇಸ್ಲಾಂನ್ನು ಸವಾಲಾಗಿ ಸ್ವೀಕರಿಸಿ ಸಮರ್ಥವಾಗಿ ಎದುರಿಸಲು ಭಕ್ತಿ ಫಂಥವು ನವ ಚೈತನ್ಯವನ್ನು ಪಡೆಯಿತು. ಆ ಯುಗದಲ್ಲಿ ಜನ್ಮ ತಾಳಿದ ಸಾಧು–ಸಂತರು ಮತ್ತು ಧರ್ಮ ಸುಧಾರಕರು ಭಕ್ತಿ ಚಳುವಳಿಯನ್ನು ಜನಪ್ರಿಯ ಚಳುವಳಿಯನ್ನಾಗಿ ಮಾಡಿದರು. ಭಕ್ತಿ ಪಂಥದ ಪ್ರತಿಫಾದಕರು ತಮ್ಮ ಸಂದೇಶಗಳನ್ನು ಸಮಾಜದ ಎಲ್ಲ ವರ್ಗದ ಜನತೆಗೆ ಮುಟ್ಟಿಸಿ ಸರ್ವರ ಮುಕ್ತಿಗೆ ಮತ್ತು ಮೋಕ್ಷಕ್ಕೆ ಶ್ರಮಿಸಿದರು. ಜಾತೀಯತೆಯನ್ನು ಖಂಡಿಸಿ ಸರ್ವಧರ್ಮಗಳ ಏಕತೆ, ಏಕೀಶ್ವರತ್ವ ಮತ್ತು ಸರ್ವರ ಸಮಾನತೆಯನ್ನು ಪ್ರತಿಪಾದಿಸಿದರು. ಹಿಂದೂ ಧರ್ಮ ಮತ್ತು ಇಸ್ಲಾಂ ಧರ್ಮಗಳು ದೇವರ ಸಾನಿಧ್ಯದತ್ತ ಸಾಗಲು ಎರಡು ಧರ್ಮ ಮಾರ್ಗಗಳೆಂದು ಅವರು ಭಾವಿಸಿದ್ದರು. ಮುಸ್ಲಿಮರ ಪ್ರಬಲತೆಯಿಂದಾಗಿ, ರಾಜಕೀಯ ಆರ್ಥಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಿಂದ ದೂರವಾಗಿದ್ದ ಹಿಂದೂಗಳು ಭಕ್ತಿ ಪಂಥದ ಚಳುವಳಿಯಲ್ಲಿ ಸಾರ್ಥಕತೆಯನ್ನು ಪಡೆದುಕೊಂಡರು ಇದರಿಂದಾಗಿ ಭಕ್ತಿ ಚಳುವಳಿ ಜನಪ್ರಿಯ ಚಳುವಳಿಯಾಯಿತು.

ಭಕ್ತಿ ಪಂಥದ ಉಗಮದ ಬಗ್ಗೆ ವಿದ್ವಾಂಸರುಗಳು ವಿಭಿನ್ನ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಪಾಶ್ಚಿಮಾತ್ಯ ವಿದ್ವಾಂಸರರಾದ ವೇಬಲ್ ಮತ್ತು ಗೀಯಸಿನ್ ಪ್ರಕಾರ, ಮೋಕ್ಷ ಸಾಧನೆಗಾಗಿ ಭಕ್ತಿ ಮಾರ್ಗ ಮತ್ತು ಹಿಂದೂ ಧರ್ಮದ ಏಕೀಶ್ವರತ್ವ ಕಲ್ಪನೆಗಳನ್ನು ಹಿಂದೂಗಳು ಕ್ರೈಸ್ತ ಧರ್ಮದಿಂದ ಪಡೆದರುಲ ಎಂದಿದೆ. ಆದರೆ ಈ ಅಭಿಪ್ರಾಯಕ್ಕೆ ಆಧುನಿಕ ವಿದ್ವಾಂಸರ ಮನ್ನಣೆ ದೊರೆತಿಲ್ಲ. ಮತ್ತೆ ಕೆಲವು ವಿದ್ವಾಂಸರು ಭಕ್ತಿ ಏಳ್ಗೆ ಇಸ್ಲಾಂ ಧರ್ಮದ ನೇರ ಪ್ರಭಾವದಿಂದ ಆಯಿತು ಎಂದು ವಾದಿಸಿದ್ದಾರೆ. ಮಧ್ಯಕಾಲೀನ ಯುಗದ ಭಕ್ತಿ ಪಂಥದ ಪ್ರಥಮ ಪ್ರವರ್ತಕ ರಮಾನಂದರು ಇಸ್ಲಾಂನ ಸಂಪರ್ಕದಿಂದಾಗಿ ಮಾನವರಲ್ಲಿ ಭ್ರಾತೃತ್ವ ಮತ್ತು ಸಮಾನತೆಯ ತತ್ವಗಳನ್ನು ಪಡೆದರೆಂದು ತಿಳಿಸಿದ್ದಾರೆ. ಇನ್ನೂ ಕೆಲವರು ಶಂಕರಾಚಾರ್ಯರ ಅದ್ವೈತ ಮತ್ತು ಏಕೀಶ್ವರತ್ವವಾದಗಳಲ್ಲಿಯೂ ಸಹ ಇಸ್ಲಾಂನ ಪ್ರಭಾವವನ್ನು ಕಂಡಿದ್ದಾರೆ. ಆದರೆ, ಶಂಕರಚಾರ್ಯ ಮತ್ತು ರಮಾನಂದರು ಇಸ್ಲಾಂ ಧರ್ಮದಿಂದ ಪ್ರಭಾವಿತರಾಗಿದ್ದರು ಎಂಬುದು ಅತಾರ್ಕಿಕ ಮತ್ತು ಆಧಾರರಹಿತ. ಇದೇ ರೀತಿ ಅಭಿಪ್ರಾಯವಾಗುತ್ತದೆ. ಈ ಎಲ್ಲಾ ಅಂಶಗಳಿಂದ ತಿಳಿಯುವುದೇನಂದರೆ ಇಸ್ಲಾಂನ ಆಗಮನ ಭಾರತದಲ್ಲಿ ಧಾರ್ಮಿಕ ಮತ್ತು ರಾಜಕೀಯ ಶಕ್ತಿಯಾಗಿ ಬೆಳೆದುದು ಹಿಂದೂ ಧರ್ಮ ಮತ್ತು ಸಮಾಜಕ್ಕೆ ದೊಡ್ಡ ಸವಾಲಾಯಿತು ಎಂದು ಹೇಳಬಹುದು.

ಭಾರತದ ಧಾರ್ಮಿಕ ಇತಿಹಾಸದಲ್ಲಿ ಬಹಮನಿಗಳ ಕಾಲ ಒಂದು ಮಹತ್ವಪೂರ್ಣವಾದ ಕಾಲ. ಈ ಕಾಲವು ಮನುಷ್ಯನ ಪ್ರಜ್ಞೆಯನ್ನು ಚುರುಕುಗೊಳಿಸಿ ಜಾತಿ–ಮತಗಳ ತಡೆಗೋಡೆಗಳನ್ನು ಕೆಡುವಿದ ಹೊಸ ಜಾಗೃತಿಯ ಕಾಲವೆಂದು ಹೇಳಬಹುದು. ಜಗತ್ತಿನ ಎರಡು ಹಿರಿಯ ಧರ್ಮಗಳಾದ ಹಿಂದೂ ಮತ್ತು ಇಸ್ಲಾಂ ಧರ್ಮಗಳು ಬೆರೆತು ಮಾನವ ಜನಾಂಗಕ್ಕೆ ಭಕ್ತಿ ಪಂಥ ಮತ್ತು ಸೂಫಿ ಸಿದ್ಧಾಂತ ಎಂಬ ಎರಡು ಸೂಕ್ಷ್ಮ ಧಾರ್ಮಿಕ ಬೆಳವಣಿಗೆಗಳನ್ನು ಜೀವನದ ಉನ್ನತ ಧ್ಯೇಯಗಳ ಕಡೆಗೆ ನಡೆಸಿದ ಕಾಲವೆಂದು ಹೇಳಬಹುದು. ಆತ್ಮದ ಪ್ರಾಮಾಣಿಕತೆ, ನಿರ್ಮಲ ಬುದ್ಧಿ, ಸಚ್ಚಾರಿತ್ರ್ಯ, ನೈತಿಕತೆ ಮತ್ತು ಶ್ರೀಮಂತಿಕೆಗಳ ಮೂಲಕ ಮಾನವನು ಅತಿಮಾನವನಾಗಿ, ಮಹಾತ್ಮನಾಗಿ, ಚಿರವಾಗಿ ಇತಿಹಾಸದಲ್ಲಿ ಉಳಿದು ಭಾರತದಲ್ಲಿ

ಧರ್ಮದ ಪ್ರಭಾವವನ್ನು ಎತ್ತಿ ಹಿಡಿದ ಕಾಲ. ಧರ್ಮವಿಲ್ಲದ ಸಂಸ್ಕೃತಿಯನ್ನು ನಾವು ಇತಿಹಾಸದಲ್ಲಿ ನೋಡಲಾರೆವು. ಉತ್ತಮ ಶಕ್ತಿಯ ಕಡೆಗೆ ನಮ್ಮನ್ನು ಚಲಿಸುವಂತೆ ಮಾಡುವುದೇ ಧರ್ಮ, ಇಂತಹ ಒಂದು ಧಾರ್ಮಿಕ ಸುಧಾರಣಾ ಚಳುವಳಿಯು ದಕ್ಷಿಣದಿಂದ ಉದಯಿಸಿದ್ದು, ಧಾರ್ಮಿಕ ವಿಕಾಸದ ಅತ್ಯಂತ ವಿಶಿಷ್ಟವಾದ ಲಕ್ಷಣಗಳೆಂದು ಕರೆಯಲ್ಪಡುವ ಸಂತರನ್ನು, ಅನುಭಾವಿಗಳನ್ನು ಮತ್ತು ಅನೇಕ ಭಕ್ತರನ್ನು ಬೆಳಕಿಗೆ ತಂದಂತಹ ಕಾಲ. ಸಂತರು ಮತ್ತು ಭಕ್ತರು ಈ ಕಾಲಕ್ಕೆ ಒಂದು ವಿಶೇಷ ಕಾಂತಿಯನ್ನು ಚೆಲ್ಲಿ, ಅನೇಕ ವಿಶಿಷ್ಟ ಲಕ್ಷಣಗಳನ್ನೊಳಗೊಂಡು ಅವರು ಜಾತ್ಯಾತೀತರಾಗಿದ್ದರೆಂದು ತಿಳಿದುಬರುತ್ತದೆ. ಅಂದರೆ ಇವರು ಯಾವುದೇ ಒಂದು ನಿರ್ದಿಷ್ಟ ಪಂಗಡದೊಂದಿಗೆ ತಮ್ಮನ್ನು ಗುರುತಿಸಿಕೊಳ್ಳದೇ, ಯಾವುದೇ ಧರ್ಮವನ್ನು ಸ್ಥಾಪಿಸಬೇಕೆಂಬ ಬಯಕೆಯಿಲ್ಲದೇ, ಯಾವುದೇ ಜಾತಿ ಮತಗಳ ಬಂಧನದಿಂದ ಅವರು ಮುಕ್ತರಾಗಿದ್ದರು.

ಮಧ್ಯಯುಗೀನ ದಖ್ಖನ್ ಇತಿಹಾಸದಲ್ಲಿ ಧಾರ್ಮಿಕ ಚಳುವಳಿಯ ಸನ್ನಿವೇಶವು ಒಂದು ಮಹತ್ವಪೂರ್ಣವಾದ ಕಾಲಘಟ್ಟವೆಂದು ಪರಿಗಣಿಸಲ್ಪಡುತ್ತದೆ. ಹಿಂದೂ ಮತ್ತು ಮುಸ್ಲಿಂ ಎರಡೂ ಧರ್ಮಗಳಲ್ಲಿ ಇದು ಒಂದು ಪ್ರವರ್ಧಮಾನದ ಯುಗವೂ ಹೌದು ಎಂದು ಹೇಳಬಹುದು. ಧಾರ್ಮಿಕ ಆಂದೋಲನದಲ್ಲಿ ಪುರಾತನ ಭಾವನೆಗಳು, ಮೂಢನಂಬಿಕೆಗಳು, ಸಂಪ್ರದಾಯಗಳು, ಹೊಸ ರೂಪದ ತಳೆದು ಪುನರ್‌ಮನನಗೊಂಡು ನಿಜವಾದ ಧರ್ಮವೆಂದರೇನು ಎಂಬ ಪ್ರಶ್ನೆಗೆ ಹೊಸ ರೂಪ ನೀಡಿದ ಯುಗವು ಇದಾಗಿತ್ತು. ಈ ಕಾಲದಲ್ಲಿ ಮಾನವ ಪರಿವರ್ತನೆಗೆ ನಡೆದ ಪ್ರಮುಖ ಧಾರ್ಮಿಕ ಆಂದೋಲನಗಳೆಂದರೆ, ಸೂಫಿ ಮತ್ತು ಭಕ್ತಿ ಆಂದೋಲನಗಳು. ಮಧ್ಯಯುಗೀನ ಭಾರತದ ಚರಿತ್ರೆಯಲ್ಲಿ ಭಕ್ತಿ ಚಳುವಳಿ ಮಹತ್ವಪೂರ್ಣ ಘಟ್ಟವಾಗಿದ್ದು ಈ ಚಳುವಳಿಯು ಹಲವು ಶತಮಾನಗಳಿಂದಲೂ ಆಧುನಿಕ ಹಿಂದೂಧರ್ಮದ ಮೇಲೆ ತನ್ನ ಅಗಾಧವಾದ ಪ್ರಭಾವವನ್ನು ಬೀರಿದೆ. ಅನೇಕ ವಿದ್ವಾಂಸರು ಭಕ್ತಿ ಚಳುವಳಿಯ ಮೂಲದ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ.

ಭಕ್ತಿ ಚಳುವಳಿಯ ಉಗಮದ ಬಗ್ಗೆ ಶ್ರೇಷ್ಠ ಯುರೋಪಿಯನ್ ವಿದ್ವಾಂಸರಾದ ವೆಬರ್ ಮತ್ತು ಶ್ರೇಯರ್‌ಸನ್ 'ಭಕ್ತಿ' ಎಂಬುದು ಮುಕ್ತಿ ಮತ್ತು ಏಕದೇವತಾರಾಧನೆ, ಮುಕ್ತಿಯ ಮಾರ್ಗವೇ ಭಕ್ತಿ. ಇಸ್ಲಾಂ ಧರ್ಮವು ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಹಿಂದೂಧರ್ಮದ ಮೇಲೆ ಪ್ರಭಾವ ಬೀರಿದ್ದರಿಂದ ಮಧ್ಯಯುಗದಲ್ಲಿ ಭಕ್ತಿ ಚಳುವಳಿಯ ಉಗಮವಾಯಿತೆಂದು ಕೆಲವರ ಅಭಿಪ್ರಾಯವಾದರೆ, ಇನ್ನು ಕೆಲವರ ಅಭಿಪ್ರಾಯದಂತೆ ಹಿಂದೂಗಳು ಇದನ್ನು ಕ್ರೈಸ್ತ ಧರ್ಮದಿಂದ ಪಡೆದರೆಂದು ಹೇಳಲಾಗಿದೆ. ರಮಾನಂದರು ಇಸ್ಲಾಂ ಧರ್ಮದ ತತ್ವಗಳನ್ನು ಅರಿತುಕೊಂಡ ಕಾರಣ ಅವರ ಮೇಲೆ ಇಸ್ಲಾಂ ತತ್ವದ ಪ್ರಭಾವವಾಗಿತ್ತೆಂದು ಹೇಳಲಾಗುತ್ತದೆ. ವಿಶ್ವ ಭಾತೃತ್ವ ಮತ್ತು ಸಮಾನತೆಯ ತತ್ವಗಳು ಇಸ್ಲಾಂನಿಂದಲೇ ಬಂದವೆಂಬುದು ಅವರ ವಾದ. ಮತ್ತೆ ಕೆಲವು ವಿದ್ವಾಂಸರು ಶಂಕರಾಚಾರ್ಯರ ಏಕದೇವೋಪಾಸನೆ ಸಿದ್ಧಾಂತವು ಇಸ್ಲಾಂ ಧರ್ಮದ ಮೇಲೆ ಪ್ರಭಾವ ಬೀರಿತ್ತೆಂದು ಹೇಳುತ್ತಾರೆ. ರಮಾನಂದ ಮತ್ತು ರಾಮಾನುಜರು ಮುಕ್ತಿ ಸಾಧನೆಗೆ ಭಕ್ತಿ ಮಾರ್ಗವೇ ಶ್ರೇಷ್ಠವೆಂದು ಸಾರಿದ್ದಾರೆ.[೫೩] ಹಿಂದೂಧರ್ಮದಲ್ಲಿ ನಡೆದ ಭಕ್ತಿ ಚಳುವಳಿಯು ಮುಕ್ತಿಯ ಸಾಧನೆಗೆ ಮೂರು ಮಾರ್ಗಗಳನ್ನು ಸೂಚಿಸುತ್ತದೆ, ಅವುಗಳೆಂದರೆ ಜ್ಞಾನ, ಕರ್ಮ ಮತ್ತು ಭಕ್ತಿ. ಹಿಂದೂ ಸಂತರು ಭಕ್ತಿ ಮಾರ್ಗದ ಮೂಲಕವೇ ಮುಕ್ತಿಯನ್ನು ಸಾಧಿಸಬಹುದೆಂದು ಬೋಧಿಸುವ ಮೂಲಕ ಭಕ್ತಿ ಸಿದ್ಧಾಂತವನ್ನು ಪ್ರಚಾರ ಮಾಡಿದರು.

**೩.೫.೧. ಭಕ್ತಿ ಪಂಥದ ಮುಖ್ಯ ತತ್ವಗಳು**

ಭಕ್ತಿ ಪಂಥವು ತನ್ನದೇ ಆದ ಮುಖ್ಯ ತತ್ವಗಳನ್ನು ಹೊಂದಿ ಆಚರಣೆಗೆ ತಂದಿತು. ಅವು ಈ ಕೆಳಗಿನಂತಿವೆ;

ದೇವರು ಒಬ್ಬನೇ, ಭಕ್ತಿಯ ಮೂಲಕವೇ ಮುಕ್ತಿಯನ್ನು ಪಡೆಯಲು ಸಾಧ್ಯ.

ಭಕ್ತಿ ಮಾರ್ಗದ ಮೂಲಕ ಮುಕ್ತಿಯನ್ನು ಪಡೆಯಲು ಗುರುವಿನ ಮಾರ್ಗದರ್ಶನ ಅತ್ಯವಶ್ಯಕ.

ರಾಮ ಮತ್ತು ಕೃಷ್ಣರ ಪಂಥಗಳಿಗೆ ಹೆಚ್ಚಿನ ಪ್ರಚಾರ ದೊರಕಿತು ಹಾಗೂ ರಾಮ ಮತ್ತು ಕೃಷ್ಣರನ್ನು ದೇವರ ಅವತಾರವೆಂದು ಪೂಜಿಸಲಾಯಿತು.

ವಿಶ್ವ ಭ್ರಾತೃತ್ವವು ಭಕ್ತಿ ಪಂಥದ ಮೂಲಕ ಸಂಚಲನಕ್ಕೆ ಬಂದಿತು.

ಭಕ್ತಿ ಪಂಥದ ಸುಧಾರಕರು ವಿಗ್ರಹ ಆರಾಧನೆಯನ್ನು, ಜಾತೀಯತೆಯನ್ನು, ಹಿಂಸೆಯನ್ನು ತೀವ್ರವಾಗಿ ಖಂಡಿಸಿದರು.

ಭಕ್ತಿ ಪಂಥದ ಅನುಯಾಯಿಗಳು ಅನಾವಶ್ಯಕ ಯಜ್ಞಯಾಗಗಳನ್ನು ಹಾಗೂ ಗೊಡ್ಡು ಸಂಪ್ರದಾಯಗಳನ್ನು ತೀವ್ರವಾಗಿ ವಿರೋಧಿಸಿದರು.[೫೪]

ಭಕ್ತಿ ಎಂದರೆ ದೈವೀ ಶಕ್ತಿಗೆ ಮಾನವನು ತನ್ನನ್ನು ಸಂಪೂರ್ಣವಾಗಿ ಸಮರ್ಪಿಸಿಕೊಳ್ಳುವುದೆಂದರ್ಥ. ಭಕ್ತಿ ಚಳುವಳಿಯು ಮಧ್ಯಕಾಲೀನ ಭಾರತದ ಇತಿಹಾಸದಲ್ಲಿ ಪ್ರಮುಖ ಕಾಲಘಟ್ಟವಾಗಿದೆ. ಹಿಂದು ಸಮಾಜದಲ್ಲಿನ ಮತ್ತು ಧರ್ಮದಲ್ಲಿನ ಜಟಿಲತೆಗಳನ್ನು ತೊಡೆದು ಹಾಕಿ, ಉದಾರವಾದ ಮತ್ತು ಕ್ರಿಯಾಶೀಲವಾದ ಹಿಂದೂ ಮತವನ್ನು ಪ್ರವರ್ಧಮಾನಕ್ಕೆ ತರುವ ನಿಟ್ಟಿನಲ್ಲಿ ಹಲವಾರು ಚಿಂತಕರು, ಸುಧಾರಕರು, ಧಾರ್ಮಿಕ ಸುಧಾರಣೆಯ ಕಡೆಗೆ ಗಮನವನ್ನು ಹರಿಸಿದ್ದಾರೆ. ಈ ರೀತಿಯಾಗಿ ಭಕ್ತಿ ಪಂಥವು ಹುಟ್ಟಿಕೊಂಡಿತು. ಭಕ್ತಿ ಪಂಥದ ಹರಿಕಾರರು ತಮ್ಮನ್ನು ಯಾವುದೇ ಧರ್ಮಕ್ಕೆ ಸೀಮಿತ ಗೊಳಿಸಿಕೊಳ್ಳಲಿಲ್ಲ. ತಮ್ಮದೇ ಆದಂತಹ ವಿಶಿಷ್ಟ ಧಾರ್ಮಿಕ ತತ್ವಗಳನ್ನು ಸ್ಥಾಪಿಸಿ ಪ್ರಚಾರದಲ್ಲಿ ತೊಡಗಲಿಲ್ಲ, ಅವರು ಜಾತ್ಯಾತೀತರಾಗಿದ್ದು, ಹಿಂದೂ ಧರ್ಮದಲ್ಲಿ ಆಳವಾಗಿ ಬೇರೂರಿದ ಮೂಢನಂಬಿಕೆಗಳನ್ನು, ಯಜ್ಞ ಯಾಗಾದಿಗಳನ್ನು, ಅಂತ್ಯವಿಲ್ಲದ ಮೂರ್ತಿ ಪೂಜೆಗಳನ್ನು ಖಂಡಿಸಿ ನಮ್ಮೆಲ್ಲರನ್ನೂ ಕಾಪಾಡುವ, ಆಳುವ ದೇವನು ಒಬ್ಬನೇ, ಆತನೇ ಸಕಲ ಮಾನವರ ಮತ್ತು ಸೃಷ್ಟಿಯ ಒಡೆಯ, ನಾಮ ಹಲವು ದೇವನೊಬ್ಬನೆ ಎಂದು ಹಾಡಿ ಭಕ್ತಿಯ ಮೂಲಕ ಸಾಕ್ಷಾತ್ಕಾರವನ್ನು ಪಡೆಯುವ ಮಾರ್ಗವನ್ನು ಮಾನವನಿಗೆ ಬೋಧಿಸಿದರು. ಸಾಮಾನ್ಯವಾಗಿ ಸೂಫಿ ತತ್ವಗಳೇ ಬಹುಪಾಲು ಭಕ್ತಿ ಆಂದೋಲನದ ತತ್ವಗಳು ಆಗಿದೆ. ಈ ಪರಮಾತ್ಮನು ದೇವಾಲಯದಲ್ಲಿಲ್ಲ, ಪ್ರತಿಯೊಬ್ಬ ಮನುಷ್ಯನ ಹೃದಯದಲ್ಲಿರುವನು. ಪ್ರತಿಯೊಬ್ಬ ಮನುಷ್ಯನು ಪರಸ್ಪರರನ್ನು ಗೌರವಿಸುವ, ಸಹಕರಿಸುವ, ಆಧರಿಸುವ ಮತ್ತು ಪ್ರೇಮಿಸುವುದರ ಮೂಲಕ ಭಕ್ತಿ ಮಾರ್ಗವನ್ನು ಅನುಸರಿಸಿ ಜಾಗೃತ ಮನಃಶಕ್ತಿಯಿಂದ ದೇವರನ್ನು ಕಾಣಬಹುದೇ ಹೊರತಾಗಿ ದೇವಾಲಯಗಳಲ್ಲಲ್ಲ ಎಂದು ಸಾರಿದರು. ಈ ಭಕ್ತಿ ಆಂದೋಲನಕ್ಕೆ ಯಾವುದೇ ಜಾತಿ, ಮತ, ಪಂಥದ ಸಂಬಂಧಗಳು ಇರುವುದಿಲ್ಲವೆಂದು ಘೋಷಿಸಿದರು ದಖ್ಖನ್‌ನಲ್ಲಿ  ಸಾರಿದರು.

**೩.೫.೨. ಭಕ್ತಿ ಪಂಥದ ಪ್ರಮುಖ ಸುಧಾರಕರು**

ಭಕ್ತಿ ಪಂಥದ ಸುಧಾರಕರು ಮಧ್ಯಕಾಲೀನ ಚರಿತ್ರೆಯಲ್ಲಿ ಬಹಮನಿ ಸಾಮ್ರಾಜ್ಯವನ್ನು ಧಾರ್ಮಿಕವಾಗಿ ಮತ್ತು ಸಾಮಾಜಿಕವಾಗಿ ಅನೇಕ ಕ್ಷೇತ್ರಗಳಲ್ಲಿ ಕ್ರಾಂತಿಕರವಾದ ಬದಲಾವಣೆಯನ್ನು ತಂದರು. ಭಕ್ತಿ ಚಳುವಳಿಯ ಸಂತರು ಬೋಧನೆಗಳನ್ನು ಸರಳ ಭಾಷೆಗಳಲ್ಲಿ ಬೋಧಿಸಿದರು. ಅವರ ಪದ್ಯ ಹಾಗೂ

ಪ್ರಾರ್ಥನೆಗಳು ಬಹುಬೇಗನೇ ಜನರನ್ನು ಮುಟ್ಟುವಲ್ಲಿ ಯಶಸ್ವಿಯಾದವು. ಪ್ರಾಂತೀಯ ಜನಸಾಮಾನ್ಯರ ಭಾಷೆಯಲ್ಲಿ ಬೋಧಿಸಿದ್ದರಿಂದ ಜನರ ಹೃದಯವನ್ನು ಬಹುಬೇಗನೇ ತಟ್ಟಿದವು. ಭಕ್ತಿ ಪಂಥದ ಹರಿಕಾರರು ತಮ್ಮ ಬೋಧನೆಗಳನ್ನು ದೇವಾಲಯಗಳಲ್ಲಿ, ಸಾರ್ವಜನಿಕ ಸ್ಥಳಗಳಲ್ಲಿ ಹಾಗೂ ಗ್ರಾಮ ಪಂಚಾಯತಿಗಳಲ್ಲಿ ಜನರಿಗೆ ಮನಮುಟ್ಟುವಂತೆ ಬೋಧಿಸುತ್ತಿದ್ದರು. ಈ ಕಾರಣದಿಂದಾಗಿ ಭಕ್ತಿ ಚಳುವಳಿಯು ಬಹುಬೇಗನೇ ಪ್ರಚಾರವನ್ನು ಪಡೆಯಿತು ಹಾಗೂ ಆರಾಧನಾ ಪಂಥವಾಗಿ ಜನಪ್ರಿಯಗೊಂಡಿತು. ದಖ್ಖನ್ ಬಹಮನಿ ಸಾಮಾಜದಲ್ಲಿ ಭಕ್ತಿ ಪಂಥದ ಪ್ರಮುಖ ಸುಧಾರಕರನ್ನು ಈ ಕೆಳಗಿನಂತೆ ನೋಡಬಹುದು.

**೧. ರಮಾನಂದ**

ಭಕ್ತಿ ಪಂಥದ ನಾಟಕದಲ್ಲಿ ಪ್ರಧಾನ ಪಾತ್ರ ವಹಿಸಿದ ರಮಾನಂದ ಸಾಮಾನ್ಯ ಜನರಿಗೆ ಅರ್ಥವಾಗುವ ರೀತಿಯಲ್ಲಿ ಸರಳ ಬೋಧನೆಯನ್ನು ನೀಡಿದವರು. ೧೪ನೇ ಶತಮಾನದ ಮೊದಲ ಭಾಗದಲ್ಲಿ ಅಂದರೆ ಬಹಮನಿ ಪತನದ ಕಾಲದಲ್ಲಿ ಜನಿಸಿದ ರಮಾನಂದರು ಮೊದಲ ಶ್ರೇಷ್ಠ ಭಕ್ತಿ ಸಂತರು. ಇವರು ಅಲಹಾಬಾದ್‌ನ ಬ್ರಾಹ್ಮಣ ಮನೆತನದಲ್ಲಿ ಜನಿಸಿದರು. ಹಿಂದಿ ಭಾಷೆಯಲ್ಲಿ ಭಕ್ತಿ ಪಂಥದ ತತ್ವಗಳನ್ನು ಪ್ರಚಾರ ಮಾಡಿದ ಮೊದಲ ಆಚಾರ್ಯರು ರಮಾನಂದರು. ಜಾತಿ, ಲಿಂಗ ಮತ್ತು ಹುಟ್ಟಿನ ಬೇಧವಿಲ್ಲದೆ ಎಲ್ಲರಿಗೂ ಭಕ್ತಿ ಪಂಥದ ತತ್ವಗಳನ್ನು ಬೋಧಿಸಿದರು. ಬೇರೆ ಬೇರೆ ಜಾತಿಗೆ ಸೇರಿದವರು ಇವರ ಶಿಷ್ಯರಾಗಿದ್ದಾರೆ. ಇವರ ಶಿಷ್ಯರಲ್ಲಿ ಪ್ರಮುಖರೆಂದರೆ ಅನಂತಾನಂದ, ಕಬೀರ, ಪೀಪಾ, ಭಾವಾನಂದ, ಸುಖ, ಸಂಸರ, ಪದ್ಮಾವತಿ, ನರಹರಿ, ರಾಯದಾಸ, ಮುಂತಾದವರು. ಈ ಶಿಷ್ಯರಲ್ಲಿ ಒಬ್ಬ ನಾಯಿಂದ ಜಾತಿಗೆ ಸೇರಿದವನಾಗಿದ್ದರೆ ಮತ್ತೊಬ್ಬ ಚಮ್ಮಾರ ಹಾಗೂ ಮಗದೊಬ್ಬ ಮುಸ್ಲಿಮನಾಗಿದ್ದ. ರಮಾನಂದರು ರಾಮನ ಪೂಜೆಯನ್ನು ಜನಸಾಮಾನ್ಯರಲ್ಲಿ ಉತ್ತೇಜಿಸಿದರು. ಜಾತಿ ಪದ್ಧತಿಯನ್ನು ತೀವ್ರವಾಗಿ ವಿರೋಧಿಸಿದರು. ಇವರ ಬೋಧನೆಯ ಪರಿಣಾಮವಾಗಿ ಎಲ್ಲ ವರ್ಗದ ಜನರು ಯಾವುದೇ ಮಧ್ಯವರ್ತಿಯ ಸಹಾಯವಿಲ್ಲದೆ ದೇವರನ್ನು ಕಾಣಬಹುದು ಎಂಬ ಸತ್ಯವನ್ನು ಜನರು ಕಂಡುಕೊಂಡರು. ಭಕ್ತಿ ಚಳುವಳಿಯು ಮೊದಲ ಪ್ರಾರಂಭವಾಗಿದ್ದು ದಕ್ಷಿಣ ಭಾರತದಲ್ಲಿ, ಇದನ್ನು ಉತ್ತರ ಭಾರತಕ್ಕೆ ಕೊಂಡೊಯ್ದ ಸಂತನೆಂದರೆ ಕಬೀರದಾಸರು. ಮಾನವರೆಲ್ಲರೂ ಒಂದೇ ಎಲ್ಲರೂ ದೇವರಿಂದ ಸೃಷ್ಟಿಸಲ್ಪಟ್ಟಿದ್ದಾರೆ, ಇಲ್ಲಿ ಯಾರೂ ಹೆಚ್ಚಲ್ಲ ಕಡಿಮೆಯಲ್ಲ ಎಲ್ಲರೂ ಸಹೋದರರು ಎಂದು ರಮಾನಂದರು ಸಾರಿದರು. ಸಂಸ್ಕೃತ ಭಾಷೆಗೆ ಬದಲಾಗಿ ಜನಸಾಮಾನ್ಯರ ಸಾಮಾನ್ಯ ಭಾಷೆಯಲ್ಲಿ ರಮಾನಂದರು ತತ್ವಪ್ರಚಾರ ಮಾಡಿದರು.

**೨. ಕಬೀರದಾಸ(ಕ್ರಿ.ಶ. ೧೪೯೮)**

೧೪ನೇ ಶತಮಾನದ ಮಧ್ಯಭಾಗದಲ್ಲಿದ್ದ ಕಬೀರದಾಸರು ರಮಾನಂದರ ಶಿಷ್ಯರಲ್ಲಿ ಅತ್ಯಂತ ಪ್ರಮುಖರಾದವರು. ಕಬೀರನು ಹಿಂದೂಗಳಿಗೂ, ಮುಸಲ್ಮಾನರಿಗೂ ಇರುವ ವ್ಯತ್ಯಾಸ ಕೇವಲ ಕೃತಕ, ಅಸ್ವಾಭಾವಿಕವಾಗಿ ನಿರ್ಮಿತ ಎಂಬುದನ್ನು ತನ್ನ ಶಿಷ್ಯರ ಮನಸ್ಸಿಗೆ ನಾಟುವಂತೆ ಮಾಡಲು ಪಟ್ಟು ಹಿಡಿದಿದ್ದನು. ಸೃಷ್ಟಿಯ ಹಾದಿಯಲ್ಲಿ ತುರಕರು ಇರಲಿಲ್ಲ, ಹಿಂದೂಗಳೂ ಇರಲಿಲ್ಲ, ಜನಾಂಗವೂ ಇರಲಿಲ್ಲ, ಜಾತಿಯೂ ಇರಲಿಲ್ಲ ಎಂದು ಹೇಳಿದನು. ತಮ್ಮ ಗುರುಗಳಾದ ರಮಾನಂದರ ತತ್ವಗಳಿಗೆ ನಿರ್ದಿಷ್ಟವಾದ ಸ್ವರೂಪವನ್ನು ಕೊಟ್ಟರು. ಕಬೀರದಾಸರು ವೇದಾಂತ ತತ್ವಜ್ಞಾನವನ್ನು ಅಭ್ಯಸಿಸಿದ್ದರು ಹಾಗೂ ಮುಸ್ಲಿಂ ಸಂತ ಪೀರ್‌ರಾಕಿಯ ತತ್ವಗಳಿಂದ ಪ್ರಭಾವಿತರಾಗಿದ್ದರು. ಬ್ರಾಹ್ಮಣ ವಿಧವೆಯ ಮಗನಾಗಿದ್ದ ಕಬೀರರನ್ನು ಮುಸ್ಲಿಂ ನೇಕಾರಳೊಬ್ಬಳು ಸಾಕಿ ಬೆಳೆಸಿದಳೆಂದು ತಿಳಿದುಬರುತ್ತದೆ. ಕಬೀರರು ರಮಾನಂದರ ಶಿಷ್ಯರಾಗಿ ಬನಾರಸದಲ್ಲಿಯೇ ತಮ್ಮ ಜೀವನವನ್ನು ಸಾಗಿಸಿದರು. ಮದುವೆಯಾಗಿ ಒಂದು ಗಂಡು ಮತ್ತು ಹೆಣ್ಣು ಮಗುವಿನ ತಂದೆಯಾಗಿ ಕಬೀರರು ನೇಕಾರ ವೃತ್ತಿಯನ್ನು ಅವಲಂಭಿಸಿದ ಗೃಹಸ್ತರಾದರು ಮತ್ತು ಸಂತರಾದರು.

ರಾಮನ ಭಕ್ತರಾದ ಇವರು ಹಿಂದೂ ತತ್ವಶಾಸ್ತ್ರವನ್ನು ಅರಿತುಕೊಂಡಿದ್ದರು. ಪುರೋಹಿತಶಾಹಿ, ಜಾತಿಪದ್ಧತಿ ಮತ್ತು ಧರ್ಮಗಳ ತಾರತಮ್ಯಗಳನ್ನು ವಿರೋಧಿಸಿದರು. ತಮ್ಮನ್ನು ತಾವೇ 'ಹಿಂದೂ' ಮತ್ತು 'ಮುಸ್ಲಿಂ' ಅಲ್ಲಾ ಮತ್ತು ರಾಮನ ಕೂಸು ನಾನು ಎಂದು ಹೇಳಿಕೊಳ್ಳುತ್ತಿದ್ದರು, ಹಿಂದೂ-ಮುಸ್ಲಿಂರ ನಡುವಿನ ತಾರತಮ್ಯಗಳನ್ನು ಹೋಗಲಾಡಿಸಲು ಪ್ರಯತ್ನಿಸಿದರು. ಭಕ್ತಿ ಮಾರ್ಗವೇ ಮುಕ್ತಿಗೆ ದಾರಿ ಎಂದು ಸಾರಿದರು.

ಕಬೀರರ ಶಿಷ್ಯರಲ್ಲಿ ಹಿಂದೂ ಹಾಗೂ ಮುಸ್ಲಿಂ ಶಿಷ್ಯರಿದ್ದರು. ಕಬೀರರ ತತ್ವಗಳನ್ನು ದೋಹಾಗಳಲ್ಲಿ (ಎರಡು ಸಾಲಿನ ಪದ್ಯ) ನಾವು ಕಾಣುತ್ತೇವೆ. ಭಕ್ತಿ ಪಂಥವನ್ನು ಸಾರಿದ ಕಬೀರರು ಜೀವನದಲ್ಲಿ ಸನ್ಯಾಸಿ ಜೀವನ, ಉಪವಾಸ ಹಾಗೂ ವ್ರತಗಳ ಅವಶ್ಯಕತೆ ಇಲ್ಲ, ದೇವರ ಮುಂದೆ ಎಲ್ಲರೂ ಸಮಾನರು, ಬ್ರಾಹ್ಮಣರ ಶ್ರೇಷ್ಠತ್ವವನ್ನು ನಿರಾಕರಿಸಿದರು, ಸತಿ ಪದ್ಧತಿ ಹಾಗೂ ಪರದಾಗಳನ್ನು ವಿರೋಧಿಸಿದರು, ವಿಗ್ರಹರಾಧನೆ, ಆಡಂಬರದ ಪೂಜೆ, ಯಜ್ಞ ಯಾಗಾದಿಗಳನ್ನು ವಿರೋಧಿಸಿ ಆತ್ಮಶುದ್ಧಿ ಇಲ್ಲದ ಪೂಜೆ, ಆತ್ಮಶುದ್ಧಿ ಇಲ್ಲದ ತೀರ್ಥಯಾತ್ರೆ ಏನೂ ಪ್ರಯೋಜನವಿಲ್ಲ ಎಂದು ಸಾರಿದರು. ಹಿಂದೂ-ಮುಸ್ಲಿಂ ಇಬ್ಬರೂ ಒಂದೇ ಮಣ್ಣಿನಿಂದ ಮಾಡಿದ ಮಡಿಕೆಗಳು ಎಂಬುದಾಗಿ ಕಬೀರರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಇವರು ಏಕೇಶ್ವರವಾದವನ್ನು ಪ್ರತಿಪಾದಿಸಿದರು. ಹಿಂದೂಗಳ ಪೂಜೆ, ಮುಸ್ಲಿಂರ ನಮಾಜ, ಅಲ್ಲಾ ಮತ್ತು ಹರಿ ಇಬ್ಬರೂ ಒಬ್ಬನೆ, ಆದರೆ ಬೇರೆ ಬೇರೆ ಹೆಸರುಗಳಿಂದ ಬೇರೆ ಬೇರೆ ವಿಧಾನಗಳಲ್ಲಿ ದೇವರನ್ನು ಕಾಣಲು ನಾವು ಮಾಡಿದ ಪ್ರಯತ್ನವಷ್ಟೆ ಎಂದು ಅಭಿಪ್ರಾಯಪಟ್ಟಿದ್ದಾರೆ. ಕಬೀರರು ಎಲ್ಲ ಜಾತಿ-ಮತಗಳಲ್ಲಿ ಏಕತಾ ಭಾವವನ್ನು ಹುಟ್ಟಿಸಲು ಹಿಂದೂ ಮತ್ತು ಮುಸ್ಲಿಂರ ರಾಮ-ಅಲ್ಲಾ ಒಂದೇ ದೇವರ ಹಲವು ಹೆಸರುಗಳು ಎಂಬುದನ್ನು ತಮ್ಮ ಪದ್ಯಗಳ ಮೂಲಕ ಸಾರಿಹೇಳಿದರು. ಈತನ ಅನುಯಾಯಿಗಳು ಕಬೀರ ಪಂಥಿಯರು ಎಂದು ಕರೆಯಿಸಿಕೊಂಡರು.[೫೫]

**೩. ಗುರುನಾನಕ್(ಕ್ರಿ.ಶ. ೧೪೬೯)**

೧೫ನೇ ಶತಮಾನದ ಮಧ್ಯಭಾಗದಲ್ಲಿ ಲಾಹೋರಿನ ತಳವಂದಿಯ ಖತ್ರಿ ಎಂಬ ಕುಟುಂಬದಲ್ಲಿ ಜನಿಸಿದ ಗುರುನಾನಕ್‌ರು ಭಕ್ತಿಪಂಥದ ಹರಿಕಾರರಾಗಿದ್ದು, ಹಿಂದೂ-ಮುಸ್ಲಿಂರಲ್ಲಿ ಐಕ್ಯತೆ ಮೂಡಿಸಿ ಅದರಲ್ಲಿ ಬಹಮನಿ ಸಾಮ್ರಾಜ್ಯದಲ್ಲಿ ಅಡಗಿದ್ದ ದುಗುಡವನ್ನು ಸಾಮಾಜಿಕವಾಗಿಯೂ ಮತ್ತು ಆಧ್ಯಾತ್ಮಿಕವಾಗಿಯೂ ಒಂದುಗೂಡಿಸಲು ಪ್ರಯತ್ನಿಸಿದರು. ವಿವಾಹವಾಗಿ ಇಬ್ಬರು ಮಕ್ಕಳ ತಂದೆಯಾದ ಇವರು ಯಾವುದೇ ವೃತ್ತಿಯಲ್ಲಿ ಆಸಕ್ತಿ ಹೊಂದದೆ ಜೀವಮಾನವನ್ನೆಲ್ಲಾ ಯಾತ್ರೆಯಲ್ಲಿ ಕಳೆದರು. ತಮ್ಮ ಚಿಕ್ಕ ಪದ್ಯಗಳ ಮೂಲಕ ಬೋಧನೆಯನ್ನು ಮಾಡಿದರು. ಇವುಗಳನ್ನು ಆದಿ ಗ್ರಂಥದಲ್ಲಿ ಸಂಗ್ರಹಿಸಲಾಗಿದೆ, ಇದೇ ಸಿಖ್‌ರ ಪವಿತ್ರ ಗ್ರಂಥ. ಗುರುನಾನಕ್‌ರು ಪುರೋಹಿತಶಾಹಿ ಪದ್ಧತಿ, ಗ್ರಂಥಗಳ ಕುರುಡು ನಂಬಿಕೆ, ಜಾತಿ ಪದ್ಧತಿ, ಅನಾಗತ್ಯ ಧಾರ್ಮಿಕ ಪದ್ಧತಿಗಳು ಹಾಗೂ ಧರ್ಮಗಳ ತಾರತಮ್ಯಗಳನ್ನು ಸಂಪೂರ್ಣವಾಗಿ ವಿರೋಧಿಸಿದರು. ವಿಶ್ವಭ್ರಾತೃತ್ವ ಹಾಗೂ ದೈವೀ ಪ್ರೀತಿಯನ್ನು ಬೋಧಿಸಿದರು. ಗುರು ಭಕ್ತಿಯಲ್ಲಿ ಅಚಲ ನಂಬಿಕೆಯನ್ನಿಟ್ಟಿದ್ದ ಗುರುನಾನಕರಿಗೆ ಕಬೀರದಾಸರೇ ಗುರುವಾಗಿ ಆಧ್ಯಾತ್ಮಿಕ ಸ್ಫೂರ್ತಿಯಾಗಿದ್ದರು. ಗುರುನಾನಕರು ವಿಗ್ರಹಾರಾಧನೆಯನ್ನು ವಿರೋಧಿಸಿದರು. ಉದಾರ ಸತ್ಯ ಮತ್ತು ನೈತಿಕವಾದ ಮೌಲ್ಯಗಳುಲ್ಲ ಜೀವನಕ್ಕೆ ಪ್ರಾಮುಖ್ಯತೆ ನೀಡಿದರು, ಕರ್ಮಸಿದ್ಧಾಂತವನ್ನು ಒಪ್ಪಿಕೊಂಡರು. ಮುಕ್ತಿ ಪಡೆಯಲು ಗುರುವಿನ ಮಾರ್ಗದರ್ಶನ ಬೇಕು, ಆ ಮೂಲಕ ದೇವರ ಸಾನಿಧ್ಯ ಪಡೆಯಲು ಸಾಧ್ಯ. ಪರಿಪೂರ್ಣವಾದ ಶುದ್ಧ ಜೀವನ, ನಡತೆ, ದೇವರಲ್ಲಿ ಭಕ್ತಿ, ಮುಂತಾದವುಗಳು ಜೀವನದಲ್ಲಿ ಮುಕ್ತಿ ಮಾರ್ಗವನ್ನು ತೋರುತ್ತವೆ ಎಂದು ಗುರುನಾನಕರು ಬೋಧಿಸಿದರು. ಹೀಗೆ ಭಕ್ತಿ ಚಳುವಳಿಯ ಸಂತರಾದ ನಾನಕರವರು ಮನಸ್ಸಿನಶುದ್ಧಿ,

ಆತ್ಮದ ನಡತೆ, ಗುರುವಿನಲ್ಲಿ ನಂಬಿಕೆ, ಪ್ರೀತಿ–ಭಕ್ತಿಗಳೇ ದೈವ ಸಾಕ್ಷಾತ್ಕಾರಕ್ಕೆ ಮತ್ತು ಮುಕ್ತಿಯನ್ನು ಪಡೆಯಲು ಸೂಕ್ತ ಮಾರ್ಗಗಳು ಎಂದು ಬೋಧಿಸಿದರು.[೫೬]

**೪. ವಲ್ಲಭಾಚಾರ್ಯ(ಕ್ರಿ.ಶ. ೧೪೭೯)**

೧೫ನೇ ಶತಮಾನದ ಕೊನೆಯ ಭಾಗದಲ್ಲಿ ಜನಿಸಿದ ವಲ್ಲಭಾಚಾರ್ಯರು ಭಕ್ತಿ ಚಳುವಳಿಯಲ್ಲಿ ಮಹತ್ವದ ಪಾತ್ರವನ್ನು ವಹಿಸಿರುವರು. ಇವರು ಕೃಷ್ಣನ ಪರಮ ಭಕ್ತರಾಗಿದ್ದು ಕೃಷ್ಣನ ಆರಾಧನೆಯನ್ನು ಪ್ರಚಾರ ಮಾಡಿದರು. ತೆಲುಗು ರಾಜ್ಯದ ಕಮ್ರಾವರದಲ್ಲಿ ವಾಸಿಸುತ್ತಿದ್ದ ತೈಲಂಗ ಬ್ರಾಹ್ಮಣ ಪಂಗಡದ ಲಕ್ಷ್ಮಣನ ಪುತ್ರನಾಗಿದ್ದನು. ಚಿಕ್ಕ ವಯಸ್ಸಿನಲ್ಲಿಯೇ ತಂದೆ–ತಾಯಿಯರನ್ನು ಕಳೆದುಕೊಂಡ ಇವರು ಜಾಣರಾಗಿದ್ದ, ನಾಲ್ಕು ವೇದಗಳ ಅಧ್ಯಯನವನ್ನು, ಆರು ಶಾಸ್ತ್ರಗಳನ್ನು, ಎಂಟು ಪುರಾಣಗಳನ್ನು ಅಧ್ಯಯನ ಮಾಡಿ ಪಾಂಡಿತ್ಯವನ್ನು ಸಂಪಾದಿಸಿದರು. ಇವರು ತಮ್ಮ ತಾಯ್ನಾಡಿಗೆ ಬಂದಾಗ ದಕ್ಷಿಣದಲಿ ವಿಜಯನಗರ ಸಾಮ್ರಾಜ್ಯವು ರಾರಾಜಿಸುತ್ತಿತ್ತು. ವಿಜಯನಗರದಲ್ಲಿ ಹಲವು ಶೈವ ಪಂಡಿತರನ್ನು ತಮ್ಮ ವಿದ್ವತ್ತಿನ ಮೂಲಕ ಸೋಲಿಸಿದ ವಲ್ಲಭರು ಕೃಷ್ಣದೇವರಾಯನ ಆಸ್ಥಾನದಲ್ಲಿ ಗೌರವಕ್ಕೆ ಪಾತ್ರರಾದರು. ವಿಜಯನಗರದಲ್ಲಿ ವೈಷ್ಣವ ಧರ್ಮವನ್ನು ಪ್ರವರ್ಧಮಾನಕ್ಕೆ ತಂದ ಕೀರ್ತಿ ಇವರದು. ಆತ್ಮ ಮತ್ತು ಪರಮಾತ್ಮ ಬೇರೆ ಬೇರೆ ಎಂದು ಕರೆದ ಈತನ ತತ್ವವನ್ನು ಶುದ್ಧ ದ್ವೈತವೆಂದು ಕರೆಯಲಾಗಿದೆ. ಸುಬೋಧಿನಿ ಮತ್ತು ಸಿದ್ಧಾಂತ ರಹಸ್ಯ ಎಂಬ ಜನಪ್ರಿಯ ಕೃತಿಗಳನ್ನು ಹಾಗೂ ಅನೇಕ ಗ್ರಂಥಗಳನ್ನು ವಲ್ಲಭಾಚಾರ್ಯರು ರಚಿಸಿದರು.

ವಲ್ಲಭಾಚಾರ್ಯರು ಕೃಷ್ಣನನ್ನು ಬ್ರಹ್ಮ ಪುರುಷೋತ್ತಮ ಹಾಗೂ ಪರಮಾನಂದರ ಅವತಾರವೆಂದು ಪ್ರಚಾರ ಮಾಡಿದರು. ಅಲ್ಲಾ ಕೃಷ್ಣಾ ಒಂದೇ ಎಂದು ಮತ್ತು ಕೇವಲ ಪ್ರೀತಿ, ಭಕ್ತಿ ಮಾತ್ರ ಮುಕ್ತಿಯ ಮಾರ್ಗಗಳೆಂದು ಅರಿತು ಅದನ್ನೇ ಕೃಷ್ಣರಲ್ಲಿ ಕಂಡರು. ದೇವರಲ್ಲಿ ಭಾವಪರವಶವಾದ ಪ್ರೀತಿಯನ್ನು ವ್ಯಕ್ತಪಡಿಸಿದ ವಲ್ಲಭಾಚಾರ್ಯರು ಸಂಗೀತ, ನೃತ್ಯ, ಪದ್ಯಗಳ ಸಂಗ್ರಹ, ಚಿತ್ರಕಲೆ ಮುಂತಾದವುಗಳನ್ನು ರೂಢಿಸಿಕೊಂಡಿದ್ದರು. ಈತನ ಮಗನಾದ ವಿಠ್ಠಲನಾಥನು ಕೃಷ್ಣ ಭಕ್ತಿ ಹಾಗೂ ಕೃಷ್ಣ ಪಂಥವನ್ನು ಮತ್ತಷ್ಟು ಜನಪ್ರಿಯಗೊಳಿಸಿದನು.

**೫. ಚೈತನ್ಯ(ಕ್ರಿ.ಶ. ೧೪೮೫)**

ಚೈತನ್ಯರು ೧೪೮೫ರಲ್ಲಿ ಪಶ್ಚಿಮ ಬಂಗಾಳದಲ್ಲಿ ಜನಿಸಿದರು. ರಮಾನಂದ ಮತ್ತು ಕಬೀರಗಿಂತ ಭಿನ್ನವಾದ ಭಾವನೆಗಳನ್ನು ಹೊಂದಿದ್ದನು. ಇವನು ಬ್ರಾಹ್ಮಣನಾಗಿದ್ದು, ಇವನು ಚಾಂಡಾಲ ಅಥವಾ ಇವನೂ ಅಂದರೆ ಮುಸಲ್ಮಾನ ಬೇಧವನ್ನು ಪರಿಗಣಿಸುತ್ತಿರಲಿಲ್ಲ. ಇವರು ಭಕ್ತಿ ಪಂಥದ ಪ್ರಸಾರಕರಾಗಿದ್ದು, ಇವರ ಮೂಲ ಹೆಸರು ವಿಶ್ವಂಭರ. ಎರಡು ಬಾರಿ ವಿವಾಹವಾಗಿದ್ದ ಇವರು ೨೨ನೇ ವಯಸ್ಸಿನಲ್ಲಿ ಈಶ್ವರಪುರಿ ಎಂಬ ಗುರುವಿನ ಬಳಿ ಕೃಷ್ಣ ಮಂತ್ರವನ್ನು ಕಲಿತು ೨೪ನೇ ವಯಸ್ಸಿನಲ್ಲಿ ಸನ್ಯಾಸವನ್ನು ಸ್ವೀಕರಿಸಿದನು. ಈತನು ಭಾರತಾದ್ಯಂತ ಸಂಚರಿಸಿ ಭಕ್ತಿ ಪಂಥವನ್ನು ಪ್ರಸರಿಸಿದನು. ಕೃಷ್ಣನ ಭಾವುಕ ಭಕ್ತರಾಗಿದ್ದ ಚೈತನ್ಯರು ಕೃಷ್ಣನ ಮೂರ್ತಿ ಎದುರು ಹಲವಾರು ಸಲ ನಗುವುದು, ಅಳುವುದು ಮತ್ತು ಎಚ್ಚರ ತಪ್ಪುವಂತಹ ಕೃತ್ಯಗಳನ್ನು ತಮ್ಮ ಜೀವನದಲ್ಲಿ ನಡೆಸಿದ್ದಾರೆ. ಕೀರ್ತನಕ್ಕೆ ಪ್ರಾಮುಖ್ಯತೆ ನೀಡಿದ ಇವರು ಜನಸಮೂಹದಲ್ಲಿ ವಾದ್ಯಮಯ ಕೀರ್ತನೆ ಮತ್ತು ಹಾಡುಗಳನ್ನು ಹಾಡಿ ಶಿಷ್ಯರೊಂದಿಗೆ ಧಾರ್ಮಿಕ ಭಕ್ತಿ ಪರವಶೆಯಿಂದ ನೃತ್ಯ ಮಾಡುತ್ತಿದ್ದರು. ಚೈತನ್ಯ ಮತ್ತು ಅವರ ಅನುಯಾಯಿಗಳಿಂದ ಬೃಂದಾವನವು ಪವಿತ್ರ ಧಾರ್ಮಿಕ ಸ್ಥಳವಾಯಿತು. ದೇವರ ಸಾನಿಧ್ಯ ಮತ್ತು ಮುಕ್ತಿಗಾಗಿ ಭಕ್ತಿ ಮತ್ತು ಪ್ರೀತಿಗಳೇ ಪ್ರಮುಖವೆಂದು ಸಾರಿದರು. ಈತನು ಪುರೋಹಿತಶಾಹಿಯನ್ನು ವಿರೋಧಿಸಿದನು.

ಪ್ರತಿಯೊಂದು ಜಾತಿಯವರು ಕೃಷ್ಣನನ್ನು ಭಜಿಸಬಹುದು ಮತ್ತು ಆರಾಧಿಸಬಹುದು ಎಂದು ಹೇಳಿದರೂ ಸಹ ಮುಸ್ಲಿಂರಿಗೆ ಮತ್ತು ಶೂದ್ರರಿಗೆ ಮಂದಿರ ಪ್ರವೇಶಕ್ಕೆ ವಿರೋಧಿಸಿದನು. ಸಹನೆ ಮತ್ತು ಪ್ರೀತಿಗಳಿಂದ ಬಾಳುವುದೇ ಈತನ ಬೋಧನೆಯ ಮುಖ್ಯ ತತ್ವಗಳಾಗಿದ್ದವು. ಭಕ್ತಿ ಮತ್ತು ಪ್ರೇಮದ ಪ್ರಾಮುಖ್ಯತೆಯನ್ನು ತಿಳಿಸಿ, ತಮ್ಮ ಕೀರ್ತನೆಗಳಿಂದ ವೈಷ್ಣವರಲ್ಲಿ ಹೆಚ್ಚು ಜನಪ್ರಿಯರಾದ ಚೈತನ್ಯರು ಮಧ್ಯಯುಗೀನ ಭಾರತದ ಭಕ್ತಿ ಚಳುವಳಿಯ ಸಂತರೆಂದು ಹೇಳಬಹುದು.

**೬. ಮೀರಾಬಾಯಿ(ಕ್ರಿ.ಶ. ೧೫೦೩)**

೧೫ನೇ ಶತಮಾನದಲ್ಲಿದ್ದ ಮೀರಾಬಾಯಿಯವರು ಭಕ್ತಿ ಚಳುವಳಿಯಲ್ಲಿ ಸ್ತ್ರೀಯರ ಪಾತ್ರವು ಅಮೋಘವಾದದ್ದು ಎಂಬುದಕ್ಕೆ ಶ್ರೇಷ್ಠ ಉದಾಹರಣೆಯಾದರು. ಅಜಮೀರದ ಮೆರ್ತಾ ಗ್ರಾಮದಲ್ಲಿ ಸರದಾರ ರತ್ನಸಿಂಗ್‌ನ ಮಗಳಾಗಿ ಜನಿಸಿದ ಮೀರಾಬಾಯಿ, ೧೫೧೬ರಲ್ಲಿ ಮೇವಾಡದ ರಾಜಕುಮಾರ ಭೋಜರಾಜನೊಂದಿಗೆ ವಿವಾಹವಾಯಿತು. ಚಿಕ್ಕ ವಯಸ್ಸಿನಲ್ಲಿಯೇ ಪತಿಯನ್ನು ಕಳೆದುಕೊಂಡ ಈಕೆಗೆ ಮಕ್ಕಳಿರಲಿಲ್ಲ. ಆರಂಭದಿಂದಲೇ ಅಪಾರ ಭಕ್ತಿಯನ್ನು ದೇವರಲ್ಲಿ ಹೊಂದಿದ್ದ ಈಕೆ ಅರಮನೆಗೆ ಸಾಧು-ಸಂತರನ್ನು ಆಹ್ವಾನಿಸಿ ಧಾರ್ಮಿಕ ಸಭೆಗಳನ್ನು ನಡೆಸುತ್ತಿದ್ದಳು. ವಿಧವೆಯಾದ ಈಕೆಯ ಚಟುವಟಿಕೆಗಳು ಅರಮೆಯಲ್ಲಿ ಇರುವವರಿಗೆ ಹಿಡಿಸಲಿಲ್ಲವಾದ್ದರಿಂದ ಅರಮನೆಯನ್ನು ತೊರೆಯಲು ಮೀರಾಬಾಯಿ ನಿರ್ಧರಿಸಿದಳು. ಲೌಕಿಕ ಜಗತ್ತನ್ನು ಧಿಕ್ಕರಿಸಿದ ಕೃಷ್ಣನ ಪರಮ ಭಕ್ತೆಯಾದ ಮೀರಾಬಾಯಿ ಸಂತ ರವಿದಾಸರಿಂದ ಆಧ್ಯಾತ್ಮಿಕ ದೀಕ್ಷೆಯನ್ನು ಪಡೆದಳು. ಮೀರಾಬಾಯಿಯವರ ಪದ್ಯಗಳನ್ನು 'ಪದಾವಳಿ' ಎಂಬ ಗ್ರಂಥದಲ್ಲಿ ಸಂಗ್ರಹಿಸಲಾಗಿದೆ. ಕೃಷ್ಣನ ಲೀಲೆಗಳನ್ನು ಮತ್ತು ಆತನ ವರ್ಣನೆಗಳ ಪದಗಳನ್ನು ಹಾಡುತ್ತಾ, ನೃತ್ಯ ಮಾಡುತ್ತಾ ಮೀರಾಬಾಯಿ ತನ್ನನ್ನು ತಾನೇ ಮರೆಯುತ್ತಿದ್ದಳು. ಈಕೆಯ ಕೀರ್ತನೆಗಳು ಅಪಾರ ಜನಪ್ರಿಯತೆಯನ್ನು ಗಳಿಸಿದವು ಮತ್ತು ಕೃಷ್ಣನ ಭಕ್ತೆಯಾದ ಮೀರಾಬಾಯಿಯವರ ಹಾಡು ಮತ್ತು ಭಜನೆಗಳು ಮಧ್ಯಯುಗದ ಬಹಮನಿ ಕಾಲದಲ್ಲಿದ್ದ ಅನಿಶ್ಚತೆಯನ್ನು ಮತ್ತು ಸಾಮಾಜಿಕ ಸಾಮರಸ್ಯಕ್ಕೆ ಕಾರಣಕರ್ತೃವಾದವು ಎಂದು ಪ್ರಸ್ತುತ ಅಧ್ಯಾಯದಲ್ಲಿ ನೋಡಬಹುದು.[೫೭]

**೩.೫.೩ ಭಕ್ತಿ ಪಂಥದ ದಾಸರು**

**೧. ಪುರಂದರದಾಸ**

ಪುರಂದರದಾಸರು ಕ್ರಿ.ಶ. ೧೪೮೪ರಲ್ಲಿ ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲೂಕಿನ ಕ್ಷೇಮಪುರದಲ್ಲಿ ಜನಿಸಿದರು. ಇವರ ಮೊದಲಿನ ಹೆಸರು ಶ್ರೀನಿವಾಸನಾಯಕ, ತಂದೆ ವರದಪ್ಪನಾಯಕ ಮತ್ತು ತಾಯಿ ಲಕ್ಷ್ಮೀದೇವಿ. ವರದಪ್ಪನಾಯಕರು ಲೇವಾದೇವಿ ವೃತ್ತಿಯನ್ನು ಮಾಡುತ್ತಿದ್ದರು. ಅನೇಕ ವರ್ಷಗಳ ಕಾಲ ಮಕ್ಕಳಾಗದ ಕಾರಣ ತಿರುಪತಿಯ ಶ್ರೀನಿವಾಸನಿಗೆ ಪ್ರಾರ್ಥನೆ ಸಲ್ಲಿಸಿದ ಮೇಲೆ ಶ್ರೀನಿವಾಸನಾಯಕನ ಜನನವಾಯಿತು ಎಂಬ ನಂಬಿಕೆ ಇದೆ, ಈ ಕಾರಣದಿಂದಲೇ ಆತನಿಗೆ ಶ್ರೀನಿವಾಸ ಎಂದು ನಾಮಕರಣ ಮಾಡಿದರು. ಶ್ರೀನಿವಾಸನಾಯಕನು ಬೆಳೆದ ನಂತರ ತಂದೆಯ ವೃತ್ತಿಯನ್ನೇ ಮುಂದುವರೆಸಿದನು. ಅತ್ಯಂತ ಜಿಪುಣನೆಂದು ಹೆಸರುವಾಸಿಯಾಗಿದ್ದ ಶ್ರೀನಿವಾಸನು, ತಂದೆ ಅಸ್ವಸ್ಥರಾದಾಗಲೂ ಸಹ ಹಣ ಖರ್ಚು ಮಾಡಲು ಇಂದು-ಮುಂದು ಆಲೋಚಿಸಿದನು. ಶ್ರೀನಿವಾಸನ ಪತ್ನಿಯಾದ ಸರಸ್ವತಿಯು ದಾನಶೀಲೆ ಯಾಗಿದ್ದುದರಿಂದ ಪತಿ ಶ್ರೀನಿವಾಸನ ಕೋಪವು ಅವಳ ಮೇಲೆ ಸದಾ ಇರುತ್ತಿತ್ತು. ಮೂಲತಃ ಅವರ ಸಂಸಾರವು ಪಂಡರಾಪುರದಲ್ಲಿದ್ದು, ನಂತರದ ವರ್ಷಗಳಲ್ಲಿ ಹಂಪೆಯಲ್ಲಿದ್ದರೆಂದು ಚರಿತ್ರೆ ತಿಳಿಸುತ್ತದೆ.

ಪುರಂದರದಾಸರು ತಮ್ಮ ಕೀರ್ತನೆಗಳಲ್ಲಿ ಸಮಾಜದ ವಿಮರ್ಶೆಯನ್ನು ಮಾಡುತ್ತಾ, ಅನೀತಿ, ಅನಾಚಾರ, ಸುಳ್ಳು, ಕಪಟ, ಬೂಟಾಟಿಕೆ, ಆಡಂಬರಗಳನ್ನು ಕಟುವಾಗಿ ಟೀಕಿಸಿದರು. ಒಮ್ಮೆ ವಿಷ್ಣುವು ಬಡಬ್ರಾಹ್ಮಣನ ವೇಷದಲ್ಲಿ ಶ್ರೀನಿವಾಸನ ಅಂಗಡಿಗೆ ಬಂದು ಮಗನ ಉಪನಯನಕ್ಕೆ ಹಣ ಬೇಡಿದನಂತೆ. ಜಿಪುಣನಾದ ಶ್ರೀನಿವಾಸನು ಪ್ರತಿ ದಿನವೂ ಮಾರನೆ ದಿನ ಬಾ ಎಂದು ಅವನಿಗೆ ಹೇಳುತ್ತಿದ್ದನಂತೆ, ಹೀಗೆ ಆರು ತಿಂಗಳು ಕಾಲ ಮುಂದು ಹಾಕಿದನಂತೆ. ಕೊನೆಗೆ ಬ್ರಾಹ್ಮಣನ ಕಾಟ ತಾಳಲಾರದೆ ಶ್ರೀನಿವಾಸನು ಒಂದು ಸವಕಲು ನಾಣ್ಯವನ್ನು ಕೊಟ್ಟನಂತೆ, ಮಾರನೇ ದಿನ ಅದೇ ಬ್ರಾಹ್ಮಣನು ಮನೆಗೆ ಬಂದು ಸರಸ್ವತಿಯ ಬಳಿ ತನ್ನ ಮಗನ ಉಪನಯನದ ಬಗ್ಗೆ ಹೇಳಿ ಅವಳಿಂದ ಸಹಾಯವನ್ನು ಯಾಚಿಸುತ್ತಾನೆ, ಸರಸ್ವತಿಯು ಮರುಕದಿಂದ ತನ್ನ ಬಳಿ ಯಾವುದೇ ಆಭರಣಗಳಿಲ್ಲವೆಂದು, ಎಲ್ಲವೂ ಗಂಡನ ಬಳಿ ಇವೆ ಎಂದು, ಅವರ ಅನುಮತಿ ಇಲ್ಲದೆ ಏನನ್ನೂ ಕೊಡುವ ಪರಿಸ್ಥಿತಿಯಲ್ಲಿಲ್ಲವೆಂದು ಬೇಸರ ವ್ಯಕ್ತಪಡಿಸುತ್ತಾಳೆ. ಆಗ ಬ್ರಾಹ್ಮಣನು ನಿನ್ನ ತವರಿನವರು ನಿನಗೆ ಕೊಟ್ಟ ಮೂಗುತಿಯ ಮೇಲೆ ನಿನ್ನ ಅಧಿಕಾರವಿದೆ, ಅದನ್ನೇ ಕೊಡು ಎಂದಾಗ ಅವನಿಗೆ ತನ್ನ ಮೂಗುತಿಯನ್ನು ತೆಗೆದು ಕೊಟ್ಟಳಂತೆ. ಬ್ರಾಹ್ಮಣ ತಕ್ಷಣ ಮೂಗುತಿಯನ್ನು ಶ್ರೀನಿವಾಸನ ಅಂಗಡಿಗೆ ಒಯ್ದು ಅಡವಿಡಲು ಪ್ರಯತ್ನಿಸಿದನಂತೆ, ಶ್ರೀನಿವಾಸನು ಆ ಮೂಗುತಿಯನ್ನು ಗುರುತಿಸಿ ಹಣಕ್ಕೆ ನಾಳೆ ಬರುವಂತೆ ಬ್ರಾಹ್ಮಣನಿಗೆ ಹೇಳಿ, ಅದನ್ನು ಡಬ್ಬಿಯಲ್ಲಿಟ್ಟು ತಕ್ಷಣವೇ ಮನೆಗೆ ಬಂದು ಪತ್ನಿಯ ಬಳಿ ಮೂಗುತಿಯನ್ನು ತೋರಿಸು ಎಂದು ಕೇಳಿದನಂತೆ, ಹೆದರಿದ ಹೆಂಡತಿಯು ಸ್ನಾನ ಮಾಡುವಾಗ ತೆಗೆದಿಟ್ಟಿದ್ದೆ ತರುತ್ತೇನೆಂದು ಒಳಗೆ ಹೋಗಿ ಸ್ನಾನದ ಮನೆಯಲ್ಲಿ ವಿಷ ಕುಡಿಯುವ ಪ್ರಯತ್ನ ನಡೆಸಿದಾಗ ಅವಳ ವಿಷದ ಬಟ್ಟಲಿನಲ್ಲಿ ಮೇಲಿಂದ ಮೂಗುತಿ ಬಿದ್ದಿತಂತೆ. ಅದನ್ನು ತಂದು ಶ್ರೀನಿವಾಸನಿಗೆ ಕೊಡುತ್ತಾಳೆ. ಅಂಗಡಿಗೆ ಹಿಂದಿರುಗಿ ಬಂದ ಶ್ರೀನಿವಾಸನು ಡಬ್ಬಿಯನ್ನು ತೆಗೆದು ನೋಡಿದರೆ ಅಲ್ಲಿದ್ದ ಮೂಗುತಿ ಮಾಯವಾಗಿತ್ತು, ಆಗ ಶ್ರೀನಿವಾಸನಿಗೆ ಬಂದ ಬ್ರಾಹ್ಮಣನು ಬೇರೆ ಯಾರೂ ಅಲ್ಲ, ತನ್ನನ್ನು ಪರೀಕ್ಷಿಸಲು ಸ್ವತಃ ನಾರಾಯಣನೇ ಬ್ರಾಹ್ಮಣ ವೇಷದಲ್ಲಿ ಬಂದಿದ್ದಾನೆಂದು ಅರಿವಾಯಿತು, ತನ್ನ ಬಗ್ಗೆ ತನಗೇ ನಾಚಿಕೆಯಾಗಿ ಶ್ರೀನಿವಾಸನು ತನ್ನ ಶ್ರೀಮಂತಿಕೆಯನ್ನು, ಸಕಲ ಐಶ್ವರ್ಯಗಳನ್ನು ತೊರೆದು ಪರರಿಗೆ ದಾನ ಮಾಡಿ ಹರಿದಾಸನಾಗುವ ನಿರ್ಧಾರ ತೆಗೆದುಕೊಂಡನಂತೆ. ದೇವರ ಕಡೆ ದಾರಿ ತೋರಿಸಿದ್ದಕ್ಕಾಗಿ ಕೃತಜ್ಞತೆಗಾಗಿ ಹೆಂಡತಿಯ ಜ್ಞಾಪಕಾರ್ತ ಒಂದು ಕೀರ್ತನೆಯನ್ನು ಸಹ ಪುರಂದರದಾಸರು ರಚಿಸಿದ್ದಾರೆ. ನಂತರದ ದಿನಗಳಲ್ಲಿ ನಾರಾಯಣನ ಭಕ್ತರಾದ ಪುರಂದರದಾಸರು ಶ್ರೀನಿವಾಸ ನಾಯಕನಿಂದ 'ಪುರಂದರದಾಸ' ಎಂಬ ಹೆಸರನ್ನು ಪಡೆದು ಭಕ್ತಿ ಪಂಥದ ಅನುಯಾಯಿಯಾಗಿ, ಭಕ್ತಿ ಪಂಥದ ಪ್ರಸಾರವನ್ನು ಮಾಡಿದರು. ಪುರಂದರದಾಸರು ತಮ್ಮ ದಾಸರ ಪದಗಳ ಮೂಲಕ ಇಡೀ ಕರ್ನಾಟಕವನ್ನು(ಗುಲ್ಬರ್ಗಾ/ಬೀದರ್) ಮತ್ತು ಮಹಾರಾಷ್ಟ್ರ ಭಾಗಗಳನ್ನು ಸಂಚರಿಸಿ ಭಕ್ತಿ ಪಂಥದ ಪ್ರಚಾರವನ್ನು ಮಾಡಿದರು. ಪುರಂದರದಾಸರ ಪದಗಳು ಪ್ರಾಸ ಮತ್ತು ಅರ್ಥದಲ್ಲಿ ಇಂದಿಗೂ ಶ್ರೀಮಂತವಾಗಿ ಜನಮನಗಳಲ್ಲಿ ಉಳಿದುಕೊಂಡಿವೆ.

ಕರ್ನಾಟಕ ಶಾಸ್ತ್ರೀಯ ಸಂಗೀತದ ಪಿತಾಮಹರಾದ ಪುರಂದರದಾಸರ ಸಾಧನೆಯನ್ನು ಕಂಡ ಸರ್ವರೂ 'ದಾಸರೆಂದರೆ ಪುರಂದರದಾಸರಯ್ಯಾ' ಎಂದು ಕೊಂಡಾಡಿದ್ದಾರೆ. ಪುರಂದರದಾಸರ ಎಲ್ಲಾ ಕೀರ್ತನೆಗಳು ಕನ್ನಡ ಭಾಷೆಯಲ್ಲಿದ್ದು, ಭಕ್ತಿ ಮಾರ್ಗವನ್ನು ಜನಸಾಮಾನ್ಯರಿಗೆ ಪರಿಚಯ ಮಾಡಿಕೊಡುವ ಉದ್ದೇಶವನ್ನು ಹೊಂದಿವೆ. ಶ್ರೀ ಪುರಂದರದಾಸರು ಸುಮಾರು ಐದು ಲಕ್ಷ ಹಾಡುಗಳನ್ನು ರಚನೆ ಮಾಡಿ ತಮ್ಮ ಇಹಲೋಕದ ವ್ಯಾಪಾರವನ್ನು ಮುಗಿಸಿದರು. ಅದೇ ರೀತಿ ಅವರ ಮಗನಾದ ಮಧ್ವಪತಿದಾಸರು ಸುಮಾರು ೨೫ ಸಾವಿರ ಹಾಡುಗಳನ್ನು ರಚನೆ ಮಾಡಿದ್ದಾರೆಂದು ಹೇಳಲಾಗುತ್ತದೆ.[೫೮]

೨. ಕನಕದಾಸರು

ಶ್ರೀ ಕನಕದಾಸರು ಕರ್ನಾಟಕದಲ್ಲಿ ೧೫–೧೬ನೇ ಶತಮಾನಗಳಲ್ಲಿ ಜನಪ್ರಿಯವಾದ ಭಕ್ತಿ ಪಂಥದ ಮುಖ್ಯ ಹರಿದಾಸರಲ್ಲಿ ಒಬ್ಬರು. ದಾಸಪರಂಪರೆಯಲ್ಲಿ ಬರುವ ೨೫೦ಕ್ಕೂ ಹೆಚ್ಚು ದಾಸರಲ್ಲಿ ಕನಕ ದಾಸರೊಬ್ಬರೇ ಶೂದ್ರ ಜಾತಿಗೆ ಸೇರಿದವರಾಗಿದ್ದರು. ಕನಕದಾಸರು ಕನ್ನಡ ಭಾಷೆಯ ಪ್ರಸಿದ್ಧ ಕೀರ್ತನಕಾರರೂ ಹೌದು. ಇವರು ಪುರಂದರದಾಸರೊಂದಿಗೆ ಕರ್ನಾಟಕ ಸಂಗೀತದ ಮೂಲಭೂತ ಸಿದ್ಧಾಂತಗಳಿಗೆ ಕಾಣಿಕೆಯನ್ನಿತ್ತವರು. ಕನಕದಾಸರು ಮತ್ತು ಪುರಂದರದಾಸರನ್ನು ಕರ್ನಾಟಕದ ಕೀರ್ತನ ಸಾಹಿತ್ಯದ ಅಶ್ವಿನಿ ದೇವತೆಗಳೆಂದು ಬಣ್ಣಿಸಲಾಗಿದೆ. ಕನಕದಾಸರು ಮೂಲತಃ ದಂಡನಾಯಕರಾಗಿದ್ದ, ಯುದ್ಧವೊಂದರಲ್ಲಿ ಸೋತ ಅವರಿಗೆ ವೈರಾಜ್ಯ ಉಂಟಾಗಿ ಹರಿಭಕ್ತರಾದರಂತೆ ಎಂಬ ಐತಿಹ್ಯವಿದೆ.

೧೫ನೇ ಶತಮಾನದಲ್ಲಿ ಜನಿಸಿದ ಕನಕದಾಸರು ಕುರುಬ ಜನಾಂಗಕ್ಕೆ ಸೇರಿದವರು. ಹಾವೇರಿ ಜಿಲ್ಲೆಯ ಬಾಡಾ ಹಳ್ಳಿಯ ಕಾಗಿನೆಲೆ ಎಂಬ ಕುಟುಂಬದಲ್ಲಿ ಇವರು ಜನಿಸಿದರು, ಇವರ ತಂದೆಯ ಹೆಸರು ಬೀರೇಗೌಡ ಮತ್ತು ತಾಯಿಯ ಹೆಸರು ಬಚ್ಚಮ್ಮ. ಕನಕದಾಸರ ಮೂಲನಾಮ 'ತಿಮ್ಮಪ್ಪನಾಯಕ'. ಈತನಿಗೆ ಮುಂದೆ ಕನಕನಾಯಕನೆಂದು ಹೆಸರು ಪಡೆದನು. ಈ ಹೆಸರು ಪಡೆಯಲು ಕಾರಣವೆಂದರೆ ತಿಮ್ಮಪ್ಪನಾಯಕನು ತನ್ನ ಬಾಲ್ಯದಲ್ಲಿ ಒಂದು ನಿಧಿಯನ್ನೇ ಶೋಧಿಸಿದ್ದನು, ಆ ನಿಧಿಯ ತುಂಬ ಬಂಗಾರವಿತ್ತು, ಕನಕ ಎಂದರೆ ಬಂಗಾರ. ಕನಕದಾಸನು ಒಳ್ಳೆಯ ವಿದ್ಯಾವಂತನಾಗಿದ್ದು, ವಿರಕ್ತಿಯ ನಂತರ ತನ್ನ ಜೀವನವನ್ನು ಸಂಗೀತ, ಸಾಹಿತ್ಯ ಮತ್ತು ಜ್ಞಾನಾರ್ಜನೆಯ ಸಲುವಾಗಿ ಮುಡುಪಾಗಿಟ್ಟನು. ವಿವಿಧ ಸ್ಥಳಗಳಲ್ಲಿ ಸಂಚಾರ ಮಾಡಿ ಜ್ಞಾನಾರ್ಜನೆ ಮಾಡಿಕೊಂಡ ಕನಕದಾಸರು ತಮ್ಮ ಚಿಕ್ಕ ವಯಸ್ಸಿನಲ್ಲಿಯೇ ನರಸಿಂಹ ಸ್ತೋತ್ರ, ರಾಮ ಧ್ಯಾನ ಮಂತ್ರ ಮತ್ತು ಮೋಹನ ತರಂಗಿಣಿ ಎಂಬ ಸುಂದರ ಕಾವ್ಯಗಳನ್ನು ರಚಿಸಿದರು. ಕನಕದಾಸರು ಕೃಷ್ಣನ ಪರಮ ಭಕ್ತರಾಗಿದ್ದು, ಇವರ ಎಲ್ಲಾ ಸಂಗೀತ ಕೃತಿಗಳು, ಶ್ರೀ ಕೃಷ್ಣನ ಪದ್ಯಗಳು ಮತ್ತು ದಾಸರ ಪದಗಳು 'ಕಾಗಿನೆಲೆ ಆದಿಕೇಶವ' ಎನ್ನುವ ಶ್ರೀ ಕೃಷ್ಣನ ನಾಮದೊಂದಿಗೆ ಕೊನೆಗೊಳ್ಳುತ್ತವೆ. ಕನಕದಾಸರು ತಮ್ಮ ಆಧ್ಯಾತ್ಮಿಕ ತತ್ವಗಳನ್ನು ಜನರಲ್ಲಿ ಪ್ರಚಾರ ಮಾಡಲು ಸಂಗೀತ ಮಾಧ್ಯಮವನ್ನು ಆರಿಸಿಕೊಂಡರು.

ಕನಕದಾಸರಿಗೂ ಮತ್ತು ಉಡುಪಿಗೂ ವಿಶೇಷವಾದ ಸಂಬಂಧವಿದ್ದು, ಇವರು ವ್ಯಾಸರಾಯ ಸ್ವಾಮಿಯರ ಶಿಷ್ಯರಾಗಿದ್ದರು. ವ್ಯಾಸರಾಯ ಮಠದ ವ್ಯಾಸರಾಯ ಸ್ವಾಮಿಯವರ ಕರೆಯ ಮೇರೆಗೆ ಇವರು ಉಡುಪಿಗೆ ಬಂದಿದ್ದರು. ಆ ಸಮಯದಲ್ಲಿ ಜಾತಿ ಬೇಧವು ಉನ್ನತ ಮಟ್ಟದಲ್ಲಿತ್ತು. ಬ್ರಾಹ್ಮಣ ಪೂಜಾರಿಗಳು ಕನಕದಾಸರನ್ನು ಗುಡಿಯನ್ನು ಪ್ರವೇಶಿಸಲು ಬಿಡಲಿಲ್ಲ, ಆದಕಾರಣ ಕನಕದಾಸರು ಗುಡಿಯ ಹೊರಗಡೆಯೇ ನಿಂತು ಕೃಷ್ಣನ ಭಕ್ತಿಗೀತೆಗಳನ್ನು ಹಾಡುತ್ತಾ ಭಜನೆ ಮಾಡಿದರು. ಕನಕದಾಸರ ಭಕ್ತಿಗೆ ಮೆಚ್ಚಿದ ಶ್ರೀ ಕೃಷ್ಣನು ತನ್ನ ಮುಖವನ್ನು ಪಶ್ಚಿಮಕ್ಕೆ ತಿರುಗಿಸಿ ಗೋಡೆಯ ಒಂದು ಕಿಂಡಿಯ ಮೂಲಕ ಕನಕದಾಸನಿಗೆ ದರ್ಶನವನ್ನು ನೀಡಿದನು. ಇಂದಿಗೂ ಉಡುಪಿಯಲ್ಲಿ ಕೃಷ್ಣನ ಗುಡಿಯಲ್ಲಿ ಕೃಷ್ಣನ ಮೂರ್ತಿಯು ಪಶ್ಚಿಮಕ್ಕೆ ತಿರುಗಿದ್ದು ಕನಕನ ಕಿಂಡಿಯನ್ನು ನಾವು ನೋಡಬಹುದು. ಇಂದಿಗೂ ಸಹ ಈ ಕಿಂಡಿಯನ್ನು ಕನಕನ ಕಿಂಡಿಯೆಂದು ಕರೆಯಲಾಗುತ್ತದೆ" ಭಕ್ತರು ಉಡುಪಿಯಲ್ಲಿ ಕನಕನ ಕಿಂಡಿಯ ಮೂಲಕ ಕೃಷ್ಣನ ದರ್ಶನ ಪಡೆಯುವುದು ಒಂದು ಮಹತ್ವವೆಂದು ಆಚರಣೆಗೆ ತಂದಿದ್ದಾರೆ.

ಪರಮಾತ್ಮನ ಪೂಜೆ, ಭಕ್ತಿ ಮತ್ತು ಧ್ಯಾನಗಳು ಎಲ್ಲ ಜಾತಿಗಳಿಗಿಂತಲೂ ಮಿಗಿಲಾದದ್ದು ಎಂದು ಆಗಿನ ಹಿಂದೂ ಸಮಾಜವು ಅಭಿಪ್ರಾಯಪಟ್ಟಿತ್ತು. ಕನಕದಾಸರು ಗುಡಿಯ ಗೋಪುರದ ಮುಂದೆ ಒಂದು

ಸಣ್ಣ ಗುಡುಸಿಲಿನಲ್ಲಿ ವಾಸವಾಗಿದ್ದರೆಂದು ಇತಿಹಾಸ ಹೇಳುತ್ತದೆ. ಕನಕದಾಸರು ಮರಣದ ನಂತರದ ದಿನಗಳಲ್ಲಿ ಅಲ್ಲಿ ಒಂದು ಕನಕದಾಸರ ಮೂರ್ತಿಯನ್ನು ಸ್ಥಾಪಿಸಲಾಗಿದ್ದು, ಇದನ್ನು ಈಗ ಕನಕ ಮಂದಿರವೆಂದು ಕರೆಯುತ್ತಾರೆ. ಕನಕದಾಸರು ಶ್ರೀಕೃಷ್ಣನ ಮೇಲಿಟ್ಟಿದ್ದ ಭಕ್ತಿ ಅಪೂರ್ವವಾದದ್ದು, ಕನಕದಾಸರಿಂದಲೇ ಉಡುಪಿಯು ಹೆಚ್ಚಿನ ಪ್ರಚಾರಕ್ಕೆ ಬಂದಿತು. ಕನಕದಾಸರು ಒಬ್ಬ ಉತ್ತಮ ಸಂಗೀತಗಾರರು, ನಿರ್ಮಾಪಕರು, ಉತ್ತಮ ಕವಿ, ಸಮಾಜ ಸುಧಾರಕರು, ತತ್ವಜ್ಞಾನಿಗಳು ಮತ್ತು ಪ್ರಸಿದ್ಧ ಸಂತರಾಗಿದ್ದು, ತಮ್ಮ ಕೊನೆಯ ದಿನಗಳನ್ನು ತಿರುಪತಿಯಲ್ಲಿ ಕಳೆದರು.

ಧರ್ಮ ಸುಧಾರಕರು ಮತ್ತು ಭಕ್ತಿ ಆಂದೋಲನದ ಹರಿಕಾರರು ಪೌರೋಹಿತ್ಯಶಾಹಿ ಮಾಧ್ಯಮವಾದ ಸಂಸ್ಕೃತ ಭಾಷೆಯನ್ನು ಬಳಕೆ ಮಾಡದೇ ಜನಸಾಮಾನ್ಯವಾದ ಆಡು ಭಾಷೆಯಲ್ಲಿಯೇ ತಮ್ಮ ತತ್ವಗಳನ್ನು, ವಚನಗಳನ್ನು ಮತ್ತು ಕವಿತೆಗಳನ್ನು ನಾಡಿನಾದ್ಯಂತ ಹಾಡಿದರು ಮತ್ತು ಸಾರಿದರು. ಈ ಕಾರಣಕ್ಕಾಗಿಯೇ ಆಂದೋಲನವು ಯಶಸ್ವಿಯಾಯಿತೆಂದು ಹೇಳಬಹುದು. ತತ್ವಗಳ ಬೋಧನೆಯನ್ನು ಎಲ್ಲರಿಗೂ ತಿಳಿಯುವಂತೆ ಜನಸಾಮಾನ್ಯರ ಆಡು ಭಾಷೆಯಲ್ಲಿ ತಿಳಿಸಿಕೊಟ್ಟು, ಬೋಧಿಸಿದ ಅವರ ವೈಖರಿಯು ಮಾನವನ ಮನೋವೈಶಾಲ್ಯವನ್ನು ವೃದ್ಧಿಪಡಿಸಿ, ಅತ್ಯಂತ ಕೆಳದರ್ಜೆಯ ಮನಸ್ಸಿಗೂ ಮುಟ್ಟುವಂತೆ ಮಾಡಿತು. ಅವರ ತತ್ವಗಳನ್ನು ಪ್ರತಿಯೊಬ್ಬ ಮಾನವನು ಅರ್ಥೈಸಿಕೊಂಡು ತಮ್ಮ ತಮ್ಮ ಆತ್ಮಶುದ್ಧಿ ಮತ್ತು ಮನಃಶುದ್ಧಿಗಳನ್ನು ಮಾಡಿಕೊಳ್ಳುವಲ್ಲಿ ಸಹಕಾರಿಯಾಯಿತು.

ಈ ಭಕ್ತಿ ಆಂದೋಲನವು ಹಿಂದೂಗಳಲ್ಲಿ ಮನೆಮಾಡಿದ್ದಂತಹ ಪುರಾತನವಾದ ಮೂಢನಂಬಿಕೆಗಳನ್ನು, ವಿಗ್ರಹಾರಾಧನೆಯನ್ನು, ಯಜ್ಞಯಾಗಾದಿಗಳ ಪರಂಪರೆ ಮತ್ತು ಆಚಾರಗಳನ್ನು, ವೇದ-ಉಪನಿಷತ್ತುಗಳ ಪ್ರಭಾವವನ್ನು ಕಡಿಮೆಗೊಳಿಸುವಲ್ಲಿ ಯಶಸ್ವಿಯಾಯಿತು. ಭಕ್ತಿ ಆಂದೋಲನವು ಕೇವಲ 'ಭಕ್ತಿಯೊಂದೇ ಸಾಕ್ಷಾತ್ಕಾರಕ್ಕೆ ತಳಹದಿ' ಎಂದು ಘೋಷಿಸಿತು. ಜನರು ಇವರ ತತ್ವಗಳನ್ನು ಅರಿತು ವೇದೋಪನಿಷತ್ತುಗಳ ಆಚರಣೆಗಳನ್ನು ಕೈಬಿಟ್ಟರು. ಪೌರೋಹಿತ್ಯಶಾಹಿಯ ವರ್ಚಸ್ಸು ಕಡಿಮೆಗೊಂಡಿತು. ಹಿಂದೂ ಧರ್ಮದಲ್ಲಿ ಮನೆಮಾಡಿಕೊಂಡಿದ್ದ ಜಡತ್ವವನ್ನು ನಿಗ್ರಹಿಸಿ ಭಕ್ತಿಯ ಪ್ರಾಧಾನ್ಯತೆಯನ್ನು ಎತ್ತಿ ತೋರುವಲ್ಲಿ ಭಕ್ತಿ ಪಂಥದ ಹರಿಕಾರರಾದಂತಹ ಆ ಕಾಲದ ಬಸವೇಶ್ವರರು, ರಮಾನಂದರು, ಕಬೀರರು, ವಲ್ಲಭಾಚಾರ್ಯರು, ಚೈತನ್ಯರು, ಮೀರಾಬಾಯಿ, ತುಳಸಿದಾಸ, ಕನಕದಾಸ, ಅಕ್ಕಮಹಾದೇವಿ ಮೊದಲಾದ ಅನೇಕ ಸಂತರು ಕಾರ್ಯನಿರ್ವಹಿಸಿ, ತಮ್ಮನ್ನು ತಾವೇ ಈ ಭಕ್ತಿಯ ಮಹಾಕಾರ್ಯದಲ್ಲಿ ಸಮರ್ಪಿಸಿಕೊಂಡಿದ್ದರು. ೧೩-೧೪ನೇ ಶತಮಾನದಲ್ಲಿ ಕರ್ನಾಟಕದಲ್ಲಿ ಇದ್ದಂತಹ ಪ್ರಮುಖ ಭಕ್ತಿ ಪಂಥದ ಹರಿಕಾರರೆಂದರೆ ಬಸವೇಶ್ವರರು, ಅಲ್ಲಮಪ್ರಭು, ಚನ್ನಬಸವಣ್ಣ, ಅಕ್ಕಮಹಾದೇವಿ, ನೀಲಾಂಬಿಕೆ, ಗಂಗಾಂಬಿಕೆ, ಮುಂತಾದವರು. ಇವರ ನಂತರ ೧೫ನೇ ಶತಮಾನದಲ್ಲಿ ದಾಸರು ತಮ್ಮದೇ ಆದಂತಹ ಸಾಹಿತ್ಯದ ಮೂಲಕ ಸಮಾಜದಲ್ಲಿ ನೆಲೆಸಿದ್ದಂತಹ ಗೊಡ್ಡು ಸಂಪ್ರದಾಯಗಳಿಗೆ ತಿಲಾಂಜಲಿ ನೀಡುವಲ್ಲಿ ಯಶಸ್ವಿಯಾದರು.[೬೦]

ಕರ್ನಾಟಕದಲ್ಲಿ ಆ ಕಾಲದಲ್ಲಿ ಪ್ರವರ್ಧಮಾನಕ್ಕೆ ಬಂದಂತಹ ವೀರಶೈವ ಧರ್ಮವು ಅನೇಕ ಅಂಶಗಳಲ್ಲಿ ಇಸ್ಲಾಮಿಕ್ ಚಿಂತನೆಗಳಿಗೆ ನಿಕಟವಾಗಿರುವುದು ಕಂಡುಬರುತ್ತದೆ. ಭಗವಂತನ ಕಲ್ಪನೆಯನ್ನು ವೀರಶೈವ ಮತ್ತು ಇಸ್ಲಾಮಿಕ್ ಧರ್ಮಗಳಲ್ಲಿ ಒಂದೇ ರೀತಿಯಾಗಿ ಬಿಂಬಿಸಿರುವುದು ಕಂಡುಬರುತ್ತದೆ. ದೇವರು ಅನಂತ, ಸ್ವತಂತ್ರ, ಅಗೋಚರ, ಅತ್ಯುನ್ನತವಾದ ಕಾಂತಿಯುಳ್ಳವನು, ಪರಮೋನ್ನತ ಆನಂದವುಳ್ಳವನು ಮತ್ತು ಸಕಲ ಪರಿವರ್ತನೆಗಳಿಗು ಅತೀತವಾದ ಸಕಲ ಭೌತಿಕತೆಗಳನ್ನು ಮೀರಿದಂತಹ ಭವ್ಯತತ್ವ ಬಸವೇಶ್ವರರು ತಮ್ಮ ವಚನಗಳ ಮೂಲಕ ಜನರ ಮನಸ್ಸನ್ನು ಗೆದ್ದು, ಜನರಲ್ಲಿ ಮನೆಮಾಡಿದ್ದ ಮೌಢ್ಯತೆ ಮತ್ತು

ಧರ್ಮಾಂಧಕಾರಗಳನ್ನು ಕಿತ್ತೆಸೆಯಲು ಪ್ರಯತ್ನಿಸಿದರು. ತಮ್ಮೆಲ್ಲಾ ಐಶ್ವರ್ಯವನ್ನು, ವೈಭವವನ್ನು ತೊರೆದು ಜನತೆಯ ಉದ್ಧಾರಕ್ಕಾಗಿ ತಮ್ಮ ಜೀವನವನ್ನೇ ಮುಡಿಪಾಗಿಟ್ಟಂತಹ ಮಹಾನುಭಾವರು ಬಸವೇಶ್ವರರು. 'ಕಲಬೇಡ ಕೊಲಬೇಡ, ಹುಸಿಯ ನುಡಿಯಲು ಬೇಡ, ಅನ್ಯರಿಗೆ ಅಸಹ್ಯ ಪಡಬೇಡ, ಇದೇ ಬಹಿರಂಗ ಶುಧ್ಧಿ, ಇದೇ ಅಂತರಂಗ ಶುದ್ಧಿ, ಇದೇ ನಮ್ಮ ಕೂಡಲಸಂಗಮನನ್ನು ಒಲಿಸುವ ಪರಿ" ಎಂದು ಬಸವಣ್ಣನವರ ತಮ್ಮ ವಚನಗಳಲ್ಲಿ ಹೇಳಿದ್ದಾರೆ. "ದಯೆಯಿಲ್ಲದ ಧರ್ಮವಾವುದಯ್ಯ? ದಯೆಯೇ ಧರ್ಮದ ಮೂಲವಯ್ಯ" ಎಂದಿದ್ದಾರೆ. "ಲೋಕವೆಂಬುದು ಕರ್ತಾರನ ಕಮ್ಮಟವಯ್ಯ, ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯ" ಎಂದು ಹೇಳಿ ಬಸವಣ್ಣನವರು ಉತ್ತಮ ಆಚಾರ ಮತ್ತು ವಿಚಾರಗಳ ಪ್ರಾಮುಖ್ಯತೆಯನ್ನು ತೋರಿಸಿಕೊಟ್ಟಿದ್ದಾರೆ.

ಮಧ್ಯಯುಗೀನ ಕಾಲದಲ್ಲಿ ವಚನಸಾಹಿತ್ಯದ ಮೂಲಕ ವೀರಶೈವ ಧರ್ಮ ಪ್ರಚಾರಕ್ಕೆ ಬಂದು, ಬಸವೇಶ್ವರರ ಜೊತೆಗೆ ಅವರ ಅನೇಕ ಭಕ್ತ ಅನುಯಾಯಿಗಳ ಪಾತ್ರವು ಬಹುಮಹತ್ವದ್ದಾಗಿದೆ. ಅಲ್ಲಮಪ್ರಭು ಮತ್ತು ಅಕ್ಕಮಹಾದೇವಿಯರಂತಹ ವಚನಕಾರರ ಕಾರ್ಯಗಳು ಭಕ್ತಿ ಪಂಥವನ್ನು ಮುನ್ನಡೆಸುವಲ್ಲಿ ಕೈಗೊಂಡ ಪರಿಶ್ರಮಗಳು ಶ್ಲಾಘನೀಯ. ನಿಜಗುಣ ಶಿವಯೋಗಿಗಳು, ತೋಂಟದಾರ್ಯ ಸಿದ್ಧಲಿಂಗ ಶಿವಯೋಗಿಗಳು ಕೂಡಾ ಮಧ್ಯಕಾಲೀನ ಜನತೆಗೆ ಆತ್ಮಶುದ್ಧಿಯ ಮಾರ್ಗವನ್ನು ತೋರಿಸಿದ ಮಹಾನುಭಾವರು. ಇದೇ ರೀತಿ ವೈಷ್ಣವ ಧರ್ಮವೂ ಕೂಡ ಮಧ್ಯಕಾಲೀನ ಯುಗದಲ್ಲಿ ತನ್ನ ಪ್ರಾಮುಖ್ಯತೆಯನ್ನು ಸ್ಥಾಪಿಸಿಕೊಂಡು, ವೈಷ್ಣವ ಧರ್ಮಕ್ಕೆ ಸೇರಿದ ಹರಿದಾಸರು ಭಕ್ತಿ ಚಳುವಳಿಯಲ್ಲಿ ಪ್ರಮುಖ ಪಾತ್ರವನ್ನು ವಹಿಸಿದರು. ಪ್ರೀತಿ, ವಿಶ್ವಾಸ, ನಿರಾಡಂಬರತೆ, ಜಾತಿಯ ನಿಗ್ರಹ, ಲಿಂಗಬೇಧಗಳ ನಿವಾರಣೆಯನ್ನು ಮಾಡಿ, ಭಕ್ತಿಯೊಂದೇ ಮೋಕ್ಷ ಸಾಧನೆಯ ಅತ್ಯುನ್ನತ ಮಾರ್ಗವೆಂದು ಹರಿದಾಸರು ಹಾಡಿ ಹೊಗಳಿರುವರು. ತಮ್ಮ ಗೀತೆಗಳ ಮೂಲಕ ಜನರನ್ನು ಆಕರ್ಷಿಸಿದವರಲ್ಲಿ ಪುರಂದರದಾಸರು ಮತ್ತು ಕನಕದಾಸರು ಪ್ರಮುಖರಾದವರು. ಇದಕ್ಕೂ ಪೂರ್ವದಲ್ಲಿ ರಾಮಾನುಜರು ಭಕ್ತಿ ಪಂಥಕ್ಕೆ ಮೂಲ ತಳಹದಿಯನ್ನು ಹಾಕಿದ್ದರು. ಶಂಕರಾಚಾರ್ಯರು ಬೋಧಿಸಿದ ಅದ್ವೈತ ತತ್ವವು ಸುಪ್ರಸಿದ್ಧ ತತ್ವವಾಗಿ ಪರಮೋನ್ನತಿ ಪಡೆಯಿತು. ಹಿಂದಿ ಭಾಷೆಯಲ್ಲಿ ಭಕ್ತಿ ಪಂಥದ ತತ್ವಗಳನ್ನು ಬೋಧಿಸಿದ ಕೀರ್ತಿಯು ಪ್ರಥಮ ಬಾರಿಗೆ ರಮಾನಂದರಿಗೆ ಸಲ್ಲುತ್ತದೆ. ಈ ಬೋಧನೆಗಳಲ್ಲಿ ರಮಾನಂದರು ಮಾನವನು ಜಾತಿ ವ್ಯವಸ್ಥೆಯನ್ನು ತೊರೆದು ಪರಿಪೂರ್ಣನಾಗಿ ಉತ್ತಮ ಮಾನವನಾಗಿ ಭಗವಂತನ ಸಾಕ್ಷಾತ್ಕಾರವನ್ನು ಪಡೆಯುವ ಬಗೆಯನ್ನು ರಮಾನಂದರು ಬೋಧಿಸಿದ್ದಾರೆ.

ಭಕ್ತಿ ಪಂಥದ ಹರಿಕಾರರು ಪ್ರೇಮ, ಸೇವೆ ಮತ್ತು ಧರ್ಮಪರತೆಯ ಸಿದ್ಧಾಂತವನ್ನು ಬೋಧಿಸಿದರು. "ಸಾವಿಲ್ಲದ, ಕೇಡಿಲ್ಲದ, ರೂಹಿಲ್ಲದ, ಚಲುವಂಗಾನೊಲಿದೆನವ್ವ" ಎಂದು ಅಕ್ಕಮಹಾದೇವಿ ತನ್ನ ವಚನದಲ್ಲಿ ಹೇಳಿದ್ದಾಳೆ. ಧಾರ್ಮಿಕ ಜೀವನದ ಅಂಗವಾಗಿ ಕಾಯಕ ಮತ್ತು ದೈಹಿಕವಾದ ಪರಿಶ್ರಮ ಅವಶ್ಯವೆಂದು ವೀರಶೈವ ಧರ್ಮವು ಸಾರಿ, ದುಡಿಮೆಯ ಗೌರವ, ಸರ್ವರ ಸಮಾನತೆ ಮತ್ತು ದುಡಿಮೆಯ ಪ್ರಾಮುಖ್ಯತೆಯನ್ನು ತೋರಿಸಿಕೊಟ್ಟಿತು. ಮಾನವನು ತನ್ನ ದೈನಂದಿನ ಆಹಾರವನ್ನು ದುಡಿದು ಸಂಪಾದಿಸಬೇಕೇ ಹೊರತು ಬೇರೆ ಸೂತ್ರಗಳಿಂದಲ್ಲ. ಸ್ವತ್ತು ಮತ್ತು ಸಂಪತ್ತನ್ನು ಸಂಚಯಿಸಿಟ್ಟುಕೊಳ್ಳುವುದನ್ನು ಮತ್ತು ನಾನು ನನ್ನದು ಎಂಬ ಮೋಹವನ್ನು ವೀರಶೈವ ಧರ್ಮವು ಪ್ರೋತ್ಸಾಹಿಸಲಿಲ್ಲ. "ಕಾಯಕವೇ ಕೈಲಾಸ"ವೆಂದು ವೀರಶೈವ ಧರ್ಮವು ಸಾರಿ ಸಾರಿ ಹೇಳುತ್ತದೆ.

ಭಕ್ತಿ ಮಾರ್ಗದಲ್ಲಿ ಜಾತಿ ಪದ್ಧತಿಯನ್ನು ತಿರಸ್ಕರಿಸಲಾಯಿತೆಂದು ವಚನಗಳು ಸಾರಿ ಹೇಳುತ್ತವೆ. "ಆತ್ಮಕ್ಕೆ ಜಾತಿ ಇಲ್ಲ, ಉತ್ತಮ ನಡವಳಿಕೆಯೇ ಮೇಲು ಜಾತಿ, ಕೆಟ್ಟ ನಡವಳಿಕೆಯೇ ಕೀಳು ಜಾತಿ" ಎಂದು ಹೇಳಿ ಚಾರಿತ್ರ್ಯ ಶುದ್ಧಿಗೆ ನಡವಳಿಕೆಗಳೇ ಮುಖ್ಯ ಹೊರತು ಜಾತಿಯಲ್ಲ ಎಂದು ಸಾರಿದ್ದಾರೆ.

ವಿಶ್ವಕವಿಯಾದಂತಹ ಸರ್ವಜ್ಞನು ಜಾತಿಯ ಮೇಲರಿಮೆಯನ್ನು ಈ ರೀತಿಯಾಗಿ ಖಂಡಿಸಿದ್ದಾನೆ. "ಜಾತಿ ಹೀನನ ಮನೆಯ ಜ್ಯೋತಿ ತಾ ಹೀನವೇ, ಜಾತಿ ವಿಜಾತಿಯೆನಬೇಡ, ಶಿವನೊಲಿದಾತನೇ ಜಾತ ಸರ್ವಜ್ಞ". ಮುಂದುವರಿದು ಸರ್ವಜ್ಞನು "ನಾಲಿಗೆಗೆ ಎಲುಬಿಲ್ಲ, ಬಡವನಿಗೆ ಪ್ರಭಾವವಿಲ್ಲ, ಗಗನಕ್ಕೆ ಆಸರೆ ಇಲ್ಲ, ಭಗವಂತನಿಗೆ ಜಾತಿ ಇಲ್ಲ" ಎಂದು ಹೇಳಿದ್ದಾನೆ. ಭಕ್ತಿ ಮಾರ್ಗದಲ್ಲಿ ಲಿಂಗ ಸಮಾನತೆಯನ್ನು ಬೋಧಿಸಲಾಯಿತು. ಈ ಬಗ್ಗೆ ಹೇಳುತ್ತ ಸಂಚಿ ಹೊನ್ನಮ್ಮ "ಪೆಣ್ಣಲ್ಲವೇ ತಮ್ಮನ್ನೆಲ್ಲಾ ಪಡೆದ ತಾಯಿ, ಪೆಣ್ಣಲ್ಲವೇ ಪೊರೆದವಳು, ಪೆಣ್ಣುಪೆಣ್ಣೆಂದೇತಕೆ ಬೀಳುಗಳೆವರು, ಕಣ್ಣು ಕಾಣದ ಗಾವಿಲರು ಕುವರನಾದೊಡೆ ಬಂದಗುಣವೇನದರಿಂದ, ಕುವರಿಯಾದೊಡೆಕುಂದೇನು, ಇವರೀರ್ವರೇಳ್ಗೆ ಪಡೆದವರಲ್ಲಿ, ಸವನಿಪುದಿಹಪರ ಸೌಖ್ಯ" ಎಂದು ಹೇಳಿದ್ದಾರೆ.

ವೀರಶೈವ ಧರ್ಮವು ಅತ್ಯುನ್ನತ ಸತ್ಯಗಳನ್ನು ವ್ಯಕ್ತಪಡಿಸಿದ ಧರ್ಮವಾಗಿದೆ. ಇಡೀ ವಿಶ್ವವು ಪರಮೋನ್ನತ ಶಕ್ತಿಯ ಒಂದು ಪ್ರತೀಕ, ಅದು ಸತ್ಯ ಮಿತ್ಯೆಯಲ್ಲ. ಈ ಸತ್ಯವೇ ನಿತ್ಯವಾದ ಸೌಂದರ್ಯ ಅದೇ ಪರಿಪೂರ್ಣತೆ. ಮನುಷ್ಯನಾದವನು ಈ ಪರಿಪೂರ್ಣತೆಯನ್ನು ಪ್ರಾಮಾಣಿಕತನ, ಸಚ್ಚರಿತ್ರೆ, ಸೇವಾ ಮನೋಭಾವ, ಪ್ರೇಮ, ಕರುಣೆ ಮತ್ತು ಪರಿಶ್ರಮಗಳ ಮೂಲಕ ಅರಸಬೇಕು. ಆ ಮೂಲಕ ತನ್ನ ಜೀವನದಲ್ಲಿ ಭಗವತ್ ಸತ್ಯವನ್ನು ವ್ಯಕ್ತಪಡಿಸಿದಾಗ ಅವನು ದಿವ್ಯಾನಂದವನ್ನು ಪಡೆಯುತ್ತಾನೆ. ವೀರಶೈವ ಧರ್ಮದ ಬೋಧನೆಗಳು ಆಲೋಚನಾ ಶುದ್ಧಿ ಮತ್ತು ಸತ್ಕಾರ್ಯಗಳ ಸುತ್ತಮುತ್ತ ರೂಪಗೊಂಡವು. ಯಾವುದೇ ಪ್ರತಿಫಲಾಕಾಂಕ್ಷೆಯಿಲ್ಲದೆ ಆ ದಯಾಳುವಾದ ಭಗವಂತನನ್ನು ಪ್ರೇಮಿಸುವುದೇ ಭಕ್ತಿ, ಇದು ನಿಷ್ಕಾಮ ಪ್ರೇಮವಾಗಿದ್ದು ಯಾವುದೇ ತರಹದ ಬಯಕೆಗಳು ಇಲ್ಲಿ ಇರಬಾರದು. ಭಕ್ತನು ಸಂಪೂರ್ಣವಾಗಿ ಭಗವಂತನಿಗೆ ತನ್ನನ್ನು ತಾನು ಅರ್ಪಿಸಿಕೊಂಡಾಗ ಅವನಲ್ಲಿನ ಅಹಂಕಾರ ನಿರ್ಮೂಲನೆಯಾಗಿ ನಾನು ಎಂಬುದು ಪೂರ್ತಿಯಾಗಿ ಅಳಿದು ಭಗವಂತನ ಕೃಪೆಯು ಸಾಕ್ಷಾತ್ಕಾರವಾಗುತ್ತದೆ. ಇದನ್ನು ವಚನದಲ್ಲಿ ಹೇಳುವುದಾದರೆ "ನಾನು ನೀನು ಎಂಬ ಗರ್ವವು ತಲೆಯೆತ್ತಿದಾಗ, ವಂಚನೆ ಮೋಸ ಅಪ್ರಾಮಾಣಿಕತೆಗಳ ಬಿರುಗಾಳಿ ಏಳುತ್ತದೆ". "ನಾನು ನಿನ್ನ ದಾಸ" ಎಂಬ ಭಾವನೆಗೆ ಭಕ್ತಿ ಪಂಥದ ಶರಣರು ಪ್ರಾಧಾನ್ಯತೆ ನೀಡಿದರು.

ಮಧ್ಯಕಾಲೀನ ಯುಗದಲ್ಲಿ ವೈಷ್ಣವ ಧರ್ಮದ ಪ್ರಭಾವವು ಭಕ್ತಿ ಪಂಥದಲ್ಲಿ ವ್ಯಾಪಕವಾಗಿತ್ತು. ಭಕ್ತಿ ಪಂಥಕ್ಕೆ ವೈಷ್ಣವ ಧರ್ಮದ ಹರಿದಾಸರು ಅನೇಕ ಕಾಣಿಕೆಗಳನ್ನು ನೀಡಿದ್ದಾರೆ. ಹೃದಯದ ಪರಿಶುದ್ಧಿ, ಪ್ರಾಮಾಣಿಕತೆ, ಆಡಂಬರಗಳ ನಿಷೇಧ, ಸರ್ವರಿಗೂ ಸಮಾನತೆ, ಪ್ರತಿಯೊಬ್ಬರಿಗೂ ಮೋಕ್ಷ, ಮೇಲು–ಕೀಳು, ಶ್ರೀಮಂತ–ಬಡವ, ಪುರುಷು–ಸ್ತ್ರೀ, ರಾಜ–ಸೇವಕ ಯಾರೇ ಆಗಲಿ ಭಕ್ತಿ ಇದ್ದರೆ ಮೋಕ್ಷವನ್ನು ಸಂಪಾಧಿಸಬಲ್ಲರು ಎಂಬ ತತ್ವವನ್ನು ಹರಿದಾಸರು ಸಾರಿದ್ದಾರೆ. ಭಕ್ತಿಯನ್ನು ಮೊದಲು ವಿಸ್ತಾರವಾಗಿ ಪ್ರದರ್ಶಿಸಿದವರು ರಾಮಾನುಜರು, ಜೀವಿಗಳು ಭಗವಂತನೊಂದಿಗೆ ಮೂಲತಃ ಒಂದೇ ಅಲ್ಲ, ಅವರು ಬೆಂಕಿಯಿಂದ ಕಿಡಿಗಳು ಹೊರಬರುವಂತೆ ಭಗವಂತನಿಂದ ಹೊರ ಬಂದಿದ್ದಾರೆ. ಶಿವನು ಕಲ್ಯಾಣ ಗುಣ ಪರಿಪೂರ್ಣನಾಗಿದ್ದು, ಸುಂದರನೂ ಆಗಿದ್ದಾನೆ ಎಂದು ಹೇಳಿ ಭಕ್ತಿಯ ಮುಖಾಂತರ ಈಶ್ವರನನ್ನು ಪೂಜಿಸಲು ಬೋಧಿಸಿದರು. ಇನ್ನೊಬ್ಬ ಭಕ್ತಿ ಪಂಥದ ಅನುಯಾಯಿಯಾದ ರಮಾನಂದರು ಜಾತಿ ಕಟ್ಟುಪಾಡುಗಳನ್ನು ಸಂಪೂರ್ಣವಾಗಿ ವರ್ಜಿಸಿ ಎಲ್ಲ ಪಂಥಗಳಿಂದಲೂ ತಮ್ಮ ಶಿಷ್ಯವರ್ಗವನ್ನು ವೃದ್ಧಿಪಡಿಸಿದರು. ತಮ್ಮ ಸಿದ್ಧಾಂತಗಳನ್ನು ನಿರೂಪಿಸಲು ಹಿಂದಿ ಭಾಷೆಯನ್ನು ಬಳಸಿದ ಮೊದಲ ಸುಧಾರಕರಿವರು. ಮಾಧ್ವಾಚಾರ್ಯರ ಭಕ್ತಿ ಪಂಥಕ್ಕೆ ಇವರು ಇನ್ನಷ್ಟು ಅರ್ಥ ಮತ್ತು ಗೌರವವನ್ನು

ನೀಡಿದರು. ಯಾವ ಹೆಸರಿನಿಂದ ಬೇಕಾದರೂ ಭಗವಂತನನ್ನು ಕರೆಯಬಹುದು, ಭಕ್ತಿಯಿಂದ ಮಾತ್ರವೇ ಭಗವಂತನ ಕೃಪೆ ಸಾಕ್ಷಾತ್ಕಾರವಾಗುತ್ತದೆ, ಆ ಮೂಲಕ ಮನುಷ್ಯನು ಪ್ರಾಪಂಚಿಕ ಬಂಧನಗಳಿಂದ ಮುಕ್ತನಾಗಬಲ್ಲನು ಎಂದು ಸಾರಿದ್ದಾರೆ. ಕರ್ಮ, ಜ್ಞಾನ, ಭಕ್ತಿ ಈ ಮೂರು ಮದ್ವರ ಪ್ರಕಾರ ಮುಖ್ಯವಾದ ಅಂಶಗಳಾಗಿದ್ದು, ಸೇವೆ ಅಥವಾ ಧರ್ಮಯುತವಾದ ನಡವಳಿಕೆ ಮನುಷ್ಯನನ್ನು ದೇವರ ಸನಿಹಕ್ಕೆ ತರುತ್ತದೆ. ಭಗವಂತನ ಜ್ಞಾನವು ಮನುಷ್ಯನಲ್ಲಿ ಸತ್ಕಾರ್ಯಗಳನ್ನು ಮಾಡಲು ಪ್ರೇರೇಪಿಸುತ್ತದೆ. ಭಗವಂತನಲ್ಲಿ ಸಂಪೂರ್ಣವಾಗಿ ವಿಲೀನವಾಗಲು ಭಕ್ತಿಯು ಸಹಕಾರಿಯಾಗಿದೆ ಎಂದು ಸೂಚಿಸಿದ್ದಾರೆ.

ಬಹಿರಂಗವಾದ ಪೂಜಾ ವಿಧಾನಗಳು ಯಾವುವೂ ಭಗವಂತನ ಪ್ರೇಮವನ್ನು ಗಳಿಸುವಲ್ಲಿ ಮುಖ್ಯವಾದುವಲ್ಲ ಎಂದು ಕಬೀರರು ಒತ್ತಿ ಹೇಳಿದ್ದಾರೆ. "ನಾನು ದೇವಾಲಯದಲ್ಲಿಲ್ಲ, ಮಸೀದಿಯಲ್ಲೂ ಇಲ್ಲ, ನಾನು ಕಾಬಾದಲ್ಲಿಲ್ಲ, ಕೈಲಾಸದಲ್ಲೂ ಇಲ್ಲ, ಆಚರಣೆಗಳು ಯಾಗಗಳಲ್ಲಿಲ್ಲ, ಯೋಗ ವೈರಾಗ್ಯಗಳಲ್ಲಿಲ್ಲ, ದೀಪವು ಪ್ರತಿಯೊಂದು ಮನೆಯಲ್ಲೂ ಬೆಳಗುತ್ತದೆ, ಓ! ಕುರುಡಾದರೆ ನೀನು ನೋಡಲಾರೆ, ನಿನ್ನ ಪ್ರಭು ಪಕ್ಕದಲ್ಲೇ ಇದ್ದಾನೆ ಆದರೂ ಅವನನ್ನು ನೋಡಲು ತಾಳೆಯ ಮರವನ್ನು ಹತ್ತುತ್ತಿರುವೆ!" ಎಂದು ಭಕ್ತಿ ಪಂಥವನ್ನು ಸಾರಿದ ಸಂತರು ಬೋಧಿಸಿದ್ದಾರೆ.

ಜಾತಿ ಪಕ್ಷಪಾತಗಳು ಬಾಲಿಶವಾದವು ಎಂದು ಭಕ್ತಿ ಪಂಥದ ಬೋಧಕರು ಅವುಗಳನ್ನು ನಿರಾಕರಿಸಿದರು. "ಹರಿಯು ಪೂರ್ವದಲ್ಲಿದ್ದಾನೆ, ಅಲ್ಲಾನು ಪಶ್ಚಿಮದಲ್ಲಿದ್ದಾನೆ, ನಿನ್ನ ಹೃದಯದೊಳಗೆ ಸ್ವಲ್ಪ ಇಣುಕಿ ನೋಡು ರಾಮ–ಕರೀಮರಿಬ್ಬರನ್ನು ಅಲ್ಲಿ ಕಾಣುವೆ" ಎಂದು ಬೋಧಿಸಿ ಭಕ್ತಿ ಬೋಧಕರು ಮನುಷ್ಯನ ದೌರ್ಬಲ್ಯಗಳ ವಿರುದ್ಧ ಧರ್ಮಯುದ್ಧವನ್ನು ಸಾರಿ ಹಿಂದೂ–ಮುಸ್ಲಿಂ ಐಕ್ಯತೆಯ ಪ್ರವರ್ತಕರಾದರು, ನೂತನ ಸಮಾಜ ವ್ಯವಸ್ಥೆಯ ಉದಯಕ್ಕೆ ಹಾದಿ ಮಾಡಿಕೊಟ್ಟರು.

ಹೀಗೆ ಜಾತಿ ವೈಶಮ್ಯವನ್ನು ತೊಡೆದು ಹಾಕಿ ಪರಿಪೂರ್ಣ ಸಮಾಜವನ್ನು ನಿರ್ಮಿಸಿ ಮಾನವ ಕುಲವನ್ನು ಪವಿತ್ರ ಬಂಧನಕ್ಕೆ ಒಳಪಡಿಸುವುದು ಭಕ್ತಿ ಆಂದೋಲನದ ಮುಖ್ಯ ಉದ್ದೇಶವಾಗಿತ್ತು. ಸಾಧು–ಸಂತರು, ಅನುಭಾವಿಗಳು ತಮ್ಮನ್ನು ಯಾವುದೇ ಜಾತಿಗೆ ಒಳಪಡಿಸಿಕೊಳ್ಳದೆ, ವಿಶ್ವಮಾನವರಾಗಿ, ವೈರಾಗ್ಯಹೊಂದಿ, ಪರಸ್ಪರರಲ್ಲಿ ಗೌರವ–ಪ್ರೀತಿಯನ್ನು ತುಂಬಲು ಶ್ರಮಿಸಿದರು. ಭಕ್ತಿ ಆಂದೋಲನದ ಹರಿಕಾರರು ಮಾಡಿದ ಈ ಕಾರ್ಯದಿಂದ ಹಿಂದೂ–ಮುಸ್ಲಿಂ ಸಂಸ್ಕೃತಿಯ ಸಾಮರಸ್ಯ ಸಾಧ್ಯವಾಯಿತೆಂದು ಹೇಳಬಹುದು. ಈ ರೀತಿಯಾಗಿ ಹೊಸ ಸಾಮಾಜಿಕ ಸಂಚಲನಕ್ಕೆ ಭಕ್ತಿ ಪಂಥವು ನಾಂದಿ ಹಾಡುವ ಮೂಲಕ ಬಹಮನಿ ಸುಲ್ತಾನರಿಗೆ ಐಕ್ಯತೆ, ಎಲ್ಲಾ ಧರ್ಮ ಒಂದೇ, ಧರ್ಮಯುದ್ದದ ಕುರಿತು ಪ್ರಸ್ತುತ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

### ೩.೬. ಸೂಫಿ ಪಂಥ

ಸೂಫಿ ಸಂತರ ಸರಳ ಜೀವನ, ಆಧ್ಯಾತ್ಮಿಕತೆ ಬಹಳ ಬೇಗ ಜನರನ್ನು ಆಕರ್ಷಿಸಿತು. ಇವರ ಕರುಣೆ, ಪ್ರೀತಿ, ಸಹನೆ, ಭ್ರಾತೃತ್ವ, ಸ್ವಭಾವ, ಸಮಾನತೆ, ಸರಳತೆ, ಅನೇಕ ಹಿಂದೂಗಳನ್ನು ಆಕರ್ಷಿಸಿತು. ಸಾಮಾಜಿಕವಾಗಿ, ಆರ್ಥಿಕವಾಗಿ ಹಿಂದುಳಿದಿದ್ದ ಕೆಳವರ್ಗದವರು ಬಹುಬೇಗ ಇವರ ಅನುಯಾಯಿಗಳಾದರು. ಸಮಾಜದಲ್ಲಿ ತಮ್ಮ ಅಸ್ತಿತ್ವವನ್ನೇ ಕಳೆದುಕೊಂಡಿದ್ದ ಹಿಂದುಳಿದ ವರ್ಗದವರಿಗೆ ಸೂಫಿಸಂತರು ಹೊಸ ಭರವಸೆ ಮೂಡಿಸಿದರು. ಹಾಗೆಯೇ ಸೂಫಿ ಸಂತರ ಉದಾರನೀತಿ, ಮತೀಯ ಸಾಮರಸ್ಯ ಮುಂತಾದ ವಿಶಾಲ ಗುಣಗಳು ಭಾರತೀಯರಿಗೆ ಮುಸ್ಲಿಮರ ಬಗ್ಗೆ ಇದ್ದ ದ್ವೇಷವನ್ನು ಕಡಿಮೆ ಮಾಡುವಲ್ಲಿ ಮಹತ್ತರ ಪಾತ್ರ ವಹಿಸಿದವು.

ಹಿಂದೂ ಮುಸ್ಲಿಮರಲ್ಲಿ ಪರಸ್ಪರ ಪ್ರೀತಿ, ವಿಶ್ವಾಸ ಮತ್ತು ಗೌರವದ ಭಾವನೆಗಳು ಬೆಳೆಯಲು ಪ್ರಾರಂಭಿಸಿದವು. ಮುಸ್ಲಿಮರು ಹಿಂದೂ ಸಂತರನ್ನು ಹಾಗೂ ಹಿಂದೂಗಳ ಮುಸ್ಲಿಂ ಸಂತರನ್ನು ಗೌರವದಿಂದ ಕಾಣಲು ಪ್ರಾರಂಭಿಸಿದರು. ಹೀಗೆ ಸೂಫಿ ಸಂತರು ಭಕ್ತಿಮಾರ್ಗದ ಸಂತರಂತೆ ಸಮಾಜದ ನ್ಯೂನತೆಗಳನ್ನು ಖಂಡಿಸಿ ಸರಳ ಶುದ್ಧ ಸಚ್ಚಾರಿತ್ರ್ಯದ ಜೀವನಕ್ಕೆ ಮಹತ್ವವನ್ನು ಕೊಟ್ಟಿದ್ದಾರೆ. ಹಿಂದೂ ಮತ್ತು ಮುಸ್ಲಿಂರಲ್ಲಿ ಪರಸ್ಪರ ಪ್ರೀತಿ ಗೌರವಾದರಗಳು ಬೆಳೆಯಲು ಇವರ ಕೊಡುಗೆ ಅಪಾರವಾಗಿದೆ. ಇವರ ತತ್ವವು ಎಲ್ಲಾ ಧರ್ಮಗಳ ಸಾರರೂಪದಲ್ಲಿದ್ದು ಎಲ್ಲರ ಕ್ಷೇಮವನ್ನು ಬಯಸುತ್ತಾರೆ.

ಸಮಾಜದಲ್ಲಿ ದ್ವೇಷ ಭಾವನೆ, ಅತೃಪ್ತಿ ಹಾಗೂ ನಿರಾಶೆ ಹರಡಿದ್ದ ಸಮಯದಲ್ಲಿ ಸೂಫಿಗಳು ತಮ್ಮ ತತ್ವಗಳ ಮೂಲಕ ಪರಮತ ಸಹಿಷ್ಣುತಾ ಭಾವನೆಯನ್ನು ಪ್ರಚಾರ ಮಾಡಿ ಸಮಾಜವನ್ನು ಸುಧಾರಿಸಲು ಪ್ರಯತ್ನಿಸಿದ್ದು ಸ್ಮರಣೀಯ ಮತ್ತು ಅನುಕರಣೀಯವಾಗಿದೆ. ಹೀಗಾಗಿಯೇ ಇಂದಿಗೂ ಹೈದರಾಬಾದ್ ಕರ್ನಾಟಕದಲ್ಲಿ ಜಿಲ್ಲೆಗಳಲ್ಲಿ ಹಿಂದೂ ಮುಸ್ಲಿಂರಲ್ಲಿ ಕೋಮುಭಾವನೆಗಳಿರದೆ, ಎಲ್ಲರೂ ಸೇರಿ ಜಾತ್ರೆ ಮತ್ತು ಉರಸ್ ಆಚರಿಸುತ್ತಾ ಸಾಮಾಜಿಕ ಸಾಮರಸ್ಯಕ್ಕೆ ಕಾರಣರಾಗಿದ್ದಾರೆ.

ಸೂಫಿ ಎಂದರೆ ಯೋಗಿ, ಸಿದ್ಧ, ಅನುಭಾವಿ ಎಂದರ್ಥ. ಸೂಫಿಸಂ ಎಂದರೆ ಇಸ್ಲಾಂ ಅಧ್ಯಾತ್ಮಿಕತೆ ಇರುವ ಮತ್ತೊಂದು ಹೆಸರು ಇದು ತತ್ವ ಇದು ಮಧ್ಯ ಏಷಿಯಾದಲ್ಲಿ ಹಟ್ಟಿದ ಒಂದು ಪಂಥ ಇಸ್ಲಾಮೀ, ಜಗತ್ತಿನಲ್ಲಿ ಒಂದು ಪಂಥವಾಗಿದೆ. ಕರ್ನಾಟಕದಲ್ಲಿ ಸೂಫಿಗಳು ನೆಲೆಯನ್ನು ನೋಡಿದಾಗ ಕನ್ನಡ, ಮರಾಠಿ, ಉರ್ದು, ತೆಲುಗು, ಭಾಷೆಗಳು ಕರ್ನಾಟಕದ ಆಂಧ್ರ, ಮಹಾರಾಷ್ಟ್ರ ಮೂರು ಭಾಷಿತ ರಾಜ್ಯಗಳ ಒಳಗೆ ಹರಿಯುವ ಕೃಷ್ಣಾ ತುಂಗಭದ್ರೆ ಮತ್ತು ಭೀಮಾ ನದಿಗಳ ಕರ್ನಾಟಕದ ಪ್ರದೇಶಗಳು ಸೂಫಿಗಳ ನಿಜವಾದ ಭೂಮಿಕೆಯೆನ್ನಬಹುದು. ಸೂಫಿ ಪಂಥವು ಇರಾಕ್‌ನ 'ಬಸ' ಎಂಬಲ್ಲಿ ಜನ್ಮತಾಳಿದ್ದು, ಇದು ಅತ್ಯಂತ ಹಳೆಯ ಪಂಥವಾಗಿದೆ. ಮುಸ್ಲಿಮರು ಭಾರತದಲ್ಲಿ ತಮ್ಮ ಪ್ರಭುತ್ವವನ್ನು ಸ್ಥಾಪಿಸಿದ ನಂತರದ ಕಾಲದಲ್ಲಿ, ಭಾರತದ ಧಾರ್ಮಿಕ ವಿಚಾರಗಳಿಂದ ಸೂಫಿಗಳು ಸಾಕಷ್ಟು ಪ್ರಭಾವಿತರಾಗಿ ದೊಡ್ಡ ಸಂಖ್ಯೆಯಲ್ಲಿ ಸೂಫಿಗಳು ಭಾರತಕ್ಕೆ ವಲಸೆ ಬಂದು ಅನೇಕ ಪ್ರದೇಶಗಳಲ್ಲಿ ನೆಲೆಸಿದರು.[೬೧]

### ೩.೬.೧. ಬಹಮನಿ ಆಡಳಿತದಲ್ಲಿ ಸೂಫಿಗಳು

ಐತಿಹಾಸಿಕವಾಗಿ ಸೂಫಿ ಪಂಥವು ತನ್ನ ಬೆಳವಣಿಗೆಯ ಪಥದಲ್ಲಿ ವೈವಿಧ್ಯಮಯವಾದ ಹಲವಾರು ನಂಬಿಕೆಗಳನ್ನು ಸಂಗ್ರಹಿಸಿಕೊಂಡು ಸಿದ್ದವಾದ ಒಂದು ಧಾರ್ಮಿಕ ವ್ಯವಸ್ಥೆ. ಈ ನಂಬಿಕೆಗಳಲ್ಲಿ ಸಾರಭೂತವಾದವುಗಳು ಹಿಂದೂಧರ್ಮ ಮೂಲದವುಗಳೇ ಆಗಿದ್ದು, ಒಂದಲ್ಲ ಒಂದು ರೀತಿಯಲ್ಲಿ ಹಿಂದೂ ಧರ್ಮದಲ್ಲೇ ಇದ್ದ ಹಿಂದೂಗಳೂ ಮತ್ತು ಇಸ್ಲಾಂ ಧರ್ಮಕ್ಕೆ ಮತಾಂತರಗೊಂಡಿದ್ದ ಶ್ರೇಷ್ಠ ಸೂಫಿ ಸಂತರ ಸಂಪರ್ಕವನ್ನು ಪಡೆದ ಹಿಂದೂಗಳು ಚಿರಪರಿಚಿತವೇ ಆಗಿದ್ದವು. ಆದುದರಿಂದ ೧೪ ಮತ್ತು ೧೫ನೇ ಶತಮಾನಗಳಲ್ಲಿ ಭಾರತೀಯ ಮುಸಲ್ಮಾನರಲ್ಲಿ ಹೆಚ್ಚಿನವರು ಹೇಗೆ ಹಿಂದೂಗಳು ತಮ್ಮ ಮುಕ್ತಿಗೆ ಒಬ್ಬ ಶ್ರೇಷ್ಠ ಗುರುವಿನ ಮಾರ್ಗದರ್ಶನ ಅತ್ಯಗತ್ಯವೆಂದೂ ಭಾವಿಸಿಕೊಂಡಿದ್ದರೋ ಹಾಗೆಯೇ ಧಾರ್ಮಿಕ ಚಿತವೃತ್ತಿ ಹೊಂದಿದ್ದ ಮುಸಲ್ಮಾನರೂ ಮಾರ್ಗದರ್ಶನಕ್ಕಾಗಿ ಒಬ್ಬ ಗುರುವನ್ನು, ಅದರಲ್ಲಿಯೂ ವಿಶೇಷವಾಗಿ ಸೂಫಿ ಸಂತ ಶ್ರೇಣಿಯಲ್ಲಿ(ಸೂಫಿ ಸಿಲ್ಸಿಲ) ಒಬ್ಬರಲ್ಲ ಒಬ್ಬರನ್ನು ತಮ್ಮ ಆಧ್ಯಾತ್ಮಿಕ ಗುರುವೆಂದೂ ಸಂಪರ್ಕ ಪಡೆದಿದ್ದುದು ಆಶ್ಚರ್ಯಂಶವೇನಲ್ಲ. ಹೀಗೆ ಮಾಡಿಕೊಳ್ಳುವುದು, ಧಾರ್ಮಿಕ ಅರಿವಿಗೂ ಸಮಾಜದಲ್ಲಿ ಗೌರವಾರ್ಹತೆಗೂ ಅನಿವಾರ್ಯವೆನಿಸಿತು. ಆದರೂ ಈ ಎರಡೂ ಶತಮಾನಗಳ ಅವಧಿಯಲ್ಲಿ ಸೂಫಿಗಳು ಉದ್ದಕ್ಕೂ ತಮ್ಮದೇ ಆದ ಮೇಲುಗೈ ಪಡೆದುಕೊಂಡಿದ್ದರೆಂದು ಭಾವಿಸಿಕೊಳ್ಳಬಾರದು. ಷರಿಯತ್

(ಕಾನೂನು)ನ್ನೂ ತಾರೀಖತ್(ಸೂಫಿ ವಿಧಿಗಳು) ಇವೆರಡರ ಮಧ್ಯೆ ಸೂಫಿಮತ ಸ್ಥಾಪಿತವಾಯಿತು. ಅದು ಹುಟ್ಟಿದ ಸ್ಥಳಗಳಲ್ಲಿಯೇ ಪ್ರಾರಂಭವಾಗಿದ್ದ ಮೂಲಕ ಭಾರತದಲ್ಲಿಯೂ ಅಷ್ಟೇ ಸ್ಪಷ್ಟವಾಗಿ ಕಾಣಿಸಿಕೊಂಡಿತು. ಕಾನೂನನ್ನು ತಮ್ಮ ಸುಫರ್ದಿನಲ್ಲಿಟ್ಟುಕೊಂಡಿದ್ದ ಉಲೇಮಗಳು ಸಾಮಾನ್ಯವಾಗಿ ರಾಜರ ಸಂಪರ್ಕ ಹೊಂದಿದ್ದರು ಅಥವಾ ಪ್ರಾಂತಗಳ ಮುಖ್ಯ ನಗರಗಳಲ್ಲಿ ಕಾನೂನು ಸಲಹೆಗಾರರಾಗಿಯೇ(ಮುಫ್ತಿ) ಇಲ್ಲವೇ ನ್ಯಾಯಾಧೀಶರಾಗಿಯೇ (ಖಾಜಿ) ಒಟ್ಟಿನಲ್ಲಿ ಕೈ ತುಂಬ ಆದಾಯ ತರಬಲ್ಲ ಅಧಿಕಾರ ಸ್ಥಾನದಲ್ಲಿದ್ದರು. ಅವರು ಇಸ್ಲಾಂ ಧರ್ಮದ ಪರಿಶೂದ್ಧತೆ ಭಂಗ ತರುವಂತಹ ಅಥವಾ ಆಸ್ತಿಕತೆ(ಇಮಾಲ್) ಮತ್ತು ಅನಾಸ್ತಿಕತೆ(ಕಾಫ್ರ್)ಗಳ ಮಧ್ಯೆ ಸಮನ್ವಯವನ್ನು ಉಂಟು ಮಾಡುವಂತಹ ಯಾವುದೇ ಧಾರ್ಮಿಕ ಚಳುವಳಿಯ ವಿರುದ್ಧ ಹೋರಾಡಲು ಕಾರ್ಯಶೀಲ ಉತ್ಸಾಹವನ್ನು ಪ್ರದರ್ಶಿಸುತ್ತಿದ್ದರು. ಈ ಅವರ ಹೋರಾಡ, ಧಾರ್ಮಿಕ ಸ್ಫೂರ್ತಿಯದಾಗಿತ್ತೇ ವಿನ: ಯಾವ ದುರದೇಶವಿರಲಿಲ್ಲವೆಂಬುದು ದಖ್ಖನ್ ಬಹಮನಿಯರ ಆಳ್ವಿಕೆಯಲ್ಲಿ ಗೊತ್ತಾಗುತ್ತದೆ. ಒಟ್ಟಿನಲ್ಲಿ ಅವರ ಉದ್ದೇಶ ಸಂದೇಹಾಸ್ಪದವಾಗಿತ್ತು. ಆದರೆ ಅವರು ಅನೇಕ ವೇಳೆ ಆಳ್ವಿಕೆ ನಡೆಸುತ್ತಿದ್ದ ತಮ್ಮ ಪ್ರಭುಗಳ ಮೇಲೆ ಪ್ರಬಲವಾದ ಪ್ರಭಾವವನ್ನು ಬೀರುತ್ತಿದ್ದು ಯಾರಾದರೂ ಸಂಪ್ರದಾಯಬದ್ದ ನಂಬಿಕೆಗಳಿಂದ ಸ್ವಲ್ಪ ದೂರ ಸರಿದರೂ ಸಾಕು ಅವರನ್ನು ಕ್ರೂರ ಹಿಂಸೆಗೆ ಒಳಪಡಿಸುವ ಯಾವೊಂದು ಅವಕಾಶ ಕಳೆದುಕೊಳ್ಳತ್ತಿರಲಿಲ್ಲ.[೨]

'ಸೂಫ್'(ಉಣ್ಣೆ) ಎಂಬ ಪದದಿಂದ 'ಸೂಫಿ' ಎಂಬ ಶಬ್ಧದ ಉಗಮವಾಗಿದೆ, ಅಂದರೆ ಉಣ್ಣೆಯ ಉಡುಗೆಗಳನ್ನು ಧರಿಸುವವನೇ ಸೂಫಿ. ಉಣ್ಣೆಯ ಉಡುಪನ್ನು ಸರಳತೆಯ ಸಂಕೇತವೆಂದು ಭಾವಿಸಲಾಗಿದ್ದು, ತೀವ್ರಗತಿಯಲ್ಲಿ ಬೆಳೆಯುತ್ತಿರುವ ಪ್ರಪಂಚದ ಭೋಗವಸ್ತುಗಳ ವಿರುದ್ಧ ಇದೊಂದು ಮೌನ ಪ್ರತಿಭಟನೆಯಾಗಿದೆ. ಸರಳ ಜೀವನವನ್ನು ನಡೆಸುವ ಹಾಗೂ ಸತ್ಯದಿಂದ ಯಾವುದೇ ವಿಧದಲ್ಲಿ ಪರವಶರಾಗದ ವ್ಯಕ್ತಿಗಳು ಸೂಫಿಗಳಾಗುತ್ತಾರೆ. ಇದು ಸೂಫಿ ಪಂಥದ ಸೂಕ್ಷ್ಮ ಪರಿಚಯವಾಗಿದ್ದು, ಈ ಪಂಥವು ಕಾಲಾಂತರದಲ್ಲಿ ಪ್ರವರ್ಧಮಾನಕ್ಕೆ ಬಂದಿತು. ಇಸ್ಲಾಂ ಧರ್ಮದ ಅನುಭಾವಿಕ ಮುಖವೇ ಸೂಫಿ ಪಂಥ. ಈ ಪಂಥವು ಕೀಳರಿಮೆ ಮತ್ತು ಆಮೀಷಗಳಿಂದ ಹೃದಯವನ್ನು ಶುದ್ಧೀಕರಿಸುವಲ್ಲಿ ಸಹಕಾರಿಯಾಗಿದೆ, ಇದರ ಮುಖ್ಯ ಉದ್ದೇಶ ವೈಯಕ್ತಿಕವಾಗಿ ಭಗವಂತನ ಅನುಭವವನ್ನು ಪಡೆಯುವುದಾಗಿದೆ. ಮಾನವನ ಆತ್ಮವು ಒಂದು ದಿವ್ಯತ್ವದ ಭಾಗವಾಗಿದ್ದು ಅದು ಮನುಷ್ಯನಿಗೆ ಪರಿಪೂರ್ಣವೂ, ಸರಳವೂ ಆದಂತಹ ಜ್ಞಾನವನ್ನು ನೀಡುತ್ತದೆ. ದೇವರಲ್ಲಿ ಭಯ, ಭಕ್ತಿ, ಶ್ರದ್ಧೆ, ಅಹಿಂಸೆ, ತಪಸ್ಸು ಮೊದಲಾದವುಗಳು ಸೂಫಿ ಪಂಥದ ಪ್ರಮುಖ ತತ್ವಗಳಾಗಿದ್ದವು. ಹಿಂದೂಗಳನ್ನು ತಮ್ಮ ಪಂಥಕ್ಕೆ ಆಕರ್ಷಿಸಲೂ ಸಹ ಸೂಫಿ ಪಂಥದವರು ಹಿಂದೂ ಧರ್ಮದ ಅನೇಕ ಆಚರಣೆಗಳನ್ನು ಅನುಸರಿಸಿದರು.

ದೇವರಲ್ಲಿ ಅನನ್ಯ ಶ್ರದ್ಧೆ ಹೊಂದಿದ್ದ ಸೂಫಿಗಳು ಪ್ರತಿ ವ್ಯಕ್ತಿ ಮತ್ತು ವಸ್ತು ದೇವರ ಒಂದು ಭಾಗವೇ ಆಗಿದೆ ಎಂದು ನಂಬಿದ್ದರು. ಸೂಫಿಗಳು ತಮ್ಮ ಪರಿಣಾಮಕಾರಿ ತತ್ವಗಳನ್ನು ನಾಡಿನಾದ್ಯಂತ ಪ್ರಚಾರ ಮಾಡಿದರು. ಅವು ಯಾವುದೇ ಜಾತಿ ಧರ್ಮಕ್ಕೆ ಸೀಮಿತವಾಗಿರದೇ ಸರ್ವವ್ಯಾಪಿಯಾಗಿದ್ದವು. ಸೂಫಿ ಪಂಥವು ಇಷ್ಟೊಂದು ಪ್ರಾಮುಖ್ಯತೆ ಪಡೆಯಲು ಕಾರಣವಾದ ಅವರ ತತ್ವಗಳು ಅಥವಾ ಬೋಧನೆಗಳು ಈ ಕೆಳಗಿನಂತಿವೆ:

**೩.೬.೨. ಸೂಫಿ ಪಂಥದ ತತ್ವಗಳು ಅಥವಾ ಬೋಧನೆಗಳು**

ದೇವರು ಒಬ್ಬನೇ, ಸರ್ವಸ್ವವೂ ದೇವರಲ್ಲಿದೆ. ಹೀಗಾಗಿ ಆತನೇ ಸರ್ವಸತ್ಯ.

ದೇವರನ್ನು ಬಿಟ್ಟರೆ ಈ ಜಗತ್ತಿನಲ್ಲಿ ಎಲ್ಲವೂ ಶೂನ್ಯ.

ಸೂಫಿಗಳು ಕಟ್ಟಾ ಮುಸ್ಲಿಮರು, ಅವರು ಶರಿಯತ್‌ನ ಪ್ರಕಾರವಾಗಿಯೇ(ಮುಸ್ಲಿಂ ಕಾನೂನು) ನಡೆಯಬೇಕು, ಅದುವೇ ಅವರ ಮುಕ್ತಿಯ ಮಾರ್ಗ. ಆದರೆ ಸಂಪ್ರದಾಯವಾದಿ ಇಸ್ಲಾಮಿಕ್ ತತ್ವಗಳನ್ನು, ಅಂಧಾನುಕರಣೆಯನ್ನು ಸೂಫಿಗಳು ವಿರೋಧಿಸಿದರು.

ಆತ್ಮಶುದ್ಧಿ ಮತ್ತು ದೇವರಲ್ಲಿ ಶ್ರದ್ಧೆ ಇದ್ದರೆ ಆತನನ್ನು ಕಾಣುವುದು ಸುಲಭ.

ಸೂಫಿಗಳು ಸರಳ ಜೀವನಕ್ಕೆ ಪ್ರಾಮುಖ್ಯತೆ ನೀಡಿ ವಿಲಾಸೀ ಜೀವನವನ್ನು ತ್ಯಜಿಸಿದರು.

ದೇವರು ಕರುಣಾಮಯಿಯಾಗಿದ್ದಾನೆ, ಹೀಗಾಗಿ ಆತನಿಗೆ ಅಂಜುವ ಅಗತ್ಯವಿಲ್ಲ ಆದರೆ ಆತನಲ್ಲಿ ಶ್ರದ್ಧೆ ಇರಬೇಕು.

ವಿಗ್ರಹಾರಾದನೆ, ಆಡಂಬರ, ಮೇಲು–ಕೀಳು ಎಂಬ ಭಾವನೆಯನ್ನು ಖಂಡಿಸಿದರು.

ಪ್ರತೀ ಜೀವವನ್ನು ರಕ್ಷಿಸಬೇಕು, ಅಹಿಂಸೆಯನ್ನು ಪಾಲಿಸಬೇಕು ಎಂದು ಸಾರಿದ ಸೂಫಿಗಳು ಮಾಂಸ ಸೇವನೆಯನ್ನು ತ್ಯಜಿಸಿದರು.

ಆಸೆ–ದುರಾಸೆಗಳೇ ಮಾನವನ ದೊಡ್ಡ ಶತ್ರು, ಹೀಗಾಗಿ ಅದನ್ನು ತ್ಯಜಿಸಬೇಕು.

ಸನ್ಯಾಸ ಜೀವನಕ್ಕೆ ಪ್ರಾಮುಖ್ಯತೆ ನೀಡಿದ ಸೂಫಿಗಳು ದೇವರಲ್ಲಿ ಶ್ರದ್ಧೆ ಮತ್ತು ಆತನನ್ನು ನೆನೆಯುಬೇಕೆಂದು ಸಾರಿದರು.

ದೇವರನ್ನು ನೆನೆಯಲು ಸಂಗೀತವು ಸಹಕಾರಿ, ಹೀಗಾಗಿ ಸಂಗೀತ–ನೃತ್ಯದ ಮೂಲಕ ಭಕ್ತಿ ಭಾವದಿಂದ ದೇವರನ್ನು ಭಜಿಸಬೇಕೆಂದು ಸಾರಿದರು.

ಗುರುವಿನಲ್ಲಿ ನಂಬಿಕೆ ಇಟ್ಟ ಸೂಫಿಗಳು ಅವರನ್ನು 'ಪೀರ' ಎಂದು ಕರೆದರು. ಗುರುವಿನ ನೆರವಿಲ್ಲದೇ ದೈವತ್ವ ಪಡೆಯುವುದು ಸಾಧ್ಯವಿಲ್ಲ ಎಂದು ಸಾರಿದರು.

ಅವರು ದುರ್ಮಾರ್ಗಕ್ಕೆ ವಿಷಾಧ ವ್ಯಕ್ತಪಡಿಸುವ(ತೌಬ), ಉಚಿತವಾಗಿ ಸಿಗದೇ ಇರುವುದನ್ನು ಸ್ವೀಕರಿಸುವುದಿಲ್ಲ(ವರ), ಜುಹೂದ(ಕರುಣೆ), ಫಕರ್(ಬಡತನ), ಸಬರ್(ಸಹಿಷ್ಣುತೆ), ಶುಕರ್(ನುಡಿದಂತೆ ನಡೆಯುವ), ಕೌಫ್(ಭಯ), ರಜ್(ಆಶಾಭಾವನೆ), ತವಕುಲ್(ಸಂತೃಪ್ತಿ) ಮತ್ತು ರಿಜಾ(ದೇವರಿಗೆ ತಲೆಬಾಗುವುದು) ಈ ತತ್ವಗಳನ್ನು ಪಾಲಿಸಲು ಕರೆಕೊಟ್ಟರು.[೬೩]

### ೩.೬.೩. ಮಹಿಳಾ ಸೂಫಿಗಳು

ಖ್ವಾಜಾ ಮೊಹಿನುದ್ದೀನ್ ಚಿಸ್ತಿ ಅವರ ಮಗಳು ಬೇಗಂ ಹಫೀಜ್ ಜಮಾಲ್, ಬೆಂಗಳೂರಿನ ಹಮೀನಾಬೇಬಿ, ಹೈದರಾಬಾದಿನ ಫಕೀರೆ ಬೀಬಿ ಪ್ರಮುಖರು ಸೂಫಿ ಪಂಥದಲ್ಲಿ ಪುರುಷರಷ್ಟೇ ಅಲ್ಲದೆ ಮಹಿಳೆಯರು ಸಹ ಇದ್ದರೆಂದು ತಿಳಿದುಬರುತ್ತದೆ. ಸೂಫಿ ಪಂಥದಲ್ಲಿದ್ದ ಮೊದಲ ಮಹಿಳಾ ಸಂತಳೆಂದರೆ ರಾಬಿಯಾ ಎಂದು ಇತಿಹಾಸದಿಂದ ತಿಳಿಯುತ್ತದೆ.[೬೪] ಶ್ರೇಷ್ಠ ಸೂಫಿ ಸಂತರಾದ ಜಲಾಲುದ್ದೀನ್ ರೂಮಿ ಮತ್ತು ಮನ್ಸೂರ್ ಬಿನ್ ಹಲ್ಲಾಜ್ ಮುಂತಾದವರು ಮನುಷ್ಯ ಮತ್ತು ಪರಮಾತ್ಮನ ಸಂಬಂಧವನ್ನು ಪ್ರೀತಿಯಿಂದ ಮಾತ್ರ ಬೆಸೆಯಲು ಸಾಧ್ಯವೆಂದು ತಿಳಿಸಿದರು. ಅಲ್ ಘಜ್ಜಲಿಯು ಹನ್ನೆರಡನೇ ಶತಮಾನದಲ್ಲಿ ಜನಪ್ರಿಯ ಸೂಫಿ ಸಂತನಾಗಿದ್ದು, ಸಂಪ್ರದಾಯವಾದಿಗಳ ಮಧ್ಯೆ ಸಾಮರಸ್ಯವನ್ನುಂಟು ಮಾಡಲು ಪ್ರಯತ್ನಿಸಿದನು. ವ್ಯಕ್ತಿಯು ತನ್ನ ಅಂತರ್ ಜ್ಞಾನದಿಂದ ಪರಮಾತ್ಮನ ಸಾಕ್ಷಾತ್ಕಾರವನ್ನು ಪಡೆಯಲು ಸಾಧ್ಯವೆಂದು ತಿಳಿಸಿದನು. ಸೂಫಿಗಳಲ್ಲಿ ಭಿನ್ನಾಭಿಪ್ರಾಯಗಳು ತಲೆದೋರಿ ಹನ್ನೆರಡು ಪಂಗಡಗಳಾಗಿ ವಿಭಜನೆಯಾಯಿತೆಂದು ಇತಿಹಾಸ ಹೇಳುತ್ತದೆ. ಅದರಲ್ಲಿ ಎರಡು ಪ್ರಮುಖ ಪಂಗಡಗಳೆಂದರೆ ಸುರಾವರ್ಧಿ ಮತ್ತು ಚಿಸ್ತಿ.

ಭಾರತದಲ್ಲಿ ಚಿಸ್ತಿ ರಾಜವಂಶವು ಹಲವು ಪ್ರಮುಖ ಶಾಖೆಗಳನ್ನು ಹೊಂದಿದೆ. ಅವುಗಳಾವುವೆಂದರೆ, ನಿಜಾಮಿ ಮತ್ತು ಸಬರ. ಈ ಎರಡೂ ಶಾಖೆಗಳಲ್ಲಿ ಕ್ರಿ.ಶ.೧೨೯೧ರಲ್ಲಿ ತಮ್ಮದೇ ಆದ ಉಪಕೋಶಗಳನ್ನು ಹೊಂದಿದ್ದವು. ಈ ಶಾಖೆಯನ್ನು ಕ್ರಿ.ಶ.೧೫೩೮ ರಲ್ಲಿ ಶೇಖ್ ಅಬ್ದುಲ್‌ಗೊಡ್ಡೋಸ್ ಗಂಗೋಹಿ ಕೂಡ ಪ್ರೋತ್ಸಾಹಿದನು. ಇದು 'ಸೂಫಿಸಂ'ನ ಮೂಲಭೂತ ತತ್ವಗಳಾದ, ಜಲಿ, ಪಠನ, ಶೇಖ್‌ರೊಂದಿಗೆ ಹೃದಯ ಸಂಬಂಧ ಹೊದುವುದು, ೪೦ ದಿನಗಳ ಉಪವಾಸ ಮತ್ತು ಪ್ರಾರ್ಥನೆ, ನಿರಾಹಾರ ಮತ್ತು ಮೌನ ಮತ್ತು ಮನ್‌ಮ್ ಮತ್ತು ಶುದ್ಧೀಕರಣ ಬಗ್ಗೆ ಜಾಗ್ರತೆ ಈ ತತ್ವಗಳನ್ನು ಎತ್ತಿಹಿಡಿದು ಪ್ರಾಮುಖ್ಯತೆ ನೀಡಿದನು.

### ೩.೬.೪. ಬಹಮನಿ ಕಾಲದ ಪ್ರಸಿದ್ಧ ಸೂಫಿ ಸಂತರು

ಕ್ರಿ.ಶ. ೧೩೨೧ರಲ್ಲಿ ಜನಿಸಿದ ಹಜ್ರತ್ ಖ್ವಾಜಾ ಬಂದೇನವಾಜ್ ಗೇಸುದರಾಜ್ ಬಹಮನಿ ಆಸ್ಥಾನದ ಆ ಕಾಲದ ಅತ್ಯಂತ ಹೆಸರುವಾಸಿಯಾದ ಸೂಫಿ ಸಂತನಾಗಿದ್ದನು. ಪ್ರಸಿದ್ಧ ಸೂಫಿಗಳಲ್ಲಿ ಬಂದೇನವಾಜ್‌ರವರು ಪ್ರಮುಖ ರಾಗಿದ್ದರು. ದಖ್ಖನಿಗೆ ಬಂದೇನವಾಜ್‌ರವರು ಬಂದಾಗ ಬಹಮನಿ ಸುಲ್ತಾನನಾದ ಫಿರೋಜ್‌ಷಾ ಸ್ವತಃ ದೌಲತಾಬಾದಿಗೆ ಹೋಗಿ ಅವರನ್ನು ಕರೆತಂದಿರುವುದನ್ನು ಕಾಣಬಹುದು. ಪ್ರತಿ ಹಂತದಲ್ಲೂ ನನ್ನ ಮಾರ್ಗದರ್ಶಕರಾದ ಪೀರ್-ಮುರ್ಷದರನ್ನು ಒಂದು ದಿನ ಪ್ರಶ್ನಿಸಿದೆ ಹೇ ದಸ್ತಗೀರರೇ, ಹಜ್ರತ್ ಸಯ್ಯದ್ ಮಹ್ಮದ್ ಹುಸೇನಿ ಗೇಸುದರಾಜರವರು ಹೀಗೆ ನುಡಿದಿರುತ್ತಾರೆ.

ಬೇ ನೀಸ್ತ್ ಕೆ ಸರ್‌ಗಶ್ತಾ ಬೂದ್ ತಾಲಿಬ್ ದೋಸ್ತ್,
ಅಜಬ್ ಐನ್ ಅಸ್ತ್ ಕೆ ಮನ್ ವೊ ಅಸಲ್ ವೋ ಸರ್‌ಗರ್‌ದಾನಮ್.
ಅಚ್ಚರಿಯೇನು? ದಿಗ್ಭ್ರಾಂತನು ಒಬ್ಬ ಸ್ನೇಹ ಆಕಾಂಕ್ಷಿಯು ನಾನು
ತನ್ನ ಬಗ್ಗೆಯ ಅಚ್ಚರಿಯೇಕೆ? ಬೇಟೆಯಲಿ ನಾನಿಹೇನು, ದಿಗ್ಭ್ರಾಂನೂ ನಾನಿಹೆನು.

ಹೇ ದಸ್ತಗಿರರೇ, ಈ ಕವನೋಕ್ತಿಯ ಭಾವಾರ್ಥವು ಯಾಕೋ ಮನಕ್ಕೆ ತಾಕುತ್ತಿಲ್ಲ. ಅದು ಏಕೆಂದರೆ ವ್ಯಾಕುಲತೆ ಹಾಗೂ ತಲ್ಲಣವು ವಿರಹದಲ್ಲಿಯೇ ವಿನ: ಮಿಲನದಲ್ಲಿ ಅಲ್ಲ. ಆದರೆ ಹಜ್ರತರು ಮಿಲನದ ಹೊರತೂ ಚಿಂತಿತರಾಗಿದ್ದಾರೆ. ಇದೇನು ಮರ್ಮ? ಆಗ ನುಡಿಯಲಾಯಿತು. ಅದೇನೆಂದರೆ ಹಜ್ರತ್ ಬಂದೇನವಾಜ್ ಗೇಸುದರಾಜರು ಅತಿ ಉತ್ತಮವಾಗಿ ನುಡಿದಿರುತ್ತಾರೆ. ಅರ್ಥವಶಾತ್ ನಾನು ಮಿಲನದ ಪ್ರಾಪ್ತನಾಗಿದ್ದೇನೆ., ಇದೇ ವ್ಯಾಕುಲತೆಯಾಗಿದೆ ಎಂಬುದು ನನಗೆ ಅರಿವಿದೆ. ಜನ ಕೆಲವೊಮ್ಮೆ ನುಡಿಯುತ್ತಾರೆ. ಇಂತಹವನು ಸತ್ಯ ಪ್ರಾಪ್ತನು ಮತ್ತು ಇಂತಹವನು ಸತ್ಯ ಪ್ರಾಪ್ತನಲ್ಲ ಎಂದು ಇದೇ ರೀತಿಯ ಚರ್ಚೆಯಿಂದ ನಾನೂ ಪ್ರಾಪ್ತನೆಂಬ ಶಂಕೆಯನ್ನು ಹೊಂದಿದ್ದೇನೆ.[೬೫]

### ೩.೬.೫. ಸೂಫಿ ಸಂತರ ಪವಾಡಗಳು

ಸೂಫಿ ಸಂತನು ಪವಾಡದ ಕಡೆ ವಾಲಿದ್ದರೆ, ವಾಸ್ತವಿಕವಾಗಿ ಅವನು ಚಮತ್ಕಾರಿ ವ್ಯಕ್ತಿ ಅಥವಾ ಜಾದೂಗರ್‌ನಾಗಿರುವವನು. ಯಾಕೆಂದರೆ ವಿಲಾಯತ್‌ನ ಬಣ್ಣ ದಯಾಮಯವಾಗಿದೆ ಹಾಗೂ ಪವಾಡದಲ್ಲಿ ಶೈತಾನಿನ ವಾಸನೆ ಬರುತ್ತದೆ. ಹೇ ಆತ್ಮೀಯನೇ ಪವಾಡವು ಸಂತತ್ವದ ವಿರುದ್ಧ ಶಬ್ಧವಾಗಿದೆ. ಹೀಗಾಗಿ ಸ್ಪಷ್ಟವಾಗುವುದೇನೆಂದರೆ ಎರಡು ವಿರುದ್ಧ ಒಂದೇ ಕಡೆ ಸೇರಲಾರವು. ಯಾವ ರೀತಿ ಹಗಲು ರಾತ್ರಿ, ಸುಖ-ದು:ಖ ಏಕಕಾಲದಕ್ಕೆ ಒಂದಡೆ ಇರುವುದಿಲ್ಲ. ಯಾರಾದರೂ ಈ ಮುಂಚಿನ ಔಲಿಯಾಗಳಿಂದ ಪವಾಡಗಳು ಹಾಗು ಅತೀಂದ್ರಿಯ ಘಟನೆಗಳು ಪ್ರಟಕವಾಗಿವೆ ಎಂದು ಹೇಳಿದರೆ ಈ ಫಕೀರನು ಹೇಳುತ್ತಾನೆ. ಖಂಡಿತವಾಗಿ ಹೀಗೆ ಆಗದೇ ಇರಬಹುದು ಎಂದು. ಅಕಸ್ಮಾತ್ ಆದದ್ದೆ ಆದರೆ ಬಹುಶ: ಹೀಗೆ ಆಗಿರಬಹುದು. ಅದೇನೆಂದರೆ ಯಾವನೇ ಧನಿಕನು ಯಾವನೇ ಚಲಿಯ ಜೊರಡ ದುರ್ವ್ಯವಹಾರ ಮಾಡಿರಬೇಕು.

ಹಾಗೂ ಅದೇ ಸಮಯಕ್ಕೆ ಅವನ ಕುದುರೆಯ ಆಯುಷ್ಯವು ಪರಿಪೂರ್ಣವಾಗಿರವೇಕು. ಹೀಗಾಗಿ ಅಕಸ್ಮಾತ್ತಾಗಿ, ಅರಿವಿಲ್ಲದೆ ಆ ದಿನವೇ ಆ ಕುದುರೆ ಸತ್ತಿರಬೇಕು. ಇದರಿಂದ ಜನರು ಈ ಊಹೆಯನ್ನು ಮಾಡಿರಬೇಕು. ಅದೇನೆಂದರೆ ಇದು ಇಂತಹ ವಲಿಯ ಪವಾಡವಾಗಿದೆ. ಆದರೆ ವಾಸ್ತವವಾಗಿ 'ವಲಿ' ಈ ರೀತಿಯ ಪವಾಡಗಳಿಂದ ಬೇಜಾರಾಗುತ್ತಾನೆ. ಯಾಕೆಂದರೆ ಯಾವನೇ ವಲಿಯು, ಯಾರಿಗೂ ಅಭಿಶಾಪ ನೀಡುವುದಿಲ್ಲ. ಹಾಗೆ ಮಾಡಿದರೆ, ಅವನಲ್ಲಿ ಹಾಗೂ ಸಾಮಾನ್ಯ ಮನುಷ್ಯನ ಮಧ್ಯೆ ವ್ಯತ್ಯಾಸವೇನು? ಜನಸಾಮಾನ್ಯರಲ್ಲಿ ತಾಳ್ಮೆರಹಿತತೆ ಹಾಗೂ ಕೆಡಕಿನ ಅಭಿಲಾಷೆ ಸಾಮಾನ್ಯ ಮಾತಾಗಿದೆ. ಆದರೆ 'ವಲಿ'ಯು ತಾಳ್ಮೆ ಹಾಗೂ ಸಹನೆಯಲ್ಲಿ ವಿಶಿಷ್ಠ ಸ್ಥಾನವನ್ನು ಹೊಂದಿರುತ್ತಾನೆ.[೬೬]

**೩.೬.೬. ಸೂಫಿಗಳ ಸಾಮಾಜಿಕ ಸುಧಾರಣೆ**

ಕಾಯಿಲೆಗಳಿಗೆ ತಾಯತ, ದೆವ್ವಗಳ ಉಚ್ಚಾಟನೆ, ಬಂಜೆತನ ನಿವಾರಣೆ, ಹುಚ್ಚು ಬಿಡಿಸುವುದು, ಕಳೆದು ಹೋದ ಧನಕರುಗಳನನು ಪತ್ತೆ ಹಚ್ಚುವುದು, ಕಾಯಿಲೆಗಳಿಗೆ ಚಿಕಿತ್ಸೆ ಹೀಗೆ ಮುಂತಾದ ಪವಾಡಗಳ ಮೂಲಕ ದೀನ ದಲಿತರ ಉದ್ಧಾರಕ್ಕಾಗಿ ಸೂಫಿಗಳು ಹೆರಾಗಿದ್ದರು.ಉದಾ:ಗುಲ್ಬರ್ಗಾದ ಶರಣಬಸವೇಶ್ವರ ಮಠದ ಉತ್ಸವಗಳು ಸೂಫಿ ಸಂತರ ಮೂಲಕ ಉದ್ಘಾಟಿತವಾಗುತ್ತಿದ್ದವು. ಅದೇ ರೀತಿ ಬಂದೇನವಾಜ್ ದರ್ಗಾದ ಉರುಸ್ ಎಂಬ ಉತ್ಸವ ವೀರಶೈವರ ಅಂದರೆ ಶರಣ ಬಸವೇಶ್ವರ ಪೀಠಾಧಿಪತಿಗಳಿಂದ ಉದ್ಘಾಟಿಸುವ ಪರಂಪರೆ ಬೆಳೆದುಬಂದಿದೆ. ಗುಲ್ಬರ್ಗಾದ ಕೊಡೇಕಲ್ ಬಸವೇಶ್ವರರ ಮಠದಲ್ಲಿ ಇಂದಿಗೂ ವೀರಶೈವ ಮತ್ತು ಸೂಫಿ ಸಂತರ ಒಡನಾಟ ಬಹಳ ಸಾಮರಸ್ಯದಿಂದ ಕೂಡಿದೆ.[೬೭]

ಭಾರತದಲ್ಲಿ ಚಿಸ್ತಿ ರಾಜವಂಶವು ಹಲವು ಪ್ರಮುಖ ಶಾಖೆಗಳನ್ನು ಹೊಂದಿದೆ. ಅವುಗಳಾವುವಂದರೆ, ನಿಜಾಮಿ ಮತ್ತು ಸಬರ. ಈ ಎರಡೂ ಶಾಖೆಗಳಲ್ಲಿ ಕ್ರಿ.ಶ.೧೨೯೧ರಲ್ಲಿ ತಮ್ಮದೇ ಆದ ಉಪಕೋಶಗಳನ್ನು ಹೊಂದಿದ್ದವು. ಈ ಶಾಖೆಯನ್ನು ಕ್ರಿ.ಶ.೧೫೩೮ ರಲ್ಲಿ ಶೇಖ್ ಅಬ್ದುಲ್‌ಗೊಡ್ಡೋಸ್ ಗಂಗೋಹಿ ಕೂಡ ಪ್ರೋತ್ಸಾಹಿಸಿದನು. ಇದು ಸೂಫಿಸಂನ ಮೂಲಭೂತ ತತ್ವಗಳಾದ, ಜಲಿ, ಪಠನ, ಶೇಖ್‌ರೊಂದಿಗೆ ಹೃದಯ ಸಂಬಂಧ ಹೊಂದುವುದು, ೪೦ ದಿನಗಳ ಉಪವಾಸ ಮತ್ತು ಪ್ರಾರ್ಥನೆ, ನಿರಾಹಾರ ಮತ್ತು ಮೌನ ಮತ್ತು ಮನ್‌ಮ್ ಮತ್ತು ಶುದ್ಧೀಕರಣ ಬಗ್ಗೆ ಜಾಗ್ರತೆ ಈ ತತ್ವಗಳನ್ನು ಎತ್ತಿಹಿಡಿದು ಪ್ರಾಮುಖ್ಯತೆ ನೀಡಿದನು.[೬೮]

ಬಹಮನಿ ಕಾಲದ ಪ್ರಸಿದ್ಧ ಸೂಫಿ ಸಂತರೆಂದರೆ ಫೈಜುಲ್ಲಾ ಅಂಜು, ಶೇಖ್ ಸಿರಾಜುದ್ದೀನ್, ಮಲಿಕ್ ಸೈಫುದ್ದೀನ್ ಘೋರಿ, ಶೇಖ್ ಸಲೀಮ್ ಚೇಸ್ತಿ, ಮುಂತಾದವರು. ಈ ಎಲ್ಲಾ ಸಂತರು ಉತ್ತಮವಾದ ಜೀವನ ಮೌಲ್ಯಗಳನ್ನು ಅಳವಡಿಸಿಕೊಂಡು, ಪಂಡಿತರು, ವಾಗ್ಮಿಗಳು, ರಾಜನೀತಿ ತಜ್ಞರೂ ಆಗಿದ್ದರು. ಭಕ್ತಿ, ಭಾವ, ಭಾತೃತ್ವ, ನಿಷ್ಠೆ ಇವು ಅವರ ಮೌಲ್ಯಗಳಾಗಿದ್ದವು. ಸೂಫಿ ಚಳುವಳಿಯು ದಕ್ಷಿಣದಲ್ಲಿ ಧಾರ್ಮಿಕ ಮತ್ತು ವೈಚಾರಿಕ ರಂಗದಲ್ಲಿ ಮಹತ್ವದ ಪಾತ್ರವಹಿಸಿತು. ಸಾಫ್(ಶುದ್ಧಿ) ಇದರ ಅಪಭ್ರಂಶವೇ 'ಸೂಫಿ' ಎಂದಿದ್ದು, ಮನಸ್ಸುಗಳನ್ನು ಶುದ್ಧೀಕರಿಸಿಕೊಳ್ಳುವ ವಿಚಾರಗಳ ಸಂಗಮವೇ ಸೂಫಿ. ಮನುಷ್ಯನು ಭಗವಂತನ ಸಾಕ್ಷಾತ್ಕಾರವನ್ನು ಪಡೆಯಲು ತನ್ನ ಆತ್ಮಶುದ್ಧಿಗೆ ಮೊದಲು ಪ್ರಯತ್ನಿಸಬೇಕು. ಈ ಪ್ರಯತ್ನಕ್ಕೆ ದಾರಿ ಕಲ್ಪಿಸಿಕೊಟ್ಟಿದ್ದೇ ಸೂಫಿ ಚಳುವಳಿ. ಮನುಷ್ಯ–ಮನುಷ್ಯನನ್ನು ಪ್ರೀತಿ–ಗೌರವಗಳಿಂದ ನೋಡಿದರೆ ಮಾತ್ರ ಆತನಿಗೆ ಭಗವಂತನು ಸಿಗುತ್ತಾನೆ. ಭಗವಂತನ ದೃಷ್ಟಿಯಲ್ಲಿ ಜಾತಿ, ಮತ, ಪಂಥಗಳೆಂಬ ಬೇಧಗಳು ಸಲ್ಲದ ವಿಚಾರಗಳು. ಪ್ರೀತಿ, ಗೌರವ, ದಾನ, ಧರ್ಮ, ಸಹಕಾರ, ಉಪಕಾರಗಳಿಂದ ಮನುಷ್ಯರಲ್ಲಿ ಭಗವಂತನನ್ನು ಕಾಣಬಹುದು ಎಂದು ಸೂಫಿ ಸಂತರು ಹೇಳಿದ್ದಾರೆ.[೬೯]

ಸೂಫಿ ಪಂಥವು ಇಸ್ಲಾಂನ ಆಧ್ಯಾತ್ಮಿಕ ರೂಪವಾಗಿದ್ದು, ಇತರೆ ಎಲ್ಲಾ ಧರ್ಮಗಳ ಉನ್ನತ ಮೌಲ್ಯಗಳನ್ನು ಸೂಫಿ ಪಂಥವು ಅಳವಡಿಸಿಕೊಂಡಿದೆ. ಸೂಫಿ ಸಂತರು ಮಾನವರೆಲ್ಲರೂ ಒಂದೇ, ಮಾನವರಲ್ಲಿ ಮೇಲು-ಕೀಳು, ಜಾತಿ-ವಿಜಾತಿ ಎನ್ನುವುದು ತರವಲ್ಲ ಎಂದು ಬೋಧಿಸಿದರು. ದಖ್ಖನ್‌ನಲ್ಲಿ ಆ ಕಾಲದಲ್ಲಿ ಅಸ್ತಿತ್ವ ದಲ್ಲಿದ್ದ ಪ್ರಮುಖ ಎರಡು ಪಂಗಡಗಳಾದ ಷಿಯಾ ಮತ್ತು ಸುನ್ನಿ ಪಂಗಡಗಳಲ್ಲಿ ಯಾವುದೇ ಬೇಧ-ಭಾವವಿಲ್ಲವೆಂದು ಮನವರಿಕೆ ಮಾಡಿಕೊಟ್ಟು, ಶಾಂತಿ, ಸಮಾನತೆ ಮತ್ತು ಸಹಬಾಳ್ವೆಗೆ ಹೆಚ್ಚಿನ ಒತ್ತನ್ನು ನೀಡಿದರು. ಹಿಂದೂ-ಮುಸ್ಲಿಂ ಧರ್ಮಗಳಲ್ಲಿ ಐಕ್ಯತಾ ಭಾವನೆಯನ್ನು ಮೂಡಿಸಿದ್ದು ಸೂಫಿ ಚಳುವಳಿಯ ಮಹತ್ವದ ಸಾಧನೆಯೆಂದೇ ಹೇಳಬಹುದು. ಈಶ್ವರ-ಅಲ್ಲಾ, ರಾಮ-ರಹೀಮರೆಲ್ಲರೂ ಒಂದೇ, ಏಕಮೇವ ದೇವನೇ ಈ ಜಗತ್ತಿನ ಒಡೆಯ ಎಂದು ತಿಳಿಸಿಕೊಡುವುದರ ಮೂಲಕ ಮಾನವೀಯ ಮೌಲ್ಯಗಳಿಗೆ ತಳಹದಿ ಹಾಕಿದರು. ಸೂಫಿ ಚಳುವಳಿಯು ಸಮಾಜ, ಸಂಸ್ಕೃತಿ, ಭಾಷೆ, ಧರ್ಮಗಳ ತಡೆಗೋಡೆಗಳನ್ನು ಮೀರಿ ನಿಲ್ಲುವಷ್ಟರಮಟ್ಟಿಗೆ ಮಧ್ಯಯುಗೀನ ಕಾಲದಲ್ಲಿ ಜನಪ್ರಿಯತೆ ಪಡೆಯಿತು. ಸೂಫಿಗಳಲ್ಲಿ ಅತ್ಯಂತ ಖ್ಯಾತಿ ಪಡೆದ ಪಂಗಡವಾದ ಚಿಸ್ತಿ ಪಂಗಡದಲ್ಲಿ ಪ್ರಧಾನ ಸಂತನೆಂದರೆ 'ಶೇಖ್ ನಿಜಾಮುದ್ದೀನ್ ಔಲಿಯಾ'. ಬಹಮನ್ ಷಾನಿಗೆ ಭವಿಷ್ಯವಾಣಿಯಾಗಿ ನೀನು ಮುಂದೆ ದಖ್ಖನ್ ಸುಲ್ತಾನನಾಗುವೆ ಎಂದು ಹೇಳಿದ್ದರು. ಬಹಮನ್‌ನು ತಾನು ಸುಲ್ತಾನನಾದ ನಂತರ ಈ ಸೂಫಿ ಸಂತನ ಹೆಸರಿನಲ್ಲಿ ಅಪಾರ ಕಾಣಿಕೆಗಳನ್ನು ನೀಡಿದನು. ಖಾದ್ರಿಯ, ನಕ್ಷಬಂಧಿ, ಶಾತ್ತರಿಯಾ ಎಂಬುವವು ಸೂಫಿಯರ ಇತರ ಪ್ರಮುಖ ಪಂಗಡಗಳಾಗಿದ್ದವು. ದಖ್ಖನ್ನಿನ ಬಹಮನಿ ರಾಜಕೀಯದಲ್ಲಿ ಸೂಫಿ ಸಂತರಿಗೆ ವಿಶೇಷವಾದ ಸ್ಥಾನಮಾನಗಳಿದ್ದವು. ಸಂತರಾದ 'ಶೇಖ್ ನಿಜಾಮುದ್ದೀನ್ ಔಲಿಯಾ', 'ಶೇಖ್ ಬರ್ಹಾನುದ್ದೀನ್ ಘಾರಿಬ್', 'ಶೇಖ್ ಐನುದ್ದೀನ್ ಬಿಜಾಪುರಿ' ಹಾಗೂ 'ಶೇಖ್ ಸಿರಾಜುದ್ದೀನ್ ಜುನ್ಯೆದಿ'ಯವರು ಹಸನ್ ಗಂಗೂ ಬಹಮನ್‌ಷಾನ ಕಾಲದ ಪ್ರಸಿದ್ಧ ಸೂಫಿ ಸಂತರಾಗಿದ್ದರು. 'ಖಲೀಲ್ ಉಲ್ಲಾ' ಮತ್ತು 'ಸೈಯದ್ ಹನೀಫ್' ಎಂಬ ಸೂಫಿ ಸಂತರು ಎರಡನೇ ಅಲ್ಲಾವುದ್ದೀನ್‌ನ ಕಾಲದಲ್ಲಿ ವಿಶೇಷಕ್ಕೆ ಗೌರವಕ್ಕೆ ಪಾತ್ರರಾಗಿದ್ದರು. ಅವರನ್ನು ಸುಲ್ತಾನನು ತನ್ನ ಎಡಬಲಗಳಲ್ಲಿ ಕೂಡ್ರಿಸಿಕೊಳ್ಳುತ್ತಿದ್ದನೆಂದು ಇತಿಹಾಸ ಹೇಳುತ್ತದೆ. ಶೇಖ್ ನಿಜಾಮುದ್ದೀನ್ ಔಲಿಯಾನ ಶಿಷ್ಯರಲ್ಲೊಬ್ಬನಾದ 'ಮಹಮ್ಮದ್ ಗೇಸೂದರಾಜ್'ನು ದಖ್ಖನ್ ಕಾಲದ ಪ್ರಮುಖ ಅನುಭಾವಿ ಸೂಫಿ ಸಂತನೆನಿಸಿಕೊಂಡಿದ್ದನು. ಔಲಿಯಾನ ಇನ್ನೊಬ್ಬ ಹಿರಿಯ ಶಿಷ್ಯ 'ಶೇಖ್ ಬರ್ಹಾನುದ್ದೀನ್ ಘಾರಿಬ್'ನು ದಕ್ಷಿಣದಲ್ಲಿ ಚಿಸ್ತಿ ಪಂಥವು ಮತ್ತಷ್ಟು ಬಧ್ರವಾಗುವಂತೆ ಶ್ರಮಿಸಿದನು, ಈ ಸಂತನು ಮಾನವೀಯ ಮೌಲ್ಯಗಳಿಗೆ ಹೆಚ್ಚಿನ ಒತ್ತನ್ನು ಕೊಟ್ಟು ಮಾನವರು ನಿಸ್ವಾರ್ಥದಿಂದ ಸೇವೆಯನ್ನು ಮಾಡಬೇಕೆಂದು ಪ್ರೇರೇಪಿಸಿದನು. 'ಅಮೀರ್ ಹಸನ್ ಅಲ್ಯೆ ಸಿಜ್ಜಿ' ಇನ್ನೊಬ್ಬ ಖ್ಯಾತ ಸೂಫಿ ಸಂತನಾಗಿದ್ದು, ಸೂಫಿ ತತ್ವಗಳನ್ನು ತನ್ನ ಕವಿತೆಗಳ ಮೂಲಕ ಹಾಡಿ ಪ್ರಚುರಪಡಿಸಿದನು.

ಮಹಮ್ಮದ್ ಹುಸೇನ್ ಬಂದೇನವಾಜ್ ಗೇಸೂದ್‌ರಾಜನು ಬಹಮನಿ ಆಸ್ಥಾನದ ಆ ಕಾಲದ ಅತ್ಯಂತ ಶ್ರೇಷ್ಠ ಸೂಫಿ ಸಂತನಾಗಿದ್ದನು. ಇದನ್ನು ಪ್ರಾರಂಭದಲ್ಲಿ ದೆಹಲಿಯಲ್ಲಿ ಪ್ರಚಲಿತವಿದ್ದು, ಸೂಫಿ ತತ್ವಗಳನ್ನು ಎತ್ತಿ ಹಿಡಿದಂತನಾಗಿದ್ದನು. ಈ ಸಿದ್ಧಾಂತಗಳು ಉಲೇಮ ಅಥವಾ ಇಸ್ಲಾಮಿಕ್ ಸಂಪ್ರಾದಾಯಿಕತೆ ಯನ್ನು ವಿರೋಧಿಸಿದನು. ಆದರೆ ಬಂದನ್‌ವಾಜ್ ಆಸ್ಥಾನದೊಂದಗಿನ ರಾಜಿ ಒಪ್ಪಂದವು ಅವನ ಸ್ಥಾನಮಾನಗಳನ್ನು ಇನ್ನೂ ಹೆಚ್ಚು ಸಾಂಪ್ರಾದಾಯಿಕಗೊಳಿಸಿದವು. ಇಲ್ಲಿ ಗಮನಿಸಬೇಕಾದ ಒಂದು ವಿಪರ್ಯಾಸವೆಂದರೆ, ಚಿಸ್ತಿಗಳು ಮೂಲತ: ದಖ್ಖನ್-ಮುಸ್ಲಿಂರ ಸಂಯೋಜನೆಯಿಂದಾದರೆ, 'ಶತಾರಿ' ಮತ್ತು ಖಾದ್ರಿ ಪಂಗಡಗಳು ಅಜಮೇರಿ ಮತ್ತು ಅರಬ್ ವಂಶಾವಳಿಗಳನ್ನು ಉಳಿಸಿಕೊಂಡಿದ್ದವು.

ಸೈಯದ್ ಮಹಮ್ಮದ್ ಗೇಸೂದರಾಜ್‌ನು ಫಿರೋಜ್‌ಷಾನ ಆಪ್ತ ಧರ್ಮಾಧಿಕಾರಿಯೂ ಮತ್ತು ಮಿತ್ರನೂ ಆಗಿದ್ದನು. ಮುಂದೆ ಫಿರೋಜ್‌ನ ಸೋದರ ಅಹ್ಮದ್‌ಖಾನನು ರಾಜ್ಯದ ಉತ್ತರಾಧಿಕಾರಿಯಾಗುವನೆಂದು ಈತನು ಆಶೀರ್ವಧಿಸಿದ ಮೇಲೆ ಸುಲ್ತಾನನಾದ ಫಿರೋಜ್‌ಷಾನಿಗೂ ಮತ್ತು ಗೇಸೂದರಾಜ್‌ನಿಗು ನಡುವಿನ ಸಂಬಂಧಗಳಿಗೆ ಧಕ್ಕೆಯುಂಟಾಯಿತು. ಸೂಫಿ ಸಂತನಾದ ಗೇಸೂದರಾಜ್‌ನು ಖ್ಯಾತ ಮತ್ತು ಅಸಾಧಾರಣ ಪಂಡಿತನಾಗಿದ್ದು ಪವಿತ್ರ ಖುರಾನ್ ಮೇಲೆ ವ್ಯಾಖ್ಯಾನವೊಂದನ್ನು ರಚಿಸಿರುವನು. ಈತನು ಇಮಾಂ ಹಬು ಹನೀಫನು ರಚಿಸಿದ 'ಅಲ್ ಅಖ್‌ದಾರ'ಗೆ ವ್ಯಾಖ್ಯಾನವನ್ನು ಬರೆದಿದ್ದಾನೆ. ಈತನು ಬರೆದ ಇಬ್ರಾಹಿಂ ಬುಕಾರಿಯು ಬರೆದ 'ತಾರಫ್' ಎಂಬ ಗ್ರಂಥದ ಮೇಲೆ ಬರೆದ ವ್ಯಾಖ್ಯಾನಗಳು ಪ್ರಸಿದ್ಧಿ ಹೊಂದಿದವು. ಗೇಸೂದರಾಜಾನು 'ಇಷ್ಕನಾಮಾ'ಗಳಂತಹ ಕೃತಿಗಳು ಸೇರಿದಂತೆ ಅನೇಕ ಕವಿತೆಗಳ ಸಂಗ್ರಹಗಳನ್ನು ರಚಿಸಿದ್ದಾನೆ, ಈತನು ಇಸ್ಲಾಂ ಧರ್ಮ, ಹಿಂದೂಧರ್ಮ, ಪುರಾಣ, ತತ್ವಶಾಸ್ತ್ರಗಳ ಮೇಲೆ ಹಿಡಿತ ಸಾಧಿಸಿದ್ದು ವಿಮರ್ಶಾತ್ಮಕವಾಗಿ ಅನೇಕ ಕೃತಿಗಳನ್ನು ರಚಿಸಿ ಮುಸ್ಲಿಮೇತರರನ್ನು ಆಕರ್ಷಿಸಿದ್ದನು. ಈತನ ಉದಾರ ನೀತಿ ಮತ್ತು ವೈಚಾರಿಕ ಶಕ್ತಿಗಳು ದಖ್ಖನ್‌ರನ್ನು ಆಕರ್ಷಿಸಿದವು. ಈತನ ಮಗನಾದ ಸೈಯದ್ ಅಕ್ಬರ್ ಹುಸೇನಿಯೂ ಸಹ ಸೂಫಿ ಪಂಥ ಚಳುವಳಿಯಲ್ಲಿ ತೊಡಗಿದ್ದನೆಂದು ತಿಳಿದುಬರುತ್ತದೆ.[೨೦]

ಧಾರ್ಮಿಕ ವಿಷಯಗಳಲ್ಲಿ ಸ್ವಲ್ಪಮಟ್ಟಿಗೆ ಪರಸ್ಪರ ಪ್ರಭಾವವಿತ್ತು ಎಂಬುದು ಸೂಫಿ ಪಂಥದಿಂದ ಒಂದು ಕಡೆ ಮತ್ತು ಮಧ್ಯಯೂಗೀನ ಹಿಂದೂ ಸಾಧು ಸಂತರ ಬೋಧನೆಗಳಿಂದ ಮತ್ತೊಂದು ಕಡೆ ಗೊತ್ತಾಗುತ್ತದೆ. ಈ ಬಗ್ಗೆ ಮುಖ್ಯವಾಗಿ ಅನುಭಾವಿ ಪಂಥಕ್ಕೆ ಸೇರಿದ ಮುಸ್ಲಿಂ ಸಂತರನ್ನು ಹಿಂದೂಗಳು ಗೌರವಿಸುತ್ತಿದ್ದರು, ಹಾಗಿದ್ದರೂ ಹಿಂದೂಗಳು ಅವರನ್ನು ತಮ್ಮ ಮನೆಯೊಳಗೆ ಸೇರಿಸಿಕೊಳ್ಳುತ್ತಿರಲಿಲ್ಲ. ಹಿಂದೂ ಸನ್ಯಾಸಿಗಳು ಯೋಗಿಗಳು ಮತ್ತು ಜ್ಯೋತಿಷಿಗಳ ಬಗ್ಗೆ ಮುಸ್ಲಿಮರಿಗೆ ಗೌರವವಿತ್ತು.ಸತ್ಯಪೀರರಂತಹ ಸ್ಥಳೀಯ ಆರಾಧಕರನ್ನು ಹಳ್ಳಿಗಳಲ್ಲಿನ ಹಿಂದೂ ಮುಸ್ಲಿಮರಿಬ್ಬರೂ ಕೂಡಿಯೇ ಗೌರವಿಸುತ್ತಿದ್ದರು. ಅಂದಿನ ಕಾಲದಲ್ಲಿ ಸೂಫಿ ಚಳುವಳಿಯನ್ನು ಪ್ರವರ್ಧಮಾನಕ್ಕೆ ತಂದಂತಹ ಇತರ ಸಂತರೆಂದರೆ "ಬಾಬಾ ಫರೀದುದ್ದೀನ್, ನಾಜಿರುದ್ದೀನ್ ಮಹಮೂದ್, ಚಿರಾಗ್-ಇ-ಧೇಲ್ವಿ, ಖ್ವಾಜಾ ಶೇಖ್ ತಾಕಿ ಉದ್ದೀನ್, ಗ್ವಾಲಿಯರದ ಮಹಮ್ಮದ್ ಗೌಸ್, ಮಲ್ಲಿಕ್ ಮಹಮ್ಮದ್ ಜೈಸಿ" ಮೊದಲಾದವರು. ಇವರು ಹಿಂದೂ-ಮುಸ್ಲಿಮರಲ್ಲಿ ಭಾವೈಕ್ಯತೆಯನ್ನು ಮೂಡಿಸಿ ಮಾನವತೆಯ ತತ್ವಗಳನ್ನು ಸಾರಿದರು. ಧರ್ಮದ ಭಾಗವಾಗಿ ಸೂಫಿ ಸಂತರು ಅನೇಕ ಆಚರಣೆಗಳನ್ನು ಜಾರಿಗೆ ತಂದಿರುವರು, ಇವುಗಳಲ್ಲಿ ಪ್ರಮುಖವಾದವು ಗಳೆಂದರೆ ಸೂಫಿಗಳು ದೇವರನ್ನು ನೆನೆಯುವುದು(ಧಿಕ್ರ), ಹಾಡು-ನೃತ್ಯದ ಮೂಲಕ ದೇವರನ್ನು ಒಲಿಸಿಕೊಳ್ಳುವುದು(ಹದ್ರಾ) ಮತ್ತು ಧಾರ್ಮಿಕ ಹಾಡುಗಳನ್ನು(ಖವ್ವಾಲಿ ಎಂದು ಕರೆಯುತ್ತಿದ್ದರು) ಹಾಡುವುದು. ಇವು ಇಂದಿಗೂ ಸಹ ಜನಪ್ರಿಯವಾಗಿವೆ. ದೈವತ್ವ ಮತ್ತು ದೈವ ಬಲವನ್ನು ಪಡೆಯಲು ಸೂಫಿಗಳು ಈ ಆಚರಣೆಗಳನ್ನು ಮಾಡುತ್ತಿದ್ದರು.

ಬಹಮನಿ ಸುಲ್ತಾನರ ರಾಜ್ಯ ಸ್ಥಾಪನೆಯೊಂದಿಗೆ ನಗರ ಜೀವನವು ನವೋತ್ಸಾಹವನ್ನು ಪಡೆದುಕೊಂಡಿತು. ನಗರಗಳಲ್ಲಿ ಹೆಣ್ಣು-ಹೆಂಡದ ದುರಾಭ್ಯಾಸಗಳು ಪಿಡುಗಾಗಿ ಪರಿಣಮಿಸಲ್ಪಟ್ಟವು. ಈ ಸಮಯದಲ್ಲಿ ಸೂಫಿ ಸಂತನಾದ 'ಶೇಖ್ ಜೈನ್-ಉದ್-ದೀನನು' ಸಾಮಾನ್ಯ ಜನರಲ್ಲಿನ ಮತ್ತು ಅಧಿಕಾರಿಗಳಲ್ಲಿನ ದುರಾಭ್ಯಾಸಗಳನ್ನು ತೊಡೆದುಹಾಕುವ ಪ್ರಯತ್ನವನ್ನು ಮಾಡಿದನು. ದಖ್ಖನ್‌ನ ಸೂಫಿ ಸಂತರು ಅಂದಿನ ಸಮಾಜದ ಅಸಮಾನತೆಯನ್ನು ನಿವಾರಿಸಲು ಪ್ರಯತ್ನಿಸಿದರು. ಬಡವ-ಶ್ರೀಮಂತ, ಹಿಂದೂ-ಮುಸ್ಲಿಂ, ಗುಲಾಮ-ಸ್ವತಂತ್ರ ಎಂದು ಬೇಧಭಾವ ಮಾಡದೆ ಎಲ್ಲರನ್ನೂ ಸಮಾನವಾಗಿ ಸೂಫಿ ಸಂತರು ತಮ್ಮ

ಖಾಂಬಾಗಳಿಗೆ ಆಹ್ವಾನಿಸಿದರು. ಈ ಖಾಂಬಾಗಳಲ್ಲಿ ವಿವಿಧ ಧಾರ್ಮಿಕ ಪಂಥೀಯರು ಮತ್ತು ವಿವಿಧ ಭಾಷಾ ಪಂಡಿತರು ಸಮಾವೇಶಗೊಂಡು ಚರ್ಚಿಸುತ್ತಿದ್ದರು, ಈ ಚರ್ಚೆಗಳಿಂದ ಉರ್ದು ಭಾಷೆಯು ಶ್ರೀಮಂತವಾಯಿತು. ಸೂಫಿ ಅನುಭಾವಿಕ ಚಳುವಳಿಯು ಎರಡು ಸ್ತರಗಳಲ್ಲಿ ಕಾರ್ಯನಿರ್ವಹಿಸಿತು. ಉನ್ನತ ಸ್ತರದಲ್ಲಿ ವಿಸ್ತೃತವಾದ ಜೀವನ ದರ್ಶನವನ್ನು ನೀಡಿ, ಕೆಳಸ್ತರಗಳಲ್ಲಿ ಮೂಢನಂಬಿಕೆಯನ್ನು ಮತ್ತು ಅಂಧ ಕಂದಾಚಾರಗಳನ್ನು ಹುಟ್ಟುಹಾಕಿತು. ಇವರಲ್ಲಿ ಕೆಲವು ಸೂಫಿಗಳು ಸಂಪತ್ತನ್ನೆಲ್ಲಾ ದಾನ ಮಾಡಿ ಭಿಕ್ಷೆಗೈದು ಜೀವನ ಸಾಗಿಸುತ್ತಿದ್ದರು. ಇನ್ನೂ ಕೆಲವರು ಜಾಗೀರು, ಜಮೀನುಗಳ ಜೊತೆಗೆ ಸಂಸಾರಿಗಳೂ ಸಹ ಆಗಿದ್ದು ಮದ್ರಸಾಗಳೆಂದು ಧಾರ್ಮಿಕ ಪಾಠಶಾಲೆಗಳನ್ನು ನಡೆಸುತ್ತಿದ್ದರು. ಇನ್ನೂ ಕೆಲವರು ಉದ್ದಾಮ ಪಂಡಿತರು, ಮಹಾನ್ ಲೇಖಕರು, ವ್ಯಾಖ್ಯಾನಕಾರರು, ಕವನಕರ್ತರು, ವಿಮರ್ಶಕರು, ಕೀರ್ತನಕಾರರು, ಇತ್ಯಾದಿಗಳು ಆಗಿದ್ದರು. ಈ ಸೂಫಿಗಳು ಸುಲ್ತಾನರು, ರಾಜರು, ಸಾಮಂತರು ಹಾಗೂ ಶ್ರೀಮಂತರುಗಳಿಗೆ ಗುರುಗಳಾಗಿದ್ದು, ಬಡವರಿಗೂ ಸಹ ಹತ್ತಿರವಾಗಿದ್ದರು. ಹಲವಾರು ಸೂಫಿಗಳು ರಾಜಕೀಯ ಸಂಪರ್ಕದಿಂದ ದೂರವಿದ್ದು, ರಾಜರ ಅವಕೃಪೆಗೆ ತುತ್ತಾಗಿ ದೇಶಭ್ರಷ್ಟರಾಗಿ ಪ್ರಾಣ ಕಳೆದುಕೊಳ್ಳುವುದು ಮುಂತಾದ ಜೀವನದ ಕಿರುಕುಳಗಳಿಗೆ ಒಳಗಾಗಿದ್ದರು. ಇಂಥವರಲ್ಲಿ ಬಿಜಾಪುರದ ಅಮೀನುದ್ದೀನ್ ಪ್ರಸಿದ್ಧರಾಗಿದ್ದಾರೆ. ಹಲವು ಖಿಲ್ಜಿ ದಳಪತಿಗಳು ಸೂಫಿ ಸಂತರ ನಿಷ್ಠಾವಂತ ಅನುಯಾಯಿಗಳು ಆಗಿದ್ದರು. ಇಂಥವರೊಡನೆ ದೆಹಲಿಯಿಂದ ಗುಲ್ಬರ್ಗಾ ಮತ್ತು ಬಿಜಾಪುರಗಳಿಗೆ ಬಂದ ಸೂಫಿಗಳಲ್ಲಿ ಪ್ರಮುಖರಾದವರೆಂದರೆ ಸೈಯ್ಯದ್ ಹುಸೇನ್, ಶೇಖ್ ಶಿಯಾಬುದ್ದೀನ್, ಹಸನ್‌ನೈಜಿ, ಶೇಖ್ ಅಜೀಜ್ ಉದ್ದೀನ್, ಶೇಖ್ ಕಮಾಲುದ್ದೀನ್, ಬಂದೇನವಾಜ ಮತ್ತಿತರರು.

### ೩.೬.೭. ಸೌಹಾರ್ದತೆ ಬೆಳೆಸಿದ ಸೂಫಿಗಳು

ಅನೇಕ ಸೂಫಿ ಸಂತರು ಸಸ್ಯಹಾರಿಗಳು, ಸಂಸಾರಿಗಳು, ವಿರಕ್ತರಾಗಿದ್ದು, ಹಿಂದೂ ಮುಸ್ಲಿಂ ಭ್ರಾತೃತ್ವವನ್ನು ಬೆಳೆಸುವಲ್ಲಿ ಕಾರ್ಯನಿರತರಾಗಿದ್ದರು. ಇಂಥವರಲ್ಲಿ ಕೆಲವರು ಈ ಕೆಳಗಿನಂತಿದ್ದಾರೆ.

ಗುಲ್ಬರ್ಗಾದ ಬಂದೇನವಾಜ

ಜೀವರ್ಗಿಯ ಅಮೀನುದ್ದೀನ್ ಮತ್ತು ಚಂದಾಹುಸೇನಿ

ಕೊಡೆಕಲ್ಲಿನ ಮಹಮ್ಮದ್ ಸರ್ವರ್

ಬಿಜಾಪುರದ ಅನ್ವರ್ ಉದ್ದೀನ್ ಮತ್ತು ಹಾಷಿಂ ಪೀರ್‌ಶೇಖ್ ಅಮಿನುದ್ದೀನ್

ಜಮಖಂಡಿಯ ಪೀರ್ ಅಗಾಖಾನ್

ರಾಯಚೂರಿನ ಕೌತಾಳಂನ ಖಾದರ್‌ಲಿಂಗ ಮತ್ತು ಜಿಂದಾಶಾವ

ಬೀದರಿನ ಅಬ್ದುಲ್ ಖಾದರ್, ಅಹ್ಮದ್ ಶಾವಲಿ, ಖರೀಮುಲ್ಲಾ ಷಾ ಖಾದ್ರಿ

ಬಳ್ಳಾರಿಯ ಲಂಗರ್‌ಶಾವಲಿ, ಸರ್ವರ್ ಹುಸೇನ್

ಚಿತ್ರದುರ್ಗ ಜಿಲ್ಲೆಯ ಸೈಯ್ಯದ್ ಷಾ ಖಾದ್ರಿ

ಚಳ್ಳಕೆರೆಯ ನೂರುಲ್ಲಾ ಚಿಸ್ತಿ

ತುಮಕೂರು ಜಿಲ್ಲೆಯ ಚೋಳೂರಿನ ಕರೀಮುಲ್ಲಾ ಷಾ, ಕೆಸರು ಮಡುವಿನ ಮೋಮಿನ್ ಷಾ ಖಾದ್ರಿ

ಚಿಕ್ಕನಾಯಕನಹಳ್ಳಿಯ ಮೊಹಿಯುದ್ದೀನ್ ಷಾ ಖಾದ್ರಿ(ತಾತಯ್ಯ)

ದಕ್ಷಿಣ ಕನ್ನಡದ ಪುತ್ತೂರಿನ ವಲಿವುಲ್ಲಾ ಷಾ

ಕೋಲಾರದ ಅವಲಾಲಿಪೀರ್ ಕೊಡಗಿನ ಸೋಮವಾರಪೇಟೆಯ ಮಲಂಗ್‌ಶಾವಲಿ

ಧಾರವಾಡದ ಮದನ್‌ಶಾವಲಿ

ಸವಣೂರಿನ ಗುಲಾಮ್ ಷಾ ಖಾದ್ರಿ ಮತ್ತು ಜಲಾಲ್ ಷಾ ವಲಿ

ಶಿರಹಟ್ಟಿಯ ಸಿದ್ಧಿಕ್ ಅಂಬರ್ ಷಾ ವಲಿ

ಬೆಳಗಾವಿಯ ಚಿಕ್ಕೋಡಿಯ ಚಾಂದ್ ಪೀರ್

ದಾವಣಗೆರೆಯ ಚಾಂದ್ ಭಾಷಾ

ಹರಿಹರದ ನೂರುಲ್ಲಾ ಷಾ ಖಾದ್ರಿ

ಚಿಕ್ಕಮಂಗಳೂರಿನ ಖಾಜಾ ಅಸ್ಸಹಾಬ ಉನ್ನಬಿ

ಶಿವಮೊಗ್ಗದ ಜಲಾಲ್ ಉದ್ದೀನ್

ಚನ್ನಗಿರಿಯ ಮಹಮ್ಮದ ಷಾ ಮಸ್ತಾನ್

ಮೈಸೂರು ಜಿಲ್ಲೆಯ ಕೆ.ಆರ್. ನಗರದ ಹುಸೇನ್ ಚಿಸ್ತಿ

ಬೆಂಗಳೂರಿನ ತವಕಲ್ ಮಸ್ತಾನ್, ಶಿಫ್ತುರ್ ಅಲಿಷಾ,

ನೆಲಮಂಗಲದ ಶೇಖ್ ಕರೀಮ್(ಸಿದ್ಧರಬೆಟ್ಟ)[೮]

ಈ ಎಲ್ಲಾ ಸೂಫಿ ಸಂತರು ಹಿಂದೂ–ಮುಸ್ಲಿಂರ ಮಧ್ಯ ಸೌಹಾರ್ದತೆ ಮೂಡಿಸುವಲ್ಲಿ ಶ್ರಮಿಸಿದರು. ಕೆಲವು ಸೂಫಿ ಸಂತರು ಬ್ರಾಹ್ಮಣ ಗುರುಗಳ ನಿಕಟವರ್ತಿಗಳೂ ಸಹ ಆಗಿದ್ದರು. ಆದರೆ ಸೂಫಿಗಳೊಡನೆ ಹೆಚ್ಚು ನಿಕಟ ಸಂಬಂಧಗಳನ್ನು ಬೆಳೆಸಿದವರೆಂದರೆ ಉತ್ತರ ಕರ್ನಾಟಕದ ವೀರಶೈವರು ಮತ್ತು ದಲಿತರು. ಮಳೆಬಾರದಕ್ಕೆ, ಕಾಯಿಲೆಗಳಿಗೆ, ತಾಯ್ತಗಳಿಗೆ, ದೆವ್ವಗಳ ಉಚ್ಚಾಟನೆಗೆ, ಬಂಜೆತನ ನಿವಾರಣೆಗೆ, ಹುಚ್ಚು ಬಿಡಿಸಲು, ಕಳೆದು ಹೋದ ದನಕರುಗಳ ಮತ್ತು ವಸ್ತುಗಳ ಪತ್ತೆಗೆ, ಕಾಯಿಲೆ–ಕಸಾಲೆಗಳಿಗೆ, ಯಂತ್ರ–ಮಂತ್ರ–ಚಿಕಿತ್ಸೆ ಮೊದಲಾದ ಪವಾಡಗಳ ಮೂಲಕ ದೀನದಲಿತರ ಉದ್ಧಾರಕ್ಕಾಗಿ ಸೂಫಿಗಳು ಹೆಸರುವಾಸಿಗಳಾಗಿದ್ದರು. ಉದಾಹರಣೆಗೆ: ಗುಲ್ಬರ್ಗಾದ ಶರಣ ಬಸವೇಶ್ವರ ಮಠದ ಉತ್ಸವಗಳು ಸೂಫಿ ಸಂತರ ಮೂಲಕ ಉದ್ಘಾಟಿತವಾಗುತ್ತಿದ್ದವು. ಅದೇ ರೀತಿ ಬಂದೇನವಾಜ ದರ್ಗಾದ ಉರುಸ್ ಉತ್ಸವ ಸಹ ವೀರಶೈವರ ಅಂದರೆ ಶರಣ ಬಸವೇಶ್ವರ ಸ್ವಾಮಿಗಳಿಂದ ಉದ್ಘಾಟನೆಗೊಳ್ಳುವ ಪರಂಪರೆ ಬೆಳೆದುಬಂದಿದೆ. ಸಾವಳಿಗೆಯ ವೀರಶೈವ ಮಠದ(ಗುಲ್ಬರ್ಗಾ) ದೈನಂದಿನ ಭಜನೆ, ಉತ್ಸವ ಮೊದಲಾದ ಚಟುವಟಿಕೆಗಳಲ್ಲಿ ಸೂಫಿಗಳು ಹಾಗೂ ಸೂಫಿ ಪಂಥದ ಭಕ್ತರು ಪಾಲ್ಗೊಳ್ಳುತ್ತಾರೆ. ಇದೇ ರೀತಿ ಸೂಫಿ ದರ್ಗಾಗಳ ಉತ್ಸವಗಳಲ್ಲೂ ಸಹ ಹಿಂದೂಗಳು ಇಂದಿಗೂ ಭಾಗವಹಿಸುತ್ತಾರೆ. ಈ ಹಿಂದೂ–ಮುಸ್ಲಿಂರ ಸೌಹಾರ್ದತೆ ಗುಲ್ಬರ್ಗಾದ ಬಂದೇನವಾಜ ಮತ್ತು ಸಾವಳಗಿ ಮಠದ ಶಿವಲಿಂಗ ಸ್ವಾಮಿಗಳಿಂದ ಪ್ರಾರಂಭಗೊಂಡಿತು.

### ೩.೬.೮. ಉಗ್ರವಾದಿ ಸೂಫಿಗಳು

ಕೆಲವು ಸೂಫಿಗಳು ಸುನ್ನಿ ಪಂಥದವರಾಗಿದ್ದು ಮತಪ್ರಚಾರಕ್ಕಾಗಿ ಧರ್ಮಯುದ್ಧ, ರಕ್ತಪಾತ ಮತ್ತು ಉಗ್ರವಾದದಲ್ಲಿ ನಂಬಿಕೆಯನ್ನಿಟ್ಟಿದ್ದರು. ಧರ್ಮಯುದ್ಧಗಳಿಗೆ ಬೆಂಬಲವನ್ನು ನೀಡುವುದಲ್ಲದೇ ತಾವೂ ಸಹ ಭಾಗವಹಿಸುತ್ತಿದ್ದರು. ಇವರನ್ನು ಸೂಫಿ ಘಾಜಿಗಳೆಂದು ಕರೆಯಲಾಗುತ್ತಿತ್ತು. ಈಟನ್‌ರವರು ಇವರನ್ನು ಮಿಲಿಟರಿ ಘಾಜಿಗಳೆಂದು ಕರೆದಿದ್ದಾರೆ. ಇವರನ್ನು ಜಿಹಾದಿ ಸೂಫಿಗಳು ಅಥವಾ ಧರ್ಮ ಯುದ್ಧದ ಸೂಫಿಗಳೆಂದು ಸಹ ಕರೆಯುತ್ತಿದ್ದರು. ರಹಮತ್ ತರೀಕೆರೆಯವರ ಪ್ರಕಾರ ಕರ್ನಾಟಕದಲ್ಲಿ ಮೊದಲಿಗೆ ಕಾಣಿಸಿಕೊಂಡವರೇ ಜಿಹಾದಿ ಸೂಫಿಗಳು. ಪ್ರಮುಖರಾದವರೆಂದರೆ ಶೇಖ್‌ಸೂಫಿ ಸರಮಸ್ತ್, ಪೀರ್ ಖಂಡಾಯತ್, ಶೇಖ್‌ಶಾಹಿದ್, ಪೀರ್‌ಜುಮ್ಲಾ ಮುಂತಾದವರು. ಈ ಸೂಫಿಗಳು ಗುಲ್ಬರ್ಗಾದ ಸಗರಪುರ,

ಬಿಜಾಪುರದ ತಾಳಿಕೋಟೆ, ಬೀದರ್, ಚಿಕ್ಕಮಂಗಳೂರಿನ ಬಾಬಾಬುಡನಗಿರಿ, ಗೋರಿಗುಂಡಿ, ಕೊಡಗು ಮುಂತಾದ ಕಡೆಗಳಲ್ಲಿ ನಡೆದ ಜಿಹಾದ್ ಧರ್ಮ ಯುದ್ಧಗಳಲ್ಲಿ ಭಾಗವಹಿಸಿ ಶಹೀದ್ ಸಹ ಆದರು.

ಜೈನುದ್ದೀನ್, ಮುಂತಜಾಬ್ ಉದ್ದೀನ್, ಸಿರಾಜ್ ಉದ್ದೀನ್, ಜುನೈದಿ ಅಲ್ಲಾವುದ್ದೀನ್ ಜಯ, ಮುಂತಾದ ಸೂಫಿಗಳು ಗುಲ್ಬರ್ಗಾದಲ್ಲಿ ನೆಲೆಸಿದರು. ಇವರು ಬಹಮನಿ ಸುಲ್ತಾನರುಗಳಿಗೆ ರಾಜಗುರುಗಳಾಗಿದ್ದರು. ರಾಜ್ಯಾಭಿಷೇಕದ ಸಂದರ್ಭಗಳಲ್ಲಿ ಈ ಸೂಫಿಗಳು ಸುಲ್ತಾನಿನ ಸೊಂಟಕ್ಕೆ ಖಡ್ಗವನ್ನು ಬಿಗಿದು ಧರ್ಮ ಯುದ್ಧಗಳಿಗೆ ಕರೆ ಕೊಡುತ್ತಿದ್ದರು. ಸೂಫಿ ಸಂತರಲ್ಲಿ ಹಲವಾರು ಪಂಗಡಗಳಿದ್ದವು. ದಖ್ಖನಿನ ಸೂಫಿ ಸಂತರಲ್ಲಿ ಪ್ರಮುಖರಾದ ಸಂತರನ್ನು ಈ ರೀತಿಯಾಗಿ ವರ್ಗೀಕರಿಸಬಹುದು.

**೩.೬.೯. ಸೂಫಿ ಸಂತರ ದರ್ಗಾಗಳು(ಸಮಾಧಿ) ಮತ್ತು ಉರುಸುಗಳು(ಜಾತ್ರೆ)**

ಸೂಫಿಗಳು ಸ್ಥಾಪಿಸಿದ ಖನ್‌ಖಾನ್(ಮಠಗಳು)ಗಳ ಬಗ್ಗೆ ಸುನ್ನಿಗಳ ವಿರೋಧ ಬಹಳವಾಗಿತ್ತು. ಸೂಫಿಗಳ ವಿದ್ವತ್ತು, ತತ್ವಜ್ಞಾನ, ಪವಾಡ, ರೋಗ ನಿವಾರಣೆ ಮುಂತಾದ ಜನಸೇವೆಗಳಿಂದಾಗಿ ಅವರನ್ನು ಹತ್ತಿಕ್ಕುವುದು ಸುನ್ನಿಗಳಿಂದಾಗಲಿಲ್ಲ. ಕ್ರಮೇಣವಾಗಿ ಖನ್‌ಖಾನ್‌ಗಳಲ್ಲಿ ಸೂಫಿ ಸಂತರ ಸಮಾಧಿಗಳನ್ನು ಮಾಡಿ, ಅವುಗಳನ್ನು ದರ್ಗಾಗಳೆಂದು ಕರೆಯುವುದು ವಾಡಿಕೆಗೆ ಬಂದಿತು. ಈ ದರ್ಗಾಗಳಲ್ಲಿ ಪ್ರತಿ ವರ್ಷವು ಜಾತ್ರೆಗಳು ಅಂದರೆ ಉರುಸುಗಳು ನಡೆಯಲಾರಂಭಿಸಿದವು. ಉದಾಹರಣೆಗೆ: ಗುಲ್ಬರ್ಗಾದ ಬಂದೇನವಾಜ ದರ್ಗಾ, ಬಿಜಾಪುರದ ಅಮೀನುದ್ದೀನ್ ದರ್ಗಾ, ಅಬ್ದುಲ್ ರಜಾಕ್ ದರ್ಗಾ ಮುಂತಾದವುಗಳು. ಇಲ್ಲಿ ನಡೆಯುವ ವಾರ್ಷಿಕ ಉರುಸುಗಳಲ್ಲಿ ಹಿಂದೂ ಮತ್ತು ಮುಸ್ಲಿಂರ ಐಕ್ಯತಾ ಭಾವವನ್ನು ನಾವು ಕಾಣಬಹುದು. ಸೂಫಿ ಸಂತರಿಗೆ ಆಶ್ರಯ ನೀಡಿ ಪೋಷಣೆ ನೀಡಿದ ದಖ್ಖನಿನ ಸುಲ್ತಾನರಲ್ಲಿ ಪ್ರಮುಖರಾದವರೆಂದರೆ ಗುಲ್ಬರ್ಗಾದ ಹಸನ್ ಬಹಮನ್‌ಷಾ ಮತ್ತು ಒಂದನೇ ಮಹಮ್ಮದ್ ಫಿರೋಜ್, ಬಿಜಾಪುರದ ಎರಡನೇ ಯೂಸುಫ್ ಇಬ್ರಾಹಿಂ ಮತ್ತು ಒಂದನೇ ಅಲಿ, ಗೋಲ್ಕೊಂಡಾದ ಅಬ್ದುಲ್ ಹಸನ್ ಕುತುಬ್‌ಷಾ ಮತ್ತು ಅಬುಲ್ ಕುತುಬ್‌ಷಾ, ಅಹ್ಮದ್‌ನಗರದ ಹುಸೇನ್‌ಷಾ, ಬೀದರಿನ ಅಮೀರ್ ಬಾರಿದ್‌ಷಾ ಮತ್ತು ಬೀರಾರಿನ ಬುರಹಾನ್ ಇಮಾದ್ ಷಾ ಮುಂತಾದವರು.[೨]

ಸುಲ್ತಾನ ಫಿರೋಜ್ ಬಹಮನ್ ಷಾನು ಸಂತ ಸೈಯ್ಯದ್ ಮಹಮ್ಮದ್ ಹುಸೇನ್ ಗೇಸುದರಾಜರ ಪರಮ ಭಕ್ತನಾಗಿದ್ದು, ಅವರ ಅನುಯಾಯಿಯಾಗಿ ಅವರಿಗೆ ಅನೇಕ ಹಳ್ಳಿಗಳನ್ನು ಮತ್ತು ಪಟ್ಟಣಗಳನ್ನು ಧಾರ್ಮಿಕ ಉದ್ದೇಶದಿಂದ ದತ್ತಿ ನೀಡಿದ್ದನು. ಸಂಸ್ಕೃತದಲ್ಲೂ ಪಾಂಡಿತ್ಯ ಗಳಿಸಿದ ಗೇಸುದರಾಜರು ಅನೇಕ ಹಿಂದೂ ಪುರಾಣಗಳನ್ನೂ ಸಹ ಅಧ್ಯಯನ ಮಾಡಿದ್ದರು.

**ಸಮಾರೋಪ**

ಸೂಫಿ ಪಂಥವು ವ್ಯಾಪಕವಾಗಿ ಬೆಳೆದು ದಖ್ಖನ್‌ನ ಬಹಮನಿ ಸುಲ್ತಾನರಿಗೆ ಧಾರ್ಮಿಕ ಬಲವನ್ನು ನೀಡಿ, ಜನರ ನೈತಿಕತೆಯನ್ನು ಉತ್ತಮಪಡಿಸಿ, ಸಾಮಾಜಿಕ ಅನಿಷ್ಟತೆಗಳನ್ನು ನಿವಾರಿಸಲು ಶ್ರಮಿಸಿತು. ದಖ್ಖನ್‌ನಲ್ಲಿ ಸಂಸ್ಕೃತಿಗೆ ಮತ್ತು ಪ್ರಗತಿಗೆ ಪೂರಕವಾದ ಪರಿಸರವನ್ನು ಸೂಫಿ ಪಂಥವು ನಿರ್ಮಾಣ ಮಾಡಿತು. ಗುಲ್ಬರ್ಗಾ ಸೂಫಿ ಪಂಥದ ಅತ್ಯುನ್ನತ ಕೇಂದ್ರವಾಗಿಯೂ ಮತ್ತು ಇನ್ನಿತರ ಅನೇಕ ನಗರಗಳಲ್ಲೂ ಇದರ ಬೆಳವಣಿಗೆಯು ವ್ಯಾಪಿಸಿತು. ಗುಲ್ಬರ್ಗಾದಲ್ಲಿ ಹಜರತ್ ಖ್ವಾಜಾ ಬಂದೇನವಾಜ್, ಬಿಜಾಪುರದಲ್ಲಿ ಹಜರತ್ ಸೈಯಿದ್ ಹಷಿಂಪೀರ್, ಹಜರತ್ ಸೈಯಿದ್ ಖ್ವಾಜಾ ಅಮೀನ್-ಉದ್-ದೀನ್ ಮತ್ತು ಹಜರತ್ ಸೈಯಿದ್ ಮುರ್ತುಜ ಖಾದಿರಿ, ಬೆಳಗಾವಿಯಲ್ಲಿ ಹಜರತ್ ಸೈಯದ್ ಖಾತಲ್‌ಷಾ, ಧಾರವಾಡದಲ್ಲಿ

ಹಜರತ್‌ಷಾ ಮಹಮ್ಮದ್‌ವಾಲಿ ಅಲ್ಲಾ ಖಾದರಿ ಮತ್ತು ಬಾಬಾಬುಡನಗಿರಿಯಲ್ಲಿ ಹಜರತ್ ಬರ್ಹಾನ್‌-ಉದ್‌-ದೀನ್‌ಷಾ ಅಥವಾ ಬಾಬಾಬುಡನ್ ಇವರುಗಳು ಸೂಫಿ ಚಳುವಳಿಯನ್ನು ಪ್ರವರ್ಧಮಾನಕ್ಕೆ ತಂದು ಅದನ್ನು ಬಲಪಡಿಸಲು ಶ್ರಮಿಸಿದರೆಂದು ಇತಿಹಾಸದಿಂದ ತಿಳಿದುಬರುತ್ತದೆ.

**ಕೊನೆ ಟಿಪ್ಪಣಿಗಳು**


೧. Norman F Cantor, The Encyclopedia of the Middle Ages, Viking, 1999, p.161.

೨. M.S.Siddiqi, The Bahhmani Sufis(A.D.1347-1538), (Idaree–Adabiyate, Dilli), New Delhi, Chapter-I and II, 1989.

೩. Milton Meyer, Asia A Concise History, Rowman and Little field Publishers, Maryland, p.141.

೪. Maharashtra State Gazetteers: Kolaba District, Directorate of Government Print, Stationary and Publications, 1964.

೫. ಕೆ.ಎಸ್. ಶಿವಣ್ಣ(ಸಂ.ಸಂ.) ಮತ್ತು ಬಿ. ಷೇಕ್ ಅಲಿ(ಪ್ರ.ಸಂ), ಕರ್ನಾಟಕ ಚರಿತ್ರೆ, ಸಂಪುಟ ೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭, ಪು.೧೪೦–೧೪೧.

೬. ಆರ್.ಸಿ. ಮಜೂಮದಾರ್ ಮತ್ತು ಡಿ.ಸಿ. ಸರಕಾರ, ದೆಹಲಿ ಸುಲ್ತಾನರ ಅಧಿಪತ್ಯ, ಭಾಗ ೨, ಸಂಪುಟ ೧೨, ಭಾರತೀಯ ವಿದ್ಯಾಭವನ, ಬೆಂಗಳೂರು, ೨೦೦೫, ಪುಟ ೨೩೫–೨೪೦.

೭. J.Chaudhary, Social and Economic Conditions of the People under the Bahmani Sultanate, Indian Historic Quarterly, Vol.4, pp.720.721.

೮. Burton Stein, A History of India(2nd Ed.), Wiley Blackwell A john Wiley and Sons.Ltd. Publications, Oxfor University Press, Oxford, New Delhi, 1997, P.143.

೯. ಡಬ್ಲ್ಯೂ. ಡಬ್ಲ್ಯೂ. ಮಿರ್ಜಾ(ಮೂಲ), ಹೆಚ್.ಎಸ್. ಹರಿಶಂಕರ(ಅನು), ಮುಸ್ಲಿಂ ಧರ್ಮ ಮತ್ತು ಸಮಾಜ, ಭಾಗ ೨, ಸಂಪುಟ ೧೨, ಭಾರತೀಯ ವಿದ್ಯಾಭವನ, ಬೆಂಗಳೂರು, ೨೦೦೧, ಪು.೨೪೨. ೨೪೩.

೧೦. ಆರ್.ಸಿ. ಮಜೂಮದಾರ್ ಮತ್ತು ಡಿ.ಸಿ. ಸರಕಾರ, ದೆಹಲಿ ಸುಲ್ತಾನರ ಅಧಿಪತ್ಯ, ಭಾಗ ೨, ಸಂಪುಟ ೧೨, ಭಾರತೀಯ ವಿದ್ಯಾಭವನ, ಬೆಂಗಳೂರು, ೨೦೦೧, ಪುಟ ೨೪೮–೨೪೯.

೧೧. Karl J.Khandalavala and Saryu Doshi, A Collector's Dream-Indian Art in the Collections of Basant Kumar and Saraladevi Birla and the Birla Academy of Art and Culture, 1988, p.75.

೧೨. ಎಮ್.ಬಿ. ಪಾಟೀಲ್, ಗುಲಬರ್ಗಾ ಜಿಲ್ಲೆ ಗ್ಯಾಜೆಟಿಯರ್, ೧೯೯೭, ಪುಟ ೧೩೨

೧೩. ಕೆ.ಎಲ್.ಎನ್. ಮೂರ್ತಿ, ಕರ್ನಾಟಕದ ಕಲೆ ಮತ್ತು ವಾಸ್ತುಶಿಲ್ಪ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೫, ಪು.೬೩.

೧೪. http://www.indiashow/Shah-Bazar-Masjid-43712. html

೧೫. ರು.ಮ. ಷಡಕ್ಷರಯ್ಯ ಮತ್ತು ಸಲ್ಲಾವುದ್ದೀನ್ ಮುನ್ಸಿ: ಗುಲ್ಬರ್ಗಾದಲ್ಲಿರುವ ಮುಸ್ಲಿಂ ಸ್ಮಾರಕಗಳು, ಪ್ರಾಚ್ಯವಸ್ತು ಸಂಗ್ರಹಾಲಯ, ಮೈಸೂರು, ೨೦೦೭, ೪೫೯.

೧೬. ರು.ಮ. ಷಡಕ್ಷರಯ್ಯ ಮತ್ತು ಸಲ್ಹಾವುದ್ದೀನ್ ಮುನ್ಸಿ, ಗುಲ್ಬರ್ಗಾದಲ್ಲಿರುವ ಮುಸ್ಲಿಂ ಸ್ಮಾರಕಗಳು, ಪ್ರಾಚ್ಯವಸ್ತು ಸಂಗ್ರಹಾಲಯ, ಮೈಸೂರು, ೨೦೦೭, ಪುಟ ೪೬೦.

೧೭. ರು.ಮ. ಷಡಕ್ಷರಯ್ಯ ಮತ್ತು ಸಲ್ಹಾವುದ್ದೀನ್ ಮುನ್ಸಿ: ಗುಲ್ಬರ್ಗಾದಲ್ಲಿರುವ ಮುಸ್ಲಿಂ ಸ್ಮಾರಕಗಳು, ಪ್ರಾಚ್ಯವಸ್ತು ಸಂಗ್ರಹಾಲಯ, ಮೈಸೂರು, ೨೦೦೭, ಪು. ೪೬೪.

೧೮. T.V.Sivanandan: 609th Urs of Sufi saint begins today. The Hindu Daily Newspaper, September, 22-2013.

೧೯. Sayed Mohamed, The Value of Dakhani Language and Literature. Prasarang, Manasagangotri, Mysore, 1968, P.83

೨೦. George Michell, Mark Zebrowski: Architecture and Art of the Deccan Sultanates, Cambridge University Press, UK, 1999, p.86.

೨೧. George Michell, Mark Zebrowski: Architecture and Art of the Deccan Sultanates, Cambridge University Press, UK, 1999, p.66-70.

೨೨. ರು.ಮ. ಷಡಕ್ಷರಯ್ಯ, ಗುಲ್ಬರ್ಗಾ ನಗರದಲ್ಲಿರುವ ಬಹಮನ್ ಷಾಗಳ ಕಾಲದ ಇಸ್ಲಾಮಿಕ್ ಗೋರಿಗಳು, ಪ್ರಾಚ್ಯವಸ್ತು ಸಂಗ್ರಹಾಲಯ, ನಿರ್ದೇಶನಾಲಯ, ಮೈಸೂರು, ೨೦೦೭, ಪುಟ. ೫೧.

೨೩. ರು.ಮ. ಷಡಕ್ಷರಯ್ಯ, ಗುಲ್ಬರ್ಗಾ ನಗರದಲ್ಲಿರುವ ಬಹಮನ್ ಷಾಗಳ ಕಾಲದ ಇಸ್ಲಾಮಿಕ್ ಗೋರಿಗಳು, ಪ್ರಾಚ್ಯವಸ್ತು ಸಂಗ್ರಹಾಲಯ, ನಿರ್ದೇಶನಾಲಯ, ಮೈಸೂರು, ೨೦೦೭, ಪುಟ. ೫೨.

೨೪. ರು.ಮ. ಷಡಕ್ಷರಯ್ಯ, ಗುಲ್ಬರ್ಗಾ ನಗರದಲ್ಲಿರುವ ಬಹಮನ್ ಷಾಗಳ ಕಾಲದ ಇಸ್ಲಾಮಿಕ್ ಗೋರಿಗಳು, ಪ್ರಾಚ್ಯವಸ್ತು ಸಂಗ್ರಹಾಲಯ, ನಿರ್ದೇಶನಾಲಯ, ಮೈಸೂರು, ೨೦೦೭, ಪುಟ.೫೩.

೨೫. ಕೆ.ಎಲ್.ಎನ್. ಮೂರ್ತಿ, ಕರ್ನಾಟಕದ ಕಲೆ ಮತ್ತು ವಾಸ್ತುಶಿಲ್ಪ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೫, ಪು.೬೩

೨೬. D.Thakore, Education World, The Human Development Magazine, Vol.6 Issue 7-12, 2004, p. 56-57.

೨೭. ವೈಶಾಲಿಬಾಯಿ ಬಿ ಕಾಂಬಳೆ, ಬೀದರ್ ಜಿಲ್ಲೆಯ ಚಿತ್ರಕಲೆ, ದೃಶ್ಯಕಲಾ ವಿಭಾಗ, ಕನ್ನಡ ವಿಶ್ವದ್ಯಾಲಯ, ಹಂಪಿ, ೨೦೦೨, ಪು. ೧೦.

೨೮. ಬೇಬಿ, ಬೀದರ್ ಕೋಟೆಯ ಐತಿಹ್ಯಗಳು, ಎಂ.ಫಿಲ್(ಅಪ್ರಕಟಿತ ಸಂಪ್ರಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭, ಪುಟ ೧೨೫.

೨೯. Mohan Lan Nigam and Anupam Bhatnagar, Romance of Hyderabad Culture, Deva Publications Hyderabad, 1997, p.185.191.

೩೦. ರು.ಮ. ಷಡಕ್ಷರಯ್ಯ, ಸಲ್ಹಾಉದ್ದೀನ್ ಮುನ್ಸಿ,ಗುಲ್ಬರ್ಗಾದಲ್ಲಿರುವ ಮುಸ್ಲಿಂ ಸ್ಮಾರಕಗಳು,ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ಮೈಸೂರು, ೨೦೦೭, ಪು ೪೬೮.

೩೧. ಬಿ.ಎಮ್. ಚಂದ್ರಶೇಖರಯ್ಯ ಕರ್ನಾಟಕ ಸಾಂಸ್ಕೃತಿಕ ಇತಿಹಾಸ ಪರಂಪರೆ, ಸಿವಿಜಿ, ಪಬ್ಲಿಕೇಶನ್, ಬೆಂಗಳೂರು, ೨೦೦೫, ಪು.೨೦೫.

೩೨. George Michell, Mark Zebrowski: Architecture and Art of the Deccan Sultanates, Cambridge University Press, UK, 1999, P. 78.79.

೩೩. ವರದರಾಜ ಹುಯಿಲಗೋಳ, ಭಾರತದ ಗ್ಯಾಜೆಟಿಯರ್ ಸಂಪುಟ–೨, ಭಾರತದ ಶ್ವಾಸಕೋಶ, ಇತಿಹಾಸ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೮೭, ಪುಟ ೪೭೨

೩೪. ವರದರಾಜ ಹುಯಿಲಗೋಳ, ಭಾರತದ ಗ್ಯಾಜೆಟಿಯರ್ ಸಂಪುಟ–೨, ಭಾರತದ ಶ್ವಾಸಕೋಶ, ಇತಿಹಾಸ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೮೭, ಪುಟ ೪೭೩.

೩೫. ಬಿ.ಆರ್. ರಂಗಸ್ವಾಮಿ(ಸಂ.ಸಂ.) ಮತ್ತು ಷೇಕ್ ಅಲಿ(ಪ್ರ.ಸಂ.), ದಕ್ಷಿಣ ಭಾರತದ ಇತಿಹಾಸ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೨೦೦೩, ಪು.೪೦೫.

೩೬. ಪಿ.ಬಿ. ದೇಸಾಯಿ, ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ಪು. ೨೩೦–೨೩೨.

೩೭. ಬಸವರಾಜ ಎನ್. ಅಕ್ಕಿ, ಕರ್ನಾಟಕದ ಇತಿಹಾಸ ಮತ್ತು ಸಂಸ್ಕೃತಿ, ಸೋಮೇಶ್ವರ ಪ್ರಕಾಶನ, ಧಾರವಾಡ, ೨೦೦೪, ಪು. ೫೮–೫೯.

೩೮. Satish Chandra, Medieval India: From Sultanate to the Mughals Delhi Sultanate. Har-Anand Publications Pvt.Ltd., New Delhi, 2005, p-185-187.

೩೯. Braj B.Kachru, Yamuna Kachru and S.N. Sridhar: Languages in South Asia, Cambridge University Press, Cambridge, 2010, p,107-109.

೪೦. T.N. Devare, A Short History of Persian Literature: At the Bahmani, the Adilshahi, and the Qutbshahi Courts-Deccan, Poona, 1961, pp.52-53.

೪೧. Satish Chandra, Medieval India: From Sultanate to the Mughals Delhi Sultanate. Har-Anand Publications Pvt.Ltd., New Delhi, 2005, p.183.184.

೪೨. http://en.wikipedia.org/wiki/Firishta.

೪೩. ಎ.ಮುರಿಗೆಪ್ಪ, ದಕ್ಷಿಣ ಭಾರತೀಯ ಜಾನಪದ ಕೋಶ, ಸಂಪುಟ–೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧, ಪುಟ ೧೫.

೪೪. N.Hanif, Biographical Encyclopedia of Sufis(South Asia), Sarup and Sons, New Delhi, 2000, p 228.

೪೫. Hussaini, Syed Shah Khusro: The Life, Works and Teachings of Khwajah Bandahnawaz Gisudiraz, Gulbarga, Sayyid Muhammad Gisudiraz Research Academy, 1986, P. 102-103.

೪೬. ಮುಲ್ಲಾ ನುಸ್ರುತಿ(ಮೂಲ), ವಿಠ್ಠಲರಾವ್ ಟಿ ಗಾಯಕ್ವಾಡ್(ಅನು), ತಾರೀಖಿ ಸಿಕಂದರಿ, ಆದಿಲ್‌ಶಾಹಿ ಸಾಹಿತ್ಯ, ಸಂಪುಟ–೮, ಫ.ಗು. ಹಳಕಟ್ಟಿ, ಸಂಶೋಧನ ಕೇಂದ್ರ, ಬಿ.ಎಲ್.ಡಿ.ಇ. ಸಂಸ್ಥೆ, ವಿಜಯಪುರ, ೨೦೧೫, ಪು–೩೦೦.

೪೭. Saints of Karnataka(Carnatic India), Chinmaya Mission, 1981, P. 39,40.

೪೮. Ramanand Vidya Bhawan, The Indian Historical Quarterly, Vol.13, 1937, P.444-445.

೪೯. J.L.Mehta, Advances Study in the History of Medieval India. Sterling Publishers Pvt.Ltd., Delhi, 2007, PP. 93-96.

೫೦. ಆರ್.ಸಿ. ಮಜೂಮದಾರ ಮತ್ತು ಡಿ.ಸಿ. ಸರಕಾರ, ದೆಹಲಿ ಸುಲ್ತಾನರ ಅಧಿಪತ್ಯ, ಭಾಗ ೨, ಸಂಪುಟ ೧೨, ಭಾರತೀಯ ವಿದ್ಯಾಭವನ, ಬೆಂಗಳೂರು, ೨೦೦೧, ಪುಟ-೧೭೮-೧೯೨.

೫೧. J.Chaudhary, Social and Economic Conditions of the People under the Bahmani Sultanate, Indian Historic Quarterly, Vol.4, pp.720.721.

೫೨. ಪಿ.ಆರ್. ಮಜಮ್‌ದಾರ್, ಆರ್. ಭಾರದ್ವಾಜ್, ಆರ್.ಸಿ.ಚೌಧರಿ, ದಕ್ಷಿಣ ಭಾರತದ ಇತಿಹಾಸ, ಚೇತನ ಬುಕ್ ಹೌಸ್, ಮೈಸೂರು, ೧೯೯೯, ಪು.೧೫೬-೧೫೭.

೫೩. ಪಿ.ಆರ್. ಮಜಮ್‌ದಾರ್, ಆರ್. ಭಾರದ್ವಾಜ್, ಆರ್.ಸಿ. ಚೌಧರಿ, ದಕ್ಷಿಣ ಭಾರತದ ಇತಿಹಾಸ, ಚೇತನ ಬುಕ್ ಹೌಸ್, ಮೈಸೂರು, ೧೯೯೯, ಪು.೧೫೭.

೫೪. ರಬೀಂದ್ರನಾಥ ಠಾಕೂರ್(ಮೂಲ), ಡಿ.ಸಿ. ಸರ್ಕಾರ(ಅನು), ದೆಹಲಿ ಸುಲ್ತಾನರ ಆಧಿಪತ್ಯ, ಭಾಗ ೨, ಸಂಪುಟ ೧೨, ಭಾರತೀಯ ವಿದ್ಯಾಭವನ, ಬೆಂಗಳೂರು, ೨೦೦೧, ಪುಟ ೧೮೩.

೫೫. ರಬೀಂದ್ರನಾಥ ಠಾಕೂರ್(ಮೂಲ), ಡಿ.ಸಿ. ಸರ್ಕಾರ(ಅನು), ದೆಹಲಿ ಸುಲ್ತಾನರ ಆಧಿಪತ್ಯ, ಭಾಗ ೨, ಸಂಪುಟ ೧೨, ಭಾರತೀಯ ವಿದ್ಯಾಭವನ, ಬೆಂಗಳೂರು, ೨೦೦೧, ಪುಟ ೧೭೬.

೫೬. ರಬೀಂದ್ರನಾಥ ಠಾಕೂರ್(ಮೂಲ), ಡಿ.ಸಿ. ಸರ್ಕಾರ(ಅನು), ದೆಹಲಿ ಸುಲ್ತಾನರ ಆಧಿಪತ್ಯ, ಭಾಗ ೨, ಸಂಪುಟ ೧೨, ಭಾರತೀಯ ವಿದ್ಯಾಭವನ, ಬೆಂಗಳೂರು, ೨೦೦೧, ಪುಟ ೧೯೨.

೫೭. ಪಿ.ಆರ್. ಮಜಮ್‌ದಾರ್, ಆರ್. ಭಾರದ್ವಾಜ್, ಆರ್.ಸಿ. ಚೌಧರಿ, ದಕ್ಷಿಣ ಭಾರತದ ಇತಿಹಾಸ, ಚೇತನ ಬುಕ್ ಹೌಸ್, ಮೈಸೂರು, ೧೯೯೯, ಪು.೩೬೪, ೩೬೫.

೫೮. ವರದರಾರಾವ್ ಜಿ., ಪುರಂದರದಾಸರು, ಹರಿದಾಸ ಸಾಹಿತ್ಯ ಸಮೀಕ್ಷೆ, ಸಾಹಿತ್ಯ ಅಕಾಡೆಮಿ, ಬೆಂಗಳೂರು-೧೯೯೬, ಪು-೫೬.

೫೯. ನಾಗರತ್ನ ಟಿ.ಎನ್.ಕನಕದಾಸ, ಕನಕದಾಸ ಸಾಹಿತ್ಯ ಆಕಾಡೆಮಿ, ಬೆಂಗಳೂರು-೨೦೦೦.ಪು-೦೧

೬೦. K.N. Chitnis, Socio economic History of Medieval India, Atlantic Publishers, New Delhi, 2009, pp,155-191.

೬೧. ರಹಮತ್ ತರೀಕೆರೆ, ಕರ್ನಾಟಕದ ಸೂಫಿಗಳು, ಅಭಿನವ ಪ್ರಕಾಶನ, ಬೆಂಗಳೂರು, ೨೦೧೦. ಪುಟ.೧೭.೨೪.೨೫.

೬೨. ಡಬ್ಲ್ಯೂ.ಡಬ್ಲ್ಯೂ. ಮಿರ್ಜಾ(ಮೂಲ), ಟಿ.ಎನ್.ಕೃಷ್ಣಮೂರ್ತಿ(ಅನು), ಮೊಗಲ್ ಸಾಮ್ರಾಜ್ಯ, ಭಾಗ-೩ ಸಂಪುಟ-೧೫, ಭಾರತೀಯ ವಿದ್ಯಾಭವನ, ಬೆಂಗಳೂರು, ೨೦೦೩, ಪು.೧೬೧, ೧೬೨.

೬೩. K.N. Chitnis, Socio Economic History of Medieval India, Atlantic Publishers, New Delhi, pp.152-154.

೬೪. ಫಕೀರ್ ಮಹಮದ್ ಪಟ್ಟಾಡಿ, ಸೂಫಿ ಮಹಿಳೆಯರು, ನವಕರ್ನಾಟಕ ಪಬ್ಲೀಕೇಶನ್, ಬೆಂಗಳೂರು, ೨೦೧೦, ಪು.೭೮.

೬೫. ಬೋಡೆ ರಿಯಾಜ್ ಅಹ್ಮದ್ ತಿಮ್ಮಾಪುರಿ,ವಚನಪಿತಾಮಹ ಡಾ.ಫ.ಗು.ಹಳಕಟ್ಟಿ ಸಂಶೋಧನ ಕೇಂದ್ರ, ಬಿ.ಎಲ್.ಡಿ.ಇ. ಸಂಸ್ಥೆ, ವಿಜಯಪುರ, ೨೦೧೫, ಪು.೧೫೬.

೬೬. ಬೋಡೆ ರಿಯಾಜ್ ಅಹ್ಮದ್ ತಿಮ್ಮಾಪುರಿ, ವಚನಪಿತಾಮಹ ಫ.ಗು. ಹಳಕಟ್ಟಿ ಸಂಶೋಧನ ಕೇಂದ್ರ, ಬಿ.ಎಲ್.ಡಿ.ಇ. ಸಂಸ್ಥೆ, ವಿಜಯಪುರ, ೨೦೧೫, ಪು.೧೫೩.

೬೭. ಕೃಪಟಾಳ ಕೃಷ್ಣರಾವ್, ಕರ್ನಾಟಕದ ಸಂಸ್ಕೃತಿ ಸಂಶೋಧನೆ, ಉಷಾ ಸಾಹಿತ್ಯ ಮಾಲೆ, ಮೈಸೂರು, ೧೯೭೦, ಪುಟ ೧೨೨

೭೮. Saki, Making History Karnataka's people and their Past, Vol-I, Stone Age to Mercantilism, Vimukti Prakashana, Bangalore, 1998, p.321,322.

೭೯. Saki, Making History Karnataka's people and their Past, Vol-I, Stone Age to Mercantilism, Vimukti Prakashana, Bangalore, 1998, p.322

೮೦. Hassani Abdul, AL Seghafah Al Eslami Alhnd Fi, Printing Ndvy Abolhassan Ali Hassani, Damascus,1403(1983), P. 62.

೮೧. Saki, Making History Karnataka's people and their Past, Vol-I, Stone Age to Mercantilism, Vimukti Prakashana, Bangalore, 1998, p.322.323.

೮೨. ರಹಮತ್ ತರೀಕೆರೆ, ಕರ್ನಾಟಕದ ಸೂಫಿಗಳು, ಅಭಿನವ ಪ್ರಕಾಶನ, ಬೆಂಗಳೂರು, ೨೦೧೦. ಪುಟ ೧೪೫, ೧೪೬.

ಅಧ್ಯಾಯ–ನಾಲ್ಕು

## ಬಹಮನಿ ಕಾಲದ ಆರ್ಥಿಕ ವ್ಯವಸ್ಥೆ

ಪ್ರಸ್ತಾವನೆ

೪.೧. ಗ್ರಾಮೀಣ ಆರ್ಥಿಕ ವ್ಯವಸ್ಥೆ

- ೪.೧.೧. ಕೃಷಿ ವ್ಯವಸ್ಥೆ
- ೪.೧.೨. ನೀರಾವರಿ ವ್ಯವಸ್ಥೆ
- ೪.೧.೩. ಕೃಷಿಕಾರ್ಮಿಕರು
- ೪.೧.೪. ಭೂಮಾಲೀಕರು
- ೪.೧.೫. ಭೂಕಂದಾಯ

೪.೨. ನಗರ ಆರ್ಥಿಕ ವ್ಯವಸ್ಥೆ

- ೪.೨.೧. ನಗರ ಆರ್ಥಿಕ ಜೀವನ
- ೪.೨.೨. ವ್ಯಾಪಾರ ಮತ್ತು ವಾಣಿಜ್ಯ
- ೪.೨.೩. ಆಮದು ಮತ್ತು ರಫ್ತು
- ೪.೨.೪. ಪ್ರಮುಖ ಬಂದರುಗಳು
- ೪.೨.೫. ಕೈಗಾರಿಕೆಗಳು
- ೪.೨.೬. ಮಧ್ಯವರ್ತಿಗಳು ಹಾಗೂ ದಲ್ಲಾಳಿಗಳು
- ೪.೨.೭. ವರ್ತಕ ಸಂಘಗಳು
- ೪.೨.೮. ಹಣಕಾಸು ವ್ಯವಸ್ಥೆ
- ೪.೨.೯. ನಾಣ್ಯಗಳು

ಸಮಾರೋಪ

## ಅಧ್ಯಾಯ–೪

# ಬಹಮನಿ ಕಾಲದ ಆರ್ಥಿಕ ವ್ಯವಸ್ಥೆ

### ಪ್ರಸ್ತಾವನೆ

ಬಹಮನಿ ಕಾಲದ ಆರ್ಥಿಕ ವ್ಯವಸ್ಥೆಯನ್ನು ಪರಿಗಣಿಸುವುದಕ್ಕೆ ಮುನ್ನ ಆರ್ಥಿಕ ವ್ಯವಸ್ಥೆ ಎಂದರೇನು? ಎಂದು ಅರಿತುಕೊಳ್ಳುವುದು ಮುಖ್ಯವಾದದ್ದಾಗಿದೆ. ಅರ್ಥ ವ್ಯವಸ್ಥೆ/ಆರ್ಥಿಕತೆ ಎಂದರೆ ರಾಷ್ಟ್ರ ಅಥವಾ ಇತರ ಪ್ರದೇಶಗಳ, ಕಾರ್ಮಿಕ ವರ್ಗಗಳ, ಬಂಡವಾಳಗಳ, ಮೂಲ ಧನಗಳ, ಭೂಮಿ ಸಂಪನ್ಮೂಲಗಳ, ಉತ್ಪಾದನೆ, ವಿನಿಮಯ, ವಿತರಣೆ, ಆ ಪ್ರದೇಶಗಳಲ್ಲಿನ ಸರಕುಗಳ ಹಾಗೂ ಸೇವೆಗಳಲ್ಲಿನ ಸಾಮಾಜಿಕ ಭಾಗವಹಿಸುವಿಕೆ, ಆರ್ಥಿಕ ಕಾರ್ಯಸಂಸ್ಥೆಗಳು ಇವುಗಳೆಲ್ಲವನ್ನೂ ಒಳಗೊಂಡಿರುವ ಒಂದು ಆರ್ಥಿಕ ವ್ಯವಸ್ಥೆ ಎಂದು ಹೇಳಬಹುದು. ನಿರ್ಧಿಷ್ಟ ಅರ್ಥವ್ಯವಸ್ಥೆ ಅಂದರೆ ತಾಂತ್ರಿಕ ವಿಕಸನ, ಇತಿಹಾಸ, ಸಂಯೋಜನೆ, ಆ ಪ್ರದೇಶದ ಭೌಗೋಳಿಕ ವ್ಯವಸ್ಥೆ, ನೈಸರ್ಗಿಕ ಸಂಪನ್ಮೂಲಗಳ ಸಮೃದ್ಧಿ ಹಾಗೂ ಪರಿಸರ ವ್ಯವಸ್ಥೆಗಳನ್ನು ಪ್ರಮುಖ ಅಂಶಗಳನ್ನಾಗಿ ಒಳಗೊಂಡಿರುವ ಒಂದು ಪ್ರಕ್ರಿಯೆಯ ಫಲಿತಾಂಶವಾಗಿದೆ ಯೆಂಬುದನ್ನು ಪ್ರಸ್ತುತ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.[೧]

ಪ್ರಾಚೀನ ಅರ್ಥವ್ಯವಸ್ಥೆ ಪ್ರಮುಖವಾಗಿ ಜೀವನಾಧಾರವಾಗಿದ್ದ ಕೃಷಿಯನ್ನು ಅವಲಂಭಿಸಿತ್ತು. ಮಧ್ಯಯುಗದ ಅವಧಿಯಲ್ಲಿ ನಾವು ಪ್ರಸ್ತುತ ಕಾಲದಲ್ಲಿ ಅರ್ಥ ವ್ಯವಸ್ಥೆ ಅಥವಾ ಆರ್ಥಿಕತೆ ಎಂದು ಕರೆಯುವ ವ್ಯವಸ್ಥೆಯು ಕನಿಷ್ಟ ಜೀವನಾಧಾರ ಮಟ್ಟಕ್ಕಿಂತ ಹೆಚ್ಚಿನ ಮಟ್ಟದ್ದೇನೂ ಆಗಿರಲಿಲ್ಲ. ಬಹುತೇಕ ವಿನಿಮಯವು ಸಾಮಾಜಿಕ ಸಮೂಹಗಳಲ್ಲಿ ಅಂತರ್ಗತವಾಗಿಯೇ ನಡೆಯುತ್ತಿತ್ತು.[೨]

ಬಹಮನಿ ರಾಜ್ಯದ ಆರ್ಥಿಕ ಪರಿಸ್ಥಿತಿಯನ್ನು ಮೂರು ವರ್ಗಗಳ ಅಧ್ಯಯನದಿಂದ ತಿಳಿಯಬಹುದು. ಮೇಲುವರ್ಗ, ಮಧ್ಯಮವರ್ಗ ಮತ್ತು ಕೆಳವರ್ಗಗಳಾಗಿ ವಿಂಗಡಿಸಬಹುದು. ಆಸ್ಥಾನಿಕರು, ಅಧಿಕಾರಿಗಳು ಮತ್ತು ಇಕ್‌ದಾರರು ಮೇಲು ವರ್ಗದವರು, ವೈಭವ ಜೀವನ. ಮಧ್ಯಮ ವರ್ಗದವರು ವ್ಯಾಪಾರಿಗಳು, ಕುಶಲಕರ್ಮಿಗಳು, ಶಿಕ್ಷಕರು ಮತ್ತು ಪಂಡಿತರು ಇವರು. ಕೆಳವರ್ಗದವರು ರೈತರು, ಕಾರ್ಮಿಕರು ಸಕಾಲದಲ್ಲಿ ಮಳೆ, ಬೆಳೆ ಇಲ್ಲದೇ ಹೋದಾಗ ರೈತರು ಕ್ಷಾಮ ಡಾಮರಗಳಲ್ಲಿ ತುತ್ತಾಗಿ ಬವಣೆಗೀಡಾಗುತ್ತಿದ್ದರು. ಕುಶಲಕರ್ಮಿಗಳ ಜೀವನ ರೈತರಿಗಿಂತ ಉತ್ತಮವಾಗಿತ್ತು. ಸುಲ್ತಾನರು, ಸರದಾರರು ಮತ್ತು ಮೇಲು ವರ್ಗದವರು ಇವರಿಗೆ ಆಶ್ರಯ ನೀಡಿ ಪೋಷಿಸುತ್ತಿದ್ದರು. ಇದರಿಂದ ಅನೇಕ ವಿಧದ ಗೃಹ ಕೈಗಾರಿಕೆಗಳು ಉದಾರ ಸಹಾಯ ಪಡೆಯುತ್ತಿದ್ದವು. ಇವುಗಳ ಉತ್ಪನ್ನಗಳನ್ನು ಹೊರದೇಶಗಳಿಗೆ ಕಳುಹಿಸಿ ಕೊಡಲಾಗುತ್ತಿತ್ತು. ಇವುಗಳ ಕೈಗಾರಿಕೆಗಳು ಬೀದರ್, ಗುಲ್ಬರ್ಗಾ, ವಾರಂಗಲ್, ರಾಯಚೂರು, ನಂದೇರ, ಬೋಂಗಿರ್‌ಗಳೊಡನೆ ನಿಕಟ ಸಂಪರ್ಕ ಹೊಂದಿದ್ದು, ಈ ಕೈಗಾರಿಕೆಗಳು ಕುಶಲಕರ್ಮಿಗಳಿಗೆ ಲಾಭದಾಯಕವಾಗಿದ್ದು, ಕಾರ್ಮಿಕರಿಗೆ ಉದ್ಯೋಗ ಅವಕಾಶ ಒದಗಿಸಿ ಕೊಡುತ್ತಿದ್ದುದರಿಂದ ಇವರ ಜೀವನ ರೈತರ ಜೀವನಕ್ಕಿಂತ ಉತ್ತಮವಾಗಿತ್ತು.[೩]

ಅರ್ಥ ವ್ಯವಸ್ಥೆಯು ಅನುಕ್ರಮವಾದ ಮಜಲುಗಳಲ್ಲಿ ವಿಕಸನಗೊಳ್ಳುವ ವಲಯಗಳನ್ನು(ಕೈಗಾರಿಕೆಗಳು) ಒಳಗೊಂಡಿರುತ್ತದೆ. ಪ್ರಾಚೀನ ಅರ್ಥವ್ಯವಸ್ಥೆ ಪ್ರಮುಖವಾಗಿ ಜೀವನಾಧಾರವಾದ ಕೃಷಿಯ ಮೇಲೆ ಆಧಾರಿತವಾಗಿತ್ತು. ಕೈಗಾರಿಕಾ ಕ್ರಾಂತಿಯು ಜೀವನಾಧಾರವಾದ ಕೃಷಿಯ ಮಹತ್ವವನ್ನು ಕಡಿಮೆ ಮಾಡಿತಲ್ಲದೆ ಅದನ್ನು ವ್ಯಾಪಕ ಹಾಗೂ ಏಕ ಸಂಸ್ಕೃತಿಯ ಕೃಷಿಯನ್ನಾಗಿ ಮಾರ್ಪಾಟುಗೊಳಿಸಿತು. ಸೂಕ್ಷ್ಮ ಆರ್ಥಿಕತೆಗಳು ನಿರ್ದಿಷ್ಟ ಆರ್ಥಿಕ ಸಮಾಜದ ವ್ಯಕ್ತಿಗಳ ವೈಯಕ್ತಿಕ ಆರ್ಥಿಕತೆಯ ಮೇಲೆ ಕೇಂದ್ರೀಕೃತವಾಗಿರುತ್ತವೆ. ಬೃಹತ್ ಆರ್ಥಿಕತೆಗಳು ಅರ್ಥವ್ಯವಸ್ಥೆಯನ್ನು/ಆರ್ಥಿಕತೆಯನ್ನು ಸಮಗ್ರವಾಗಿ(ಪಟ್ಟಣ, ನಗರ, ಪ್ರದೇಶ) ಪರಿಶೀಲಿಸುತ್ತವೆ ಎಂದು ತಿಳಿಯಬಹುದು.

ದಖ್ಖನ್ ಪ್ರಾಂತ್ಯದಲ್ಲಿ ಬಹಮನಿ ಕಾಲದ ಸಾಮಾಜಿಕ ಮತ್ತು ಆರ್ಥಿಕ ಜೀವನದಲ್ಲಿ ಸಾಕಷ್ಟು ಬದಲಾವಣೆಗಳು ಕಂಡುಬಂದವು. ಆರ್ಥಿಕವಾಗಿ ಬಹಮನಿ ಸಾಮ್ರಾಜ್ಯವು ವಿಜಯನಗರ ಸಾಮ್ರಾಜ್ಯದಷ್ಟು ಸಂಪದ್ಭರಿತವಾಗಿರಲಿಲ್ಲವೆಂದು ತಿಳಿದುಬರುತ್ತದೆ. ಆದರೆ ಬಹಮನಿ ಸಾಮ್ರಾಜ್ಯದಲ್ಲಿ ಜನರ ಜೀವನ ಸಹನೀಯವಾಗಿಯೂ ಮತ್ತು ಸಾಮಾನ್ಯವಾಗಿಯೂ ಇದ್ದಿತೆಂದು ಹೇಳಲಾಗಿದೆ. ಕ್ರಿ.ಶ.೧೪೭೦ರಲ್ಲಿ ಬೀದರ್‌ಗೆ ಭೇಟಿ ಕೊಟ್ಟ ರಷ್ಯಾದ ವ್ಯಾಪಾರಿ ನಿಕೆಟಿನ್‌ನು "ಬಹಮನಿ ರಾಜ್ಯವು ಜನಭರಿತವಾಗಿದ್ದು, ಮಾರ್ಗಗಳು ಸುರಕ್ಷಿತವಾಗಿದ್ದು, ರಾಜಧಾನಿ ಬೀದರ್ ಆಕರ್ಷಿತವಾಗಿದ್ದು, ಅರಮನೆಗಳು, ಹೂದೋಟಗಳು ಮತ್ತು ಕಾರಂಜಿಗಳಿಂದ ಕಂಗೊಳಿಸುತ್ತಿದೆ ಎಂದು ವರ್ಣಿಸಿದ್ದಾನೆ. ಆದರೆ ಬಡವ ಮತ್ತು ಬಲ್ಲಿದರ ನಡುವಣ ಅಂತರ ತೀವ್ರವಾಗಿತ್ತೆಂದು ಹೇಳಿದ್ದಾನೆ."[೪]

ಬಹಮನಿ ರಾಜ್ಯದಲ್ಲಿ ಜನರ ಆರ್ಥಿಕ ಜೀವನವು ಸುಗಮವಾಗಿತ್ತು. ಒಂದು ರಾಜ್ಯದ ಭದ್ರತೆಯು ಮತ್ತು ದೃಢತೆಯು ಹೆಚ್ಚಾಗಿ ಆ ರಾಜ್ಯದ ಆರ್ಥಿಕ ವ್ಯವಸ್ಥೆಯನ್ನು ಅವಲಂಬಿಸಿರುತ್ತದೆ. ದಖ್ಖನ್ ಆರ್ಥಿಕ ಜೀವನವನ್ನು ಎರಡು ಭಾಗಗಳಾಗಿ ವಿಂಗಡಿಸಬಹುದು. ಅವುಗಳೆಂದರೆ ಗ್ರಾಮೀಣ ಆರ್ಥಿಕ ಜೀವನ ಮತ್ತು ನಗರ ಆರ್ಥಿಕ ಜೀವನ. ಗ್ರಾಮೀಣ ಅರ್ಥವ್ಯವಸ್ಥೆಯು ಸಾಮಾನ್ಯವಾಗಿ ಕೃಷಿ ಆಧಾರಿತ ವಾಗಿದ್ದು, ನಗರ ಅರ್ಥ ವ್ಯವಸ್ಥೆಯು ಕೈಗಾರಿಕಾ ಪ್ರಧಾನವಾದ ಅರ್ಥವ್ಯವಸ್ಥೆಯಾಗಿರುವುದನ್ನು ನಾವು ಕಾಣುತ್ತೇವೆ. ಸುಲ್ತಾನರು ಕಟ್ಟಿಸಿದ ಭವ್ಯ ಕಟ್ಟಡಗಳು, ಸೌಧಗಳು, ಅವರ ವೈಭವಯುತ ಶ್ರೀಮಂತ ವಿಲಾಸಿ ಜೀವನ, ಅವರ ಅರ್ಥವ್ಯವಸ್ಥೆ, ಸಂಪದ್ಭರಿತವೂ ಮತ್ತು ಶ್ರೀಮಂತವೂ ಆಗಿತ್ತೆಂದು ಪ್ರಸ್ತುತ ಅಧ್ಯಾಯದಿಂದ ತಿಳಿಯಬಹುದು.

ದಖ್ಖನ್ ಅರ್ಥ ವ್ಯವಸ್ಥೆಯಲ್ಲಿ ಮೂರು ವರ್ಗಗಳನ್ನು ನಾವು ನೋಡಬಹುದು, ಅವುಗಳೆಂದರೆ, ಶ್ರೀಮಂತರು, ಮಧ್ಯಮ ವರ್ಗದವರು ಮತ್ತು ಕೆಳ ವರ್ಗದವರು. ದಖ್ಖನ್ನಿನ ಮುಸ್ಲಿಮರಲ್ಲಿ ಶ್ರೀಮಂತ ವರ್ಗವೊಂದು ಏರ್ಪಟ್ಟಿತ್ತು, ಇವರಲ್ಲಿ ಎರಡು ಬಣಗಳಾದ 'ಅಫಾಖೀಸ್' ಅಥವಾ ಪರದೇಶಿ ಶ್ರೀಮಂತರು ಮತ್ತು 'ದಖ್ಖನಿ' ಅಥವಾ ಸ್ಥಳೀಯ ಶ್ರೀಮಂತರು ಇದ್ದರು. ಇವರಲ್ಲಿ ಅಧಿಕಾರ, ಐಶ್ವರ್ಯ ಮತ್ತು ಪ್ರಾಮುಖ್ಯತೆಗಳಿಗಾಗಿ ತೀವ್ರ ಹೋರಾಟವು ನಿರಂತರವಾಗಿ ನಡೆಯುತ್ತಿತ್ತು. ಈ ಕಾರಣಕ್ಕಾಗಿಯೇ ಬಹಮನಿ ಸಾಮ್ರಾಜ್ಯವು ಅಂತಿಮವಾಗಿ ತನ್ನ ಪತನವನ್ನು ಕಂಡಿತು.

ಒಂದು ರಾಜ್ಯದ ನಿಜವಾದ ಆರ್ಥಿಕ ಜೀವನ ಮಧ್ಯಮ ವರ್ಗದವರ ಜನರ ಪರಿಸ್ಥಿತಿಯನ್ನು ಅವಲಂಬಿಸಿರುತ್ತದೆ. ಧರ್ಮ ಪ್ರವರ್ತಕರು, ಬ್ರಾಹ್ಮಣರು ಮತ್ತು ಮುಸ್ಲಿಂ ತರಫ್‌ದಾರರಿಗಿಂತ ಕೆಳಗಿನ ಅಧಿಕಾರಿಗಳು, ಊಳಿಗರು, ಸ್ಥಾನಿಕ ವ್ಯಾಪಾರಿಗಳು, ಬಹಮನಿ ರಾಜ್ಯದ ಮಧ್ಯಮ ವರ್ಗದ ಜನರೆಂದು

ಪರಿಗಣಿಸಲ್ಪಟ್ಟಿದ್ದರು. ಮಧ್ಯಮ ವರ್ಗದ ಜನರು ಐಶಾರಾಮಿಗಳಲ್ಲದಿದ್ದರೂ, ತಿನ್ನಲು ಆಹಾರ, ಉಡಲು ಬಟ್ಟೆ ಮತ್ತು ಆನಂದಪಡಲು ಪಾನೀಯಗಳಿಗೇನೂ ಕೊರತೆ ಇರಲಿಲ್ಲ. ಎರಡು ಅಶ್ವಗಳು, ವಾಸಿಸಲು ಮನೆ, ಸೇವಕರು, ಇವುಗಳಿಗೇನೂ ಕೊರತೆ ಇರಲಿಲ್ಲ. ಸುಖ-ದುಃಖಗಳಿಂದ ಕೂಡಿದ ಜೀವನವಾಗಿದ್ದರೂ ಕೂಡ, ಜೀವನಾವಶ್ಯಕತೆಯನ್ನು ಪೂರೈಸಿಕೊಂಡು ಅವರ ಜೀವನ ಉತ್ತಮವಾಗಿಯೇ ಸಾಗಿತ್ತೆಂದು ತಿಳಿಯಬಹುದು.

ಭೂಮಿಯ ಗೇಣಿ ಮತ್ತು ಒಡೆತನಗಳೂ ಬಹುಮುಖ್ಯವಾದ ಇತರ ವಿಷಯಗಳಾಗಿದ್ದವು. ಬಹಮನಿಗಳು ಮತ್ತು ಆದಿಲ್‌ಶಾಹಿಗಳ ಕಾಲದಲ್ಲಿ ಭೂಮಿಯ ಒಡೆತನವು ಮೂವರ ಕೈಗಳಲ್ಲಿದ್ದಿತು. ತಾಂತ್ರಿಕವಾಗಿ ಹೇಳುವುದಾದರೆ ಎಲ್ಲ ಭೂಮಿಯೂ ರಾಜನಿಗೆ ಅಥವಾ ಸರಕಾರಕ್ಕೆ ಸೇರಿದ್ದಿತು. ಆದರೆ ಅವನು ಗಣನೀಯ ಭಾಗವನ್ನು ತನ್ನ ಹತೋಟಿಯಲ್ಲಿ ಇಟ್ಟುಕೊಂಡಿದ್ದನು. ಅದನ್ನು ರಾಜತ್ವದ ಭೂಮಿ ಎಂದು ಕರೆಯಲಾಗುತ್ತಿತ್ತು. ಇನ್ನೊಂದು ಭಾಗವನ್ನು ಸಾಮಂತರಿಗೆ ಅಥವಾ ಅಧೀನರಾಜರಿಗೆ ಅಥವಾ ಜಾಗೀರುದಾರರಿಗೆ ಅವರು ಸಲ್ಲಿಸುವ ಸೇವೆಗೆ ಪ್ರತಿಫಲವಾಗಿ ಬಿಟ್ಟುಕೊಡುತ್ತಿದ್ದನು. ಪ್ರತಿಯೊಂದು ಬಗೆಯ ಸೇವೆಗೂ ಭೂಮಿಯ ರೂಪದಲ್ಲೇ ಪ್ರತಿಫಲವನ್ನು ನೀಡಲಾಗುತ್ತಿತ್ತು. ಮೂರನೆಯ ವರ್ಗ ರೈತರ ಒಡೆತನಕ್ಕೆ ಸೇರಿದ್ದು. ಅವು ರೈತರು ಅಥವಾ ಕೃಷಿಕರು ಅನುವಂಶಿಕವಾಗಿ ಅನುಭವಿಸಿಕೊಂಡು ಬಂದಿದ್ದ ಭೂಮಿಯ ಸಣ್ಣ ತಾಕುಗಳು. ಅವು ಕುಟುಂಬದ ಆಸ್ತಿಯಾಗಿದ್ದು ಹಳ್ಳಿಗರಿಗೆ ಬಹುಮುಖ್ಯವಾದ ವರಮಾನ ಮೂಲವಾಗಿದ್ದವು. ಇಡೀ ಅರ್ಥವ್ಯವಸ್ಥೆಯ ಶಿಖರದಲ್ಲಿದ್ದದ್ದು ಈ ಭೂಮಿಯೇ ಆಗಿದೆ.[೫] ಆದ್ದರಿಂದ ವಿವಿಧ ರಾಜಮನೆತನಗಳ ಅವಧಿಯಲ್ಲಿ ಕೆಳವರ್ಗದ ಜನರ ಸ್ಥಿತಿ ಉನ್ನತ ಮಟ್ಟಕ್ಕೂ ಏರಲಿಲ್ಲ ಮತ್ತು ಉತ್ತಮಗೊಳ್ಳಲಿಲ್ಲ, ಅದು ಹಾಗೆಯೇ ಉಳಿದುಕೊಂಡಿತು. ರೈತನ ಸ್ಥಿತಿಯಲ್ಲೂ ಯಾವುದೇ ಪ್ರಗತಿ ಕಾಣಲಿಲ್ಲ ಅನ್ನುವುದನ್ನು ಈ ಅಧ್ಯಾಯದಲ್ಲಿ ನೋಡಬಹುದು.

### ೪.೧. ಗ್ರಾಮೀಣ ಆರ್ಥಿಕ ವ್ಯವಸ್ಥೆ

ಬಹಮನಿ ಸಾಮ್ರಾಜ್ಯದಲ್ಲಿ ಗ್ರಾಮೀಣ ಜನಜೀವನವು ಪ್ರಮುಖವಾಗಿ ಕೃಷಿಯನ್ನೇ ಅವಲಂಬಿಸಿದ್ದು, ಹೆಚ್ಚಿನ ಸಂಖ್ಯೆಯಲ್ಲಿ ಕೃಷಿಕರು ಮುಸ್ಲಿಂ ಮತ್ತು ಹಿಂದೂ ಜನಾಂಗಕ್ಕೆ ಸೇರಿದವರಾಗಿದ್ದರು. ಬಹಮನಿ ರಾಜ್ಯದ ಗ್ರಾಮೀಣ ಅರ್ಥವ್ಯವಸ್ಥೆಯಲ್ಲಿ ಕೃಷಿಗೆ ಬಹುಮುಖ್ಯ ಸ್ಥಾನವನ್ನು ನೀಡಲಾಗಿತ್ತು, ರೈತನ ಜೀವನಾಡಿಯಾದ ಕೃಷಿಯು ಪ್ರಮುಖ ಉದ್ಯೋಗವಾಗಿತ್ತು. ಜೋಳ, ರಾಗಿ, ಮೆಕ್ಕೆಜೋಳ, ಭತ್ತ, ಬೇಳೆ ಪದಾರ್ಥಗಳು, ತರಕಾರಿಗಳು, ಹೂವುಗಳು ಮತ್ತು ಹಣ್ಣುಗಳನ್ನು ಬೆಳೆಯಲಾಗುತ್ತಿತ್ತು. ಕೃಷಿ ಭೂಮಿಯನ್ನು ಅದರ ಫಲವತ್ತತೆಗೆ ಅನುಸಾರವಾಗಿ ವಿಭಜಿಸಲಾಗಿ ತೆರಿಗೆಯನ್ನು ವಸೂಲಿ ಮಾಡಲಾಗುತ್ತಿತ್ತು. ಗ್ರಾಮಗಳಲ್ಲಿ ಪಟೇಲ್ ಮತ್ತು ಕುಲಕರ್ಣಿ ಎಂಬ ಅಧಿಕಾರಿಗಳು ಎಲ್ಲಾ ವ್ಯವಸ್ಥೆಗಳನ್ನು ನೋಡಿಕೊಳ್ಳುತ್ತಿದ್ದರು. ವಸ್ತುಗಳ ಮತ್ತು ನಗದಿನ ವಿನಿಮಯ ಪದ್ಧತಿಗಳು ಸಾಮಾನ್ಯವಾಗಿದ್ದುದರಿಂದ ತೂಕ ಮತ್ತು ಅಳತೆಗಳ ಪರಿಜ್ಞಾನವು ಬಹಮನಿ ಗ್ರಾಮೀಣ ಜನರಲ್ಲಿತ್ತೆಂದು ಹೇಳಬಹುದು. ದಖ್ಖನ್ ರಾಜ್ಯದಲ್ಲಿ ಸಾಂಪ್ರದಾಯಿಕ ಕೃಷಿಯೇ ಅಸ್ತಿತ್ವದಲ್ಲಿತ್ತು. ಕೃಷಿಕರ ಜೊತೆಗೆ ಇತರ ಕಸಬುದಾರರಾದಂತಹ ಬಡಗಿಗಳು, ಕಮ್ಮಾರರು, ಅಕ್ಕಸಾಲಿಗರು, ಚಮ್ಮಾರರು, ಗಾಣಿಗರು ಮುಂತಾದ ಸಣ್ಣಪುಟ್ಟ ಕಸಬುದಾರರು ಗ್ರಾಮಗಳಲ್ಲಿ ವಾಸಿಸುತ್ತಿದ್ದರು. ಈ ಎಲ್ಲಾ ಕಸಬುದಾರರ ಸೇವೆಗೆ ಪ್ರತಿಯಾಗಿ ಗ್ರಾಮಸ್ಥರು ಸುಗ್ಗಿಯ ಕಾಲದಲ್ಲಿ ಧಾನ್ಯದ ರೂಪದಲ್ಲಿ ಸಂಬಳವನ್ನು ಕೊಡುವ ವ್ಯವಸ್ಥೆಯಿತ್ತು. ಈ ಸಂಬಳವನ್ನು ವರ್ಷಕ್ಕೊಮ್ಮೆ ಕೊಡುವ ವ್ಯವಸ್ಥೆಯಿದ್ದು ನಿರ್ದಿಷ್ಟ ಮೊತ್ತವನ್ನು ಅವರಿಗೆ ಕೊಡುತ್ತಿದ್ದರು. ಹೆಚ್ಚಾಗಿ ಚದುರಿದ ಕೃಷಿ ಹಿಡುವಳಿ ಪದ್ಧತಿ ಅಸ್ತಿತ್ವದಲ್ಲಿದ್ದುದ

ರಿಂದ ಲಾಭವೂ ಕೂಡ ಅಲ್ಪಮಟ್ಟದ್ದಾಗಿರುತ್ತಿತ್ತು. ಜಮೀನ್ದಾರರು ಗೇಣಿ ವ್ಯವಸ್ಥೆಯ ಮೂಲಕ ಭೂಮಿಯ ನಿಯಂತ್ರಣದಲ್ಲಿ ಇಟ್ಟುಕೊಂಡಿದ್ದರು. ಮೂಲ ಭೂ ಒಡೆಯನು ಸುಲ್ತಾನನೇ ಆಗಿದ್ದರೂ ಸಹ ನಂತರದಲ್ಲಿ ಅನುವಂಶಿಕವಾಗಿ ಭೂ ಒಡೆತನವು ಬೆಳೆದುಬಂದಿತ್ತು.

ಗ್ರಾಮೀಣ ಪ್ರದೇಶಗಳಲ್ಲಿದ್ದ ಹಿಂದೂ ಮತ್ತು ಮುಸ್ಲಿಂ ಧಾರ್ಮಿಕ ಸಂಸ್ಥೆಗಳಿಗೆ ತೆರಿಗೆಯಿಂದ ವಿನಾಯಿತಿ ನೀಡಲಾಗಿತ್ತು. ಮಹಮ್ಮದ್ ಗವಾನನು ಭೂ ಸುಧಾರಣೆಗಳನ್ನು ಮಾಡಿ ಫಲವತ್ತತೆ ಮತ್ತು ಬೆಳೆಗಳಿಗನುಸಾರವಾಗಿ ತೆರಿಗೆಯನ್ನು ವಿಧಿಸುವಂತೆ ವ್ಯವಸ್ಥೆಯನ್ನು ಮಾಡಿದ್ದನು. ಭೂಮಿಯ ಉಳುಮೆಗಾಗಿ ಗ್ರಾಮೀಣ ಜನರು ಎತ್ತು, ಎಮ್ಮೆ, ಹಸು ಮುಂತಾದ ಪ್ರಾಣಿಗಳನ್ನು ಸಾಕುತ್ತಿದ್ದರು. ಈ ಮೂಲಕ ಪಶುಸಂಗೋಪನೆಯು ಸಹ ಉಪಕಸುಬಾಗಿ ಬಹಮನಿ ರಾಜ್ಯದಲ್ಲಿ ರೂಢಿಗೆ ಬಂದಿತ್ತು. ಗ್ರಾಮೀಣ ಜನರು ಹಸು, ಕುರಿ, ಮೇಕೆ, ಹಂದಿ, ಎಮ್ಮೆ ಮೊದಲಾದವು ಹೈನು ಉತ್ಪಾದನೆಯ ಪ್ರಾಣಿಗಳನ್ನಾಗಿ ಉಪಯೋಗಿಸುತ್ತಿದ್ದರು ಹಾಗೂ ಸಾಕು ಪ್ರಾಣಿಗಳಾಗಿ ನಾಯಿಗಳನ್ನು ಮತ್ತು ಸಾರಿಗೆಗಾಗಿ ಕತ್ತೆ, ಎತ್ತು, ಕೋಣ ಮತ್ತು ಅಶ್ವಗಳನ್ನು ಬಳಸುತ್ತಿದ್ದರೆಂದು ತಿಳಿದುಬರುತ್ತದೆ.

### ೪.೧.೧. ಕೃಷಿ ವ್ಯವಸ್ಥೆ

ಇತಿಹಾಸದ ಬೆಳವಣಿಗೆಗೆ ನಿಶ್ಚಿತ ರೂಪದಲ್ಲಿ ಆರಂಭಗೊಂಡಿರುವುದು ಮಾನವನು ಉತ್ಪಾದನೆಯಲ್ಲಿ ಪಾಲ್ಗೊಂಡಾಗ ಹಾಗೂ ಉತ್ಪಾದನೆಯನ್ನು ಆರಂಭಿಸಿದಾಗ. ಬುಡಕಟ್ಟು ವ್ಯವಸ್ಥೆಯು ಕೃಷಿ ವ್ಯವಸ್ಥೆಯಾಗಿ ಪರಿವರ್ತನೆಗೊಂಡು ಚರಿತ್ರೆಯ ಬೆಳವಣಿಗೆಗೆ ಮೊದಲನೆಯ ಘಟ್ಟವಾಗಿ ಗುರುತಿಸಲ್ಪಟ್ಟಿದೆ. ಈ ಪರಿವರ್ತನೆಯು ಅನೇಕ ಬದಲಾವಣೆಗಳಿಗೆ ದಾರಿ ಮಾಡಿಕೊಟ್ಟಿದೆ. 'ಕಾಡುಕೃಷಿ' ಎಂಬುದು ಬೇಸಾಯ ಮತ್ತು ಅರಣ್ಯ ಕಲೆಯ ಮೂಲಕ ಆಹಾರ ಮತ್ತು ಸರಕುಗಳನ್ನು ಉತ್ಪಾದಿಸುವ ಒಂದು ವಿಧಾನ. ಕೃಷಿಯು ಮಾನವ ನಾಗರಿಕತೆಯ ಉಗಮಕ್ಕೆ ಕಾರಣವಾದ ಒಂದು ಪ್ರಮುಖ ಬೆಳವಣಿಗೆಯಾಗಿದೆ. ಪಳಗಿಸಿದ ಮತ್ತು ಸಾಕಿದ ಪ್ರಾಣಿಗಳು, ಸಸ್ಯಗಳು ಮತ್ತು ಬೆಳೆಗಳ ಸಂಗೋಪನೆಯಿಂದಾಗಿ ಆಹಾರದ ಸೃಷ್ಟಿಯಾಗುವುದರಿಂದ ಅದು ಹೆಚ್ಚು ಸಮೃದ್ಧವಾದ ಮತ್ತು ಶ್ರೇಣೀಕೃತವಾದ ಸಮಾಜದ ಬೆಳವಣಿಗೆಗೆ ಕಾರಣವಾಯಿತು ಎನ್ನಬಹುದು. ಕೃಷಿ ಅಧ್ಯಯನಕ್ಕೆ ಕೃಷಿ ವಿಜ್ಞಾನ ಎಂದು ಕರೆಯಲಾಗುತ್ತದೆ. ಕೃಷಿ ವೈಶಿಷ್ಟ್ಯಗಳು ಮತ್ತು ಕೌಶಲ್ಯಗಳ ವಿಸ್ತರಣೆ ಮತ್ತು ವೈವಿಧ್ಯತೆಗಳನ್ನು ಕೃಷಿಯು ಒಳಗೊಂಡಿರುತ್ತದೆ. ನೀರಾವರಿ ವ್ಯವಸ್ಥೆಯು ಇದರಲ್ಲಿ ಒಂದಾಗಿದೆ. ಕೃಷಿ ಯೋಗ್ಯ ಭೂಮಿಯ ಮೇಲಿನ ಬೆಳೆಗಳ ಸಾಗುವಳಿ ಮತ್ತು ಭೂಮಿಯ ಮೇಲಿನ ಜಾನುವಾರುಗಳ ಮಂದೆಗಳ ಕಾಯುವಿಕೆಯು ಕೃಷಿಯ ಬುನಾದಿಯಾಗಿ ಉಳಿದುಕೊಂಡು ಬಂದಿದೆ. ವಸ್ತುಗಳನ್ನು ಸಂಗ್ರಹಿಸುತ್ತಾ ಅಲೆಮಾರಿ ಜೀವನ ನಡೆಸುತ್ತಿದ್ದ ಮಾನವ ಒಂದು ಕಡೆ ನೆಲೆನಿಂತು ತನಗೆ ಬೇಕಾದ ವಸ್ತುಗಳ ಉತ್ಪಾದನೆಯನ್ನು ಮಾಡಿಕೊಳ್ಳಲು ಪ್ರಾರಂಭಿಸಿದ. ಅವುಗಳೆಂದರೆ ಅನ್ನ, ಬಟ್ಟೆ, ವಸತಿ ಮುಂತಾದವುಗಳು. ಮಾನವನಲ್ಲುಂಟಾದ ಈ ಪರಿವರ್ತನೆ ಕೃಷಿಯ ಬೆಳವಣಿಗೆಗೆ ಕಾರಣವಾಯಿತು. ಕೃಷಿ ವ್ಯವಸ್ಥೆ ರೂಪುಗೊಂಡು ಮಾನವನ ಬದುಕು ವ್ಯವಸ್ಥಿತವಾಗಿ ಬೆಳೆದುಬಂದದ್ದನ್ನು ಅರ್ಥೈಸಿಕೊಳ್ಳಬೇಕಾದರೆ ಇತಿಹಾಸದ ವಸ್ತುವಾದಂತಹ ಕೃಷಿ ವಿಧಾನವನ್ನು ನಾವು ತಿಳಿದುಕೊಳ್ಳುವುದು ಅನಿವಾರ್ಯವಾಗುತ್ತದೆ.

ರಾಜಪ್ರಭುತ್ವದ ಆಳ್ವಿಕೆಯ ಸಂದರ್ಭದಲ್ಲಿ ಕೃಷಿ ವ್ಯವಸ್ಥೆ ಪ್ರಧಾನವಾಗಿದ್ದರೂ, ಕೃಷಿಕರಾಗಲಿ, ದುಡಿಯುವ ವರ್ಗವಾಗಲಿ ಪ್ರಾಮುಖ್ಯತೆಯನ್ನು ಪಡೆದಿರಲಿಲ್ಲ. ರಾಜ್ಯದ ಒಟ್ಟು ಆರ್ಥಿಕ ಪರಿಸ್ಥಿತಿ, ಕೃಷಿ ಮತ್ತು ಅದರ ಉತ್ಪಾದನೆಗಳನ್ನು ಅವಲಂಬಿಸಿರುತ್ತಿತ್ತು. ಆದರೂ ಸಹ ಕೃಷಿ ಕಾರ್ಮಿಕರು ಅತ್ಯಂತ ಕೆಳಸ್ತರದ ಅಥವಾ

ಅಲಕ್ಷಿತ ವರ್ಗಕ್ಕೆ ಸೇರಿದವರಾಗಿದ್ದರು. ರಾಜ್ಯದ ಅರ್ಥವ್ಯವಸ್ಥೆಯಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತಿದ್ದ ಕೃಷಿ ವ್ಯವಸ್ಥೆಯ ಕಾರಣಿಕರ್ತನಾದ ಕೃಷಿಕನನ್ನು ಹೀನಾಯವಾಗಿ ಕಾಣಲಾಗುತ್ತಿತ್ತು. ಇದು ವರ್ಣ ಅಥವಾ ಜಾತಿ ಆಧಾರಿತ ಸಮಾಜದ ತೀರ್ಮಾನವೂ ಆಗಿರಬಹುದು. ೮ನೇ ಶತಮಾನದ ನಂತರ ಮಧ್ಯಕಾಲೀನ ಕರ್ನಾಟಕದಲ್ಲಿ ಕೃಷಿ ವ್ಯವಸ್ಥೆಯು ಅಭಿವೃದ್ಧಿಯತ್ತ ಸಾಗಿ ರೂಪುಗೊಳ್ಳಲಾರಂಭಿಸಿತು. ಅಂದಿನ ಅರಸರಿಂದ ಕೃಷಿಗೆ ಹೊಸ ಚಾಲನೆ ಮತ್ತು ಪ್ರೋತ್ಸಾಹ ದೊರಕಿತು. ಕೃಷಿ ವ್ಯವಸ್ಥೆಗೆ ಸಂಬಂಧಪಟ್ಟಂತೆ ಕೃಷಿಯ ವಿಸ್ತರಣೆ ಮತ್ತು ಉಳುಮೆಯ ವಿಧಾನಗಳು, ನೀರಾವರಿ ವ್ಯವಸ್ಥೆ, ಕಂದಾಯ ವ್ಯವಸ್ಥೆ, ಭೂ ಮಾಲಿಕರು ಮತ್ತು ಕೃಷಿಕಾರ್ಮಿಕರು ಮುಂತಾದ ಅಂಶಗಳನ್ನು ವಿಶ್ಲೇಷಣೆ ಮಾಡಬಹುದು.[೬]

ಮಧ್ಯಕಾಲೀನ ಯುಗದ ಬಹಮನಿ ಸಾಮ್ರಾಜ್ಯದಲ್ಲಿ ಅರ್ಥ ವ್ಯವಸ್ಥೆಯಲ್ಲಿ ಕೃಷಿಯ ಪ್ರಾಮುಖ್ಯತೆಯನ್ನು ಜನರು ಗುರುತಿಸಿದ್ದರು. ಮನುಷ್ಯನು ಕೈಗೊಳ್ಳುವ ಅನೇಕ ವೃತ್ತಿಗಳಲ್ಲಿ ಕೃಷಿಯೇ ಅತ್ಯಂತ ಪ್ರಮುಖವಾದುದು. ಏಕೆಂದರೆ ಮಿಕ್ಕೆಲ್ಲಾ ವೃತ್ತಿಗಳು ಕೃಷಿಯನ್ನೇ ಅವಲಂಭಿಸಿವೆ. ಕೃಷಿ ಇಲ್ಲದೆ ಯಾವ ದೇಶವೂ ಪ್ರಗತಿ ಹೊಂದಲಾರದು ಎಂದು ಸರ್ವಜ್ಞನು ಹೇಳಿದ್ದಾನೆ. ಕೃಷಿಯನ್ನು ಸೂಚಿಸಲು ಆರಂಭ ಬೇಸಾಯ, ಮೇಟಿ ವಿದ್ಯೆ, ವ್ಯವಸಾಯ ಮತ್ತು ಸಾಗುವಳಿ ಎಂಬ ಪದಗಳನ್ನು ಬಳಸಲಾಗಿದೆ. ರೈತರಿಗೆ ಬೆಳೆಗಳ ಋತು ಆಧಾರಿತ ವಿಭಜನೆಯ ಒಳ್ಳೆಯ ತಿಳುವಳಿಕೆ ಇತ್ತು. ಕಾರ್ತಿಕ ಬೆಳೆಯನ್ನು ನವೆಂಬರ್–ಜನವರಿ ಅವಧಿಯಲ್ಲಿ ಕೊಯ್ಯಲಾಗುತ್ತಿತ್ತು. ವೈಶಾಕ ಬೆಳೆಯನ್ನು ಏಪ್ರಿಲ್–ಮೇ ತಿಂಗಳಲ್ಲಿ ಕೊಯ್ಯಲಾಗುತ್ತಿತ್ತು. ಕೃಷಿಯನ್ನು ವರ್ಷದ ಎರಡು ಕಾಲಾವಧಿಗಳಲ್ಲಿ ವಿಭಾಗಿಸಲಾಗಿತ್ತು, ಮೊದಲನೆಯದಾಗಿ ಜೂನ್‌ನಿಂದ ಅಕ್ಟೋಬರ್‌ವರೆಗೆ ನೈರುತ್ಯ ಮುಂಗಾರು ಮಳೆಗೆ ಹೊಂದಿಕೊಳ್ಳುವ ಅವಧಿ ಮತ್ತು ಎರಡನೆಯದಾಗಿ ಜನವರಿ–ಫೆಬ್ರವರಿ ತಿಂಗಳ ಚಳಿ ಹವೆಯ ಅವಧಿ. ನೈರುತ್ಯ ದಿಕ್ಕಿನಿಂದ ಬರುವ ಮುಂಗಾರು ಮಳೆಯೊಂದಿಗೆ ಕಾರ್ತಿಕ ಬೆಳೆ ಪ್ರಾರಂಭವಾಗುತ್ತಿತ್ತು ಆದ್ದರಿಂದ ಇದನ್ನು 'ಮುಂಗಾರು ಬೆಳೆ' ಎಂದು ಕರೆಯುತ್ತಿದ್ದರು. ವೈಶಾಕ ಮಾಸದಲ್ಲಿ ಬಿತ್ತುವ ಬೆಳೆಗೆ ಮಾನ್ಸೂನ್ ಕೊನೆಯಾಗಿರುತ್ತಿದ್ದುದರಿಂದ ಅದನ್ನು 'ಹಿಂಗಾರು ಬೆಳೆ' ಎಂದು ಕರೆಯುತ್ತಿದ್ದರು. ಬಹಮನಿ ಸಾಮ್ರಾಜ್ಯದಲ್ಲಿ ಕೃಷಿಕರು ವರ್ಷದಲ್ಲಿ ಎರಡು ಬೆಳೆ ತೆಗೆಯುವುದು ಮತ್ತು ಬೆಳೆಯನ್ನು ಪುನರಾವರ್ತಿಸುವುದು ತಿಳಿಯುತ್ತದೆ.[೭]

ಕೃಷಿಯ ಪ್ರಗತಿಗೆ ಭೂಮಿಯ ಶ್ರೇಷ್ಠ ಫಲವತ್ತತೆ ಸಹಾಯಕವಾಗಿತ್ತು.ಇಬ್ನ್ ಬತೂತನು ದಕ್ಷಿಣದಲ್ಲಿ ವರ್ಷಕ್ಕೆ ಎರಡು ಬೆಳೆ– ಒಂದು, ಹಿಂಗಾರಿನ ಏಳು ಬಗೆಯ ಬೆಳೆಗಳು(ರಾಗಿ, ಜೋಳ, ಧಾನ್ಯಗಳು, ಬಟಾಣಿ ಹಾಗೂ ನಾನಾ ಬಗೆಯ ದ್ವಿದಳ ಧಾನ್ಯಗಳು) ಎರಡನೆಯದು, ನಾಲ್ಕು ಬಗೆಯ ಬೇಸಿಗೆ ಬೆಳೆಗಳು(ಗೋಧಿ, ಬಾರ್ಲಿ, ಬಟಾಣಿ ಮತ್ತು ಅವರೆ) ತೆಗೆಯುವಷ್ಟು ಭೂಮಿ ಫಲವತ್ತಾಗಿತ್ತು. ಹಿಂಗಾರು ಬೆಳೆಗಳ ಜೊತೆಗೆ ಹುಚ್ಚೆಳ್ಳು ಕಬ್ಬುಗಳನ್ನು ಬೆಳೆಯಲಾಗುತ್ತಿತ್ತು. ವರ್ಷಕ್ಕೆ ಭತ್ತದ ಮೂರು ಬಿತ್ತನೆ ಆಗುತ್ತಿತ್ತು ಎಂದು ಹೇಳುತ್ತಾನೆ. ಮಾವು, ಹಲಸು, ಮುಳ್ಳುಹಣ್ಣು, ಬೇರೆ ಯಾವ ದೇಶದಲ್ಲೂ ಪ್ರವಾಸಿಗಳು ಕಾಣದ ಮೂರು ಬಗೆಯ ಕಿತ್ತಳೆ, ಜೊತೆಗೆ ವರ್ಷಕ್ಕೆ ಎರಡು ಫಸಲು ಕೊಡುವ ಸಾಮಾನ್ಯ ದಾಳಿಂಬೆ ಬೆಳೆಯುತ್ತಿದ್ದರು. ದಖ್ಖನ್ನಿನ' ರಾಜ್ಯದಲ್ಲಿ" ಅಚ್ಚುಕಟ್ಟಾಗಿ ಉತ್ತಮ ಭೂಮಿ ಹಾಗೂ ಸೊಗಸಾದ ತಳಿಯ ಹಸುಗಳು ಇದ್ದ ಅನೇಕ ಸುಂದರ ಗ್ರಾಮಗಳನ್ನು ಇದ್ದವೆಂದು ಬತೂತನು ತಿಳಿಸುತ್ತಾನೆ.[೮]

ಬಹಮನಿ ಸಾಮ್ರಾಜ್ಯದಲ್ಲಿ ರಾಜ್ಯದ ಆದಾಯವನ್ನು ಹೆಚ್ಚಿಸುವುದಕ್ಕಾಗಿ ಕೃಷಿ ವಿಸ್ತರಣೆಯನ್ನು ಮಾಡಲಾಯಿತು. ಕೃಷಿ ಯೋಗ್ಯವಲ್ಲದ ಪ್ರದೇಶಗಳನ್ನು ಕೃಷಿ ಭೂಮಿಯನ್ನಾಗಿ ಪರಿವರ್ತಿಸಿ ಅದರಿಂದ ರಾಜ್ಯದ ಬೊಕ್ಕಸಕ್ಕೆ ಹೆಚ್ಚಿನ ಆದಾಯ ಬರುವಂತೆ ಮಾಡಲಾಯಿತು. ಕೃಷಿ ಭೂಮಿಯ ವಿಸ್ತರಣೆಯಿಂದಾಗಿ

ನಿರ್ಮಾಣಗೊಂಡ ಹೊಸ ಜನವಸತಿಗಳಲ್ಲಿ ಕೆರೆ ಮತ್ತು ದೇವಾಲಯಗಳನ್ನು ನಿರ್ಮಿಸಲಾಗುತ್ತಿತ್ತು. ನೀರಾವರಿ ಉದ್ದೇಶಕ್ಕಾಗಿ ಕೆರೆಯ ನಿರ್ಮಾಣಗಳು ಅಂದಿನ ಕಾಲದಲ್ಲಿ ಅವಶ್ಯಕವಾಗಿದ್ದವು. ಕೃಷಿಯ ವಿಸ್ತರಣೆ ಅಷ್ಟೊಂದು ಸುಲಭದ ಕೆಲಸವಾಗಿರಲಿಲ್ಲ, ಕಾಡುಗಳನ್ನು ಕಡಿದು ಭೂಮಿಯನ್ನು ಸಮತಟ್ಟುಗೊಳಿಸಿ ಕೃಷಿಯೋಗ್ಯ ಭೂಮಿಯನ್ನಾಗಿ ಮಾಡಬೇಕಾಗುತ್ತಿತ್ತು. ಈ ವಿಸ್ತರಣೆಗಾಗಿ ರಾಜ್ಯವು ಸಹಾಯ ಸಹಕಾರಗಳನ್ನು ಕೃಷಿಕರಿಗೆ ನೀಡುತ್ತಿತ್ತು. ಕೃಷಿಕರಿಗೆ ಭೂಮಿಯನ್ನು ದಾನವನ್ನಾಗಿ ನೀಡಿ ತೆರಿಗೆ ವಿನಾಯತಿಯನ್ನು ನೀಡ ಲಾಗುತ್ತಿತ್ತು. ಹೊಸದಾಗಿ ನಿರ್ಮಾಣಗೊಂಡ ಹಳ್ಳಿಗಳು ಗ್ರಾಮಗಳ ಮಹಾಜನರ ಅಧಿಕಾರದ ಆಧೀನ ದಲ್ಲಿರುತ್ತಿದ್ದವು. ಭೂಮಾಲೀಕರು ಹಳ್ಳಿಗಳ ಮೇಲೆ ಹಿಡಿತವನ್ನು ಹೊಂದಿದ್ದರು. ಕೃಷಿ ವಿಸ್ತರಣೆಯು ಅರಸರಿಗೆ ಮತ್ತು ಭೂಮಾಲೀಕರಿಗೆ ಹೆಚ್ಚು ಲಾಭವನ್ನು ತಂದು ಕೊಡುತ್ತಿತ್ತು. ರೈತರು ಹೆಚ್ಚಿನ ಅಂಶ ಕೂಲಿ ಆಳುಗಳಾಗಿ ಕೆಲಸ ಮಾಡುತ್ತಿದ್ದರು. ಕೃಷಿ ಭೂಮಿಗಳನ್ನು ಮೂರು ಪ್ರದೇಶಗಳಾಗಿ ವಿಂಗಡಿಸ ಲಾಗುತ್ತಿತ್ತು, ಅವುಗಳೆಂದರೆ ಬೈಲು ಪ್ರದೇಶ, ಮಜಲು ಪ್ರದೇಶ ಮತ್ತು ಬೆಟ್ಟ ಪ್ರದೇಶಗಳು. ಬೈಲು ಪ್ರದೇಶದಲ್ಲಿ ಸಂಪೂರ್ಣ ನೀರಾವರಿ ವ್ಯವಸ್ಥೆ ಇದ್ದು ವರ್ಷಕ್ಕೆ ಮೂರು ಬೆಳೆಯನ್ನು ತೆಗೆಯಬಹುದಾಗಿತ್ತು. ಮಜಲು ಗದ್ದೆ ಪ್ರದೇಶವು ಬೈಲು ಪ್ರದೇಶಕ್ಕಿಂತ ಸ್ವಲ್ಪ ಎತ್ತರದಲ್ಲಿದ್ದು ಒಂದೇ ಬೆಳೆಯನ್ನು ತೆಗೆಯಬಹುದಾಗಿತ್ತು, ನೀರಿನ ಸರಿಯಾದ ವ್ಯವಸ್ಥೆ ಇದ್ದರೆ ಮಾತ್ರ ಹೆಚ್ಚಿನ ಬೆಳೆಯನ್ನು ತೆಗೆಯಬಹುದಾಗಿತ್ತು. ಬೆಟ್ಟವು ಎತ್ತರದ ಪ್ರದೇಶದಲ್ಲಿರುತ್ತಿದ್ದರಿಂದ ಅಲ್ಲಿಯ ಕೃಷಿ ಭೂಮಿ ಹೆಚ್ಚಾಗಿ ಮಳೆ ಮೇಲೆ ಅವಲಂಬಿತವಾಗಿತ್ತು. ಬೆಟ್ಟ ಗುಡ್ಡಗಳಲ್ಲಿ ಕುಮೇರ್ ಎನ್ನುವ ಇನ್ನೊಂದು ರೀತಿಯ ಕೃಷಿ ಪ್ರದೇಶವು ಇರುತ್ತಿತ್ತು, ಇದನ್ನು ಕುಮೇರ್ ಕೃಷಿ ಎಂದು ಕರೆಯಲಾಗುತ್ತಿತ್ತು. ಈ ಕೃಷಿಯನ್ನು ವರ್ಷಕ್ಕೊಮ್ಮೆ ಅಥವಾ ಎರಡು ಸಲ ಮಾಡಬಹುದಿತ್ತು. ಗುಡ್ಡಗಾಡು ಜನಾಂಗದವರು ಈ ಕೃಷಿ ಪದ್ಧತಿಯನ್ನು ಹೆಚ್ಚಾಗಿ ಅನುಸರಿಸುತ್ತಿದ್ದರು. ಕಾಡನ್ನು ಕಡಿದು ಭೂಮಿಯನ್ನು ಕೃಷಿ ಯೋಗ್ಯವಾಗಿ ಮಾಡಿ ಬಿತ್ತನೆ ಮಾಡುತ್ತಿದ್ದರು.

ದಖ್ಖನ್ ಅವಧಿಯಲ್ಲಿ ಸಾಂಪ್ರದಾಯಿಕ ಉಳುಮೆ ಪದ್ಧತಿಯೇ ಇತ್ತೆಂದು ತಿಳಿದುಬರುತ್ತದೆ. ಭೂಮಿಯನ್ನು ಸಾಗುವಳಿ ಮಾಡಲು ಎತ್ತು, ನೇಗಿಲು, ನೊಗ ಮುಂತಾದ ಪ್ರಾಣಿಗಳು ಮತ್ತು ಉಪಕರಣಗಳನ್ನು ಉಪಯೋಗಿಸುತ್ತಿದ್ದರು. ಪ್ರಾಣಿಗಳನ್ನು ಕೃಷಿಗೆ ಹೆಚ್ಚಾಗಿ ಉಪಯೋಗಿಸುತ್ತಿದ್ದರಿಂದ ಕೃಷಿ ವ್ಯವಸ್ಥೆಯಲ್ಲಿ ಪಶುಸಂಗೋಪನೆ ಪ್ರಮುಖ ಸ್ಥಾನವನ್ನು ಬಹಮನಿ ಸಾಮ್ರಾಜ್ಯದಲ್ಲಿ ಪಡೆದಿತ್ತು. ಸಾಂಪ್ರದಾಯಿಕ ಕೃಷಿಯಲ್ಲಿ ಕೃಷಿ–ಕಾರ್ಮಿಕರನ್ನು ಇತರ ಕೃಷಿ ಉಪಕರಣಗಳ ರೀತಿಯಲ್ಲಿಯೇ ನೋಡಲಾಗುತ್ತಿತ್ತು. ಎರಡು ಎತ್ತುಗಳಿಗೆ ನೊಗ ಮತ್ತು ನೇಗಿಲು ಕಟ್ಟಿ ಅವುಗಳ ಸಹಾಯದಿಂದ ರೈತ ಭೂಮಿಯನ್ನು ಉಳುವುದು ದಖ್ಖನ್ ಸಾಮ್ರಾಜ್ಯದ ವಿಧಾನವಾಗಿತ್ತು. ಅಂದಿನ ವಿಧಾನವು ಇಂದಿಗೂ ಸಹ ಮುಂದುವರಿದುಕೊಂಡು ಬಂದಿರುವುದನ್ನು ನಾವು ಕಾಣಬಹುದು. ಭೂಮಿಯನ್ನು ಉಳುಮೆ ಮಾಡಿದ ನಂತರ ಬೀಜಗಳನ್ನು ಬಿತ್ತಿ ಗೊಬ್ಬರವನ್ನು ನೀಡುವ ವ್ಯವಸ್ಥೆ ಇತ್ತು. ಕೃಷಿಕರು ಭೂಮಿಯ ಉಳುಮೆಗೆ, ಬಿತ್ತುವ ಬೀಜಗಳಿಗೆ, ಹಾಕಬೇಕಾದ ಗೊಬ್ಬರಕ್ಕೆ, ಸಮಯಕ್ಕೆ ಸರಿಯಾಗಿ ನೀರು ಪೂರೈಸುವಿಕೆಗೆ ಕೃಷಿಯಲ್ಲಿ ಪ್ರಥಮ ಆದ್ಯತೆಯನ್ನು ನೀಡಲಾಗುತ್ತಿತ್ತು. ಕಬ್ಬಿಣದ ಬಳಕೆಯಿಂದ ಕೃಷಿಯಲ್ಲಿ ಪ್ರಗತಿ ಸಾಧಿಸಲು ಸಾಧ್ಯವಾಯಿತು. ಹೊಸ ತಾಂತ್ರಿಕತೆಯು ಹೆಚ್ಚಿನ ಉತ್ಪಾದನೆಗೆ ಕಾರಣವಾಯಿತು.

ಬಹಮನಿ ಸಾಮ್ರಾಜ್ಯದಲ್ಲಿ ಕೃಷಿಯು ಬಹುಮುಖ್ಯವಾದ ಗ್ರಾಮೀಣ ಅರ್ಥವ್ಯವಸ್ಥೆಯ ಜೀವನಾಡಿಯಾಗಿತ್ತು. ಕೃಷಿಯು ಜೀವನಾವಶ್ಯಕ್ಕೆ ಮುಖ್ಯ ಉದ್ಯೋಗವಾಗಿದ್ದು ಜೋಳ, ರಾಗಿ, ಮೆಕ್ಕೆಜೋಳ, ಭತ್ತ, ಹತ್ತಿ, ಹುರುಳಿ, ಗೋದಿ ಮುಂತಾದ ಪದಾರ್ಥಗಳನ್ನು ಬೆಳೆಯುತ್ತಿದ್ದರು. ಎಣ್ಣೆ ಬೀಜಗಳ ಸಂಸ್ಕರಣೆ

ಮತ್ತು ಗಾಣಗಳಿಗೆ ಬೀಜಗಳನ್ನು ಹಾಕಿ ಎಣ್ಣೆ ತೆಗೆಯುವುದನ್ನು ವಿದೇಶಿ ಪ್ರವಾಸಿಗರಾದ ಫೇಸ್‌ರವರು ನೋಡಿರುವೆನೆಂದು ಹೇಳಿದ್ದಾರೆ.[೯] ದಖ್ಖನ್ ಪ್ರದೇಶದ ಫಲವತ್ತಾದ ಕಣಿವೆಗಳಲ್ಲಿ ಭತ್ತ, ಕಿತ್ತಳೆ, ನಿಂಬೆ, ಸಿಬಾನ್, ಕೆಂಪು ಮೂಲಂಗಿ, ಎಲೆಕೋಸು ಮುಂತಾದ ತೋಟದ ಬೆಳೆಗಳನ್ನು ಬೆಳೆಯುತ್ತಿದ್ದರೆಂದು ಫೇಸ್‌ರವರು ಹೇಳಿದ್ದಾರೆ. ನ್ಯೂನಿಜ್‌ರವರ ಪ್ರಕಾರ ಗೋದಿ, ಕಾಳು, ಭತ್ತ ಮತ್ತು ಜೋಳ ಇಲ್ಲಿಯ ಜನರು ಹೆಚ್ಚಾಗಿ ಬೆಳೆಯುತ್ತಿದ್ದರಂತೆ, ಅವರ ಪ್ರಕಾರ ಇಲ್ಲಿ ಉಪಯೋಗಿಸುತ್ತಿದ್ದ ಧಾನ್ಯ ಜೋಳ.

ಬಹಮನಿ ಸಾಮ್ರಾಜ್ಯದಲ್ಲಿ ಕೃಷಿ ಭೂಮಿಯನ್ನು ಫಲವತ್ತತೆಗೆ ಅನುಗುಣವಾಗಿ ವಿಭಾಗಿಸಲಾಗುತ್ತಿತ್ತು. ಅದೇ ಪ್ರಕಾರ ತೆರಿಗೆ ವಸೂಲಿ ಮಾಡುತ್ತಿದ್ದರೆಂದು ತಿಳಿದುಬರುತ್ತದೆ. ಗ್ರಾಮದ ಪಟೇಲ್, ಕುಲಕರ್ಣಿ ಮುಂತಾದ ಅಧಿಕಾರಿಗಳು ತೆರಿಗೆ ವ್ಯವಸ್ಥೆಯನ್ನು ನಿಯಂತ್ರಿಸುತ್ತಿದ್ದರು. ವಸ್ತುಗಳ ವಿನಿಮಯ ಪದ್ಧತಿ ಅಂದಿನ ಕಾಲದಲ್ಲಿ ಸಾಮಾನ್ಯವಾಗಿದ್ದರಿಂದ ತೂಕ ಮತ್ತು ಅಳತೆಗಳ ಅರಿವು ಸಹ ಅವರಿಗಿತ್ತೆಂದು ಹೇಳಬಹುದು. ದಖ್ಖನ್ ಪ್ರದೇಶದ ಮಟ್ಟಿಗೆ ಸಾಂಪ್ರದಾಯಿಕ ಕೃಷಿ ವ್ಯವಸ್ಥೆಯು ಅಸ್ತಿತ್ವದಲ್ಲಿತ್ತು. ಕೃಷಿಗೆ ಪೂರಕವಾಗಿ ಬೇಕಾದಂತಹ ಇತರೆ ಕಸುಬುದಾರರು ಸಹ ಇಲ್ಲಿ ವಾಸಿಸುತ್ತಿದ್ದರು. ಬಡಗಿ, ಕಮ್ಮಾರ, ಅಕ್ಕಸಾಲಿಗ, ಗಾಣಿಗ, ಚಮ್ಮಾರ ಮುಂತಾದ ಉಪ ಕಸುಬುದಾರರು ಬಹಮನಿ ಸಾಮ್ರಾಜ್ಯದಲ್ಲಿ ಆಶ್ರಯ ಪಡೆದಿದ್ದರು, ಇವರಿಂದ ಸೇವೆಯನ್ನು ತೆಗೆದುಕೊಂಡು ಅದಕ್ಕೆ ಪ್ರತಿಯಾಗಿ ಸುಗ್ಗಿಯ ನಂತರ ಧಾನ್ಯ ರೂಪದಲ್ಲಿ ಸಂಬಳವನ್ನು ಕೊಡಲಾಗುತ್ತಿತ್ತು. ಈ ಸಂಬಳವನ್ನು ವರ್ಷಕ್ಕೊಮ್ಮೆ ನಿರ್ದಿಷ್ಟಪಡಿಸಿದ ಅವಧಿಯಲ್ಲಿ ಮತ್ತು ನಿರ್ದಿಷ್ಟಪಡಿಸಿದ ಮೊತ್ತದಲ್ಲಿ ಕೊಡಲಾಗುತ್ತಿತ್ತು.

ಬಹಮನಿ ಸಾಮ್ರಾಜ್ಯದಲ್ಲಿ ಹೆಚ್ಚಾಗಿ ಚದುರಿದ ಕೃಷಿ ಹಿಡುವಳಿ ಪದ್ಧತಿ ಅಸ್ತಿತ್ವದಲ್ಲಿದ್ದುದರಿಂದ ಈ ಪ್ರದೇಶದಲ್ಲಿ ಲಾಭಾಂಶವು ಸಹ ಅಲ್ಪಪ್ರಮಾಣದ್ದಾಗಿರುತ್ತಿತ್ತು. ಕೃಷಿಯಲ್ಲಿ ಗೇಣಿ ವ್ಯವಸ್ಥೆಯು ಜಾರಿಯಲ್ಲಿದ್ದು, ಜಮೀನುದಾರರು ಕೃಷಿ ಭೂಮಿಗಳನ್ನು ನಿಯಂತ್ರಣದಲ್ಲಿಟ್ಟುಕೊಂಡಿದ್ದರು. ಭೂಮಿಯ ಪ್ರಮುಖ ಒಡೆಯ ಸುಲ್ತಾನನೇ ಆಗಿದ್ದರೂ, ಸುಲ್ತಾನನ ನಂತರದಲ್ಲಿ ಅನುವಂಶಿಕವಾಗಿ ಭೂಮಿಯ ಒಡೆತನ ಬೆಳೆದು ಬಂದಿತ್ತು. ದಖ್ಖನ್ ಸಾಮ್ರಾಜ್ಯದಲ್ಲಿ ಧಾರ್ಮಿಕ ಸಂಸ್ಥೆಗಳಿಗೆ ಸಂಬಂಧಿಸಿದ ಭೂಮಿಗಳಿಗೆ ತೆರಿಗೆಯಿಂದ ವಿನಾಯಿತಿ ನೀಡಲಾಗಿತ್ತು. ಅದೇ ಪ್ರಕಾರ ಹಿಂದೂ ಧಾರ್ಮಿಕ ಸಂಸ್ಥೆಗಳಿಗೂ ಸಹ ವಿನಾಯಿತಿ ಕೊಡಲಾಗಿತ್ತು. ಮಹಮ್ಮದ್ ಗವಾನನ ಆಡಳಿತ ಕಾಲದಲ್ಲಿ ಅನೇಕ ಭೂ ಸುಧಾರಣೆಗಳಾಗಿ ಗವಾನನು ಹಲವು ಹೊಸ ಕ್ರಮಗಳನ್ನು ಜಾರಿಗೊಳಿಸಿದನು. ಭೂ ಮಾಪನ, ಫಲವತ್ತತೆ ಮತ್ತು ಬೆಳೆಗಳಿಗನುಸಾರವಾಗಿ ತೆರಿಗೆಯನ್ನು ಕೃಷಿಯ ಮೇಲೆ ವಿಧಿಸುವ ವ್ಯವಸ್ಥೆಯನ್ನು ಜಾರಿಗೆ ತಂದಿದ್ದನು.[೧೦]

ಕೃಷಿ ವ್ಯವಸ್ಥೆಯಲ್ಲಿ ನೀರಾವರಿ ವ್ಯವಸ್ಥೆಯು ಪ್ರಮುಖವಾಗಿದ್ದು ನದಿಗಳು, ಬಾವಿಗಳು, ಕೆರೆಗಳು ಕೃಷಿಯಲ್ಲಿ ಪ್ರಮುಖ ಪಾತ್ರ ವಹಿಸಿದ್ದವು. ಸುಲ್ತಾನರು ಭಾವಿ, ಕೆರೆಗಳ ನಿರ್ಮಾಣಕ್ಕೆ ಹೆಚ್ಚಿನ ಒತ್ತು ನೀಡಿದ್ದರು. ಕೃಷಿಗೆ ಕಾಲುವೆಗಳ ಮೂಲಕ ನೀರು ಸರಬರಾಜು ಮಾಡಲಾಗುತ್ತಿತ್ತು. ಈ ವ್ಯವಸ್ಥೆಗೆ ದಖ್ಖನ್ ಸುಲ್ತಾನರು ಹೆಚ್ಚಿನ ಮಟ್ಟದ ಪ್ರೋತ್ಸಾಹ ನೀಡಿದ್ದರಲ್ಲದೇ ಅನೇಕ ಜಲಾಶಯಗಳನ್ನು ಸಹ ನಿರ್ಮಿಸಿ ಕೃಷಿಗೆ ಅನುಕೂಲ ಮಾಡಿಕೊಟ್ಟಿದ್ದರು. ಕೃಷಿಕರು ಭೂಮಿಯನ್ನು ಉಳುವುದಕ್ಕಾಗಿ ಎತ್ತು, ಹಸು, ಎಮ್ಮೆ ಮೊದಲಾದ ಪ್ರಾಣಿಗಳನ್ನು ಹೆಚ್ಚಾಗಿ ಉಪಯೋಗಿಸುತ್ತಿದ್ದರಿಂದ ಬಹಮನಿ ಸಂಸ್ಥಾನದಲ್ಲಿ ಪಶುಸಂಗೋಪನೆಯು ಉಪ ಕಸುಬಾಗಿ ರೂಢಿಗೆ ಬಂದಿತ್ತೆಂದು ತಿಳಿದುಬರುತ್ತದೆ. ದಖ್ಖನ್ ಪ್ರದೇಶದಲ್ಲಿ ಜನರು ಹೆಚ್ಚಾಗಿ ಹಸು, ಕುರಿ, ಮೇಕೆ, ಹಂದಿ, ಎಮ್ಮೆ ಮುಂತಾದ ಪ್ರಾಣಿಗಳನ್ನು ಹಾಗೂ ಹೈನು ಉತ್ಪಾದನೆಯ ಪ್ರಾಣಿಗಳನ್ನು ಸಾಕಣೆ ಮಾಡುತ್ತಿದ್ದರು. ಸಾಕು ಪ್ರಾಣಿಯಾಗಿ ನಾಯಿಯನ್ನು ಸಾಕುತ್ತಿದ್ದರೆಂದು

ತಿಳಿದುಬರುತ್ತದೆ. ಕೃಷಿಕರು ಕತ್ತೆ, ಎತ್ತು, ಅಶ್ವಗಳನ್ನು ತಮ್ಮ ಸಾರಿಗೆಗಾಗಿ ಉಪಯೋಗಿಸಿಕೊಳ್ಳುತ್ತಿದ್ದರೆಂದು ತಿಳಿಯುತ್ತದೆ.

### ೪.೧.೨. ನೀರಾವರಿ ವ್ಯವಸ್ಥೆ

ಭೂಮಿಯನ್ನು ಉಳುವುದು ಪ್ರಾಚೀನ ಕಾಲದಿಂದಲೂ ಬೆಳೆದು, ಮಧ್ಯಕಾಲದಲ್ಲಿಯೂ ಅದು ಮುಂದುವರೆಯಿತು. ಕೃಷಿ ವಿಧಾನದಲ್ಲಿ ಪ್ರತಿಯೊಂದು ಹಂತದಲ್ಲಿಯೂ ಬದಲಾವಣೆಗಳಾಗಿರುವುದನ್ನು ನಾವು ಚರಿತ್ರೆಯಲ್ಲಿ ಕಾಣುತ್ತೇವೆ. ಮಧ್ಯಕಾಲೀನ ಯುಗದಲ್ಲಿ ಕೃಷಿ ಭೂಮಿಯನ್ನು ಸಮೃದ್ಧಗೊಳಿಸುವ ಸಲುವಾಗಿ ಅನೇಕ ನೀರಾವರಿ ವ್ಯವಸ್ಥೆಗಳನ್ನು ಮಾಡಲಾಯಿತು. ಸಮೃದ್ಧ ಬೆಳೆಗಾಗಿ ಅಂದಿನ ಅರಸರು ಮತ್ತು ಸುಲ್ತಾನರು ಅನೇಕ ನೀರಾವರಿ ವ್ಯವಸ್ಥೆಗಳನ್ನು ಜಾರಿಗೆ ತಂದರು. ಮಧ್ಯಕಾಲೀನ ಯುಗದಲ್ಲಿ ದಖ್ಖನ್ ಸುಲ್ತಾನರು ಕೃಷಿ ವ್ಯವಸ್ಥೆಯಲ್ಲಿ ನೀರಾವರಿಗೆ ಹೆಚ್ಚಿನ ಮಹತ್ವವನ್ನು ಕೊಟ್ಟಿದ್ದರು. ಬಹಮನಿ ಸುಲ್ತಾನರ ಕಾಲದಲ್ಲಿ ಮಹಮ್ಮದ್ ಗವಾನನು ನೀರಾವರಿ ವ್ಯವಸ್ಥೆಗೆ ಹೆಚ್ಚಿನ ಮಹತ್ವವನ್ನು ಕೊಟ್ಟು ಕೃಷಿಕರಿಗೆ ಅನೇಕ ಸುಧಾರಿತ ನೀರಾವರಿ ವ್ಯವಸ್ಥೆಗಳು ಲಭ್ಯವಾಗುವಂತೆ ಮಾಡಿದನೆಂದು ಆಕರಗಳಿಂದ ತಿಳಿದುಬರುತ್ತದೆ. ನೀರು ತಪ್ಪದೇ ಒದಗುವ ಸ್ಥಳಗಳಲ್ಲಿ ಭತ್ತವನ್ನು ಬೆಳೆಯುತ್ತಿದ್ದರು. ನದಿಯ ಪಾತ್ರಗಳು, ಕೆರೆ, ಬಯಲು, ತಗ್ಗಾದ ತೇವವಿರುವ ಭೂಮಿ, ಭಾರಿ ಮಳೆಯಾಗುವ ಪ್ರದೇಶ ಇವು ಭತ್ತಕ್ಕೆ ಮೀಸಲಾಗಿದ್ದವು.[೧೧]

ಕೃಷಿ ವ್ಯವಸ್ಥೆ ಜೀವಂತವಾಗಿರಬೇಕಾದರೆ ನೀರಾವರಿ ವ್ಯವಸ್ಥೆಯು ಸಮೃದ್ಧವಾಗಿರಬೇಕು. ಭೂಮಿಯ ಉಳುಮೆಯನ್ನು ಸಂಪೂರ್ಣವಾಗಿ ಮಳೆಯನ್ನೇ ಅವಲಂಬಿಸಿ ಉಳುಮೆ ಮಾಡಲು ಸಾಧ್ಯವಿಲ್ಲ. ಕೃಷಿ ಭೂಮಿಗೆ ಕೃತಕ ನೀರಿನ ನೀರಾವರಿ ವ್ಯವಸ್ಥೆ ಅನಿವಾರ್ಯವಾಗುತ್ತದೆ. ಒಂದು ರಾಜ್ಯದ ಆರ್ಥಿಕ ಪ್ರಗತಿಯಲ್ಲಿ ಕೃಷಿಯೇ ಪ್ರಧಾನ ಪಾತ್ರ ನಿರ್ವಹಿಸುವುದರಿಂದ ಎಲ್ಲಾ ಬಹಮನಿ ಸುಲ್ತಾನರು ನೀರಾವರಿಗೆ ಹೆಚ್ಚಿನ ಆದ್ಯತೆಯನ್ನು ಕೊಟ್ಟಿದ್ದರು. ಬಹಮನಿ ಕಾಲದಲ್ಲಿ ಭೂಮಿಯನ್ನು ಹೆಚ್ಚಿನ ಪ್ರಮಾಣದಲ್ಲಿ ಹೊಂದಿರುವುದಕ್ಕಿಂತಲೂ ನೀರಾವರಿ ಹಾಗೂ ಭೂಮಿಯ ಉತ್ಪಾದನೆಗಳ ಮೇಲಿನ ನಿಯಂತ್ರಣ ಅತ್ಯಂತ ಪ್ರಮುಖವಾಗಿತ್ತು. ಹಿಂದಿನ ಕಾಲದಲ್ಲಿ ಜಮೀನು ಧಾರಾಳವಾಗಿ ಲಭಿಸುತ್ತಿತ್ತು. ನೀರಾವರಿ ಸೌಲಭ್ಯಕ್ಕಾಗಿ ಅರಣ್ಯವನ್ನು ಕಡಿದು ಕೆರೆಯನ್ನು ನಿರ್ಮಿಸುವುದರ ಮೂಲಕ ಗ್ರಾಮೀಣ ಅರ್ಥವ್ಯವಸ್ಥೆಯನ್ನು ನೂತನವಾಗಿ ರೂಪುಗೊಳಿಸಲಾಯಿತು. ಹೊಸ ನೀರಾವರಿ ಸೌಲಭ್ಯಗಳು ಉತ್ಸಾಹಿ ರೈತರನ್ನು ಕೃಷಿಯ ಕಡೆಗೆ ಹೆಚ್ಚಿಗೆ ಆಕರ್ಷಿಸಿದವು. ೧೪ನೇ ಶತಮಾನದ ಪ್ರಾರಂಭದಲ್ಲಿ ಕೃಷಿಕರಿಗೆಂದೇ ರಚಿತವಾದ 'ರಟ್ಟಮತಂ' ಎಂಬ ಕೃತಿಯು ಕೆರೆ, ತೊರೆ, ಹೊಳೆ, ಬಾವಿ ಮತ್ತು ಕೊಳ್ಳ ಇವು ನೀರಾವರಿ ಮೂಲಗಳಾಗಿದ್ದವು ಎಂದು ತಿಳಿಸುತ್ತದೆ.

ನೀರಾವರಿ ವ್ಯವಸ್ಥೆಯಲ್ಲಿ ನದಿಗಳು, ಬಾವಿಗಳು ಮತ್ತು ಕೆರೆಗಳು ಪ್ರಮುಖ ಪಾತ್ರವಹಿಸಿದ್ದವು. ದಖ್ಖನ್ ಸಮಯದಲ್ಲಿ ಕಾಲುವೆಗಳ ಮೂಲಕ ನೀರನ್ನು ಭೂಮಿಗೆ ಸರಬರಾಜು ಮಾಡಲಾಗುತ್ತಿತ್ತು, ಇದಕ್ಕಾಗಿಯೇ ದಖ್ಖನ್ ಸುಲ್ತಾನರು ಸಾಕಷ್ಟು ಪ್ರೋತ್ಸಾಹ ನೀಡಿದರಲ್ಲದೇ ದೊಡ್ಡ ಜಲಾಶಯಗಳನ್ನು ಸಹ ನಿರ್ಮಿಸಿದರು. ಏತ ನೀರಾವರಿ ಸಾಮಾನ್ಯವಾದ ವ್ಯವಸ್ಥೆಯಾಗಿತ್ತು. ನೀರಾವರಿ ವ್ಯವಸ್ಥೆಯಿಂದ ವರ್ಷಕ್ಕೆ ಎರಡರಿಂದ ಮೂರು ಬೆಳೆಗಳನ್ನು ಬೆಳೆಯಲಾಗುತ್ತಿತ್ತು, ನೀರಾವರಿ ಬೆಳೆಗಳಲ್ಲಿ ಭತ್ತ, ಗೋದಿ, ತೆಂದು, ಬಾಳೆ, ಬೇಳೆ ಕಾಳುಗಳು ಹಾಗೂ ದ್ರಾಕ್ಷಿ ಮುಂತಾದ ಹಣ್ಣುಗಳು ಪ್ರಮುಖವಾಗಿದ್ದವು. ಮಧ್ಯಕಾಲೀನ ಯುಗದಲ್ಲಿ ಕೆರೆ ಮತ್ತು ಕಟ್ಟೆ ಎಂಬ ಎರಡು ಬಗೆಯ ಜಲಾಶಯಗಳಿದ್ದವು. ಇವುಗಳನ್ನು ಶಾಸನಗಳಲ್ಲಿ ಪ್ರತ್ಯೇಕವಾಗಿಯೇ ಉಲ್ಲೇಖಗೊಳಿಸಲಾಗಿದೆ. ಸಣ್ಣ ಜಲಾಶಯವನ್ನು ಕಟ್ಟೆ ಎಂದು ಮತ್ತು ದೊಡ್ಡ ಜಲಾಶಯ

ವನ್ನು ಕೆರೆ ಎಂದು ಕರೆಯಲಾಗುತ್ತಿತ್ತು. ಹರಿಯುವ ನೀರಿಗೆ ಅಡ್ಡವಾಗಿ ಮಣ್ಣಿನ ದಿಣ್ಣೆಯನ್ನು ಅಥವಾ ಆಣೆಯನ್ನು ಕಟ್ಟಿ ಈ ಎರಡು ಪ್ರಕಾರದ ಜಲಾಶಯಗಳನ್ನು ನಿರ್ಮಿಸಲಾಗುತ್ತಿತ್ತು.[೧೨] ಮಾನವ ಶಕ್ತಿ ಮತ್ತು ಪ್ರಾಣಿ ಶಕ್ತಿಗಳನ್ನು ಅದರಲ್ಲೂ ಆನೆಗಳನ್ನು ಈ ಕಾರ್ಯಗಳಿಗೆ ಉಪಯೋಗಿಸುತ್ತಿದ್ದರು ಎಂದು ಗೊತ್ತಾಗುತ್ತದೆ.

ಬಹಮನಿ ಸುಲ್ತಾನರು ಕೃಷಿಕರ ಹಿತದೃಷ್ಟಿಯಿಂದ ಕೃಷಿ ಅಭಿವೃದ್ಧಿ ಮತ್ತು ನೀರಾವರಿ ಸೌಲಭ್ಯವನ್ನು ವಿಸ್ತರಿಸಿ ಮಹಾನ್ ಪೋಷಕರೆನಿಸಿದ್ದರು. 'ಸಾಕಿ'ಯವರು ಹೆನ್ರಿ ಕೌಸೆನ್ಸ್‌ನ ವರ್ಣರಂಜಿತ ವಿವರಣೆಯನ್ನು ಉದ್ದೇಶಿಸಿ ಹೀಗೆ ಹೇಳುತ್ತಾರೆ. ಇವರ ಕಾಲದಲ್ಲಿ ನೀರನ್ನು ಶೇಖರಣೆ ಮಾಡುವ ಸವಲತ್ತುಗಳು ಜಲಾಶಯಗಳು, ಬಾವಿಗಳು, ನೀರಿನ ಟಾವರ್ಸ್, ಇವುಗಳ ಜೊತೆಗೆ ವ್ಯವಸ್ಥಿತವಾಗಿ ಹಂಚಿಕೆಯಾಗಿರುವ ಕವಲೊಡೆದ ನೀರಿನ ಕೊಳವೆಗಳು, ಕಾಲುವೆಗಳನ್ನು ಕೂಡ ನಾವು ಕಾಣಬಹುದಾಗಿದೆ. ಈ ಎಲ್ಲಾ ಸೌಲಭ್ಯಗಳು ಎಷ್ಟು ಅವಶ್ಯಕವಾಗಿದ್ದವು ಎಂಬುದನ್ನು ಅರಿತುಕೊಂಡ ಬಹಮನಿ ಸುಲ್ತಾನರು ಎಂತಹ ತೀಕ್ಷ್ಣ ಜೀವಂತಿಕೆ ಯುಳ್ಳವರಾಗಿದ್ದರು ಎಂಬುದನ್ನು ತೋರಿಸುತ್ತದೆ.[೧೩]

ಜಮೀನಿಗೆ ನೀರು ಹಾಯಿಸುವ ಸಲುವಾಗಿ 'ಕಪಿಲೆ' ಎಂಬ ಹೆಸರಿನ ನಿರ್ದಿಷ್ಟ ರೂಪದ ಬಾವಿಗಳನ್ನು ವ್ಯಾಪಕ ಪ್ರಮಾಣದಲ್ಲಿ ಬಹಮನಿ ಕಾಲದಲ್ಲಿ ಬಳಸುತ್ತಿದ್ದರು. ಈ ಬಾವಿಗಳಿಂದ ಚರ್ಮದ ಚೀಲದ ಮೂಲಕ ನೀರನ್ನು ಎತ್ತಿ ಹೊಲಗಳಿಗೆ ಸುರಿಯಲಾಗುತ್ತಿತ್ತು. ಎರಡು ಎತ್ತುಗಳ ಇಳುಕಲಾದ ನೆಲದ ಮೇಲೆ ಹಗ್ಗದ ಮೂಲಕ ನೀರನ್ನು ಎಳೆದು ಎತ್ತುವ ವ್ಯವಸ್ಥೆ ಜಾರಿಯಲ್ಲಿತ್ತು. ಇದಲ್ಲದೆ ಭಾವಿಯಿಂದ ನೀರನ್ನು ಎತ್ತಲು ಏತವನ್ನು ಸಹ ಉಪಯೋಗಿಸಲಾಗುತ್ತಿತ್ತು ಎಂದು ಬುಕನನ್ ಹೇಳುತ್ತಾನೆ.[೧೪] ಸಾಮಾನ್ಯವಾಗಿ ಒಂದು ಬಾವಿಯಿಂದ ಎತ್ತುಗಳ ಮೂಲಕ ನೀರನ್ನೆತ್ತಿ ಒಂದು ಎಕರೆಯಿಂದ ಇಪ್ಪತ್ತು ಎಕರೆ ಜಮೀನಿಗೆ ಸಾಕಾಗುವಷ್ಟು ನೀರನ್ನು ಪೂರೈಸಲಾಗುತ್ತಿತ್ತು, ಇಂತಹ ಒಂದು ಬಾವಿಯನ್ನು ನಿರ್ಮಿಸಲು ಸುಮಾರು ಎರಡು ವರ್ಷಗಳು ಬೇಕಾಗುತ್ತಿತ್ತು.

ಬಹಮನಿ ಸುಲ್ತಾನರ ಬಾವಿಗಳ ಕುರಿತು ಬೀದರ್ ಜಿಲ್ಲೆಯ ಶಾಸನದಲ್ಲಿಯೂ ಕಂಡುಬರುತ್ತದೆ. ಉಳಿದ ಷೇಕ್‌ಬಾವಿ ಎಂಬುವನು ೧೦ ಬಾವಿಗಳನ್ನು ಕೊಂಡುಕೊಂಡನೆಂದು ತಿಳಿಸುತ್ತದೆ. ಖುರಾನನ್ನು ಪಠಿಸುವುದರ ಜೊತೆಗೆ ಶುಲ್ಕವನ್ನು ದರ್ಗಾದ ದೀಪನ್ನು ಉರಿಸಲು ಎಣ್ಣೆಗೆ ಖರ್ಚು ಮಾಡಿದನು. ಇದಕ್ಕಾಗಿ ಮಕ್ಕಾಬರು ಗೋರಿಗೆ ಹೊಂದಿಕೊಂಡ ಹಳ್ಳಿಗಳನ್ನು, ಭೂಮಿಗಳನ್ನು ಮಾವಿನ ಮರಗಳನ್ನು ಕೊಡುಗೋಣಿ ನೀಡಲಾಗಿದೆ ಎಂದು ಗೊತ್ತಾಗುತ್ತದೆ.[೧೫]

ಬಹಮನಿ ಕಾಲದಲ್ಲಿ ಬಹುಪಾಲು ನೀರಾವರಿ ವ್ಯವಸ್ಥೆಯು ಕೆರೆ ಮತ್ತು ಬಾವಿಗಳ ಮೂಲಕ ನೀರು ಪೂರೈಸುವುದರಿಂದ ನಡೆಯುತ್ತಿತ್ತು ಎಂದು ತಿಳಿಯುತ್ತದೆ. ನೀರಾವರಿ ವ್ಯವಸ್ಥೆಯಿಂದ ಹೊಲಗಳು ಗದ್ದೆಗಳಾಗಿ ಪರಿವರ್ತಿತವಾಗಿ, ಬಂಜರು ಭೂಮಿಯು ಸಾಗುವಳಿಗೊಂಡು ಮೂಲ ಕೃಷಿ ಪ್ರದೇಶವನ್ನು ವಿಸ್ತರಿಸಿದವು. ಮಳೆಯಾಧಾರಿತ ಕೃಷಿಯು ಯಾವಾಗಲೂ ಒಂದು ಜೂಜಿನಂತಿರುತ್ತಿತ್ತು, ಮಳೆ ಬಂದರೆ ಕೃಷಿ, ಮಳೆ ವಿಫಲವಾದರೆ ಕ್ಷಾಮ ಉಂಟಾಗುತ್ತಿತ್ತು. ಇಂತಹ ಕ್ಷಾಮ ಪರಿಸ್ಥಿತಿಯನ್ನು ನಿವಾರಣೆ ಮಾಡುವ ಸಲುವಾಗಿ ಬಹಮನಿ ಸುಲ್ತಾನರ ಕಾಲದಲ್ಲಿ ಅದರಲ್ಲೂ ಮಹಮ್ಮದ್ ಗವಾನನ ಕಾಲದಲ್ಲಿ ಅನೇಕ ನೀರಾವರಿ ವ್ಯವಸ್ಥೆಗಳಾದ ಕೆರೆ ಮತ್ತು ಬಾವಿಗಳನ್ನು ನಿರ್ಮಾಣಗೊಳಿಸಲಾಯಿತು. ಕೃಷಿಯಲ್ಲಿ ಭೂಮಿಯನ್ನು ಎರಡು ರೀತಿಯಾಗಿ ವಿಂಗಡಿಸಬಹುದು. ಒಂದು ಮಳೆಯಾಧಾರಿತ ಕೃಷಿ, ಮತ್ತೊಂದು ನೀರಾವರಿ ಸೌಲಭ್ಯಗಳಾದಂತಹ ನದಿ, ಕೆರೆ, ಬಾವಿಗಳನ್ನು ಅವಲಂಬಿಸಿರುವಂತಹ ಕೃಷಿ. ಕೃಷಿ ಉತ್ಪಾದನೆಯನ್ನು ಹೆಚ್ಚಿಸಲು ಬಹಮನಿ ಸುಲ್ತಾನರು ಅನೇಕ ಕೆರೆ, ಕಾಲುವೆ ಮತ್ತು ಬಾವಿಗಳ ನಿರ್ಮಾಣವನ್ನು ಮಾಡಿದರು. ಬಹಮನಿ ಸಾಮ್ರಾಜ್ಯದಲ್ಲಿ

ನೀರಾವರಿ ಸೌಲಭ್ಯಕ್ಕೆ ನೆರವಾದಂತಹ ಪ್ರಮುಖ ನದಿಗಳೆಂದರೆ ತುಂಗಭದ್ರಾ, ಭೀಮ ಮತ್ತು ಕೃಷ್ಣ. ಹಲವಾರು ಸ್ಥಳಗಳಲ್ಲಿ ಬಹಮನಿ ಸುಲ್ತಾನರು ಹರಿಯುವ ಸಣ್ಣ ನದಿಗಳಿಗೆ ಅಡ್ಡವಾಗಿ ಚಿಕ್ಕ ಚಿಕ್ಕ ಆಣೆಕಟ್ಟೆಗಳನ್ನು ನಿರ್ಮಿಸಿ ಆ ನೀರನ್ನು ವ್ಯವಸಾಯಕ್ಕೋಸ್ಕರ ಬಳಸಿಕೊಳ್ಳಲು ಅನುವು ಮಾಡಿಕೊಟ್ಟಿದ್ದರು. ಬಹಮನಿ ಸುಲ್ತಾನರು ದಖ್ಖನ್ ಪ್ರಾಂತ್ಯಗಳಲ್ಲಿ ಪ್ರಪ್ರಥಮವಾಗಿ ಕಾಲುವೆ ನೀರಾವರಿ ಪದ್ಧತಿಯನ್ನು ಜಾರಿಗೆ ತಂದರು.[೧೬]

### ೪.೧.೩. ಕೃಷಿ ಕಾರ್ಮಿಕರು

ಬಹಮನಿ ಸಾಮ್ರಾಜ್ಯದಲ್ಲಿ ರಾಜ್ಯದ ಆರ್ಥಿಕ ಸ್ಥಿತಿಗಳು ಕೃಷಿ ಉತ್ಪಾದನೆಯನ್ನು ಹೆಚ್ಚಾಗಿ ಅವಲಂಬಿಸಿದ್ದವು. ಕೃಷಿ ಉತ್ಪಾದನೆಯಲ್ಲಿ ಭೂಮಾಲೀಕರು, ಕೂಲಿ ಕೆಲಸಗಾರರನ್ನು ಹಾಗೂ ಜೀತದಾಳುಗಳನ್ನು ನೇಮಿಸಿಕೊಳ್ಳುತ್ತಿದ್ದರು. ಕೂಲಿ ಕೆಲಸಗಾರರಲ್ಲಿ ಮತ್ತು ಜೀತದಾಳುಗಳಲ್ಲಿ ಹೆಣ್ಣು ಮಕ್ಕಳೂ ಸಹ ಕೆಲಸ ಮಾಡುತ್ತಿದ್ದರು. ಕೃಷಿ ಕೂಲಿ ಕೆಲಸಗಾರರು ಸಾಮಾನ್ಯವಾಗಿ ಶೂದ್ರ ಜಾತಿಗಳಿಗೆ ಸೇರಿದವರಾಗಿದ್ದು, ಜೀತದಾಳುಗಳನ್ನು 'ಹೊಲೆಯಲು' ಮತ್ತು 'ಮುಲದ್ಲು' ಎಂದು ಕರೆಯಲಾಗುತ್ತಿತ್ತು ಎಂದು ಶಾಸನಗಳು ಹೇಳುತ್ತವೆ. ಸಾಮಾನ್ಯವಾಗಿ ಕೂಲಿ ಕೆಲಸಗಾರರು ಅಂತ್ಯಜ ಅಥವಾ ಅಸ್ಪೃಶ್ಯ ಜಾತಿಗೆ ಸೇರಿದವರಾಗಿರುತ್ತಿದ್ದರು.[೧೭]

ಕೃಷಿಯೇ ಬಹುಮುಖ್ಯವಾದ ಗ್ರಾಮೀಣ ಅರ್ಥವ್ಯವಸ್ಥೆಯ ಜೀವನಾಡಿಯಾಗಿತ್ತು. ದಖ್ಖನ್ ಸಾಮ್ರಾಜ್ಯದ ಮಟ್ಟಿಗೆ ಸಾಂಪ್ರದಾಯಿಕ ಕೃಷಿ ವ್ಯವಸ್ಥೆಯೇ ಅಸ್ತಿತ್ವದಲ್ಲಿತ್ತು. ಕೃಷಿಗೆ ಪೂರಕವಾದ ಇತರೆ ಕಸುಬುದಾರರು ಸಹ ಕೃಷಿಕಾರ್ಮಿಕರೇ ಆಗಿರುತ್ತಿದ್ದರು. ಉದಾಹರಣೆಗೆ: ಬಡಗಿ, ಕಮ್ಮಾರ, ಅಕ್ಕಸಾಲಿಗ, ಚಮ್ಮಾರ, ಗಾಣಿಗ, ಮುಂತಾದವರು. ಇವರ ಸೇವೆಗೆ ಪ್ರತಿಯಾಗಿ ಧಾನ್ಯ ರೂಪದಲ್ಲಿ ಸಂಬಳವನ್ನು ಕೊಡಲಾಗುತ್ತಿತ್ತು. ಈ ಸಂಬಳವನ್ನು ವರ್ಷಕ್ಕೊಮ್ಮೆ ಕೊಡುವ ಪದ್ಧತಿ ಜಾರಿಯಲ್ಲಿತ್ತು. ಭೂ ಒಡೆತನ ರಾಜನದೇ ಆಗಿದ್ದರು, ನಂತರದಲ್ಲಿ ಅನುವಂಶಿಕವಾಗಿ ಭೂ ಒಡೆತನ ಮತ್ತು ಅವರ ಕೈಕೆಳಗೆ ಕೂಲಿಕಾರರು ಮತ್ತು ಜೀತದಾಳುಗಳ ಸಂಸ್ಕೃತಿ ಅನುವಂಶಿಕವಾಗಿ ಬೆಳೆದುಬಂದಿತು.

ಬಹಮನಿ ಕಾಲದಲ್ಲಿ ಕೃಷಿ ಕಾರ್ಮಿಕರಲ್ಲಿ ಸೇರಿದ್ದ ಮುಖ್ಯ ಪಂಗಡಗಳೆಂದರೆ ಶೂದ್ರರು, ಗೌಡರು, ಒಕ್ಕಲಿಗರು ಮತ್ತು ಹೊಲೆಯರು, ಶೂದ್ರರು ಮತ್ತು ಕೆಳ ಉಪಜಾತಿಗಳ ಕೆಲಸಗಾರರ ಮುಖ್ಯ ಕಸುಬು ನೆಲವನ್ನು ಉಳುವುದು. ಕೃಷಿಯೇ ಅವರ ಪ್ರಧಾನ ವೃತ್ತಿಯಾಗಿತ್ತು. ರಾಜ್ಯದ ಬಹುಮಟ್ಟಿಗಿನ ಏಳ್ಗೆಯು ಕೃಷಿ ಕಾರ್ಮಿಕರನ್ನು ಅವಲಂಬಿಸುತ್ತಿತ್ತು. ಬಹಮನಿ ಸಾಮ್ರಾಜ್ಯದಲ್ಲಿ ಹೆಚ್ಚಿನ ಕೃಷಿ ಕೆಲಸಗಾರರು ಕೆಳ ಜಾತಿಯವರಾಗಿದ್ದರು. ಭೂ ಮಾಲೀಕರು ಕೃಷಿ ಕಾರ್ಮಿಕರನ್ನು ಕೂಲಿ ಕೊಟ್ಟು ನೇಮಿಸಿಕೊಳ್ಳುತ್ತಿದ್ದರೆಂದು ತಿಳಿದುಬರುತ್ತದೆ.

### ೪.೧.೪. ಭೂಮಾಲೀಕರು

ಕೃಷಿ ಪ್ರಧಾನ ಅರ್ಥ ವ್ಯವಸ್ಥೆಯಲ್ಲಿ ಭೂಮಾಲಿಕರು ಮತ್ತು ಕೃಷಿ ಕಾರ್ಮಿಕರ ಮಧ್ಯೆ ಪರಸ್ಪರ ಹೊಂದಾಣಿಕೆ ಮತ್ತು ಘರ್ಷಣೆಗಳು ಅಂದಿನ ಕಾಲದಲ್ಲಿ ನಡೆದಿದ್ದವು. ಈ ಎರಡು ವರ್ಗಗಳ ಸಂಬಂಧಗಳು ಸೌಹಾರ್ದ್ಯಯುತವಾಗಿ ಇರಲಿಲ್ಲ. ಒಂದು ದುಡಿಸುವ ವರ್ಗವಾದರೆ ಮತ್ತೊಂದು ದುಡಿಯುವ ವರ್ಗವಾಗಿತ್ತು. ಇರ್ಫಾನ್ ಹಬೀಬ್‌ರವರ ಪ್ರಕಾರ ಮಾರ್ಕ್ಸ್‌ವಾದಿಗಳು ರೈತರನ್ನು, ಅವರು ಜಮೀನಿ ನೊಂದಿಗೆ ಹೊಂದಿದ್ದ ಸಂಬಂಧಗಳ ಆಧಾರದ ಮೇಲೆ ಮೂರುವಿಧವಾಗಿ ವಿಂಗಡಿಸಿದ್ದರು, ಅವುಗಳೆಂದರೆ ಕೃಷಿ ಕಾರ್ಮಿಕರನ್ನು ಸಂಬಳಕ್ಕೆ ಮತ್ತು ಬಲವಂತದ ದುಡಿಮೆಗೆ ಉಪಯೋಗಿಸುತ್ತಿದ್ದ ಶ್ರೀಮಂತ ರೈತರು, ಕುಟುಂಬದ ಸದಸ್ಯರನ್ನೇ

ಕೃಷಿಯಲ್ಲಿ ತೊಡಗಿಸುತ್ತಿದ್ದ ಮಧ್ಯಮ ರೈತರು ಹಾಗೂ ಕುಟುಂಬದ ನಿರ್ವಹಣೆಗೆ ಸಾಕಾಗುವಷ್ಟು ಭೂಮಿಯನ್ನು ಹೊಂದಿರದೇ ತಾವೇ ದುಡಿಯುತ್ತಿದ್ದ ಬಡ ರೈತರು. ಈ ಎಲ್ಲಾ ಜನರೊಂದಿಗೆ ಕೃಷಿ ಕೆಲಸಗಳಲ್ಲಿ ತೊಡಗಿಸಿಕೊಂಡಿದ್ದ ಭೂರಹಿತ ಕೃಷಿ ಕಾರ್ಮಿಕರೂ ಸಹ ಇರುತ್ತಿದ್ದರು. ಭೂಮಾಲೀಕರು ಕೂಲಿಕಾರರನ್ನು ನೇಮಿಸಿಕೊಂಡು ಅವರಿಗೆ ನಗದಾಗಿಯೇ ವಸ್ತುರೂಪದಲ್ಲಿ ಕೂಲಿಯನ್ನು ಕೊಡುತ್ತಿದ್ದರು. ಭೂಮಾಲೀಕರು ಬಾಡಿಗೆಗೆ ಕೂಲಿಗಳನ್ನು ಗೊತ್ತು ಮಾಡಿಕೊಳ್ಳುತ್ತಿದ್ದರು.[೧೮]

ಮಹಾಜನರು, ಪೆರ್ಗಡೆಗಳು, ಗಾವುಂಡರು, ಪ್ರಭುಗಾವುಂಡರು ಮುಂತಾದ ಭೂಮಾಲೀಕ ವರ್ಗಗಳು ಸುಲ್ತಾನರು ಮತ್ತು ರೈತರ ನಡುವೆ ಮಧ್ಯವರ್ತಿಗಳಾಗಿ ಕೆಲಸ ಮಾಡುತ್ತಿದ್ದರು. ಸುಲ್ತಾನರು ಭೂ ಮಾಲೀಕರೊಂದಿಗೆ ನಿಕಟವಾದ ಸಂಬಂಧವನ್ನು ಹೊಂದಿದ್ದರು. ಸುಲ್ತಾನರು ದಾನದ ರೂಪದಲ್ಲಿ ಭೂಮಿಯನ್ನು ಕೊಡುವಾಗಲೇ ರಾಜ್ಯಕ್ಕೆ ಬರಬೇಕಾದ ಪಾಲು, ತೆರಿಗೆ ಸಂಗ್ರಹಣೆ, ನೀರಾವರಿ ವಿಚಾರಗಳು, ಕಾನೂನು, ಬಲವಂತದ ದುಡಿಮೆ, ಮುಂತಾದವುಗಳ ಮೇಲೆ ಸ್ವತಂತ್ರ ನಿರ್ಣಯವನ್ನು ತೆಗೆದುಕೊಳ್ಳ ಬಹುದೆಂದು ಭೂಮಾಲಿಕರಿಗೆ ಸ್ವಾತಂತ್ರ್ಯ ನೀಡಲಾಗಿತ್ತು. ಈ ಕಾರಣದಿಂದಾಗಿ ರೈತರು ಭೂಮಾಲೀಕರನ್ನು ಯಾವುದೇ ರೀತಿಯಲ್ಲಿ ಪ್ರಶ್ನಿಸುವಂತಿರಲಿಲ್ಲ. ರೈತನು ಹೆಚ್ಚಿನ ಉತ್ಪಾದನೆಯಲ್ಲಿ ತೊಡಗಿ ಹೆಚ್ಚಿನ ಬೆಳೆ ಪಡೆದರೂ ಸಹ ಅದು ರಾಜ್ಯಕ್ಕೆ ಹೋಗುತ್ತಿತ್ತು ಮತ್ತು ಹೊರಲಾರದಷ್ಟು ತೆರಿಗೆಗಳು ಮಾತ್ರ ರೈತನ ಪಾಲಿಗೆ ಬರುತ್ತಿತ್ತು. ಸಾಮಾನ್ಯ ರೈತರನ್ನು ಭೂಮಿಕಾರ, ಒಕ್ಕಲು, ಬೆಸವೊಕ್ಕಲು ಮುಂತಾದ ಹೆಸರುಗಳಿಂದ ಕರೆಯುತ್ತಿದ್ದರು. ಇವರು ಗ್ರಾಮದ ಅಧಿಕಾರಿಗಳು ಮತ್ತು ಗ್ರಾಮೀಣ ಗಣ್ಯರ ಆಧೀನದಲ್ಲಿರುತ್ತಿದ್ದರು. ಹೊಲೆಯ ಮತ್ತು ತೊಟ್ಟು ಎನ್ನುವ ಜೀತದಾಳುಗಳು ಇದ್ದರೆಂದು ಶಾಸನಗಳಿಂದ ತಿಳಿಯುತ್ತದೆ.[೧೯]

ಬಹಮನಿ ಸಾಮ್ರಾಜ್ಯದ ಅವಧಿಯಲ್ಲಿ ಭೂಆಧಾರಿತ ಅರ್ಥವ್ಯವಸ್ಥೆ ಜಾರಿಯಲ್ಲಿತ್ತು. ಭೂಮಿಯನ್ನು ಹೊಂದುವುದು ಸಮಾಜದಲ್ಲಿ ಗೌರವದ ಪ್ರಶ್ನೆಯಾಗಿತ್ತು. ಪ್ರತಿಯೊಬ್ಬ ವ್ಯಕ್ತಿಯು ಸ್ವಲ್ಪವಾದರೂ ತನ್ನದೇ ಆದ ಸ್ವಂತ ಭೂಮಿಯನ್ನು ಹೊಂದುವ ಸಲುವಾಗಿ ಆಸಕ್ತಿ ಹೊಂದಿದ್ದನೆಂದು ತಿಳಿದುಬರುತ್ತದೆ. ಭೂಮಿಯ ಒಡೆತನವು ಅಂದಿನ ಕಾಲದಲ್ಲಿ ಏಕರೂಪದ್ದಾಗಿರಲಿಲ್ಲ, ಹಲವಾರು ಮಾದರಿಯ ಭೂಮಾಲೀಕತ್ವಗಳು ಕಂಡುಬರುತ್ತಿದ್ದವು. ಉದಾಹರಣೆಗೆ: ಸುಲ್ತಾನರಿಗೆ ಸೇರಿದ ಭೂಮಿ, ಖಾಸಗಿ ಭೂಮಿ, ಸಾಮುದಾಯಿತ ಅಥವಾ ಜಂಟಿ ಒಡೆತನದ ಭೂಮಿ ಮತ್ತು ದಾನ ರೂಪದಲ್ಲಿ ಪಡೆದ ಭೂಮಿ. ಸುಲ್ತಾನರ ಭೂಮಿಯನ್ನು ವಿಶೇಷವಾದ ಅಧಿಕಾರಿಗಳು ಮೇಲುಸ್ತುವಾರಿ ಮಾಡುತ್ತಿದ್ದರು. ಕೃಷಿಯ ಎಲ್ಲ ಕೆಲಸಗಳನ್ನು ಕೂಲಿ ಆಳುಗಳು ಮತ್ತು ಗೇಣಿ ರೈತರು ಮಾಡುತ್ತಿದ್ದರು. ಸುಲ್ತಾನರಂತೆ ಸಾಮಾನ್ಯ ವ್ಯಕ್ತಿಗಳೂ ಕೂಡ ಭೂಮಿಯನ್ನು ಹೊಂದಿರುತ್ತಿದ್ದರು. ಖಾಸಗಿ ಭೂಮಾಲೀಕರಲ್ಲಿ ಅನೇಕ ವರ್ಗಗಳಾದ ಶ್ರೀಮಂತ ಭೂಮಾಲೀಕರು, ಮಧ್ಯಮ ಭೂಮಾಲೀಕರು ಮುಂತಾದವರಿದ್ದರು. ಸುಲ್ತಾನರು ಖಾಸಗಿ ಭೂಮಾಲೀಕರ ಭೂಮಿಯನ್ನು ವಶಕ್ಕೆ ತೆಗೆದುಕೊಳ್ಳುವ ಅಧಿಕಾರವನ್ನು ಹೊಂದಿರಲಿಲ್ಲ, ಆದರೆ ಖಾಸಗಿ ಭೂಮಾಲೀಕರ ಭೂಮಿಯ ಮೇಲೆ ತೆರಿಗೆ ವಿಧಿಸುವ ಅಧಿಕಾರವನ್ನು ಅವರು ಹೊಂದಿದ್ದರು. ಬಹಮನಿ ಸಾಮ್ರಾಜ್ಯದಲ್ಲಿ ಸ್ವಂತ ಭೂಮಿಯ ಮೇಲಿನ ಮಾಲೀಕತ್ವದ ಹಕ್ಕು ವಂಶಪಾರಂಪರ್ಯವಾಗಿ ತಂದೆಯಿಂದ ಮಕ್ಕಳಿಗೆ ಮುಂದುವರೆಯುತ್ತಿತ್ತೆಂದು ತಿಳಿಯುತ್ತದೆ. ಕುಟುಂಬದ ಎಲ್ಲಾ ಸದಸ್ಯರ ಒಪ್ಪಿಗೆಯಿಂದ ಮಾತ್ರ ಭೂಮಿಯನ್ನು ಮಾರಾಟ ಮಾಡಲು ಅವಕಾಶವಿತ್ತು.[೨೦]

ಬಹಮನಿ ಸಮುದಾಯದ ಒಡೆತನದಲ್ಲಿದ್ದ ಭೂಮಾಲಿಕತ್ವದ ಭೂಮಿ ಮಧ್ಯಕಾಲೀನ ಯುಗದಲ್ಲಿ ಸಾಕಷ್ಟಿತ್ತೆಂದು ತಿಳಿದುಬರುತ್ತದೆ. ಒಂದು ಸಮುದಾಯದ ಜನರು ಭೂಮಿಯನ್ನು ತಮ್ಮಲ್ಲಿಯೇ

ಹಂಚಿಕೊಳ್ಳುತ್ತಿದ್ದರು, ಆ ಸಮುದಾಯವು ಆ ಭೂಮಿಯ ಭೂಮಾಲಿಕರ ಹಕ್ಕುಗಳನ್ನು ರಕ್ಷಿಸುತ್ತಿತ್ತು. ಈ ಎಲ್ಲದಕ್ಕೂ ಸುಲ್ತಾನನಿಗೆ ತೆರಿಗೆ ಕೊಡಬೇಕಾಗಿತ್ತು. ಸಮುದಾಯದ ಭೂಒಡೆತನವು ಕೆಲವೊಂದು ವೈಶಿಷ್ಟ್ಯಗಳನ್ನು ಹೊಂದಿದ್ದವು. ರೈತ್ವಾರಿ ವ್ಯವಸ್ಥೆಯಲ್ಲಿ ರೈತರು ತಾವೇ ಭೂಮಿಯ ಒಡೆಯರಾಗಿರುತ್ತಿದ್ದರು. ಜಂಟಿ ಒಡೆತನದಲ್ಲಿ ಹಳ್ಳಿಯ ಎಲ್ಲಾ ಜನರು ಸೇರಿ ಭೂಮಿಯ ಒಡೆತನವನ್ನು ಹೊಂದಿರುತ್ತಿದ್ದರು. ಭೂಮಿಯ ಮೇಲೆ ಯಾವುದೇ ನಿರ್ಣಯವನ್ನು ತೆಗೆದುಕೊಳ್ಳಬೇಕಾದರೆ ಹಳ್ಳಿಯ ಎಲ್ಲಾ ಜನರು ಒಟ್ಟಾಗಿ ತೀರ್ಮಾನ ತೆಗೆದುಕೊಳ್ಳುತ್ತಿದ್ದರೆಂದು ತಿಳಿಯುತ್ತದೆ.

ಧಾರ್ಮಿಕ ಕೆಲಸಗಳಿಗಾಗಿ ಮತ್ತು ಸಾರ್ವಜನಿಕ ಸೇವೆಗಳಿಗಾಗಿ ದಾನ ರೂಪದಲ್ಲಿ ಪಡೆದಂತಹ ಭೂಮಿಯು ೧೪ನೇ ಶತಮಾನದಲ್ಲಿ ಹಾಗೂ ಬಹಮನಿ ರಾಜ್ಯದಲ್ಲಿ ಸಾಕಷ್ಟಿತ್ತೆಂದು ತಿಳಿದುಬರುತ್ತದೆ. ದಾನದ ರೂಪದಲ್ಲಿ ಭೂಮಿಯನ್ನು ಸುಲ್ತಾನರು ಬ್ರಾಹ್ಮಣರಿಗೂ ಮತ್ತು ಇತರರಿಗೂ ನೀಡುತ್ತಿದ್ದರೆಂದು ತಿಳಿಯುತ್ತದೆ. ದೇವಾಲಯಗಳಿಗೆ ದಾನ ನೀಡಿದ ಭೂಮಿಯು ದೇವಸ್ಥಾನದ ಭೂಮಾಲೀಕತ್ವದಲ್ಲಿರುತ್ತಿತ್ತು, ಅದೇ ರೀತಿ ಸಾರ್ವಜನಿಕ ಕೆಲಸಗಳಾದ ಕೆರೆ, ಕಾಲುವೆಗಳ ನಿರ್ಮಾಣಕ್ಕಾಗಿ ಸುಲ್ತಾನರು ಭೂಮಿಯನ್ನು ದಾನವನ್ನಾಗಿ ನೀಡಿದ್ದರು. ಈ ರೀತಿಯಾಗಿ ಹೊಸ ಭೂಮಾಲೀಕರು ಸಹ ಬಹಮನಿ ರಾಜ್ಯದಲ್ಲಿ ಹುಟ್ಟಿಕೊಂಡಿದ್ದರು.

ಬಹಮನಿ ಸಾಮ್ರಾಜ್ಯದ ಗ್ರಾಮಗಳಲ್ಲಿ ಸಾಮಾನ್ಯವಾಗಿ ೨೦೦–೩೦೦ ಜನ ರೈತರು ಪ್ರತಿ ಗ್ರಾಮದಲ್ಲಿ ವಾಸಿಸುತ್ತಿದ್ದರು. ಕುಟುಂಬದಲ್ಲಿ ಮನೆಯ ಯಜಮಾನನಾದ ರೈತನೊಬ್ಬನೇ ಏಕೈಕ ಉತ್ಪತ್ತಿದಾರನಾಗಿದ್ದನು. ರೈತನು ಭೂಮಿಯಲ್ಲಿ ವ್ಯವಸಾಯ ಮಾಡಿ ತನ್ನ ಕುಟುಂಬವನ್ನು ಸಾಕುತ್ತಿದ್ದನು. ಪ್ರತಿ ಹಳ್ಳಿಯಲ್ಲಿಯೂ ಈ ರೀತಿಯಾದ ವೈಯಕ್ತಿಕ ಹಿಡುವಳಿಯನ್ನು ರೈತರು ಹೊಂದಿದ್ದರು. ಇಂತಹ ರೈತರಲ್ಲಿ ದೊಡ್ಡ ಜಮೀನ್ದಾರರಿದ್ದರು, ಶ್ರೀಮಂತರಿದ್ದರು ಮತ್ತು ಮಧ್ಯಮ ವರ್ಗದವರು ಅಧಿಕ ಸಂಖ್ಯೆಯಲ್ಲಿ ಭೂಮಿಯನ್ನು ಹೊಂದಿದ್ದರು. ಬಹಮನಿ ಸಾಮ್ರಾಜ್ಯದಲ್ಲಿ ವ್ಯವಸಾಯಕ್ಕೆ ಯೋಗ್ಯವಾದ ಭೂಮಿ ಬಹಳಷ್ಟಿದ್ದು, ಪ್ರತಿಯೊಂದು ಹಳ್ಳಿಯ ರೈತರು ತಮ್ಮ ಸೀಮಿತಕ್ಕೆ ಬರುತ್ತಿದ್ದ ಜಮೀನಿನಲ್ಲಿ ಹೆಚ್ಚು ಹೆಚ್ಚು ಉತ್ಪಾದಿಸಲು ಶ್ರಮಿಸುತ್ತಿದ್ದರು. ದೊಡ್ಡ ಜಮೀನ್ದಾರ ಅಥವಾ 'ಖೋಟ್' ಎಂದು ಕರೆಯಲ್ಪಡುವ ಭೂಮಾಲೀಕನು ಅತ್ಯಂತ ವಿಶಾಲವಾದ ಭೂಮಿಯನ್ನು ಹೊಂದಿದವನಾಗಿದ್ದನು. ಈ ಭೂಮಾಲೀಕನು ಬೇರೆ ರೈತರ ನೆರವಿನಿಂದ ತನ್ನ ಭೂಮಿಯನ್ನು ಉಳುಮೆ ಮಾಡುತ್ತಿದ್ದನು. ಭೂರಹಿತ ರೈತರು ಸಹ ಇವರ ಭೂಮಿಯಲ್ಲಿ ಕೂಲಿ ಆಳುಗಳಾಗಿ ದುಡಿಯುತ್ತಿದ್ದರೆಂದು ತಿಳಿದುಬರುತ್ತದೆ.[೨೧] ಭೂಮಾಲೀಕರು ಮತ್ತು ಕೃಷಿ ಕಾರ್ಮಿಕರ ನಡುವಿನ ಹೊಂದಾಣಿಕೆಗಳ ಮೇಲೆ ರಾಜ್ಯದ ಆರ್ಥಿಕತೆಯು ಅವಲಂಬಿಸಿತ್ತೆಂದು ಹೇಳಬಹುದು.

### ೪.೧.೩. ಭೂಕಂದಾಯ

ದಖ್ಖನ್ ಬಹಮನಿ ಸಾಮ್ರಾಜ್ಯದಲ್ಲಿ ರಾಜ್ಯದ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಲು ಅನೇಕ ತೆರಿಗೆಗಳನ್ನು ಪ್ರಜೆಗಳ ಮೇಲೆ ಹೇರಲಾಗುತ್ತಿತ್ತು. ರಾಜ್ಯದ ಆದಾಯದ ಮೂಲಗಳಲ್ಲಿ ತೆರಿಗೆಯದ್ದೇ ಮೊದಲ ಸ್ಥಾನವಾಗಿತ್ತು. ಅನೇಕ ವಿಧದಲ್ಲಿ ತೆರಿಗೆಯನ್ನು ಸಂಗ್ರಹಿಸಲಾಗುತ್ತಿತ್ತು, ಉದಾಹರಣೆಗೆ: ಭೂಮಿಯ ಮೇಲಿನ ತೆರಿಗೆ, ಮನೆಯ ಮೇಲಿನ ತೆರಿಗೆ, ವಸ್ತುಗಳ ಮೇಲಿನ ತೆರಿಗೆ, ಉದ್ಯೋಗ ತೆರಿಗೆ, ವಾಣಿಜ್ಯ ತೆರಿಗೆ, ಉದ್ದಿಮೆಗಳ ಮೇಲಿನ ತೆರಿಗೆ, ಮದುವೆ ಮೊದಲಾದ ಆಚರಣೆಗಳ ಮೇಲೆ ತೆರಿಗೆ, ಆದಾಯ ತೆರಿಗೆ, ವ್ಯಾಪಾರಿಗಳ ಲಾಭದ ಮೇಲಿನ ತೆರಿಗೆ, ಕಾರ್ಮಿಕರ ತೆರಿಗೆ, ಸಾರಿಗೆ ತೆರಿಗೆ, ನೀರಾವರಿ ತೆರಿಗೆ, ಮುಂತಾದವುಗಳು. ರಾಜ್ಯದ ಅರ್ಥವ್ಯವಸ್ಥೆಯಲ್ಲಿ ಪ್ರಮುಖ ಪಾತ್ರ ಭೂಮಿ ಮತ್ತು ಕೃಷಿಯದಾಗಿತ್ತು.

ರಾಜ್ಯದ ಆದಾಯಕ್ಕೆ ಭೂ ಕಂದಾಯದ ಮೊತ್ತ ಅಗ್ರಗಣ್ಯವಾಗಿರುತ್ತಿತ್ತು. ಕೃಷಿ ಪ್ರಧಾನವಾಗಿರುವ ಬಹಮನಿ ರಾಜ್ಯಕ್ಕೆ ಇದು ಅನಿವಾರ್ಯವೂ ಆಗಿತ್ತು. ಭೂಮಿಯ ಮೇಲೆ ತೆರಿಗೆಯನ್ನು ವಿಧಿಸುವ ಮುನ್ನ ಭೂಮಿಯನ್ನು ಅಳತೆ ಮಾಡುವ, ಉತ್ಪಾದನೆಗೆ ಅನುಗುಣವಾಗಿ ತೆರಿಗೆಯನ್ನು ವಿಧಿಸುವ, ಭೂಮಿಯನ್ನು ವಿಂಗಡಿಸುವ, ನಿರ್ದಿಷ್ಟ ಬೆಳೆಗಳನ್ನು ಬೆಳೆಯಲು ಭೂಮಿಯನ್ನು ಆಯ್ಕೆ ಮಾಡುವ ಕಾರ್ಯಗಳು ನಡೆಯುತ್ತಿದ್ದವು. ಭೂಮಿಯ ಫಲವತ್ತತೆಯ ಆಧಾರದ ಮೇಲೆ ಭೂ ತೆರಿಗೆಯನ್ನು ವಿಧಿಸಲಾಗುತ್ತಿತ್ತು. ಭೂಮಿಯನ್ನು ಅಳತೆ ಮಾಡಲು ಆಧುನಿಕ ಮೀಟರ್‌ನ ೩/೪ ಭಾಗದಷ್ಟಿದ್ದ 'ಜಾರಿಬ್' ಎನ್ನುವ ಹಗ್ಗದ ತುಂಡನ್ನು ಮಾಪನ ಎಂದು ಬಳಸಿ ನಂತರ ಆ ಭೂಮಿಗಳಿಗೆ ನಿರ್ದಿಷ್ಟವಾದ ಸಂಖ್ಯೆಗಳನ್ನು ಕೊಡಲಾಗುತ್ತಿತ್ತು.[೨] ಭೂಕಂದಾಯವನ್ನು ಹಣದ ರೂಪದಲ್ಲಿ ಅಥವಾ ವಸ್ತುಗಳ ರೂಪದಲ್ಲಿ, ಧವಸ ಧಾನ್ಯಗಳ ರೂಪದಲ್ಲಿ ಆಕರಿಸಲಾಗುತ್ತಿತ್ತು. ಬರಡು, ಬಂಜರು ಮತ್ತು ಗುಡ್ಡಗಾಡು ಅರಣ್ಯ ಪ್ರದೇಶಗಳನ್ನು ಕೃಷಿಗೆ ಯೋಗ್ಯ ವಾಗುವಂತೆ ಪರಿವರ್ತಿಸಿ ರೈತರಿಗೆ ಕೆಲ ವರ್ಷಗಳ ತನಕ ತೆರಿಗೆ ವಿನಾಯಿತಿಯೊಂದಿಗೆ ಬೆಳೆಗಳನ್ನು ಬೆಳೆಯಲು ನೀಡಲಾಗುತ್ತಿತ್ತು. ಇಂತಹ ಭೂಮಿಗಳಲ್ಲಿ ಹೆಚ್ಚಿನ ಮಾನವ ಶ್ರಮವಿದ್ದು, ಲಾಭಕ್ಕಿಂತ ಹೆಚ್ಚಿನಾಂಶ ನಷ್ಟವೇ ಇರುತ್ತಿತ್ತು.

ಬಹಮನಿ ರಾಜ್ಯದಲ್ಲಿ ಸುಲ್ತಾನರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಭೂಮಿಯ ವೀಕ್ಷಣೆ ಮಾಡಿ ಅದರ ವಿಸ್ತಾರ ಮತ್ತು ಅಳತೆಯನ್ನು ನಿಗಧಿ ಮಾಡಿದ ನಂತರ ತೆರಿಗೆಯನ್ನು ವಿಧಿಸುತ್ತಿದ್ದರು. ಬಹುತೇಕವಾಗಿ ಬಹಮನಿ ಸುಲ್ತಾನರು ಕಂದಾಯ ವ್ಯವಸ್ಥೆಯಲ್ಲಿ ದೆಹಲಿ ಸುಲ್ತಾನರ ಕಂದಾಯ ನೀತಿಯನ್ನು ಅನುಸರಿಸಿದ್ದರೆಂದು ತಿಳಿದುಬರುತ್ತದೆ. ಬಹಮನಿ ಸುಲ್ತಾನರು ಹಿಂದೂಗಳ ಪದ್ಧತಿಯನ್ನೇ ಅನುಸರಿಸಿ ೧/೬ ಭಾಗವನ್ನು ಕಂದಾಯವಾಗಿ ವಸೂಲಿಮಾಡುತ್ತಿದ್ದರು. ಮಹಮ್ಮದ್ ಗವಾನನ ಕಾಲದಲ್ಲಿ ಕಂದಾಯ ಪದ್ಧತಿಯನ್ನು ಸುಧಾರಿಸಲಾಯಿತು. ಬಹಮನಿ ಸಾಮ್ರಾಜ್ಯದ ಭೂಕಂದಾಯವು ರಾಜ್ಯದ ಆರ್ಥಿಕ ಆದಾಯದ ಮುಖ್ಯ ಭಾಗವಾಗಿದ್ದು, ರೈತರು ತಮ್ಮ ಒಟ್ಟು ಉತ್ಪಾದನೆಯ ೧/೬ ಭಾಗವನ್ನು ರಾಜ್ಯಕ್ಕೆ ನೀಡಬೇಕಾಗಿತ್ತು. ಭೂಕಂದಾಯವನ್ನು 'ಶಿಸ್ತು' ಮತ್ತು 'ಖರಾಜ್' ಎಂದು ಕರೆಯುತ್ತಿದ್ದರು. ಕಂದಾಯ ವ್ಯವಸ್ಥೆಯು ಅಥವಣಿ ಎಂಬ ವಿಭಾಗದ ಅಡಿಯಲ್ಲಿ ವ್ಯವಸ್ಥಿತವಾಗಿ ಕಾರ್ಯನಿರ್ವಹಿಸುತ್ತಿತ್ತು. ಭೂಮಿ ಯನ್ನು ತರ, ಖುಷ್ಕಿ ಮತ್ತು ಬಾಗಾಯಿತು(ತೋಟಗಳು) ಎಂದು ಮೂರು ವರ್ಗಗಳಾಗಿ ಬಹಮನಿ ರಾಜ್ಯದಲ್ಲಿ ವಿಭಾಗಿದ್ದರು. ಭೂಮಿಯನ್ನು ಗುತ್ತಿಗೆದಾರರಿಗೆ ಉಳಿಮೆ ಮಾಡಲು ಗುತ್ತಿಗೆ ಕೊಡುವ ಪದ್ಧತಿಯು ದಖ್ಖನ್ ಯುಗದಲ್ಲಿ ಇತ್ತೆಂದು ತಿಳಿದುಬರುತ್ತದೆ. ಗುತ್ತಿಗೆದಾರರು ರೈತರಿಂದ ಕಂದಾಯವನ್ನು ವಸೂಲಿ ಮಾಡಿ ಸರ್ಕಾರಕ್ಕೆ ಗೊತ್ತಾದ ಪ್ರಮಾಣವನ್ನು ಸಲ್ಲಿಸಿ ಉಳಿದ ಭಾಗವನ್ನು ತಮಗೆಂದು ಇಟ್ಟುಕೊಳ್ಳುತ್ತಿದ್ದರು. ಬಹಮನಿ ಸಾಮ್ರಾಜ್ಯದ ಬಹುತೇಕ ರೈತರು ಸ್ವಂತ ಹಿಡುವಳಿದಾರರಾಗಿದ್ದರು.

ಮಹಮದ್ ಗವಾನ್‌ನ ಆಡಳಿತ ಸುಧಾರಣೆಗಳಲ್ಲಿ ಭೂಮಿಯನ್ನು ಸರ್ವೆಮಾಡಿ ಅಳತೆ ಗುರುತಿಸುವ ಅಗತ್ಯ ಸೇರಿತು. ವ್ಯವಸ್ಥಿತ ರೀತಿಯಲ್ಲಿ ಅವನು ಅಳತೆಮಾಡುವ, ಹಳ್ಳಿ ಪಟ್ಟಣಗಳ ಗಡಿಗಳನ್ನು ಗುರುತಿಸುವ, ಭೂಕಂದಾಯವನ್ನು ಆಮೂಲಾಗ್ರವಾಗಿ ವಿಚಾರಮಾಡುವ ಮಹತ್ಕಾರ್ಯವನ್ನು ಕೈಗೊಂಡನು. ಒಂದು ಕಡೆ, ಮಾಲೀಕನಿಗೆ ಅವನಿಗಿರುವ ಭೂಮಿಯ ಖಚಿತವಾಗಿ ಎಷ್ಟು, ಅದರ ಗಡಿಗಳು ಯಾವುವು, ಸರಕಾರಕ್ಕೆ ಅವನು ಎಷ್ಟು ತೆರಿಗೆ ಸಲ್ಲಿಸಬೇಕು ಇತ್ಯಾದಿ ವಿವರಗಳನ್ನು ಒಳಗೊಂಡ ದಾಖಲೆಯನ್ನು ಒದಗಿಸಿದನು. ಈ ಬೃಹತ್ ಸುಧಾರಣಾ ಕ್ರಮದಲ್ಲಿ ಗವಾನನು ರಾಜಾ ತೋದರಮಲ್‌ಗಿಂತ ಒಂದು ಶತಮಾನ ಮೊದಲೇ ಯಶಸ್ವಿಯಾದನು. ಆಮೇಲೆ ಬ್ರಟಿಷ್ ಆಡಳಿತದಲ್ಲಿ ಅದನ್ನು ಇನ್ನೂ

ಉತ್ತಮಪಡಿಸಲಾಯಿತು. ಅದಿಲ್‌ಶಾಹೀ ಆಡಳಿತದಲ್ಲಿ ವೈಜ್ಞಾನಿಕ ವರ್ಗೀಕರಣವಾಗಲಿ, ಹೊಸದಾಗಿ ಭೂಮಿಯನ್ನು ಸರ್ವೆ ಮಾಡಿದುದಾಗಲಿ ಇರಲ್ಲಿಲ್ಲ. ಹಿಂದೆ ಮಹಮ್ಮದ್ ಗವಾನ್ ಹಾಕಿಕೊಟ್ಟಿದ್ದ ಸಂಪ್ರದಾಯವನ್ನು ಸುಮ್ಮನೆ ಅವರು ಅನುಸರಿಸಿದರು. ಆದರೆ ತೆನಾಬ್ ಅಥವಾ ಅಳತೆಮಾಡುವ ಸರಪಳಿ ಅದೇ ಕಾಲದ್ದಾಗಿದೆ.[೨೩]

ಬಹಮನಿ ಕಾಲದಲ್ಲಿ ಭೂ ಕಂದಾಯದ ಆರ್ಥಿಕ ಸುಧಾರಣೆಗಳಾಗಿದ್ದರಿಂದ ಭೂಹಿಡುವಳಿದಾರರ ಮನೆಯು ಐಶ್ವರ್ಯ, ಧವಸ ಧಾನ್ಯ, ಕುದುರೆಗಳು ಮತ್ತು ಅವಶ್ಯಕ ಸಾಮಾನುಗಳಿಂದ ತುಂಬಿ–ತುಳುಕುತ್ತಿತ್ತು. ಬಹಮನಿ ಕಾಲದಲ್ಲಿ ಪ್ರತಿಯೊಂದು ಪ್ರಾಂತ್ಯವನ್ನು ಅನೇಕ ಸರ್ಕಾರ್‌ಗಳನ್ನಾಗಿಯೂ ಮತ್ತು ಪ್ರತಿಯೊಂದು ಸರ್ಕಾರ್ ಅನೇಕ ಪರ್ಗಣಗಳನ್ನಾಗಿ ವಿಭಾಗಿಸಲಾಗಿತ್ತು. ಪ್ರತಿ ಸರ್ಕಾರ್‌ನ ಆಡಳಿತವನ್ನು ಸಿಖ್‌ದಾರನು ನಿರ್ವಹಿಸುತ್ತಿದ್ದನು. ಸಿಖ್‌ದಾರನು ತನ್ನ ಕೈಕೆಳಗಿನ ಪರ್ಗಣಗಳ ಕಂದಾಯ ವಸೂಲಿಯನ್ನು ಮಾಡುತ್ತಿದ್ದನು. ಸಿಖ್‌ದಾರನ ಕೈಕೆಳಗೆ ಆಮೀರನೆಂಬ ಮತ್ತೊಬ್ಬ ಅಧಿಕಾರಿಯಿದ್ದು ಈತನು ಭೂಮಿಯನ್ನು ಅಳತೆ ಮಾಡಿಸಿ ಕಂದಾಯವನ್ನು ನಿಗಧಿಗೊಳಿಸುವ ಕಾರ್ಯವನ್ನು ನಿರ್ವಹಿಸುತ್ತಿದ್ದನು. ಸಿಖ್‌ದಾರನ ಸಹಾಯಕ್ಕೆ ಕೋಶಾಧಿಕಾರಿ ಮತ್ತು ಕಾರಕೂನರಿದ್ದರು. ಪ್ರತಿ ಹಳ್ಳಿಗಳಲ್ಲಿ ಪಟ್ವಾರಿ ಮತ್ತು ಮುಖ್ವದಮ್ ಎಂಬ ಅಧಿಕಾರಿಗಳನ್ನು ನೇಮಿಸುತ್ತಿದ್ದರು ಮತ್ತು ಇವರ ಸಹಾಯದಿಂದ ಭೂಕಂದಾಯವನ್ನು ವಸೂಲಿ ಮಾಡಲಾಗುತ್ತಿತ್ತು. ಭೂ ಕಂದಾಯವನ್ನು ನಿರ್ಧರಿಸಲು ಒಂದು ಬಿಘ ಜಮೀನನ್ನು ಪ್ರಾಮಾಣಿಕೃತ ಘಟಕವೆಂದು ಪರಿಗಣಿಸಲಾಗುತ್ತಿತ್ತು. ಒಂದು ಬಿಘ ಜಮೀನಿನ ಅಳತೆಯು ೬೦*೬೦ ಚದುರ ಗಜಗಳ ಅಳತೆಯ ಜಮೀನಿಗೆ ಸರಿಸಮಾನವಾಗಿತ್ತು. ಈ ರೀತಿಯಾಗಿ ವಿವಿಧ ಸ್ಥಳಗಳಲ್ಲಿ ವಿವಿಧ ಬಿಘ ಜಮೀನುಗಳ ಸರಾಸರಿ ಉತ್ಪನ್ನ ಎಷ್ಟು ಎಂಬುದನ್ನು ಲೆಕ್ಕ ಹಾಕಲಾಗಿ ಭೂಕಂದಾಯವನ್ನು ನಿಗಧಿಪಡಿಸಲಾಗುತ್ತಿತ್ತು. ಸರ್ಕಾರವು ವಿವಿಧ ಬೆಳೆಗಳ ದರಪಟ್ಟಿಗಳನ್ನು ಸಿದ್ಧಪಡಿಸಿ ರೈತರು ಪಾವತಿಸಬೇಕಾದ ಭೂ ಕಂದಾಯ ದರವನ್ನು ನಿರ್ಧರಿಸುತ್ತಿದ್ದರು.

ಬಹಮನಿ ರಾಜ್ಯದಲ್ಲಿ ಸರ್ಕಾರವು ಭೂಮಾಲಿಕರಿಗೆ ದಸ್ತಾವೇಜು ಎನ್ನುವ ಹಕ್ಕುಪತ್ರವನ್ನು ನೀಡುತ್ತಿದ್ದರು. ಈ ದಾಖಲೆ ಪತ್ರದಲ್ಲಿ ಅವರವರ ಜಮೀನಿನಲ್ಲಿ ಬೆಳೆದ ಬೆಳೆಗಳಿಗೆ ರಾಜ್ಯಕ್ಕೆ ಸಲ್ಲಿಸಬೇಕಾದ ಭೂ ಕಂದಾಯದ ದರವನ್ನು ಕೂಡ ಪಟ್ಟಿಮಾಡಲಾಗಿರುತ್ತಿತ್ತು. ಮತ್ತೊಂದು ದಾಖಲೆ ಪತ್ರವೆಂದರೆ 'ಕಬೂಲಿಯತ್', ಈ ಪತ್ರದಲ್ಲಿ ಭೂ ಮಾಲೀಕರು ಸರ್ಕಾರಕ್ಕೆ ನಿಗಧಿಪಡಿಸಿದ್ದ ಭೂ ಕಂದಾಯವನ್ನು ಪಾವತಿ ಮಾಡಲು ಒಪ್ಪಿಗೆಯನ್ನು ನೀಡಿದ ದಾಖಲೆಯನ್ನು ಹೊಂದಿರುತ್ತಿತ್ತು. ಭೂ ಕಂದಾಯವನ್ನು ಬಹಮನಿ ಸಾಮ್ರಾಜ್ಯದಲ್ಲಿ ನಗದು ರೂಪದಲ್ಲಿ, ಧವಸ ಧಾನ್ಯಗಳ ರೂಪದಲ್ಲಿಯೂ ಸಹ ಸಲ್ಲಿಸಬಹುದಾಗಿತ್ತು. ಈ ರೀತಿಯಾಗಿ ಬಹಮನಿ ಸುಲ್ತಾನರು ಅದರಲ್ಲೂ ವಿಶೇಷವಾಗಿ ಮಹಮ್ಮದ್ ಗವಾನನ ಕಂದಾಯ ವ್ಯವಸ್ಥೆಯ ಸುಧಾರಣೆಗಳಿಂದ ರಾಜ್ಯದ ಆರ್ಥಿಕ ಆದಾಯದಲ್ಲಿ ಸುಧಾರಣೆಯಾಯಿತು.

ಬಹಮನಿ ಕಾಲದಲ್ಲಿ ಬಹಳ ಹಣ್ಣಿನ ತೋಟಗಳು ಮತ್ತು ಹೂವಿನ ತೋಟಗಳು ಇದ್ದು, ರಾಜ್ಯಕ್ಕೆ ಹೆಚ್ಚಿನ ಆದಾಯ ತರುತ್ತಿದ್ದವೆಂದು ತಿಳಿದುಬರುತ್ತದೆ. ನೀರಾವರಿ ವ್ಯವಸ್ಥೆಯ ಸುಧಾರಣೆಗಳಿಂದಾಗಿ ಹೆಚ್ಚಿನ ಭೂಮಿಯನ್ನು ವ್ಯವಸಾಯಕ್ಕೆ ಒಳಪಡಿಸಲಾಯಿತು, ಇದರಿಂದಾಗಿ ಬಹಮನಿ ಸಾಮ್ರಾಜ್ಯದ ಆದಾಯವೂ ಸಹ ಹೆಚ್ಚಿತು ಎಂದು ಪ್ರಸ್ತುತ ಅಧ್ಯಾಯದಿಂದ ಗೊತ್ತಾಗುತ್ತದೆ.

### ೪.೨. ನಗರ ಆರ್ಥಿಕ ವ್ಯವಸ್ಥೆ

ಮಧ್ಯಕಾಲೀನ ಯುಗದ ಬಹಮನಿ ಸಾಮ್ರಾಜ್ಯದಲ್ಲಿ ಉಂಟಾದ ಗಮನಾರ್ಹ ಬೆಳವಣಿಗೆಯೆಂದರೆ ನಗರೀಕರಣ. ನಗರಗಳ ಬೆಳವಣಿಗೆ, ವ್ಯಾಪಾರ, ವಾಣಿಜ್ಯ, ಶಿಕ್ಷಣ, ಹಣಕಾಸಿನ ಚಲಾವಣೆ ಮುಂತಾದ

ಕ್ಷೇತ್ರಗಳಲ್ಲಿ ಆದಂತಹ ಬೆಳವಣಿಗೆಗಳು ನಗರಗಳ ಬೆಳವಣಿಗೆಗೆ ಕಾರಣವಾದವು. ಬಹಮನಿ ಸಾಮ್ರಾಜ್ಯದ ನಗರಗಳು ಸಮೃದ್ಧ ಹಾಗೂ ವಿಫುಲ ಸಂಪತ್ತಿನಿಂದ ಕೂಡಿದ್ದವಾಗಿದ್ದವು. ನಗರದ ಜನಸಂಖ್ಯೆ ತುಂಬಾ ಕಡಿಮೆಯಾಗಿತ್ತು. ಮುಸ್ಲಿಮರು ನಗರಗಳ ಬೆಳವಣಿಗೆಗೆ ತುಂಬಾ ಸಹಾಯ ಮಾಡಿದರು. ಅವರು ಬರುವುದಕ್ಕೆ ಮೊದಲಿದ್ದ ನಗರಗಳ ಸಂಖ್ಯೆ ತುಂಬಾ ಕಡಿಮೆ. ಅವು ಚಿಕ್ಕವಾಗಿದ್ದವು. ಅನೇಕವು ಹೆಚ್ಚಾಗಿ ಬೆಳೆದ ಹಳ್ಳಿಗಳಾಗಿದ್ದವು. ಅನೇಕ ನಗರಗಳು ಯಾತ್ರಾ ಸ್ಥಳಗಳಾಗಿದ್ದವು. ಬೀದರ್, ಬಿಜಾಪುರ, ಗುಲ್ಬರ್ಗಾ, ರಾಜಕೀಯವಾಗಿ ಮುಖ್ಯ ಸ್ಥಳಗಳಾಗಿ ಇದ್ದವು. ಕೆಲವು ಪ್ರಾಂತಗಳ ರಾಜಧಾನಿಗಳಾಗಿದ್ದವು. ನಗರಗಳು ವಿದ್ವಾಂಸರು, ಕಲಾವಿದರು, ಕವಿಗಳು ಮತ್ತು ಸಂತರಿಗೆ ಆಶ್ರಯ ಕೋಡುವವುಗಳಾಗಿದ್ದವು. ಬಹಮನಿ ಕಾಲದಲ್ಲಿ ಪರ್ಶಿಯಾ, ಟರ್ಕಿ, ಅರೇಬಿಯಾ ಮತ್ತು ಮಧ್ಯಏಷ್ಯಾಗಳಿಂದ ವಿದೇಶಿಯರು ಬಂದು ನಗರಗಳಲ್ಲೇ ಉಳಿಯತೊಡಗಿದರು. ಈ ರೀತಿಯಾಗಿ ಬಹಮನಿ ಕಾಲದಲ್ಲಿ ನಗರಗಳನ್ನು ನೋಡಬಹುದು.

ಒಂದು ರಾಜ್ಯದ ಭದ್ರತೆ ಮತ್ತು ದೃಢತೆ ಅದರ ಆರ್ಥಿಕ ವ್ಯವಸ್ಥೆಯನ್ನು ಅವಲಂಬಿಸಿರುತ್ತದೆ. ಬಹಮನಿ ಸಾಮ್ರಾಜ್ಯದ ನಗರಗಳಲ್ಲಿ ಜನರ ಆರ್ಥಿಕ ಜೀವನವು ಸುಗಮವಾಗಿತ್ತು. ದಖ್ಖನ್ ಪ್ರಾಂತ್ಯದ ಆರ್ಥಿಕ ಜೀವನವನ್ನು ಎರಡು ವಿಭಾಗಗಳಾಗಿ ವಿಂಗಡಿಸಬಹುದು, ಅವುಗಳೆಂದರೆ ಗ್ರಾಮೀಣ ಆರ್ಥಿಕ ವ್ಯವಸ್ಥೆ ಮತ್ತು ನಗರ ಆರ್ಥಿಕ ವ್ಯವಸ್ಥೆ. ಗ್ರಾಮೀಣ ಆರ್ಥಿಕ ವ್ಯವಸ್ಥೆಯು ಸಾಮಾನ್ಯವಾಗಿ ಕೃಷಿಯನ್ನು ಅವಲಂಬಿಸಿದ್ದು, ನಗರ ಆರ್ಥಿಕ ವ್ಯವಸ್ಥೆಯು ಕೈಗಾರಿಕೆಯನ್ನು ಅವಲಂಭಿಸಿದಂತಹ ವ್ಯವಸ್ಥೆ ಬಹಮನಿ ರಾಜ್ಯದಲ್ಲಿತ್ತು. ಬಹಮನಿ ಸುಲ್ತಾನರು ನಿರ್ಮಿಸಿದಂತಹ ಭವ್ಯ ಕಟ್ಟಡಗಳು, ಸೌಧಗಳು, ಅರಮನೆಗಳು ಮತ್ತು ಅವರ ವೈಭವಯುತ ವಿಲಾಸಿ ಜೀವನ ಇವೆಲ್ಲವನ್ನೂ ನೋಡಿದಾಗ ಅಲ್ಲಿಯ ಶ್ರೀಮಂತ ವರ್ಗದ ಅರ್ಥವ್ಯವಸ್ಥೆ ಸಂಪತ್ಭರಿತವೂ ಆಗಿತ್ತೆಂದು ಹೇಳಬಹುದು.[೨೪]

ನಗರದಲ್ಲಿನ ಆರ್ಥಿನ ಜೀವನ ಹಿಂದಿನಂತೆಯೆ ಪೂರ್ಣ ಓಜಸ್ಸಿನಿಂದ ತುಂಬಿತ್ತು. ಮೂರಿಷ್ ಪ್ರವಾಸಿ ಇಬ್ನ್ ಬತೂತನು ತನ್ನ ಭಾರತ(ಕ್ರಿ.ಶ.೧೩೩೩–೪೬)ಪ್ರವಾಸದಲ್ಲಿ ಉತ್ತರಗಂಗಾ ಕಣಿವೆ, ಮಾಳವ ಹಾಗೂ ಗುಜರಾತ್, ದಖ್ಖನ್ ಹಾಗೂ ಬಂಗಾಳ ಮತ್ತು ದಕ್ಷಿಣದ ಮಲಬಾರುಗಳಲ್ಲಿ ಸಂಪದ್ಭರಿತ ಮಾರುಕಟ್ಟೆಗಳಿಂದ ತುಂಬಿದ್ದ ಮಹಾನಗರಗಳನ್ನು ನೋಡಿದನು. ದಖ್ಖನ್ನಿನಲ್ಲಿ ಸಮೃದ್ಧ ಕಡಲ ರೇವುಗಳಲ್ಲಿ ಅದ್ಭುತ ನಮೂನೆಗಳ ಸರಕುಗಳ ವ್ಯಾಪಕ ವ್ಯಾಪಾರ ನಡೆಯುತ್ತಿತ್ತು. ಬಹಮನಿ ಕಾಲದಲ್ಲಿ ನಗರಗಳು ತನ್ನ ವೈಶಾಲ್ಯ ಹಾಗೂ ಬೃಹತ್ ಜನಸಂಖ್ಯೆ, ಶ್ರೀಮಂತ ಬಜಾರುಗಳು, ತನ್ನ ಭಾರಿ ಸಂಖ್ಯೆಯ ಕುಶಲಕರ್ಮಿಗಳು ಮತ್ತು ಮುತ್ತು ರತ್ನಗಳ ಹಾಗೂ ಇತರ ವಸ್ತುಗಳ ವ್ಯಾಪಾರಿಗಳು ಇವರಿಂದಾಗಿ, ಸಾಲುಸಾಲು ವಿದೇಶೀ ಪ್ರವಾಸಿಗಳ ಮನಸೆಳೆದಿತ್ತು.[೨೫]

ಬಹಮನಿ ಸಾಮ್ರಾಜ್ಯದಲ್ಲಿ ಹೆಚ್ಚಿನ ಮಟ್ಟದಲ್ಲಿ ಮುಸ್ಲಿಮರೇ ಶ್ರೀಮಂತರಾಗಿದ್ದು, ಸುಲ್ತಾನನ ದರ್ಬಾರಿನಲ್ಲಿ ಉನ್ನತ ಪದವಿಗಳನ್ನು ಮಂತ್ರಿಗಳಾಗಿಯೂ, ಇಕ್ತೇದಾರರಾಗಿಯೂ ಮತ್ತು ಉಲೆಮಾಗಳಾಗಿಯೂ ಅಲಂಕರಿಸಿದ್ದರು. ಇವರು ಸಮಾಜದ ಉನ್ನತ ವರ್ಗಕ್ಕೆ ಸೇರಿದವರಾಗಿದ್ದು, ರಾಜ್ಯದ ಬಹುತೇಕ ಆದಾಯವು ಇವರಲ್ಲಿಯೇ ಕೇಂದ್ರೀಕೃತವಾಗಿತ್ತೆಂದು ನಿಕೆಟಿನ್‌ನು ರಾಜನಿಗೆ ಬರುತ್ತಿದ್ದ ಶ್ರೀಮಂತ ಕಾಣಿಕೆಗಳ ಕುರಿತು ತಿಳಿಸಿರುತ್ತಾನೆ. ನಿಕೆಟಿನ್‌ನ ಪ್ರಕಾರ ಈ ಉನ್ನತ ವರ್ಗದ ಮುಸ್ಲಿಂ ಜನರು ತಮ್ಮ ಸ್ವಂತ ಊರಿಗೆ ಹೋಗುವಾಗ ತಮ್ಮ ಜೊತೆ ಭದ್ರತೆಗಾಗಿ ಚಿಕ್ಕ ಸೈನ್ಯಪಡೆಯನ್ನು, ಮನರಂಜನೆಗಾಗಿ ನರ್ತಕ, ನರ್ತಕಿಯರನ್ನು, ಸಂಗೀತಗಾರರನ್ನು ಹಾಗೂ ಸೇವಕ–ಸೇವಕಿಯರನ್ನು ತಮ್ಮೊಡನೆ ಕರೆದೊಯ್ಯುತ್ತಿದ್ದರೆಂದು ತಿಳಿಸಿರುತ್ತಾನೆ.[೨೬]

ಮಧ್ಯಮ ವರ್ಗದ ಜನರಲ್ಲಿ ಧರ್ಮ ಪ್ರವರ್ತಕರು, ಬ್ರಾಹ್ಮಣರು, ಕೆಳದರ್ಜೆಯ ಅಧಿಕಾರಿಗಳು, ಉಳಿಗರು, ಸ್ಥಾನಿಕ ವ್ಯಾಪಾರಿಗಳು ಮುಂತಾದವರಿದ್ದರು. ಮಧ್ಯಮ ವರ್ಗದವರು ಶ್ರೀಮಂತರಲ್ಲದಿದ್ದರೂ ಉಡಲು, ತಿನ್ನಲು ಮತ್ತು ವಾಸಿಸಲು ಸೌಕರ್ಯಗಳನ್ನು ಹೊಂದಿ ಉತ್ತಮ ಜೀವನವನ್ನು ನಡೆಸುತ್ತಿದ್ದರು. ಬಹಮನಿ ರಾಜ್ಯದಲ್ಲಿದ್ದ ಕಾಲಿಕತ್ ವ್ಯಾಪಾರಿಗಳು ಚೆನ್ನಾಗಿ ಬಟ್ಟೆಗಳನ್ನು ಧರಿಸುತ್ತಿದ್ದರು, ಆಹಾರಕ್ಕೆ ಕೊರತೆ ಇರಲಿಲ್ಲ, ಸೇವಕರು ಮತ್ತು ಅಶ್ವಗಳು ಅವರಲ್ಲಿ ಸಾಮಾನ್ಯವಾಗಿದ್ದು ಬಹಮನಿ ರಾಜ್ಯದಲ್ಲಿ ಅವರದು ಉತ್ತಮ ಜೀವನ ವಿಧಾನವಿದ್ದಿತು. ಕೆಳವರ್ಗದ ಜನರಲ್ಲಿ ರೈತರು, ಕೂಲಿಕಾರರು, ಶಿಲ್ಪಿಗಾರರು ಮೊದಲಾದವರಿದ್ದು, ಈ ಜನರ ಸ್ಥಿತಿ ಶೋಚನೀಯವಾಗಿತ್ತೆಂದು ತಿಳಿದುಬರುತ್ತದೆ. ಹಿಂದಿನ ಕಾಲದಿಂದಲೂ ಭಾರತದಲ್ಲಿ ಕೃಷಿಯೇ ಪ್ರಧಾನವಾದ ವೃತ್ತಿಯಾಗಿದ್ದರೂ ಸಹ ರೈತನ ಸ್ಥಿತಿಯಲ್ಲಿ ಯಾವುದೇ ಪ್ರಗತಿಗಳಾಗಲಿಲ್ಲ. ರೈತರಿಗೆ ಹೋಲಿಸಿದಾಗ ಕುಶಲ ಕಾರ್ಮಿಕರ ಸ್ಥಿತಿಯು ಉತ್ತಮವಾಗಿದ್ದವು ಏಕೆಂದರೆ ಅವರು ಸುಲ್ತಾನನ ಆಶ್ರಯ ಪಡೆದಿದ್ದು ಹಲವಾರು ಗುಡಿ ಕೈಗಾರಿಕೆಗಳ ಪ್ರಾರಂಭಕ್ಕೆ ಕಾರಣವಾದರು ಅನ್ನುವುದು ಪ್ರಸ್ತುತ ಅಧ್ಯಾಯದಿಂದ ತಿಳಿಯಬಹುದು.[೨೭]

### ೪.೨.೧. ನಗರ ಆರ್ಥಿಕ ಜೀವನ

ಬಹಮನಿ ರಾಜ್ಯದಲ್ಲಿ ನಗರ ಆರ್ಥಿಕ ಜೀವನವು ವ್ಯಾಪಾರ ಮತ್ತು ಕೈಗಾರಿಕಾ ಲಕ್ಷಣಗಳಿಂದ ಕೂಡಿದ್ದಾಗಿತ್ತು. ಬಹಮನಿ ರಾಜ್ಯದ ದಖ್ಖನ್ ನಗರಗಳು ಈಗಿನ ನಗರಗಳಂತೆ ಇರದಿದ್ದರೂ ದೊಡ್ಡ ಜನಸಂಖ್ಯೆಯನ್ನು ಹೊಂದಿರುವ ಗ್ರಾಮಗಳಂತಿದ್ದವು. ಬಹಮನಿ ರಾಜಧಾನಿ ಪ್ರದೇಶಗಳಾದ ಗುಲ್ಬರ್ಗಾ, ಬೀದರ್, ಬಿಜಾಪುರ, ಅಹ್ಮದ್‌ನಗರ, ಬೆರಾರ್, ಗೋಲ್ಕಂಡ ಪಟ್ಟಣಗಳು ಜನನಿಬಿಡವಾಗಿದ್ದು ಬೃಹತ್ ಪಟ್ಟಣಗಳೆಂದು ಹೆಸರುವಾಸಿಯಾಗಿದ್ದವು. ಕರಾವಳಿ ಪ್ರದೇಶಗಳು ಖ್ಯಾತ ವ್ಯಾಪಾರಿ ಕೇಂದ್ರಗಳಾಗಿದ್ದು, ಬಹಮನಿ ಸುಲ್ತಾನರು ಮತ್ತು ವಿಜಯನಗರ ಅರಸರ ವ್ಯಾಪಾರವನ್ನು ವೃದ್ಧಿಸಿದ್ದವು. ಈ ಕರಾವಳಿ ಪ್ರದೇಶಗಳ ಮೂಲಕವೇ ವಿದೇಶಿ ವ್ಯಾಪಾರವು ಬೆಳೆದು, ವಿದೇಶಿಗರು ದಖ್ಖನ್‌ಗೆ ವಲಸೆ ಬರುವಂತಾಯಿತು. ನಗರ ಪ್ರದೇಶಗಳು ಜೀವನಾವಶ್ಯಕ್ಕೆ ಬೇಕಾದ ಐಶಾರಾಮಿ ವಸ್ತುಗಳನ್ನು, ಭೋಗದ ವಸ್ತುಗಳನ್ನು, ಅನೇಕ ಸಲಕರಣೆಗಳನ್ನು, ದಿನಿಸುಗಳನ್ನು ಮಾರಾಟ ಮಾಡುವ ಮತ್ತು ಕೊಂಡುಕೊಳ್ಳುವ ವ್ಯವಹಾರ ಕೇಂದ್ರಗಳಾಗಿದ್ದವು. ಈ ನಗರಗಳಲ್ಲಿ ಹಲವಾರು ಪ್ರದೇಶಗಳು ಪವಿತ್ರ ಯಾತ್ರಾ ಸ್ಥಳಗಳಾಗಿ ಹೆಸರುವಾಸಿಯಾಗಿದ್ದವು. ಬಹಮನಿಯ ಪ್ರಮುಖ ನಗರಗಳು ಸಮೃದ್ಧಿ ಮತ್ತು ವಿಫುಲ ಸಂಪತ್ತಿನಿಂದ ಕೂಡಿದ್ದು, ನಗರಗಳಲ್ಲಿ ವಿದ್ಯಾಭ್ಯಾಸದ ಸಲುವಾಗಿ ವಿದ್ಯಾರ್ಥಿಗಳಿಗೆ ಉಚಿತ ಊಟ, ವಸತಿ ಒದಗಿಸಿದ್ದರಿಂದ ನಗರಗಳು ಶಿಕ್ಷಣ ಕೇಂದ್ರಗಳಾಗಿ ಬೆಳೆದವು. ವ್ಯಾಪಾರಸ್ಥರಿಗೆ ಅನುಕೂಲವಾಗುವಂತೆ ವಿಶ್ರಾಂತಿ ಗೃಹಗಳು, ಉಪಹಾರ ಮಂದಿರಗಳು ನಿರ್ಮಾಣಗೊಂಡಿದ್ದವು. ನಗರಗಳಲ್ಲಿನ ವ್ಯಾಪಾರವು ಹೆಚ್ಚಾಗಿ ಮಧ್ಯವರ್ತಿಗಳಿಂದಲೇ ನಡೆಯುತ್ತಿತ್ತು. ನಗರಗಳು ಹೆಚ್ಚಾಗಿ ಶ್ರೀಮಂತರು ಮತ್ತು ಅಧಿಕಾರಿಗಳಿಂದ ತುಂಬಿದ್ದು, ರಾಜಕೀಯ ಮತ್ತು ವಾಣಿಜ್ಯ ಕೇಂದ್ರಗಳಾಗಿ ಬೆಳೆದಿದ್ದವು. ಈ ರೀತಿಯಾಗಿ ಬಹಮನಿ ರಾಜ್ಯದಲ್ಲಿ ನಗರಗಳ ಬೆಳವಣಿಗೆಯು ರಾಜಕೀಯ–ಆರ್ಥಿಕ ಸ್ಥಿರತೆಗೆ ಮೂಲ ಕಾರಣವಾಗಿತ್ತೆಂದು ಹೇಳಬಹುದು.[೨೮]

### ೪.೨.೨. ವ್ಯಾಪಾರ ಮತ್ತು ವಾಣಿಜ್ಯ

ಮಧ್ಯಕಾಲೀನ ವ್ಯಾಪಾರ, ವಾಣಿಜ್ಯ ಮತ್ತು ಕೈಗಾರಿಕೆಗಳು ಬಹಮನಿ ರಾಜ್ಯದ ಆರ್ಥಿಕ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರವಹಿಸಿದ್ದವು. ವ್ಯಾಪಾರವನ್ನು ವೃತ್ತಿಯಾಗಿಸಿಕೊಂಡವರನ್ನು ವರ್ತಕರು ಎಂಬ ಹೆಸರಿನಿಂದ ಕರೆಯಲಾಗುತ್ತಿತ್ತು. ಭಾರತದಾದ್ಯಂತ ನೆಲೆಸಿದಂತಹ ವರ್ತಕರು ಬಹಮನಿ ಸಾಮ್ರಾಜ್ಯಕ್ಕೆ ವಲಸೆ ಬಂದು ನೆಲೆಸಿದ್ದರು. ಈ ವರ್ತಕರು ಸುಸಂಘಟಿತರಾಗಿದ್ದು ವೃತ್ತಿ ಚಾಣಾಕ್ಷತೆಯನ್ನು ಹೊಂದಿದವರಾಗಿದ್ದರು.

ದೇಶೀಯ ವ್ಯಾಪಾರದ ಪ್ರಮುಖ ಲಕ್ಷಣವೆಂದರೆ ಗ್ರಾಮಾಂತರ ಪ್ರದೇಶಗಳಿಂದ ನಗರ ಪ್ರದೇಶಗಳಿಗೆ ಏಕ ರೂಪವಾಗಿ ಸಾಗುತ್ತಿದ್ದುದು. ವರ್ತಕರು ದೂರ ಪ್ರದೇಶಗಳ ಜೊತೆ ವ್ಯಾಪಾರ ಮತ್ತು ಸ್ಥಳೀಯ ವ್ಯಾಪಾರದಲ್ಲಿ ಪ್ರಾವೀಣ್ಯತೆಯನ್ನು ಹೊಂದಿದ್ದರು. ವರ್ತಕರಲ್ಲಿ ಎರಡು ರೀತಿಯ ಪ್ರಕಾರಗಳಿದ್ದವು, ಅವುಗಳೆಂದರೆ ವಿನಿಮಯ ವರ್ತಕರು ಮತ್ತು ಉತ್ಪಾದಕ ವಿನಿಮಯ ವರ್ತಕರು. ವಿನಿಮಯ ವರ್ತಕರಲ್ಲಿ ಶೆಟ್ಟಿ, ಬಣಜಿಗ, ಶೆಟ್ಟಿಗುತ್ತ, ನಕರ, ಬೋಹ್ರಾ, ಒಡ್ಡ, ವ್ಯವಹಾರಿ, ಗಾತ್ರಿಗ, ಶೆಟ್ಟಿಕಾರ, ಹಲರು, ಎಳಮೆ, ಸಾಲಿಕೆ, ಬಲ್ಲಾಳುಗಳು, ನಾನಾದೇಶಿ, ಉಭಯ ನಾನಾದೇಶಿಗಳು ಮುಂತಾದವರಿದ್ದರು. ಉತ್ಪಾದಕ ವಿನಿಮಯ ವರ್ತಕರಲ್ಲಿ ಕುಂಬಾರ, ಅಕ್ಕಸಾಲಿಗ, ಮಾದಿಗ, ಸಮಗಾರ, ಬಡಿಗಾರ, ಮೇದ, ಮೊದಲಾದವರಿದ್ದರು. ಸ್ಥಳೀಯ ವ್ಯಾಪಾರಸ್ಥರು ಆಂತರಿಕ ವ್ಯಾಪಾರವಲ್ಲದೆ ವಿದೇಶಿ ವ್ಯಾಪಾರವನ್ನು ಸಹ ಬಹಮನಿ ಸಾಮ್ರಾಜ್ಯದಲ್ಲಿ ನಡೆಸುತ್ತಿದ್ದರು. ಮೊದಲನೇ ವರ್ಗದ ವರ್ತಕರನ್ನು 'ಶೇಟ್' ಅಥವಾ 'ಬೋಹ್ರಾ' ಎಂದು ಕರೆಯುತ್ತಿದ್ದರು, ಎರಡನೇ ವರ್ಗದ ವರ್ತಕರನ್ನು 'ಬಿಯೋಪಾರಿಸ್' ಅಥವಾ 'ಬನಿಕ್' ಎಂದು ಕರೆಯುತ್ತಿದ್ದರು. ಬನಿಕ್‌ರು ಹಳ್ಳಿ ಮತ್ತು ಪಟ್ಟಣಗಳಲ್ಲಿ ಆಹಾರ ವಸ್ತುಗಳನ್ನು, ಬೇಳೆ ಕಾಳುಗಳನ್ನು, ತುಪ್ಪ, ಉಪ್ಪು, ಮುಂತಾದವುಗಳನ್ನು ಸಂಗ್ರಹಿಸಿ ಕಳುಹಿಸಲು ತಮ್ಮ ಕೈಕೆಳಗೆ ದಲ್ಲಾಳಿಗಳನ್ನು ಅಥವಾ ಮಧ್ಯವರ್ತಿಗಳನ್ನು ನೇಮಕ ಮಾಡಿದ್ದರು.[೨೯]

ವ್ಯಾಪಾರವು ದಖ್ಖನ್ನಿನ ದಾಭೋಲ್ ಬಂದರಿನಿಂದ ಒಳನಾಡಿಗೆ ಸಾಗಿಸಿ, ಅಲ್ಲಿಂದ ಅದಕ್ಕೆ ಪ್ರತಿಯಾಗಿ, ಬಟ್ಟೆ, ಗೋಧಿ, ಕಾಳು,ಬೇಳೆಗಳನ್ನು ಪಡೆಯಲಾಗಿತ್ತು. ವಿದೇಶೀ ಮುಸ್ಲಿಂ ವರ್ತಕರ ಉದ್ಯಮಶೀಲತೆಯ ದೆಸೆಯಿಂದಾಗಿ, ಗುಜರಾತಿನ ರಂದೇರಿನ ಕಡಲರೇವು, ಮಲಕ್ಕ ಮತ್ತು ಚೀನಗಳ ಉತ್ಪನ್ನಗಳಿಗೆ ಆ ಪ್ರದೇಶದಲ್ಲೆ ಅತ್ಯಂತ ಭಾರಿ ವ್ಯಾಪಾರ ಕೇಂದ್ರವಾಗಿತ್ತು. ಪೋಚುಗೀಸ್ ಸರ್ಕಾರದ ಪ್ರತ್ಯೇಕತಾ ನೀತಿಯ ಕಾರಣದಿಂದಾಗಿ, ಹೊರಗಿನಿಂದ ಆಮದಾದ ಕುದುರೆಗಳ ಮಾರಾಟಕ್ಕೆ ದೊಡ್ಡ ಕೇಂದ್ರವಾಗಿದ್ದ ದಕ್ಷಿಣದ ರೇವು ಭಟ್ಕಳಕ್ಕೆ ಬದಲಾಗಿ ಗೋವಾ ವ್ಯಾಪಾರ ಕೇಂದ್ರವಾಯಿತು. ಅಲ್ಲಿ ದಖ್ಖನ್ ಹಾಗೂ ವಿಜಯನಗರ ರಾಜ್ಯಗಳಿಂದ ಬರುತ್ತಿದ್ದ ವ್ಯಾಪಾರಿಗಳು ಒಂದು ಕುದುರೆಗೆ ೨೦೦ ರಿಂದ ೩೦೦ ಪೋರ್ಚುಗೀಸ್ ಚಿನ್ನದ ನಾಣ್ಯಗಳಷ್ಟು ದುಬಾರಿ ಬೆಲೆ ತೆರುತ್ತಿದ್ದರು. ಜೊತೆಗೆ ೪೦ ಅಂಥ ನಾಣ್ಯಗಳ ಸರ್ಕಾರಿ ಸುಂಕವನ್ನು ಕೊಡುತ್ತಿದ್ದರು. ಭಟ್ಕಳ ರೇವಿಗೂ ವಿಜಯನಗರದ ಆಸುಪಾಸಿನ ಒಳನಾಡು ಊರಿಗೂ ನಡುವೆ ಭಾರಿ ವ್ಯಾಪಾರ ನಡೆಯುತ್ತಿತ್ತು. ಪ್ರತಿವರ್ಷವೂ ಸರಕು ಸಾಗಿಸಲು ೫,೦೦೦ ಅಥವಾ ೬,೦೦೦ ಎತ್ತುಗಳನ್ನು ಬಳಸಲಾಗುತ್ತಿತ್ತು. ವಿಜಯನಗರ ರಾಜ್ಯಕ್ಕೆ ಆಮದಾಗುತ್ತಿದ್ದ ಸರಕುಗಳ ಉದ್ದನೆಯ ಪಟ್ಟಿಯನ್ನೇ ಬಾರ್ಬೋಸ ಕೊಡುತ್ತಾನೆ. ಅದರಲ್ಲಿ, ನಗರಕ್ಕೆ ನೆರೆಯ ದಖ್ಖನ್ ರಾಜ್ಯದಿಂದ ವಜ್ರಗಳನ್ನು ತರಿಸಿಕೊಳ್ಳಲಾಗುತ್ತಿತ್ತು. ಇತರ ಅಮೂಲ್ಯ ಶಿಲೆಗಳನ್ನು ಪೆಗು ಮತ್ತು ಸಿಂಹಳಗಳಿಂದ ತರಲಾಗುತ್ತಿತ್ತು. ಮುತ್ತುಗಳನ್ನು ಒರ್ಮುಜ್ ಮತ್ತು ಕಾಯಲ್‌ಗಳಿಂದಲೂ ಕಿಂಕಾಪು ಬಟ್ಟೆಗಳನ್ನು ಚೀನ ಮತ್ತು ಅಲೆಕ್ಸಾಂಡ್ರಿಯಗಳಿಂದಲೂ ತರಿಸಿಕೊಳ್ಳಲಾಗುತ್ತಿತ್ತು. ಮಲಬಾರಿನಿಂದ ಮೆಣಸು, ಇತರ ಪ್ರದೇಶಗಳಿಂದ ಬಣ್ಣದ ಬಟ್ಟೆಗಳು, ಹವಳ, ಲೋಹಗಳು, ಪಾದರಸ, ರಸಗಂಧಕ, ಕೇಸರಿ, ಪನ್ನೀರು, ಅಫೀಮು, ಶ್ರೀಗಂಧದ ಮರ, ಕಿತ್ತಾಳೆ, ಕರ್ಪೂರ ಮತ್ತು ಕಸ್ತೂರಿಗಳನ್ನು ತರಿಸಿಕೊಳ್ಳಲಾಗುತ್ತಿತ್ತು. ದೊರೆ ವಿದೇಶಿ ಸಾಮಾನ್ಯ ಜಾತಿಯ ಕುದುರೆಗಳಿಗೆ ತಲಾ ೪೦೦ ರಿಂದ ೬೦೦ ಪೋರ್ಚುಗೀಸ್ ಚಿನ್ನದ ನಾಣ್ಯಗಳನ್ನು ಕೊಟ್ಟುಕೊಳ್ಳುತ್ತಿದ್ದ. ದೊರೆಯ ಸ್ವಂತದ ಬಳಕೆಗೆ ಮೀಸಲಾದ ಕುದುರೆಗಳಿಗೆ ೯೦೦ ರಿಂದ ೧,೦೦೦ ಅಂತಹ ನಾಣ್ಯಗಳನ್ನು ಆತ ಕೊಡುತ್ತಿದ್ದ. ವಿಜಯನಗರದ ವರ್ತಕರು, ಆ ಕಾಲದಲ್ಲಿ ಬರ್ಮೀ ಪದ್ಮರಾಗ ಶಿಲೆ ಹಾಗೂ ಕಸ್ತೂರಿಗಳಿಗೆ ಭಾರಿ ಭಾರತೀಯ ಮಾರುಕಟ್ಟೆಯಾದ ಪುಲಿಕಾಟ್ ಪ್ರಯಾಣ ಮಾಡುತ್ತಿದ್ದರು.[೩೦]

ಬಹಮನಿ ಸಾಮ್ರಾಜ್ಯದಲ್ಲಿ ಬಹುಸಂಖ್ಯೆಯ ವಸ್ತುಗಳನ್ನು ಸಾಗಿಸಲು 'ಬಂಜಾರ' ಎಂಬ ವರ್ತಕ ವರ್ಗವಿದ್ದು, ಇವರು ಸಾವಿರಾರು ಎತ್ತುಗಳ ಮೇಲೆ ಬೆಲೆಬಾಳುವ ಸಾಮಾನುಗಳನ್ನು, ಬೇಳೆ ಕಾಳುಗಳನ್ನು ಮತ್ತು ಇತರ ವಸ್ತುಗಳನ್ನು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಸಾಗಿಸುತ್ತಿದ್ದರು. ಬಹುಮೂಲ್ಯವಾದ ವಸ್ತುಗಳನ್ನು, ಅಮೂಲ್ಯವಾದ ರೇಷ್ಮೆ ಬಟ್ಟೆಗಳನ್ನು ಎತ್ತಿನ ಗಾಡಿಗಳಲ್ಲಿ, ಒಂಟೆಗಳ ಮೇಲೆ, ಹೇಸರಗತ್ತೆಗಳ ಮೇಲೆ ಮತ್ತು ಅಶ್ವಗಳ ಮೇಲೆ ಸಾಗಣೆ ಮಾಡುತ್ತಿದ್ದರು. ನದಿಗಳ ಮೂಲಕ ದೋಣಿಗಳಲ್ಲಿ ವಸ್ತುಗಳನ್ನು ಒಂದು ಕಡೆಯಿಂದ ಇನ್ನೊಂದು ಕಡೆಗೆ ಸಾಗಿಸುವುದು ಕಡಿಮೆ ವೆಚ್ಚದ್ದಾಗಿದ್ದರಿಂದ ಬಹಮನಿ ರಾಜ್ಯದಲ್ಲಿ ಅಭಿವೃದ್ಧಿ ಹೊಂದಿತ್ತು. ಹೊರ ರಾಜ್ಯಗಳಿಗೆ ಮತ್ತು ದೂರ ಪ್ರದೇಶಗಳಿಗೆ ವ್ಯಾಪಾರಕ್ಕಾಗಿ ಸಾಗಣೆ ಮಾಡುತ್ತಿದ್ದ ವಸ್ತುಗಳಲ್ಲಿ ಮುಖ್ಯವಾಗಿ ಬಟ್ಟೆಗಳು, ಸಕ್ಕರೆ, ಅಕ್ಕಿ, ಅತಿ ಉತ್ತಮವಾದ ಮಸ್ಲಿನ್ ಮತ್ತು ರೇಷ್ಮೆ ಮುಂತಾದ ವಸ್ತುಗಳಿರುತ್ತಿದ್ದವು.

ಭಾರತಕ್ಕೆ ಬಂದ ಹಲವಾರು ಯಾತ್ರಿಕರು ಬಹಮನಿ ಸಾಮ್ರಾಜ್ಯದಲ್ಲಿನ ಐಶ್ವರ್ಯ ಅಭಿವೃದ್ಧಿಗಳನ್ನು ವರ್ಣಿಸಿದ್ದಾರೆ. ಭಾರತದಲ್ಲಿನ ಮಾಳ್ವಾ, ಗುಜರಾತ, ದಖ್ಖನ್ ಬಹಮನಿ ಹಾಗೂ ಬಂಗಾಳಗಳಲ್ಲಿ ವ್ಯಾಪಾರಿ ಕೇಂದ್ರಗಳನ್ನು ಕಂಡಿರುವುದಾಗಿ ಇಬ್ನಬತೂತ್ ಹೇಳಿದ್ದಾನೆ.[೩೧] ಬಹಮನಿ ಸಾಮ್ರಾಜ್ಯವು ದೂರದ ಪರ್ಶಿಯಾ, ಅರೇಬಿಯಾ, ಆಫ್ರಿಕಾ ಮತ್ತು ಯುರೋಪ್ ದೇಶಗಳೊಡನೆ ವಾಣಿಜ್ಯ ಸಂಬಂಧವನ್ನು ಬೆಳೆಸಿತ್ತು, ಈ ಕೆಲಸಕ್ಕಾಗಿ ಬಹಮನಿ ರಾಜ್ಯದ ವರ್ತಕರು ಹಡಗುಗಳನ್ನು ಉಪಯೋಗಿಸುತ್ತಿದ್ದರೆಂದು ತಿಳಿದುಬರುತ್ತದೆ.

ಬಹಮನಿ ರಾಜ್ಯದ ಆರ್ಥಿಕ ವ್ಯವಸ್ಥೆಯಲ್ಲಿ ಆಂತರಿಕ ವ್ಯಾಪಾರ ಮಹತ್ವದ ಪಾತ್ರವಹಿಸಿದ್ದು, ಆಂತರಿಕ ವ್ಯಾಪಾರದಲ್ಲಿ ಗ್ರಾಮೀಣ ಮತ್ತು ನಗರ ಪ್ರದೇಶಗಳೆರಡು ಪರಸ್ಪರ ಒಂದುಗೂಡಿ ಹೊಂದಾಣಿಕೆಯಿಂದ ಕಾರ್ಯ ನಿರ್ವಹಿಸುತ್ತಿದ್ದವು. ವ್ಯಾಪಾರದ ಕಾರಣದಿಂದಾಗಿ ಅನೇಕ ಗ್ರಾಮೀಣ ಪ್ರದೇಶಗಳು ನಗರ ಪ್ರದೇಶಗಳಾಗಿ ಪರಿವರ್ತನೆಗೊಂಡು ವ್ಯಾಪಾರವು ಆರ್ಥಿಕ ಚಟುವಟಿಕೆಗಳನ್ನು ಚುರುಕುಗೊಳಿಸಿ, ಸಾಮಾಜಿಕ ಪರಿವರ್ತನೆಗೆ ಕಾರಣವಾಯಿತು. ಆಂತರಿಕ ವ್ಯಾಪಾರವು ನಡೆಯುತ್ತಿದ್ದ ಪ್ರದೇಶಗಳನ್ನು ಸಂತೆ, ಅಂಗಡಿ, ಪೇಟೆ, ಪಟ್ಟಣ ಎಂಬ ಹೆಸರುಗಳಿಂದ ಕರೆಯುತ್ತಿದ್ದರು. ದಖ್ಖನ್ ಯುಗದಲ್ಲಿ ಸಂತೆಯು ಪ್ರಮುಖ ವ್ಯಾಪಾರ ಕೇಂದ್ರವಾಗಿದ್ದು, ವಾರಕ್ಕೊಮ್ಮೆ ಗ್ರಾಮದ ಹಾಗೂ ಪಟ್ಟಣದ ಜನರು ಒಂದೆಡೆ ಸೇರಿ ವ್ಯಾಪಾರ ನಡೆಸುವ ವ್ಯವಸ್ಥೆಯು ರೂಢಿಯಲ್ಲಿತ್ತು. ಈ ಸಂತೆಗೆ ವ್ಯಾಪಾರ ನಡೆಸುವ ಎಲ್ಲಾ ತರಹದ ಸಾಮಗ್ರಿಗಳನ್ನು ತರಲಾಗುತ್ತಿತ್ತು ಮತ್ತು ಇದು ವಾರದಲ್ಲಿ ಒಂದು ದಿನಕ್ಕಷ್ಟೇ ಸೀಮಿತವಾದ ವ್ಯಾಪಾರವಾಗಿತ್ತು. ಈ ಸಂತೆಗಳಿಗೆ ವರ್ತಕರನ್ನು ಆಕರ್ಷಿಸಲು 'ಸುಂಕ ರಿಯಾಯಿತಿ'ಯನ್ನು ಕೊಡುವ ಪದ್ಧತಿಯು ಬಹಮನಿ ರಾಜ್ಯದಲ್ಲಿತ್ತು. ಇಂತಹ ಸಂತೆಗಳಿಗೆ ಸ್ಥಳೀಯ ವ್ಯಾಪಾರಸ್ಥರಲ್ಲದೇ ಹೊರಗಿನ ವ್ಯಾಪಾರಸ್ಥರು ಸಹ ಬಂದು ವ್ಯಾಪಾರ ಮಾಡುತ್ತಿದ್ದರು. ಈ ವ್ಯಾಪಾರಿಗಳು ಸ್ಥಳೀಯ ವಸ್ತುಗಳನ್ನು ವ್ಯಾಪಾರ ಮಾಡುವುದಲ್ಲದೇ, ವಸ್ತುಗಳನ್ನು ಖರೀದಿಸಿ ಅವುಗಳನ್ನು ರಫ್ತು ಮತ್ತು ಆಮದು ಮಾಡಿಕೊಳ್ಳುವ ಹಾಗೂ ಪೇಟೆ-ಪಟ್ಟಣಗಳಿಗೆ ವಿತರಿಸುವ ಕೆಲಸವನ್ನು ಸಹ ಮಾಡುತ್ತಿದ್ದರು.

ವ್ಯಾಪಾರ ನಡೆಯುವ ಮತ್ತೊಂದು ಪ್ರಮುಖ ಕೇಂದ್ರವೆಂದರೆ 'ಅಂಗಡಿ'. ವ್ಯಾಪಾರದ ವಿವಿಧ ಮಳಿಗೆಗಳ ಅಂಗಡಿಗಳನ್ನು ಕುರಿತು ಅನೇಕ ಶಾಸನಗಳಲ್ಲಿ ಉಲ್ಲೇಖನಗಳು ಸಿಗುತ್ತವೆ. ಅಂಗಡಿಗಳಲ್ಲಿ ಬಯಲು ಅಂಗಡಿ, ಕಟ್ಟಿದ ಅಂಗಡಿಗಳಿದ್ದು ಸಂತೆಯ ದಿನ ಮಾತ್ರ ತೆರೆದಿರುತ್ತಿದ್ದವು, ಪೇಟೆ-ಪಟ್ಟಣಗಳಲ್ಲಿ ಕಟ್ಟಿದ ವಿವಿಧ ಮಳಿಗೆಗಳ ಅಂಗಡಿಗಳು ದಿನ ನಿತ್ಯದ ವ್ಯಾಪಾರಿ ಕೇಂದ್ರಗಳಾಗಿದ್ದವು.[೩೨] ಪ್ರಮುಖ ಪೇಟೆಗಳಲ್ಲಿ ಅಂಗಡಿಗಳ ಸಾಲುಗಳಿದ್ದರೆ, ನಗರದ ಒಳಭಾಗದಲ್ಲಿ ಪ್ರತ್ಯೇಕವಾದ ಬಿಡಿ ಅಂಗಡಿಗಳು

ಇರುತ್ತಿದ್ದವು. ಅಂಗಡಿಗಳಲ್ಲಿ ಧರ್ಮದ ಅಂಗಡಿಗಳು, ದೇವರ ಅಂಗಡಿಗಳು, ಮಾನ್ಯದ ಅಂಗಡಿಗಳೂ ಸಹ ಸೇರಿರುತ್ತಿದ್ದವು. ಅಂಡಿಗಳನ್ನು ಕಟ್ಟಿಸಿ ಅವುಗಳನ್ನು ಧರ್ಮದ ಹೆಸರಿನಲ್ಲಿ ಜಿನ್ನಾಲಯ ಅಥವಾ ದೇವಾಲಯಗಳಿಗೆ ದಾನವಾಗಿ ನೀಡಿದರೆ ಪುಣ್ಯ ಪ್ರಾಪ್ತಿಯಾಗುತ್ತದೆ ಎನ್ನುವ ಧಾರ್ಮಿಕ ನಂಬಿಕೆಯನ್ನು ಆಗಿನ ಕಾಲದಲ್ಲಿ ವರ್ತಕದ ಮತ್ತು ಅಧಿಕಾರಿಗಳ ಮೇಲೆ ಹೇರಲಾಗಿತ್ತು. ಅಂಗಡಿಗಳ ಮೇಲುಸ್ತುವಾರಿಯನ್ನು ನೋಡಿಕೊಳ್ಳಲು, ವ್ಯಾಪಾರದ ರೀತಿ-ನೀತಿಗಳನ್ನು ಕಟ್ಟುನಿಟ್ಟಾಗಿ ಪಾಲಿಸುವಂತೆ ನೋಡಿಕೊಳ್ಳಲು, ಬೆಲೆಗಳನ್ನು ನಿಗಧಿಪಡಿಸಲು ಪ್ರತ್ಯೇಕವಾದ ಅಧಿಕಾರಿಗಳನ್ನು ನೇಮಿಸಲಾಗಿತ್ತು, ಇವರನ್ನು ಅಂಗಡಿ ಅಧಿಕಾರಿಗಳೆಂದು ಕರೆಯಲಾಗುತ್ತಿತ್ತು. ವಿವಿಧ ಅಂಗಡಿಗಳಲ್ಲಿ ಬಟ್ಟೆಯ ಅಂಗಡಿ, ಭತ್ತದ ಅಂಗಡಿ, ಆಭರಣದ ಅಂಗಡಿ, ಸುಗಂಧ ದ್ರವ್ಯಗಳ ಅಂಗಡಿ, ಹತ್ತಿಯ ಅಂಗಡಿ, ಅಕ್ಕಸಾಲಿಗರ ಅಂಗಡಿ, ವೈದ್ಯರ ಅಂಗಡಿ ಮುಂತಾದವುಗಳು ಸೇರಿರುತ್ತಿದ್ದವು, ಈ ಎಲ್ಲಾ ಅಂಗಡಿಗಳಿಗೆ ತೆರಿಗೆಗಳನ್ನು ವಿಧಿಸಲಾಗಿತ್ತು. ಅಂಗಡಿಗಳು ಅವುಗಳ ಮಾಲೀಕರ ಅಥವಾ ಅವುಗಳನ್ನು ಕಟ್ಟಿಸಿದವರ ಹೆಸರುಗಳನ್ನು ಹೊಂದಿದ್ದವು, ಉದಾಹರಣೆಗೆ: ಬೊಮ್ಮಲದೇವಿ ಅಂಗಡಿ, ಖಾನ್ ಸಾಹೇಬ ಅಂಗಡಿ, ಪಟೇಲ್ ಅಂಗಡಿ, ಬೆಲಬೂರ ಅಂಗಡಿ ಮುಂತಾದ ಹೆಸರುಗಳನ್ನು ಹೊಂದಿರುತ್ತಿದ್ದವು.[೩೩]

ಬಹಮನಿ ರಾಜ್ಯದಲ್ಲಿ ಪ್ರಮುಖ ಮಾರುಕಟ್ಟೆಗಳಿಂದ ಮತ್ತು ವಾರದ ಸಂತೆಗಳಿಂದ ತೆರಿಗೆ ವಸೂಲಿ ಮಾಡುತ್ತಿದ್ದರು. ಕೊಂಕಣದ ತೀರದ ಸಂಪರ್ಕದಿಂದಾಗಿ ವ್ಯಾಪಾರ ಮತ್ತು ವಾಣಿಜ್ಯಗಳು ಹೆಚ್ಚಿನ ಅಭಿವೃದ್ಧಿ ಯನ್ನು ಹೊಂದಿದ್ದವು. ಕಾರವಾರ, ದಾಬೋಲ್ ಮತ್ತು ರಾಜಪುರ ಮುಖ್ಯ ರೇವು ಪಟ್ಟಣಗಳಾಗಿದ್ದರೆ, ಬಿಜಾಪುರ, ಬಂಕಾಪುರ, ಹುಬ್ಬಳ್ಳಿ ಮತ್ತು ಅಥಣಿ ಬಹಮನಿ ಸಾಮ್ರಾಜ್ಯದ ಮುಖ್ಯ ವ್ಯಾಪಾರಿ ಕೇಂದ್ರಗಳಾಗಿದ್ದವೆಂದು ತಿಳಿದು ಬರುತ್ತದೆ. ನಿಕೆಟಿನ್‌ರವರ ಪ್ರಕಾರ ಅಶ್ವಗಳು, ಹತ್ತಿ ಬಟ್ಟೆಗಳು, ರೇಷ್ಮೆ ಬಟ್ಟೆಗಳು ಮತ್ತು ಮೆಣಸು ಪ್ರಮುಖ ವಾಣಿಜ್ಯ ವಸ್ತುಗಳಾಗಿದ್ದವು. ಇವರ ಪ್ರಕಾರ ಮುಸ್ತಫಬಾದ್-ದಾಬೋಲ್ ವಾಣಿಜ್ಯ ಕೇಂದ್ರದ ಪ್ರಮುಖ ಕೇಂದ್ರವಾಗಿದ್ದು, ದಾಬೋಲ್ ಭಾರತ ಮತ್ತು ಆಫ್ರಿಕಾದ ಬಂದರುಗಳಿಗೆ ಸಂಪರ್ಕವನ್ನು ಹೊಂದಿತ್ತು.[೩೪]

ಬಹಮನಿ ಕಾಲದಲ್ಲಿ ದೇಶಿಯ ಮತ್ತು ವಿದೇಶಿಯ ಬಂಡವಾಳಶಾಹಿಗಳು ಗೋವರ್ಧೈ ಬಂದರಿನಲ್ಲಿದ್ದವು. ವೀರಬಣಜಿಗ, ಸೆಟ್ಟಿ ಮತ್ತು ಲಿಂಗಾಯುತ ವರ್ತಕ ವ್ಯಾಪಾರಗಳು ಇಲ್ಲಿ ನಡೆಯುತ್ತಿದ್ದವು. ಕ್ರಿ.ಶ.೧೪೭೨ರ ನಂತರ ಇಲ್ಲಿನ ವ್ಯಾಪಾರವು ಕರಾವಳಿ ಕರ್ನಾಟಕ ಮತ್ತು ಮಲಬಾರಿನ ಮುಸ್ಲಿಂ ವರ್ತಕರ ವಶಕ್ಕೆ ಬಂದು ೧೩ನೇ ಶತಮಾನದ ಆರಂಭದಲ್ಲಿ ಮಿರ್ಜಾನ, ಹೊನ್ನಾವರ, ಭಟ್ಕಳ, ಬೈಂದೂರು, ಬಸರೂರು, ಬಾರಕೂರು, ಮಂಗಳೂರು, ಮಂಜೇಶ್ವರ ಮತ್ತು ಕುಂಬಾರ ಪ್ರಮುಖ ಸಾಗರೋತ್ತರ ವ್ಯಾಪಾರ ಕೇಂದ್ರ ಹಡಗುಗಳು(ಮೂರರು) ಮುಸ್ಲಿಂರು ಹೊಂದಿದ್ದರು.[೩೫]

### ೪.೨.೩. ಆಮದು ಮತ್ತು ರಫ್ತು

ಬಹಮನಿ ಸಾಮ್ರಾಜ್ಯದಲ್ಲಿ ವ್ಯಾಪಾರಕ್ಕಾಗಿ ಪ್ರಾಚೀನ ಸಾರಿಗೆ ವ್ಯವಸ್ಥೆಯನ್ನೇ ಅವಲಂಬಿಸಿದ್ದು, ದೇಶೀಯ ಸಾರಿಗೆಯಾದ ಬಂಡೆಗಳು, ಎತ್ತು, ಕತ್ತೆ, ಆನೆ, ಅಶ್ವಗಳಂತಹ ಪ್ರಾಣಿಗಳನ್ನು ಬಳಸುತ್ತಿದ್ದರು. ವಿದೇಶಿ ವ್ಯವಹಾರವು ಸಾಗರೋತ್ತರಕ್ಕೆ ಸಂಬಂಧಿಸಿದಾಗಿದ್ದು ಹಡಗುಗಳ ಮೂಲಕ ಪೂರ್ವ ಮತ್ತು ಪಾಶ್ಚಿಮಾತ್ಯ ರಾಷ್ಟ್ರಗಳೊಂದಿಗೆ ಬಹಮನಿ ಸುಲ್ತಾನರು ವ್ಯಾಪಾರ ಸಂಪರ್ಕವನ್ನು ಹೊಂದಿದ್ದರು.

ಬಹಮನಿ ಸುಲ್ತಾನರು ಅನೇಕ ವಸ್ತುಗಳನ್ನು ಆಮದು ಮಾಡಿಕೊಳ್ಳುತ್ತಿದ್ದರು, ಅವುಗಳೆಂದರೆ ಚಿನ್ನ, ಬೆಳ್ಳಿ, ರೇಷ್ಮೆ, ಮದ್ಯ, ಸೀಸ, ತಾಮ್ರ, ಪಾದರಸ, ಬೆಳೆಬಾಳುವ ಹವಳಗಳು ಮತ್ತು ಅರೇಬಿಯಾದ ಬಲಾಢ್ಯ

ಅಶ್ವಗಳು ಕೂಡಿರುತ್ತಿದ್ದವು. ಬಹಮನಿ ಸುಲ್ತಾನರು ಈಜಿಪ್ಟ್, ಅರೇಬಿಯಾ ಮತ್ತು ಟರ್ಕಿ ದೇಶಗಳಿಂದ ಅಶ್ವಗಳನ್ನು, ಚೀನಾ ದೇಶದಿಂದ ಕರ್ಪೂರ, ರೇಷ್ಮೆ ಮತ್ತು ದಾಲ್ಚಿನ್ನಿ ಪದಾರ್ಥಗಳನ್ನು ಆಮದು ಮಾಡಿ ಕೊಳ್ಳುತ್ತಿದ್ದು, ಸಿಂಹಳ, ಆಫ್ರಿಕಾ ಮತ್ತು ಪೌರಾತ್ಯ ರಾಷ್ಟ್ರಗಳೊಂದಿಗೆ ಸುದೀರ್ಘವಾದ ವ್ಯಾಪಾರ ಸಂಬಂಧಗಳನ್ನು ಸಹ ಹೊಂದಿದ್ದರು.

ರಫ್ತು ಮಾಡಲ್ಪಡುತ್ತಿದ್ದ ಬಹಮನಿ ರಾಜ್ಯದ ಮುಖ್ಯ ಪದಾರ್ಥಗಳೆಂದರೆ ಹತ್ತಿ, ಮೆಣಸು, ಗೋದಿ, ಭತ್ತ, ಬೇಳೆ ಕಾಳುಗಳು, ತೆಂಗು, ಸಾಂಬಾರು ಪದಾರ್ಥಗಳು, ಔಷಧಿ, ಅರಿಶಿಣ, ಮಸ್ಲಿನ್ ಬಟ್ಟೆಗಳು ಮೊದಲಾದ ಬೆಲೆಬಾಳುವ ಪದಾರ್ಥಗಳನ್ನು ದಖ್ಖನ್ ಬಹಮನಿ ರಾಜ್ಯದಿಂದ ರಫ್ತು ಮಾಡಲಾಗುತ್ತಿತ್ತು. ಜವಳಿ, ಬಿದ್ರಿಕುಸುರಿ ಕೆಲಸದ ವಸ್ತುಗಳು, ಹಿತ್ತಾಳೆಯ ಅಲಂಕಾರಿಕ ಪಾತ್ರೆಗಳು, ವಾರಂಗಲ್‌ನ ಜಮಖಾನೆ, ಸಕ್ಕರೆ ಮುಂತಾದವುಗಳು ರಫ್ತಾಗುತ್ತಿದ್ದ ಸರಕುಗಳಾಗಿದ್ದು, ಇವಕ್ಕೆ ಬದಲಾಗಿ ಪ್ರಮುಖ ಪದಾರ್ಥಗಳಾದ ಚಿನ್ನ, ಸಾಂಬಾರು ಪದಾರ್ಥಗಳು, ಸುಗಂಧ ದ್ರವ್ಯಗಳು, ಚೀನಾದ ಪಿಂಗಾಣಿ, ಕುದುರೆಗಳು, ಮುತ್ತುಗಳು ಆಮದು ಮಾಡಿಕೊಳ್ಳುತ್ತಿದ್ದರು. ಕಾಲಾಂತರದಲ್ಲಿ ವಸ್ತುವಿನಿಮಯ ಪದ್ಧತಿಯ ಬದಲು ಹಣದ ಉಪಯೋಗ ಹೆಚ್ಚಾಗುತ್ತಾ ಬಂದಿತು.[೩೬]

ದಖ್ಖನ್ ಸಾಮ್ರಾಜ್ಯದಲ್ಲಿ ಸಾಗರೋತ್ತರ ವ್ಯಾಪಾರ ಅಭಿವೃದ್ಧಿಯ ಸಲುವಾಗಿ ಅನೇಕ ವಿನಾಯಿತಿಗಳನ್ನು ಸುಲ್ತಾನರು ವ್ಯಾಪಾರಕ್ಕೆ ತಕ್ಕಂತೆ ನೀಡಿದ್ದರು. ಸುಲ್ತಾನರು ಸುಂಕವನ್ನು ಕಡಿಮೆಗೊಳಿಸಿ ಹೆಚ್ಚಿನ ವ್ಯಾಪಾರ ವಹಿವಾಟುಗಳಿಗೆ ಉತ್ತೇಜನ ನೀಡುತ್ತಿದ್ದರು. ಒಳನಾಡು ಮತ್ತು ಹೊರನಾಡು ವ್ಯಾಪಾರಗಳು ಅಭಿವೃದ್ಧಿಯಾದಂತೆ ಬಂದರು ಪಟ್ಟಣಗಳು ಸಹ ಅಭಿವೃದ್ಧಿಗೊಂಡವು. ಬೆಲೆ ಬಾಳುವ ಪದಾರ್ಥಗಳನ್ನು ಸಾಗಿಸುತ್ತಿದ್ದ ಹಡಗುಗಳು ದಖ್ಖನ್ ಬಂದರಿನಿಂದ ವಿದೇಶಗಳಿಗೆ ಚಲಿಸುತ್ತಿದ್ದವೆಂದು ಫೆರಿಸ್ತಾರವರ ಹೇಳಿಕೆಯಿಂದ ತಿಳಿದುಬರುತ್ತದೆ.[೩೭]

**೪.೨.೪. ಪ್ರಮುಖ ಬಂದರುಗಳು**

ಬಹಮನಿ ಸಾಮ್ರಾಜ್ಯದಲ್ಲಿ ದೇಶೀಯ ಮತ್ತು ಸಾಗರೋತ್ತರ ವ್ಯಾಪಾರವು ವಿಸ್ತಾರಗೊಂಡಿದ್ದರಿಂದ ಪೂರ್ವ ಕರಾವಳಿಯ ಮೂಲಕ ಪಾಶ್ಚಿಮಾತ್ಯ ರಾಷ್ಟ್ರಗಳ ಸಂಪರ್ಕವು ಮತ್ತು ವಿದೇಶಿ ವ್ಯಾಪಾರಿಗಳ ಆಗಮನವು ವೃದ್ಧಿಸಿತು. ಪರ್ಶಿಯಾ, ಅರೇಬಿಯಾ, ಆಫ್ರಿಕಾ, ಯುರೋಪ್ ಮತ್ತು ಪೂರ್ವದ ಅನೇಕ ದೇಶಗಳೊಂದಿಗೆ ರಾಜ್ಯದ ವ್ಯಾಪಾರವು ಪ್ರಗತಿಯಲ್ಲಿದ್ದುದರಿಂದ ಬಂದರುಗಳು ಗಮನಾರ್ಹವಾಗಿ ಅಭಿವೃದ್ಧಿ ಹೊಂದಿದವು. ಪ್ರಥಮ ದರ್ಜೆಯ ಬಂದರುಗಳಲ್ಲಿ ಗೋವಾ, ದಾಬೋಲ್, ಚೌಲ್, ಮಾಹಿಮ್ ಮತ್ತು ಮಚಲಿ ಪಟ್ಟಣಗಳು ಸೇರಿದ್ದವು. ದಾಬೋಲ್ ಖ್ಯಾತ ಬಂದರು ಪಟ್ಟಣವಾಗಿತ್ತೆಂದು ನಿಕೆಟಿನ್‌ನ ಬರವಣಿಗೆಯಿಂದ ತಿಳಿದುಬರುತ್ತದೆ.[೩೮] ಪೋರ್ಚುಗೀಸರು ಸಹ ಬಹಮನಿ ಸುಲ್ತಾನರೊಂದಿಗೆ ವ್ಯಾಪಾರಿ ಸಂಬಂಧವನ್ನು ಹೊಂದಿದ್ದರು. ಬಹಮನಿ ರಾಜ್ಯವು ಪರ್ಶಿಯಾ ಅರೇಬಿಯಾ, ಆಪ್ರಿಕಾ, ಯೂರೋಪ್ ಮತ್ತು ದೂರಪ್ರಾಚ್ಯಗಳಿಂದ ವ್ಯಾಪಾರ ಸಂಬಂಧ ಹೊಂದಿದ್ದಿತು. ಈ ರಾಜ್ಯ ಅನೇಕ ಹಡಗುಗಳನ್ನು ಹೊಂದಿದ್ದು, ಇವುಗಳಲ್ಲಿ ಬಟ್ಟೆ, ಬೀದರ್‌ನ ಕುಶಲ ವಸ್ತುಗಳು, ವಾರಂಗಲ್ಲಿನ ಕಂಬಳಿ ಇನ್ನಿತರ ಸರಕುಗಳನ್ನು ಹೊರಗಡೆ ಸಾಗಿಸಲಾಗುತ್ತಿತ್ತು. ಚಿನ್ನ, ಸಂಬಾರ ಪದಾರ್ಥಗಳು, ಚೈನಾದ ಸರಕುಗಳು, ಸುಗಂಧ, ಔಷಧಿ, ಕುದುರೆ ಮತ್ತು ಗುಲಾಮರನ್ನು ತರಿಸಿಕೊಳ್ಳಲಾಗುತ್ತಿತ್ತು. ಹೀಗೆ ಬಹಮನಿ ವಿದೇಶಗಳೊಡನೆ ಸಂಬಂಧ ಇತ್ತು. ಪಶ್ಚಿಮ ಕರಾವಳಿಯ ಕಾರವಾರ, ಭಟ್ಕಳ ಮುಂತಾದ ಬಂದರುಗಳು ಸುಲ್ತಾನರ ವ್ಯಾಪಾರಿ ಕೇಂದ್ರಗಳಾಗಿದ್ದು ಪ್ರಸಿದ್ಧಿಯನ್ನು ಹೊಂದಿದ್ದವೆಂದು ತಿಳಿಯುತ್ತದೆ.

### ೪.೨.೫. ಕೈಗಾರಿಕೆಗಳು

ಬಹಮನಿ ಅರಸರು ಸ್ಥಳೀಯ ಕೈಗಾರಿಕೆಗಳಿಗೆ ಪ್ರೋತ್ಸಾಹ ನೀಡಿ ಜನಪ್ರಿಯಗೊಳಿಸಿದರು. ಇವುಗಳ ಉತ್ಪನ್ನಗಳನ್ನು ದೇಶ ವಿದೇಶಗಳಿಗೆ ಕಳುಹಿಸಿಕೊಡಲಾಗುತ್ತಿತ್ತು. ದಖ್ಖನ್ ಪ್ರಾಂತ್ಯದ ಬಹಮನಿ ರಾಜ್ಯದ ಆರ್ಥಿಕ ಇತಿಹಾಸದಲ್ಲಿ ಅತಿ ಪ್ರಮುಖವಾದ ಅಂಶಗಳಲ್ಲಿ ಒಂದೆಂದರೆ ಜನತೆಯ ವ್ಯಾಪಕ ಹಾಗೂ ವೈವಿಧ್ಯಮಯ ಕೈಗಾರಿಕಾ ಚಟುವಟಿಕೆಯಾಗಿತ್ತು. ಕೈಗಾರಿಕೆಗಳ ಉದ್ದೇಶ ಸ್ಥಳೀಯ ಶ್ರೀಮಂತ ವರ್ಗ ಹಾಗೂ ವರ್ತಕರ ಅವಶ್ಯಕತೆಗಳನ್ನು ಪೂರೈಸುವುದರ ಜೊತೆಗೆ ಐರೋಪ್ಯ ದೇಶಗಳು ಹಾಗೂ ಏಷ್ಯಾದ ಇತರ ಭಾಗಗಳಿಂದ ಬರುತ್ತಿದ್ದ ವರ್ತಕರ ಬೇಡಿಕೆಗಳನ್ನು ಪೂರೈಸುವುದಾಗಿತ್ತು. ಅಂದಿನ ದಖ್ಖನ್ ಸುಲ್ತಾನರು ಅನೇಕ ಕೈಗಾರಿಕೆಗಳನ್ನು ಮತ್ತು ಗುಡಿ ಕೈಗಾರಿಕೆಗಳನ್ನು ಪ್ರೋತ್ಸಾಹಿಸಿ ಪೋಷಿಸಿಕೊಂಡು ಬಂದಿದ್ದರು. ಹತ್ತಿ ಮತ್ತು ರೇಷ್ಮೆ ಉತ್ಪಾದನೆಯ ಕೈಗಾರಿಕೆಯು ಬಹಮನಿ ರಾಜ್ಯದಲ್ಲಿ ಖ್ಯಾತಿಯನ್ನು ಪಡೆದುಕೊಂಡಿತ್ತು. ಪೈಠಾಣ, ದೌಲತಾಬಾದ, ಗುಲ್ಬರ್ಗಾ, ಬೀದರ್, ರಾಯಚೂರು, ಸೊಲ್ಲಾಪೂರಗಳಂತಹ ಹಲವಾರು ಪ್ರಾಂತ್ಯಗಳಲ್ಲಿ ಅತಿ ಕಡಿಮೆ ಬೆಲೆಯಲ್ಲಿ ಉನ್ನತ ಮಟ್ಟದ ಮತ್ತು ಉತ್ತಮ ಗುಣಮಟ್ಟದ ಹತ್ತಿ ಮತ್ತು ರೇಷ್ಮೆಬಟ್ಟೆಗಳನ್ನು ತಯಾರಿಸುತ್ತಿದ್ದರು. ಮಾಶೂರ್, ಧೋತಿ, ಸೀರೆ, ಮಲ್‌ಮಲ್ ಮತ್ತು ಇತರೆ ವಿವಿಧ ರೀತಿಯ ಬಟ್ಟೆಗಳನ್ನು ಬಹಮನಿ ರಾಜ್ಯದಲ್ಲಿ ಉತ್ಪಾದಿಸಿ ಬೇರೆ ಬೇರೆ ಪ್ರಸಿದ್ಧ ಮಾರುಕಟ್ಟೆಗಳಲ್ಲಿ ಮಾರಾಟ ಮಾಡುತ್ತಿದ್ದರೆಂದು ತಿಳಿದುಬರುತ್ತದೆ. ಈ ಬಟ್ಟೆಗಳು ವಿದೇಶಿಗರನ್ನೂ ಸಹ ಬಹುವಾಗಿ ಆಕರ್ಷಿಸಿ ಸಾಕಷ್ಟು ಬೇಡಿಕೆಗಳನ್ನು ಪಡೆದುಕೊಂಡಿದ್ದವು.

ದಖನ್ ಜವಳಿ ಕೈಗಾರಿಕೆಯ ಊರುಗಳಾದ ಚೌಲ್ ಮತ್ತು ದಾಭೋಲ್‌ಗಳ ವ್ಯಾಪಾರವನ್ನು ವರ್ಣಿಸುವಾಗ ಅಪಾರ ಪ್ರಮಾಣದ ಬಟ್ಟೆಯನ್ನು ಒಳನಾಡಿನಿಂದ ಈ ರೇವುಗಳಿಗೆ ಸಾಗಿಸಿ, ಹೊರಗಿನಿಂದ ಆಮದು ಮಾಡಿಕೊಳ್ಳುತ್ತಿದ್ದ ಸರಕುಗಳಿಗೆ ಬದಲಾಗಿ, ಇತರ ದೇಶಗಳಿಗೆ ರಫ್ತು ಮಾಡಲಾಗುತ್ತಿತ್ತು ಎಂದು ಬಾರ್ಬೋಸ ಹೇಳುತ್ತಾನೆ. ಆ ಕಾಲದ ದಕ್ಷಿಣದ ಭಾರತದ ಜವಳಿ ಕೈಗಾರಿಕೆ ಬಗ್ಗೆ ಮಾಹಿತಿ ಇದೆ. ಇಬ್ನ್ ಬತೂತನ ಭೇಟಿಯ ಕಾಲದಲ್ಲಿ, ಮಲಬಾರಿನ ಷಾಲಿಯಾತ್ ಪಟ್ಟಣ(ಕಲ್ಲಿಕೋಟೆಯ ಹತ್ತಿರ) ಆಗಲೇ ಹತ್ತಿಬಟ್ಟೆಗೆ ಪ್ರಖ್ಯಾತವಾಗಿತ್ತು. ಮಾಹುವಾನ್ ಪ್ರಕಾರ ನಿರ್ದಿಷ್ಟ ಆಕಾರದ ಬೆಲೆಬಾಳುವ ಒಂದು ನಮೂನೆಯ ಹತ್ತಿಬಟ್ಟೆಯನ್ನು ಪಕ್ಕದ ಕಾನ್‌ಪೈಯಿಂದ ಕಲ್ಲೀಕೋಟೆಗೆ ತರಿಸಿಕೊಳ್ಳಲಾಗುತ್ತಿತ್ತು. ಆ ಬಟ್ಟೆಯ ಒಂದೊಂದಕ್ಕೂ ಎಂಟು ಅಥವಾ ಹತ್ತು ಚಿನ್ನದ ನಾಣ್ಯ ಸಿಗುತ್ತಿತ್ತು. ಅದೇ ರೀತಿಯ ನಿರ್ದಿಷ್ಟ ಆಕಾರದ ಆದರೆ ಒಂದೊಂದಕ್ಕೂ ನೂರು ಚಿನ್ನದ ನಾಣ್ಯ ಬೆಲೆಯುಳ್ಳ ಒಂದು ಬಗೆಯ ಪಟ್ಟೆಪಟ್ಟೆ ಬಣ್ಣದ ರೇಷ್ಮೆಯನ್ನು ಆ ದೇಶದ ಜನ ತಯಾರಿಸುತ್ತಿದ್ದರು.[೫]

ವಿವಿಧ ರೀತಿಯ ಮಣ್ಣಿನ ಮಡಿಕೆಗಳನ್ನು ತಯಾರಿಸುವ ಕೈಗಾರಿಕೆ, ಮಡಿಕೆಗಳನ್ನು ಕಲಾತ್ಮಕವಾಗಿ ಅಲಂಕರಿಸಿ ಸುಲ್ತಾನರ ರಾಜ್ಯಗಳಲ್ಲಿ ಈ ಕೈಗಾರಿಕೆಯು ಪ್ರಸಿದ್ಧಿಯನ್ನು ಪಡೆದಿತ್ತು. ಈ ಅಲಂಕೃತ ಮಡಿಕೆಗಳಿಗೆ ಭಾರತದಲ್ಲಿಯ ಬೇರೆ ರಾಜ್ಯಗಳಲ್ಲದೆ ವಿದೇಶಗಳಲ್ಲಿಯೂ ಸಹ ಅತ್ಯಂತ ಬೇಡಿಕೆ ಇತ್ತು. ಬೀದರ್ ಪ್ರಾಂತ್ಯವು ಈ ಕಲೆಯ ತವರೂರಾಗಿತ್ತು. ವಾರಂಗಲ್ ಪ್ರಾಂತ್ಯವು ಚಾಪೆ ಮತ್ತು ಹಾಸುಗಳ ತಯಾರಿಕೆಗೆ ಪ್ರಸಿದ್ಧಿಯನ್ನು ಪಡೆದಿತ್ತು. ದಖ್ಖನ್ ಪ್ರಾಂತ್ಯದ ಬಹಮನಿ ಸಾಮ್ರಾಜ್ಯದಲ್ಲಿ ಕಬ್ಬಿಣ ಮತ್ತು ವಜ್ರದ ಗಣಿಗಳು ಸಹ ಹೇರಳವಾಗಿದ್ದು, ಕಬ್ಬಿಣ ತಯಾರಿಸುವ ಮತ್ತು ದೊಡ್ಡ ದೊಡ್ಡ ಕಬ್ಬಿಣದ ತೊಲೆಗಳನ್ನು ತಯಾರಿಸುವ ಕಲೆಯನ್ನು ಬಹಮನಿ ಜನರು ತಿಳಿದುಕೊಂಡಿದ್ದರು. ಗೋಲ್ಕೊಂಡ ಮತ್ತು ರಾಯಚೂರು ಪ್ರದೇಶಗಳಲ್ಲಿ ವಜ್ರದ ಗಣಿಗಳನ್ನು ಶೋಧಿಸಲಾಗಿತ್ತು. ಕಬ್ಬಿಣದ ಅದಿರಿನಿಂದ ಯುದ್ಧದ ಸಾಮಗ್ರಿಗಳನ್ನು ತಯಾರಿಸುವುದು ಸಾಮಾನ್ಯವಾದದ್ದು ಮತ್ತು ಜನಪ್ರಿಯವಾದ ಕೈಗಾರಿಕೆಯಾಗಿತ್ತು.

ಹತ್ತಿ ಬಟ್ಟೆ ಉತ್ಪಾದನೆಗೆ ಬಿಜಾಪುರವು ಪ್ರಸಿದ್ಧಿ ಪಡೆದಿತ್ತು. ಬಿಜಾಪುರ, ವೆಂಗುರ್ಲಾ, ಲಕ್ಷ್ಮೇಶ್ವರ, ಹುಬ್ಬಳ್ಳಿ ಮೊದಲಾದ ನಗರಗಳಲ್ಲಿ ಉತ್ಕೃಷ್ಟವಾದ ಬಟ್ಟೆಗಳನ್ನು ನೇಯಲಾಗುತ್ತಿತ್ತು. ಇಷ್ಟೇ ಅಲ್ಲದೆ ಲೋಹ ತಯಾರಿಕೆ, ಪಾತ್ರೆ, ಕಂಬಳಿ, ಚಾಪೆ, ಚರ್ಮ, ಉಪ್ಪು ತಯಾರಿಕಾ ಕೇಂದ್ರಗಳು ಬಹಮನಿ ರಾಜ್ಯದಲ್ಲಿ ಸಾಕಷ್ಟಿದ್ದವೆಂದು ತಿಳಿದುಬರುತ್ತದೆ. ರಾಯಬಾಗನಲ್ಲಿ ಬಟ್ಟೆಗಳಿಗೆ ಹಾಕುವ ಬಣ್ಣಗಳನ್ನು ತಯಾರಿಸುತ್ತಿದ್ದರು. ಇದೂ ಸಹ ಒಂದು ಪ್ರಮುಖ ಕೈಗಾರಿಕ ಕೇಂದ್ರವಾಗಿತ್ತು. ಅರೇಬಿಯಾ ಮತ್ತು ಪರ್ಶಿಯನ್ ಗಲ್ಫ್ ರಾಜ್ಯಗಳಿಗೆ ಉತ್ತಮ ಗುಣಮಟ್ಟದ ಹದಮಾಡಿದ ಚರ್ಮವನ್ನು ಬಹಮನಿ ರಾಜ್ಯದಿಂದ ರಫ್ತು ಮಾಡಲಾಗುತ್ತಿತ್ತು. ಕುರಿ ಸಾಕಾಣಿಕೆಯಲ್ಲಿ ವಾರಂಗಲ್ ದಖ್ಖನ್ ಪ್ರದೇಶ ಪ್ರಮುಖ ಕೇಂದ್ರವಾಗಿತ್ತು. ಸಕ್ಕರೆ ಉದ್ಯಮವು ಪ್ರಸಿದ್ಧಿಯಲ್ಲಿದ್ದು ಸಿಲೋನ್, ಅರೇಬಿಯಾ ಮತ್ತು ಪರ್ಶಿಯಾ ದೇಶಗಳಿಗೆ ಸಕ್ಕರೆಯು ರಫ್ತಾಗುತ್ತಿತ್ತೆಂದು ಬರ್ಬೂಸಾರವರ ಬರವಣಿಗೆಯಿಂದ ತಿಳಿಯುತ್ತದೆ.[೪೦]

ಹಡಗು ನಿರ್ಮಾಣದ ಹೊಸ ತಂತ್ರಗಳೂ ಕೂಡ ಬಹಮನಿ ಸುಲ್ತಾನರ ಅವಧಿಯಲ್ಲಿ ಪ್ರಾಮುಖ್ಯತೆ ಪಡೆದು ಅಭಿವೃದ್ಧಿ ಹೊಂದಿದ್ದವು. ಬಹಮನಿ ರಾಜ್ಯದಲ್ಲಿ ಇಟಾಲಿಯನ್‌ದ ಹಡಗುಕಟ್ಟೆಗಿಂತಲೂ ದೊಡ್ಡ ಹಡಗು ಕೇಂದ್ರಗಳಿದ್ದವೆಂದು ನಿಕೊಲೋ ಕಾಂಟಿ ವಿವರಿಸಿದ್ದಾನೆ. ದೊಡ್ಡ ದೊಡ್ಡ ಹಡಗುಗಳಲ್ಲದೆ ಚಿಕ್ಕ ಗಾತ್ರದ ದೋಣಿಗಳನ್ನು ಸಹ ಇಲ್ಲಿ ನಿರ್ಮಾಣ ಮಾಡುತ್ತಿದ್ದರೆಂದು ತಿಳಿದುಬರುತ್ತದೆ. ಬಹಮನಿ ಸುಲ್ತಾನರು ವಿಜಯನಗರದ ಮೇಲೆ ದಂಡೆತ್ತಿ ಹೋಗುವಾಗ ತುಂಗಭದ್ರಾ ನದಿಯನ್ನು ದಾಟಲು ಸುಮಾರು ಎರಡು ಸಲ ಈ ಹಡಗುಗಳನ್ನು ಉಪಯೋಗಿಸಿದ್ದರೆಂದು ಚರಿತ್ರೆಯಿಂದ ತಿಳಿದುಬರುತ್ತದೆ.[೪೧]

ಬಹಮನಿ ಆರ್ಥಿಕ ಇತಿಹಾಸದಲ್ಲಿ ವೈವಿಧ್ಯಮಯ ಕೈಗಾರಿಕಾ ಚಟುವಟಿಕೆಗಳು ನಡೆದಿದ್ದವು. ಹತ್ತಿ ಬಟ್ಟೆಯ ಕೈಗಾರಿಕೆ ಪ್ರಧಾನ ಕಸುಬಾಗಿದ್ದು, ಈ ಬಟ್ಟೆಗಳು ಅತ್ಯುತ್ತಮ ಹಾಗೂ ಶ್ರೇಷ್ಠ ಮಟ್ಟದ ಹತ್ತಿಯಿಂದ ಮಾಡಲ್ಪಡುತ್ತಿದ್ದವು. ಹತ್ತಿ ಬಟ್ಟೆ ಕೈಗಾರಿಕೆಯ ಬೆಳವಣಿಗೆಯಿಂದ ಅದರ ಅವಲಂಭಿತ ಉದ್ಯಮಗಳಾದ ಬಣ್ಣ ಹಾಕುವ, ಕುಸುರಿ ಮಾಡುವ, ಬಟ್ಟೆ ಹೊಲೆಯುವ ಮುಂತಾದ ಉದ್ಯಮಗಳು ಬಹಮನಿ ರಾಜ್ಯದಲ್ಲಿ ಅಭಿವೃದ್ಧಿಗೊಂಡವು. ಬಣ್ಣ ಹಾಕುವ ಕೈಗಾರಿಕೆಯು ಪ್ರವರ್ಧಮಾನ ಸ್ಥಿತಿಯಲ್ಲಿದ್ದು, ಒರಟಾದ ಹತ್ತಿ ಬಟ್ಟೆಗಳಿಗೆ ಬಣ್ಣ ಹಾಕುತ್ತಿದ್ದರು. ನೀರಿನಿಂದ ಅಳಿಸಲಾರದಂತಹ ಉತ್ತಮ ಆಕೃತಿಯ ಉತ್ತಮ ವರ್ಣಗಳಿಂದ ಕೂಡಿದ ಅನೇಕ ವಿಧದ ಹೂವುಗಳು ಮತ್ತು ಆಕೃತಿಗಳನ್ನು ಬಟ್ಟೆಗಳ ಮೇಲೆ ಮುದ್ರಿಸುತ್ತಿದ್ದರು ಎಂದು ನಿಕೆಟಿನ್‌ರವರ ಹೇಳಿಕೆಯಿಂದ ತಿಳಿದುಬರುತ್ತದೆ.[೪೨] ಬಹಮನಿ ಬಟ್ಟೆಗಳ ವಿವಿಧ ಮಾದರಿಗಳ ಬಗ್ಗೆ ಥಾಂಗ್ ಹೋ ಎಂಬ ಚೀನಿ ರಾಯಭಾರಿಯಿಂದ ತಿಳಿದುಬರುವುದೇನೆಂದರೆ ಸುಮಾರು ೫ ರಿಂದ ೬ ಬಗೆಯ ಹತ್ತಿ ಬಟ್ಟೆಗಳನ್ನು ತಯಾರಿಸುತ್ತಿದ್ದರು, ಅವುಗಳೆಂದರೆ ಶಿರಿನಬಾಪ್ಫ್, ಸಲಾಹತಿ, ಬೈರನ್ ಮತ್ತು ದೇವಗಿರಿ ಎಂಬ ಉತ್ಕೃಷ್ಟ ದರ್ಜೆಯ ಹತ್ತಿ ಬಟ್ಟೆಗಳು. ಈ ಬಟ್ಟೆಗಳನ್ನು ಶ್ರೀಮಂತರು ಮಾತ್ರ ಧರಿಸುತ್ತಿದ್ದರೆಂದು ತಿಳಿದುಬರುತ್ತದೆ.

ಹತ್ತಿ ಬಟ್ಟೆ ,ರೇಷ್ಮೆ ಹಾಗೂ ಅನೇಕ ಕಬ್ಬಿಣ ಮತ್ತು ಉಕ್ಕಿನ ಗಿರಣಿಗಳನ್ನು ಸ್ಥಾಪಿಸಿದ್ದರು. ಫೈಥಾನ್, ಗುಲ್ಬರ್ಗಾ, ದೌಲತಾಬಾದ್ ಮತ್ತು ಕ್ಷಿದ್‌ಕಿಗಳಲ್ಲಿ ರೇಷ್ಮೆ ಬಟ್ಟೆಗಳನ್ನು ಕಡಿಮೆ ಬೆಲೆಗೆ ಉತ್ಪಾದಿಸಲಾಗುತ್ತಿತ್ತು. ಮಾಶ್ರೂಮಲ್, ಹಿಮ್ರೋ ಬಟ್ಟೆಗಳು ಮತ್ತು ಸೀರೆಗಳು ಜನಪ್ರಿಯವಾಗಿದ್ದವು. ಸ್ಥಳೀಯ ಅಮೀರರಿಗೆ ಹಾಗೂ ವಿದೇಶಿ ವರ್ತಕರಿಗೆ ಜನಪ್ರಿಯ ಸರಕುಗಲಾಗಿದ್ದವು. ಇವರ ಕಾಲದಲ್ಲಿ ಬಿದಿರೆಯ ಮಡಿಕೆ, ಕುಡಿಕೆ ಉತ್ಪಾದಿಸುವ ಬೃಹತ್ ಕೇಂದ್ರವಾಗಿತ್ತು. ವಾರಂಗಲ್ಲಿನ ಉತೃಷ್ಟ ಕಂಬಳಿಗಳನ್ನು ನೇಯಲಾಗುತ್ತಿತ್ತು. ಬಹಮನಿ ರಾಜ್ಯದ ಕಾಲದಲ್ಲಿ ದಖನ್ನಿನಲ್ಲದೇ ದಕ್ಷಿಣ ಭಾರತದಾದ್ಯಂತ ಕಬ್ಬಿಣ ಮತ್ತು ಉಕ್ಕು ದೊಡ್ಡ ಪ್ರಮಾಣದಲ್ಲಿ ಬಳಕೆಗೆ ಬಂದಿತು. ದಖನ್ ಮತ್ತು ಚೋಟ ನಾಗಪುರ ತಾಮ್ರ ಗಣಿಗಳಿಂದ ದೂರ

ಪ್ರದೇಶಗಳಿಗೆ ರವಾನಿಸಲಾಗುತ್ತಿತ್ತು. ರಾಯಚೂರಿನ ವಜ್ರ ಅಷ್ಟೇ ಪ್ರಸಿದ್ಧಿಯಾಗಿದ್ದಿತು. ಡಾನ್ ಬಂದರಿನಿಂದ ಚರ್ಮವನ್ನು ಅರೇಬಿಯಾ ಮತ್ತು ಪರ್ಶಿಯಾ ಕೊಲ್ಲಿಗಳಿಗೆ ಹೆಚ್ಚಿನ ಪ್ರಮಾಣದಲ್ಲಿ ಕಳುಹಿಸಿ ಕೊಡಲಾಗುತ್ತಿತ್ತು. ಇವರ ಕಾಲದಲ್ಲಿ ವಾರಂಗಲ್ಲು ಕುರಿ ಸಾಕಾಣಿಕೆಗೆ ಮತ್ತು ಚರ್ಮ ದಹಗೊಳಿಸುವ ಕೈಗಾರಿಕೆಗೆ ಪ್ರಸಿದ್ಧಿಯಾಗಿದ್ದಿತು. ಬಿಜಾಪುರದ ಬಟ್ಟೆ ಉದ್ಯಮದ ಕೇಂದ್ರವಾಗಿದ್ದು, ಅರೇಬಿಯಾ, ಪರ್ಶಿಯಾ ಮತ್ತು ಪೂರ್ವ ಆಫ್ರಿಕಾದೊಡನೆ ವ್ಯಾಪಾರ ಸಂಪರ್ಕ ಹೊಂದಿದ್ದಿತು. ಬಹಮನಿ ರಾಜ್ಯವು ಪರ್ಶಿಯಾ ಅರೇಬಿಯಾ, ಆಫ್ರಿಕಾ, ಯೂರೋಪ್ ಮತ್ತು ದೂರ ಪ್ರಾಚ್ಯಗಳಿಂದ ವ್ಯಾಪಾರ ಸಂಬಂಧ ಹೊಂದಿದ್ದಿತು. ಗೋವಾ, ದಾಬುಲ್, ಮಹಿಮ್ ಮತ್ತು ಮಸಲಿಪಟ್ಟಣಗಳು ಪ್ರಮುಖ ಬಂದರುಗಳಾಗಿದ್ದವು. ಈ ರಾಜ್ಯ ಅನೇಕ ಹಡಗುಗಳನ್ನು ಹೊಂದಿದ್ದು. ಇವುಗಳಲ್ಲಿ ಬಟ್ಟೆ ಬೀದರ್‌ನ ಕುಶಲ ವಸ್ತುಗಳು, ವಾರಂಗಲ್ಲಿನ ಕಂಬಳಿ ಇನ್ನಿತರ ಸರಕುಗಳನ್ನು ಹೊರಗಡೆ ಸಾಗಿಸಲಾಗುತ್ತಿತ್ತು. ಚಿನ್ನ, ಸಂಬಾರ ಪದಾರ್ಥಗಳು, ಚೈನಾದ ಸರಕುಗಳು, ಸುಗಂಧ, ಔಷಧಿ, ಕುದುರೆ ಮತ್ತು ಗುಲಾಮರನ್ನು ತರಿಸಿಕೊಳ್ಳಲಾಗುತ್ತಿತ್ತು. ಹೀಗೆ ಬಹಮನಿ ವಿದೇಶಗಳೊಡನೆ ಸಂಬಂಧ ಹೊಂದಿತ್ತು.[೪೩]

ಕೈಗಾರಿಕೆಗೆ ಹೋಲಿಸಿದರೆ ರೇಷ್ಮೆಬಟ್ಟೆ ಕೈಗಾರಿಕೆಯು ಸೀಮಿತ ವ್ಯಾಪ್ತಿಯನ್ನು ಹೊಂದಿದ್ದು, ಜನತೆಯ ಕೆಲವೊಂದು ವರ್ಗದವರಿಗೆ ಮಾತ್ರ ಕೈಗಾರಿಕೆಯಾಗಿ ಸೀಮಿತವಾಗಿತ್ತು. ಕಚ್ಚಾ ರೇಷ್ಮೆಯನ್ನು ಇರಾನ್, ಚೀನಾ ಮತ್ತು ಅಫ್ಘಾನಿಸ್ತಾನದಿಂದ ಆಮದು ಮಾಡಿಕೊಳ್ಳುತ್ತಿದ್ದರು ಮತ್ತು ಸ್ಥಳೀಯವಾಗಿಯೂ ಉತ್ಪಾದಿಸುತ್ತಿದ್ದರು. ಹತ್ತಿ ಮತ್ತು ರೇಷ್ಮೆ ನೂಲಿನ ಮಿಶ್ರಣದಲ್ಲಿ ಮಫ್ರಾ ಎಂಬ ಬಟ್ಟೆಯನ್ನು ದಖ್ಖನ್ ಪ್ರಾಂತ್ಯದಲ್ಲಿ ತಯಾರಿಸುತ್ತಿದ್ದರು.

ಲೋಹ ಕೈಗಾರಿಕೆಯು ಮಧ್ಯಯುಗೀನ ಬಹಮನಿ ರಾಜ್ಯದಲ್ಲಿ ಪ್ರಮುಖ ಕೈಗಾರಿಕೆಯಾಗಿ ಬೆಳೆದಿತ್ತು. ಲೋಹ ಕೆಲಸಗಾರರು ಕಬ್ಬಿಣ, ಕಂಚು, ಬೆಳ್ಳಿ, ಚಿನ್ನ, ಸತು ಮುಂತಾದ ಲೋಹಗಳನ್ನು ಉಪಯೋಗಿಸಿ ಆಯುಧಗಳನ್ನು, ದಿನನಿತ್ಯದ ಅವಶ್ಯಕತೆಗೆ ಬೇಕಾದ ಕತ್ತರಿ, ಚಾಕು, ಡಬ್ಬಣ, ಲೋಟಗಳು, ಭರ್ಚಿ ಮುಂತಾದವುಗಳನ್ನು ತಯಾರಿಸುತ್ತಿದ್ದರು. ಬಹಮನಿ ರಾಜ್ಯದಲ್ಲಿ ಕಾರ್ಮಿಕರು ಆಭರಣಗಳ ತಯಾರಿಕೆಯಲ್ಲಿ ಮತ್ತು ಲೋಹದ ಎಳೆಗಳಿಂದ ತಯಾರಾದ ಬಟ್ಟೆಗಳ ತಯಾರಿಕೆಯಲ್ಲಿ ಕೌಶಲ್ಯವನ್ನು ಹೊಂದಿದ್ದರು. ಖಡ್ಗ ತಯಾರಿಸುವ ಕೈಗಾರಿಕೆಯಲ್ಲಿ ಈ ಪ್ರದೇಶದ ಜನರು ವಿಶ್ವಮಣ್ಣನೆಯನ್ನು ಪಡೆದಿದ್ದರು. ಖಡ್ಗಗಳ ಮೇಲೆ ಕುಸುರಿ ಕೆಲಸ ಮಾಡಿ, ಖಡ್ಗವನ್ನು ತಾಮ್ರ ಮತ್ತು ಬೆಳ್ಳಿಯ ಸಮ್ಮಿಶ್ರಣವನ್ನು ಮೃದು ಕಬ್ಬಿಣಕ್ಕೆ ಸೇರಿಸಿ ಖಡ್ಗವನ್ನು ತಯಾರಿಸುತ್ತಿದ್ದು, ಈ ಖಡ್ಗಗಳಿಗೆ ಅತ್ಯಧಿಕ ಬೆಲೆ ಇರುತ್ತಿತ್ತು. ಸುಲ್ತಾನರಿಗೆ ಮತ್ತು ಶ್ರೀಮಂತರಿಗೆ ಆಸ್ಥಾನಕ್ಕೆ ಬೇಕಾದಂತಹ ಸಿಂಹಾಸನ, ಮುತ್ತಿನ ಹಾರಗಳು, ಕೈ ಬಳೆಗಳು, ಉಂಗುರಗಳು ಮುಂತಾದ ಅತ್ಯಮೂಲ್ಯ ಆಭರಣಗಳ ತಯಾರಿಕೆಗೆ ಸುಲ್ತಾನರಿಂದ ಪ್ರೋತ್ಸಾಹ ಸಿಕ್ಕು ಈ ಕೈಗಾರಿಕೆಗಳು ಅಭಿವೃದ್ಧಿ ಹೊಂದಿದವು. ಕಲಾಕೌಶಲ್ಯದಿಂದ ಕೂಡಿದ ಪೆಟ್ಟಿಗೆಗಳು ಲೇಖನಿ ಮಸಿಗಳು, ಖಡ್ಗದ ಹೊರೆಗಳು, ಮುಂತಾದವುಗಳನ್ನು ಬಹಮನಿ ರಾಜ್ಯದಲ್ಲಿ ತಯಾರಿಸುತ್ತಿದ್ದರೆಂದು ಮಹಮ್ಮದ್ ಗವಾನನ ಪತ್ರದಿಂದ ತಿಳಿದುಬರುತ್ತದೆ.[೪೪]

ಬಹಮನಿ ಸಾಮ್ರಾಜ್ಯದಲ್ಲಿ ತುಂಗಭದ್ರಾ ನದಿಯ ನೀರು ಮತ್ತು ಫಲವತ್ತಾದ ಭೂಮಿ ಕಬ್ಬಿನ ಬೆಳೆಗೆ ಹೆಚ್ಚು ಅನುಕೂಲವಾಗಿದ್ದು, ಕಬ್ಬನ್ನು ಹೆಚ್ಚಾಗಿ ಬೆಳೆಯುತ್ತಿದ್ದರಿಂದ ಸಕ್ಕರೆ ಮತ್ತು ಬೆಲ್ಲದ ಕೈಗಾರಿಕೆಗಳು ಪ್ರಾರಂಭಗೊಂಡವು. ಈ ಪ್ರದೇಶಗಳಲ್ಲಿ ಸಕ್ಕರೆ ಮತ್ತು ಬೆಲ್ಲದ ಉತ್ಪಾದನಾ ಕೈಗಾರಿಕೆಯು ಪ್ರಮುಖವಾಗಿದ್ದು, ಗ್ರಾಮಗಳಲ್ಲಿ ವಾಸಿಸುವ ಜನರಿಗೆ ಅವಶ್ಯಕತೆಗನುಗುಣವಾಗಿ ಹಾಗೂ ರಫ್ತು ಮಾಡುವ ಸಲುವಾಗಿ ಸಕ್ಕರೆ ಮತ್ತು ಬೆಲ್ಲವನ್ನು ತಯಾರಿಸಲಾಗುತ್ತಿತ್ತು.

ಬಹಮನಿ ರಾಜ್ಯದಲ್ಲಿ ಚರ್ಮದ ಕೈಗಾರಿಕೆಗೆ ಹೆಚ್ಚಿನ ಪ್ರಾಶಸ್ತ್ಯ ದೊರೆತಿದ್ದು. ಈ ಚರ್ಮದ ಕೈಗಾರಿಕೆಗಳಲ್ಲಿ ಕುದುರೆಗಳ ಜೀನು ಮತ್ತು ಕಡಿವಾಣಗಳು, ಕತ್ತಿಯ ಹೊರೆಗಳು, ಬೂಟುಗಳನ್ನು ಮತ್ತಿತರ ವಸ್ತುಗಳನ್ನು ತಯಾರಿಸುತ್ತಿದ್ದರು. ಸಾಮಾನ್ಯ ರೈತರು ಬಾವಿಯಿಂದ ನೀರನ್ನು ಮೇಲಕ್ಕೆತ್ತಲು ಚರ್ಮದಿಂದ ಮಾಡಿದ ದೊಡ್ಡ ಬಾನಿಗಳನ್ನು ಉಪಯೋಗಿಸುತ್ತಿದ್ದರು. ಹದಗೊಂಡ ಚರ್ಮವನ್ನು ಅರೇಬಿಯಾ ದೇಶಕ್ಕೆ ರಫ್ತು ಮಾಡಲಾಗುತ್ತಿತ್ತು. ಅದೇ ರೀತಿಯಾಗಿ ರಾಜ್ಯದಲ್ಲಿ ಅನೇಕ ಚಿಕ್ಕ ಕೈಗಾರಿಕೆಗಳಾದ ಉಣ್ಣೆ, ಉಪ್ಪು ತಯಾರಿಕೆ, ಸುಗಂಧ ದ್ರವ್ಯ ತಯಾರಿಕೆ, ಮದ್ಯದ ತಯಾರಿಕೆ ಮುಂತಾದ ಕೈಗಾರಿಕೆಗಳು ಅಭಿವೃದ್ಧಿ ಹೊಂದಿ ಬೆಳೆದುಬಂದವು.

### ೪.೨.೬. ಮಧ್ಯವರ್ತಿಗಳು ಹಾಗೂ ದಲ್ಲಾಳಿಗಳು

ಬಹಮನಿ ಸಾಮಾಜಿಕ ವ್ಯವಸ್ಥೆಯಲ್ಲಿ ಮಧ್ಯವರ್ತಿಗಳು ಹಾಗೂ ದಲ್ಲಾಳಿಗಳು ಪ್ರಮುಖ ನಿರ್ಣಾಯಕ ಪಾತ್ರವನ್ನು ವಹಿಸುತ್ತಿದ್ದರು. ಇವರು ಸುಲ್ತಾನ ಮತ್ತು ರೈತರ ನಡುವೆ ಕೊಂಡಿಗಳಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಭೂಮಿಯನ್ನು ಹೊಂದಿದ್ದ ಭೂಮಾಲೀಕ ಮಧ್ಯವರ್ತಿಗಳು ಕೃಷಿಕರು ಹಾಗೂ ಇತರ ಉತ್ಪಾದಕ ವರ್ಗಗಳ ಮೇಲೆ ತಮ್ಮ ಹಿಡಿತವನ್ನು ಸಾಧಿಸಿದ್ದರು. ಸುಲ್ತಾನರೊಡನೆ ಜನರ ನೇರ ಸಂಬಂಧಗಳನ್ನು ಮೊಟಕುಗೊಳಿಸಿದ್ದರು, ಇದರಿಂದಾಗಿ ವಿಕೇಂದ್ರೀಯ ಆಡಳಿತ ವ್ಯವಸ್ಥೆಯು ಹುಟ್ಟಿಕೊಂಡಿತು. ಮಧ್ಯವರ್ತಿಗಳು ಜಮೀನು ಮತ್ತು ಅಧಿಕಾರ ಎರಡನ್ನೂ ಹೊಂದಿರುತ್ತಿದ್ದರು. ಹದಿನಾಲ್ಕನೇ ಶತಮಾನದ ವೇಳೆಗೆ ಕೃಷಿ ಕ್ಷೇತ್ರದಲ್ಲಾದ ಬದಲಾವಣೆಗಳಿಂದ ಭೂಮಾಲೀಕರು ಮತ್ತು ಭೂಮಿ ಇದ್ದ ಮಧ್ಯವರ್ತಿಗಳು ಹೆಚ್ಚು ಪ್ರಭಾವಶಾಲಿಗಳಾಗಿ ಬೆಳೆದರು. ಮಧ್ಯವರ್ತಿಗಳಾದ ದಲ್ಲಾಳಿಗಳು ಸುಲ್ತಾನರ ಕೈಕೆಳಗೆ ವಿವಿಧ ಹುದ್ದೆಗಳನ್ನು ಹೊಂದಿದ್ದು ಇವರು ಭೂಮಾಲಿಕತ್ವ ಪಡೆದ ಮಂಡಳಿಗಳ ಜೊತೆಗೆ ಕಾರ್ಯನಿರ್ವಹಿಸುತ್ತಿದ್ದರು. ದಾನ-ಧರ್ಮಗಳ ಮೂಲಕ ಜಮೀನು ಮತ್ತು ಅಧಿಕಾರಗಳನ್ನು ಸುಲ್ತಾನರಿಂದ ಪಡೆದುಕೊಂಡ ಮೇಲ್ವರ್ಗದವರು ಈ ಅಧಿಕಾರಗಳನ್ನು ಬಳಸಿ ಸಮಾಜದ ಕೆಳವರ್ಗದವರ ಮೇಲೆ ತಮ್ಮ ಹತೋಟಿಯನ್ನು ಸಾಧಿಸುತ್ತಿದ್ದರು.

ದಲ್ಲಾಳಿಗಳು ಸ್ಥಳೀಯ ಖರೀದಿಯಲ್ಲಿ ನೆರವಾಗಲು ಒಬ್ಬ ದಲ್ಲಾಳಿಗಳನ್ನು ಬೇರೆ ನಿಯೋಜಿಸುತ್ತಿದ್ದ. ಕಲ್ಲೀಕೋಟೆ ರಾಜ್ಯದ ಎಲ್ಲ ವ್ಯವಹಾರಗಳನ್ನೂ ಇಬ್ಬರು ಉನ್ನತ ಮುಸ್ಲಿಂ ಅಧಿಕಾರಿಗಳು ನಡೆಸುತ್ತಿದ್ದರು ಮತ್ತು ಚೀನಿ ದೊಡ್ಡ ದೋಣಿಗಳಲ್ಲಿ ನಗರಕ್ಕೆ ತರುತ್ತಿದ್ದ ಎಲ್ಲ ಸರಕುಗಳ ಮಾರಾಟವನ್ನೂ ಅವರೇ ನಿಯಂತ್ರಿಸುತ್ತಿದ್ದರು. ಬಾರ್ಬೋಸನ ಭೇಟಿಯ ಕಾಲದಲ್ಲಿ, ನೆರೆಯ ಕಾಯಲ್ ಪ್ರದೇಶದಲ್ಲಿ, ಹಿಂದೂ ರಾಜ ಸ್ಥಳೀಯ ಮುತ್ತಿನ ಮೀನುಗಾರಿಕೆ ನೆಲಗಳ ಮೇಲಿನ ರಾಜಸ್ವಾಮ್ಯವನ್ನು ಒಬ್ಬ ಮುಸ್ಲಿಮನಿಗೆ ದೀರ್ಘಾವಧಿ ಗುತ್ತಿಗೆಗೆ ಕೊಟ್ಟಿದ್ದ. ಆ ಮುಸ್ಲಿಮನು ರಾಜನಗೆ ಸರಿಸಮಾನ ಗೌರವ ಪಡೆಯುವಷ್ಟು ಶ್ರೀಮಂತನೂ ಬಲಿಷ್ಠನೂ ಆಗಿದ್ದ. ವಿಜಯನಗರದಲ್ಲಿ, ದೊರೆ, ಕ್ರೈಸ್ತ, ಯಹೂದಿ, ಮೂರ್ ಅಥವಾ ಮೂರ್ತಿಪೂಜಕನೇ ಎಂದು ಏನೂ ವಿಚಾರಿಸದೆ" ಪ್ರತಿಯೊಬ್ಬರಿಗೂ ಸಂಪೂರ್ಣ ಸಂಚಾರ ಹಾಗೂ ಉಪಾಸನಾ ಸ್ವಾತಂತ್ರ್ಯವನ್ನು ನೀಡಿದ್ದ. ಇದು ಹಾಗೂ ದೊರೆ ಮತ್ತು ಅವನ ಪ್ರಜೆಗಳು ಎಲ್ಲರಿಗೂ ತೋರುತ್ತಿದ್ದ ಉನ್ನತ ಸಮಭಾವ ಹಾಗೂ ನ್ಯಾಯಪರತೆಗಳು ಅಪಾರ ಸಂಖ್ಯೆಯ ವರ್ತಕರನ್ನು ನಗರಕ್ಕೆ ಆಕರ್ಷಿಸುತ್ತಿದ್ದವು. ಪುಲಿಕಾಟಿನಲ್ಲಿ ಭಾರಿ ಭಾರಿ ಮುಸ್ಲಿಂ ಹಾಗೂ ಹಿಂದೂ ವ್ಯಾಪಾರಿಗಳು ಇದ್ದರು."[೫]

ವ್ಯಾಪಾರ ಮತ್ತು ವಾಣಿಜ್ಯಗಳಲ್ಲಿ ಕ್ರಮಬದ್ಧಗೊಳಿಸಲು ಪ್ರಾಚೀನ ಮತ್ತು ಮಧ್ಯಯುಗಗಳಲ್ಲಿ ಗಿಲ್ಡ್ ಪದ್ಧತಿ ಅಂದರೆ ವರ್ತಕ ಸಂಘಗಳ ಪದ್ಧತಿ ಇದ್ದು, ಈ ಸಂಘಗಳು ವ್ಯಾಪಾರ ವಾಣಿಜ್ಯಗಳನ್ನು ನಿಯಂತ್ರಿಸುವುದು ಮಾತ್ರವಲ್ಲದೇ ಕ್ಷೇತ್ರದ ಹೊಸಬರಿಗೆ ತರಬೇತಿ ಕೊಡುತ್ತಿದ್ದವು, ಕರಕುಶಲ ಕಸುಬುದಾರರಿಗೆ

ಹಿತರಕ್ಷಣೆ ಮಾಡುತ್ತಿದ್ದವು. ಬ್ಯಾಂಕಿಂಗ್ ಉದ್ದಿಮೆಯನ್ನು ನಿರ್ವಹಿಸುತ್ತಿದ್ದವು. ಮುಸ್ಲಿಮರು ತಮಗೆ ಅವುಗಳ ಬಳಕೆ ಇಲ್ಲದಿದ್ದರೂ, ಹಾಗೇ ಇರಲು ಬಿಟ್ಟರು ಮತ್ತು ಬೆಳೆಸಿದರು. ಇವರು ಒಂದೇ ರೂಪದ ಸಮುದಾಯದವರಾಗಿದ್ದರು. ಪ್ರತಿಯೊಂದು ಕೈಗಾರಿಕೆ ಮತ್ತು ಉದ್ದಿಮೆಯು ತನ್ನದೇ ಸಂಘವನ್ನು ಹೊಂದಿದ್ದು, ಅದಕ್ಕೊಬ್ಬ ಮುಖ್ಯಸ್ಥನಿರುತ್ತಿದ್ದನು. ದಲ್ಲಾಳಿಗಳು ಮತ್ತು ಕುಟಿಲ ವರ್ತಕರಿಂದ ಅವರ ಶ್ರಮವು ಶೋಷಣೆಯಾಗದ ಹಾಗೆ ಅವರು ತಮ್ಮದೇ ಸಂಘವನ್ನು ರಚಿಸಿಕೊಂಡರು.[೪೬]

ಬಹಮನಿ ಸಾಮ್ರಾಜ್ಯದ ಮಧ್ಯಮ ಅವಧಿಯಲ್ಲಿ ಎರಡು ಮಧ್ಯವರ್ತಿ ವರ್ಗಗಳು ಅಸ್ತಿತ್ವಕ್ಕೆ ಬಂದಿದ್ದವು, ಅವುಗಳೆಂದರೆ ಭೂಮಿಯನ್ನು ದಾನದ ರೂಪದಲ್ಲಿ ಪಡೆದುಕೊಂಡು ಸೃಷ್ಟಿಗೊಂಡ ಮಧ್ಯವರ್ತಿಗಳು ಮತ್ತು ಭೂಮಿಯನ್ನು ಈ ಮೊದಲೇ ಹೊಂದಿದ್ದ ಭೂಮಾಲೀಕ ಗುಂಪುಗಳು/ಪಂಗಡಗಳು. ದಾನದ ರೂಪದಲ್ಲಿ ಭೂಮಿಯನ್ನು ಪಡೆದು ಮಧ್ಯವರ್ತಿಗಳಾದವರನ್ನು ಆಗಿನ ಕಾಲದಲ್ಲಿ ಮಹಾಜನರೆಂದು ಕರೆಯುತ್ತಿದ್ದರು. ಇವರಲ್ಲಿ ಹೆಚ್ಚಾಗಿ ಬ್ರಾಹ್ಮಣರೇ ಇರುತ್ತಿದ್ದರು. ತೆರಿಗೆಗಳನ್ನು ಸಂಗ್ರಹಿಸುವುದು, ಭೂಮಿಯನ್ನು ದತ್ತಿ ನೀಡುವುದು, ಕೆರೆಗಳನ್ನು ನಿರ್ಮಿಸುವುದು, ಧಾರ್ಮಿಕ ಮತ್ತು ಶೈಕ್ಷಣಿಕ ಕೆಲಸಗಳನ್ನು ಮಾಡಿಸುವುದು ಮುಂತಾದವುಗಳನ್ನು ಮಹಾಜನರು ಮಾಡುತ್ತಿದ್ದರು. ಇವರು ಸರಕಾರದ ಅಂದರೆ ಸುಲ್ತಾನರ ಮಧ್ಯವರ್ತಿಗಳಾಗಿದ್ದರು. ಈ ರೀತಿಯಾಗಿ ಸಮಾಜದಲ್ಲಿ ಕೃಷಿಕರು ತಮ್ಮ ಪ್ರಾತಿನಿಧ್ಯವನ್ನು ಕಳೆದುಕೊಂಡು ಮಹಾಜನರು ಹಳ್ಳಿಗಳ ಪ್ರತಿನಿಧಿಗಳಾಗಿ ಆಯ್ಕೆಗೊಂಡು ಕೇಂದ್ರ ಪ್ರಭುತ್ವ ಮತ್ತು ರೈತರ ನಡುವಿನ ಮಧ್ಯವರ್ತಿಗಳಾಗಿ ಅಧಿಕಾರ ಚಲಾಯಿಸುತ್ತಿದ್ದರು, ಈ ಮಧ್ಯವರ್ತಿಗಳು ಶ್ರೇಣೀಕೃತ ಸಮಾಜ ವ್ಯವಸ್ಥೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದರು. ಮೇಲ್ನೋಟಕ್ಕೆ ಈ ಮಧ್ಯವರ್ತಿಗಳು ಹಳ್ಳಿಗಳ ಪ್ರತಿನಿಧಿಗಳಾಗಿ ಕಂಡು ಬಂದರೂ, ನಿಜ ಅರ್ಥದಲ್ಲಿ ಅವರು ತಮ್ಮ ಸ್ವಂತ ಸಮಸ್ಯೆಗಳ ಕಡೆಗೆ ಹೆಚ್ಚಿನ ಗಮನವನ್ನು ಕೊಡುತ್ತಿದ್ದರು.

ಬಹಮನಿ ಸುಲ್ತಾನರ ಮತ್ತೊಂದು ವರ್ಗದ ಮಧ್ಯವರ್ತಿಗಳಾದ ಪೆರ್ಗಡೆಗಳು, ಗಾವುಂಡರು ಮತ್ತು ನಾಡಗಾವುಂಡರು ಮಹಾಜನರಂತೆ ಕಾರ್ಯನಿರ್ವಹಿಸುತ್ತಿದ್ದರು. ಇವರು ಸ್ಥಳೀಯ ಹಂತದ ಆಡಳಿತವನ್ನು ನಿರ್ವಹಿಸುತ್ತಿದ್ದರು. ಕೇಂದ್ರ ಪ್ರಭುತ್ವದ ಆಡಳಿತದಲ್ಲಿ ಇವರ ಪಾತ್ರ ನಿರ್ಣಾಯಕವಾಗಿರುತ್ತಿತ್ತು. ಭೂ ಆಧಾರಿತ ಅರ್ಥವ್ಯವಸ್ಥೆಯ ತಳಹದಿಯ ಮೇಲೆ ನಿಂತಿದ್ದ ಅಂದಿನ ಬಹಮನಿ ರಾಜ್ಯದ ವ್ಯವಸ್ಥೆಯು ಭೂಮಾಲೀಕರ ಮತ್ತು ಮಧ್ಯವರ್ತಿಗಳ ಸುತ್ತ ಹೆಣೆದುಕೊಂಡಿತ್ತೆಂದು ತಿಳಿಯುತ್ತದೆ. ಇದು ರಾಜಕಾರಣ ಮತ್ತು ಭೂಒಡೆತನದ ನಡುವಿನ ನಿಕಟವಾದ ಸಂಬಂಧವನ್ನು ಏರ್ಪಡಿಸುವಲ್ಲಿ ಸಹಕರಿಸುತ್ತಿತ್ತು. ಈ ಸಹಕರಣೆಯಲ್ಲಿ ಕೃಷಿಕರು ಮತ್ತು ಕುಶಲಕರ್ಮಿಗಳು ಯಾವುದೇ ಪ್ರಾಮುಖ್ಯತೆಯನ್ನು ಪಡೆದಿರಲಿಲ್ಲ. ಮಧ್ಯವರ್ತಿಗಳು ಕೃಷಿಕರ ಪಾಲಿಗೆ ಸುಲ್ತಾನರಂತೆಯೇ ವರ್ತಿಸುತ್ತಿದ್ದರು, ಇದರಿಂದಾಗಿ ಉತ್ಪಾದಕಾ ವರ್ಗಗಳು ಯಾಂತ್ರಿಕ ಜೀವಿಗಳಾಗಿ ಕೃಷಿಕರು ಮತ್ತು ಇತರ ಉತ್ಪಾದಕ ವರ್ಗದವರು ಸಮಾಜದ ಕೆಳಸ್ತರಕ್ಕೆ ದೂಡಲ್ಪಟ್ಟರು. ಮಧ್ಯವರ್ತಿಗಳಿಂದ ಉತ್ಪಾದಕರ ಮೇಲೆ ನೇರ ಹತೋಟಿ ಸಾಧಿಸಲ್ಪಟ್ಟು ರಾಜ್ಯದ ಬೊಕ್ಕಸಕ್ಕೆ ಸಂದಾಯವಾಗಬೇಕಾಗಿದ್ದ ವರಮಾನದ ಹೆಚ್ಚಿನ ಪಾಲು ಮಧ್ಯವರ್ತಿಗಳ ಪಾಲಾಗುತ್ತಿತ್ತು. ಪ್ರಭುತ್ವದ ಶಕ್ತಿ ಕ್ಷೀಣಗೊಂಡು ಮಧ್ಯವರ್ತಿಗಳು, ದಲ್ಲಾಳಿಗಳು ಮತ್ತು ಭೂಮಾಲೀಕ ವರ್ಗಗಳೇ ಸಾಮಾಜಿಕ ಮತ್ತು ಆರ್ಥಿಕ ರಚನೆಯಲ್ಲಿ ಕೇಂದ್ರ ಬಿಂದುಗಳಾಗಿದ್ದರವದನ್ನು ಪ್ರಸ್ತುತ ಅಧ್ಯಾಯದಿಂದ ತಿಳಿಯಬಹುದು.

### ೪.೨.೭. ವರ್ತಕ ಸಂಘಗಳು

ದಖ್ಖನ್ ಪ್ರಾಂತ್ಯದ ಬಹಮನಿ ರಾಜ್ಯದ ಆರ್ಥಿಕ ಚಟುವಟಿಕೆಗಳಲ್ಲಿ ವರ್ತಕ ಸಂಘಗಳು ಬಹು ಮುಖ್ಯವಾದ ಪಾತ್ರವನ್ನು ನಿರ್ವಹಿಸುತ್ತಿದ್ದವು. ಈ ಸಂಘಗಳನ್ನು ಶ್ರೇಣಿಗಳು ಅಥವಾ ವ್ಯಾಪಾರಸ್ಥರ

ಸಂಘಗಳೆಂದೂ ಸಹ ಕರೆಯುತ್ತಿದ್ದರು. ಈ ಸಂಘಗಳಲ್ಲಿ ವರ್ತಕರು ಮಾತ್ರವಲ್ಲದೇ ವಸ್ತುಗಳ ಉತ್ಪಾದನೆಯನ್ನು ಮಾಡುವ ಮತ್ತು ಅವುಗಳನ್ನು ಮಾರಾಟ ಮಾಡುವ ವಿವಿಧ ವೃತ್ತಿಯವರು ಸಹ ಸೇರಿಕೊಂಡಿದ್ದರು. ಈ ಶ್ರೇಣಿಗಳಲ್ಲಿ ವರ್ತಕ ಸಂಘ, ವೃತ್ತಿ ಸಂಘ, ವಾಣಿಜ್ಯ ಸಂಘ, ಉತ್ಪಾದಕ ಸಂಘ, ವಿನಿಮಯ ಸಂಘ, ಉತ್ಪಾದಕ–ವಿನಿಮಯ ಸಂಘ ಮುಂತಾದವುಗಳು ಸೇರಿದ್ದವು. ವರ್ತಕರು ಸೇರಿ ರಚಿಸಿಕೊಂಡಿರುವ ಸಂಘಗಳನ್ನು ವರ್ತಕ ಸಂಘ, ವೃತ್ತಿ ಸಂಘ ಮತ್ತು ವಿನಿಮಯ ಸಂಘ ಎಂಬ ಹೆಸರುಗಳಿಂದ ಕರೆಯುತ್ತಿದ್ದರು. ಸಂಘಗಳನ್ನು ರಚಿಸಿಕೊಳ್ಳಬೇಕಾದರೆ ವೃತ್ತಿಗಳು ಮೊದಲೇ ನಿಶ್ಚಿತವಾಗಿರಬೇಕು, ಎಲ್ಲಾ ವೃತ್ತಿಯವರು ಸಂಘಗಳನ್ನು ರಚಿಸಿಕೊಳ್ಳಲು ಸಾಧ್ಯವಿಲ್ಲ. ಕೆಲವೊಂದು ಪ್ರಮುಖ ವೃತ್ತಿಯವರು ಮಾತ್ರ ಸಮಾಜದ ಜೊತೆ ಸೇರಿ ಕಟ್ಟಿಕೊಟ್ಟ ಶ್ರೇಣಿಗಳೇ ವರ್ತಕ ಸಂಘಗಳು. ಈ ವರ್ತಕ ಸಂಘಗಳು ಸಮಾಜದ ರಚನೆ, ಸ್ವರೂಪ, ಕಾರ್ಯನಿರ್ವಹಣೆ, ವಾಣಿಜ್ಯ ಲಾಭ, ಸಾಮಾಜಿಕ ಗೌರವ, ಪ್ರಭಾವ ಮತ್ತು ನಗರಗಳ ಅಳಿವು–ಉಳಿವುಗಳಲ್ಲಿ ಪ್ರಮುಖವಾದ ಪಾತ್ರಗಳನ್ನು ವಹಿಸುತ್ತಿದ್ದವು. ಸಂಘಗಳು ವಿಸ್ತಾರಗೊಂಡು ವೈವಿಧ್ಯಮಯವಾಗಿ ಬಹಮನಿ ಸಾಮ್ರಾಜ್ಯದಲ್ಲಿ ಬೆಳೆದಿದ್ದವೆಂದು ತಿಳಿದುಬರುತ್ತದೆ. ರಾಜ್ಯದಾದ್ಯಂತ ಈ ವರ್ತಕ ಸಂಘಗಳು ವಿಸ್ತರಿಸಿಕೊಂಡಿದ್ದು, ರಾಜ್ಯದ ಕೇಂದ್ರವಾದ ರಾಜಧಾನಿಯಲ್ಲಿ ಈ ಸಂಘಗಳು ಸಭೆ ಸೇರುತ್ತಿದ್ದವು. ಈ ಸಭೆಗಳನ್ನು ನಿಗಮ ಸಭೆಗಳೆಂದು ಸಹ ಕರೆಯುತ್ತಿದ್ದರು. ಈ ಸಭೆಯಲ್ಲಿ ವೇತನಗಳ ಶ್ರೇಣಿ, ಆಸ್ತಿಯ ಉತ್ತರಾಧಿಕಾರ ಮುಂತಾದ ಆರ್ಥಿಕ ವಿಚಾರದ ಬಗ್ಗೆ ಅನುಸರಿಸಬೇಕಾದಂತಹ ನಿಯಮಾವಳಿಗಳನ್ನು ರೂಪಿಸಲಾಗಿ ಜಾರಿಗೆ ತರಲಾಗುತ್ತಿತ್ತು.

ಬಹಮನಿ ಆರ್ಥಿಕ ವ್ಯವಸ್ಥೆಯಲ್ಲಿ ಪ್ರತ್ಯೇಕವಾಗಿ ಉದ್ಯಮಿಗಳು ತಮ್ಮದೇ ಆದ ವರ್ತಕ ಸಂಘಗಳನ್ನು ರಚಿಸಿಕೊಂಡಿದ್ದರು, ಇವರಲ್ಲಿ ಗಾಣಿಗರು, ಕುಂಬಾರರು, ಕಮ್ಮಾರರು, ಬಡಗಿಗಳು, ಶಿಲ್ಪಿಗಳು, ಸಿಂಪಿಗರು ಮುಂತಾದ ವೃತ್ತಿಯ ವರ್ತಕ ಜನಾಂಗದವರಿದ್ದರು. ಇವರು ತಮ್ಮ ವೃತ್ತಿ ಶ್ರೇಣಿಗಳನ್ನು ರಚಿಸಿ ವೃತ್ತಿ ತೆರಿಗೆಗಳನ್ನು ನೀಡುತ್ತಿದ್ದರು. ಅದೇ ರೀತಿ ಗಾವರರು, ಇಸ್ಲಾಂ ಜನಾಂಗದವರು, ಮಣಿಗಾರರು, ನಾನಾದೇಶಿಕರು, ದೇಶಕಾರರು ಮುಂತಾದ ವಾಣಿಜ್ಯ ವೃತ್ತಿಕಾರರು ತಮ್ಮ ಶ್ರೇಣಿಗಳನ್ನು ವಿಂಗಡಿಸಿ ಕೊಂಡಿದ್ದರು. ಈ ವರ್ತಕ ಸಂಘದವರು ಠೇವಣಿಗಳನ್ನು ಸ್ವೀಕರಿಸಿ ಮತ್ತು ಸಾಲವನ್ನು ಅವಶ್ಯಕತೆ ಇರುವವರಿಗೆ ಸಾಲವನ್ನು ನೀಡುವ ಕಾರ್ಯವನ್ನು ಸಹ ಮಾಡುತ್ತಿದ್ದವು. ಈ ವರ್ತಕ ಸಂಘಗಳು ತಮ್ಮದೇ ಆದ ಧ್ವಜಾ ಮತ್ತು ಗುರುತುಗಳನ್ನು ಹೊಂದಿದ್ದರು. ವ್ಯಾಪಾರಕ್ಕಾಗಿ ಸರಕುಗಳನ್ನು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ವರ್ಗಾಯಿಸುವಾಗ ಈ ಸಂಘಗಳು ಸಹಕಾರ ನೀಡುತ್ತಿದ್ದವು ಮತ್ತು ಈ ಕಾರಣಕ್ಕಾಗಿಯೇ ಸ್ವಂತ ರಕ್ಷಣಾ ಪಡೆಯನ್ನು ಸಹ ಇಟ್ಟುಕೊಂಡಿದ್ದರು.

ಬಹಮನಿ ಕಾಲದಲ್ಲಿ ವರ್ತಕರು ಹೆಚ್ಚು ಅಧಿಕಾರ ಮತ್ತು ಸವಲತ್ತುಗಳನ್ನು ಹೊಂದಿದ್ದರೆಂದು ತಿಳಿದುಬರುತ್ತದೆ. ಈ ಸಂಘಗಳ ಕಾರ್ಯಚಟುವಟಿಕೆಗಳು ಆಯಾ ಪ್ರಾಂತ್ಯಗಳಿಗೆ ತಕ್ಕಂತೆ ನಗರದಿಂದ ನಗರಗಳಿಗೆ ಭಿನ್ನವಾಗಿರುತ್ತಿತ್ತು. ಈ ವರ್ತಕ ಸಂಘಗಳು ಪಟ್ಟಣ ಮತ್ತು ಮಾರುಕಟ್ಟೆ ಪ್ರದೇಶಗಳಲ್ಲಿ ತಮ್ಮ ಕಾರ್ಯಗಳನ್ನು ನಿರ್ವಹಿಸುತ್ತಿದ್ದು, ಈ ಸಂಘಗಳು ವ್ಯಾಪಾರಸ್ಥರ ಹಿತಾಸಕ್ತಿಯನ್ನು ಕಾಪಾಡುವುದರೊಂದಿಗೆ ನಗರ ಮತ್ತು ಗ್ರಾಮಗಳಲ್ಲಿ ನ್ಯಾಯಾಂಗ, ಶೈಕ್ಷಣಿಕ, ಕಂದಾಯ, ಸಾರ್ವತ್ರಿಕ ಸೇವೆ ಮುಂತಾದ ಕಾರ್ಯಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದರು. ಜಾತಿ ವ್ಯವಸ್ಥೆಯೇ ಪ್ರಧಾನವಾಗಿದ್ದ ಅಂದಿನ ಕಾಲದಲ್ಲಿ ಈ ವರ್ತಕ ಸಂಘಗಳು ಸಹ ಅವುಗಳ ಪ್ರಭಾವಕ್ಕೆ ಒಳಗಾಗಿದ್ದವೆಂದು ತಿಳಿದುಬರುತ್ತದೆ.[೪೭]

## ೪.೨.೮. ಹಣಕಾಸು ವ್ಯವಸ್ಥೆ

ಬಹಮನಿ ಸಾಮ್ರಾಜ್ಯದಲ್ಲಿ ಸಾಮ್ರಾಜ್ಯಕ್ಕೆ ಬರತಕ್ಕ ಆದಾಯದ ಮೂಲಗಳ ಬಗ್ಗೆ ಹಾಗೂ ಯಾವ ಯಾವ ಬಾಬತ್ತುಗಳ ಮೇಲೆ ಖರ್ಚು ಮಾಡಬೇಕು ಎನ್ನುವುದರ ಬಗ್ಗೆಯೂ ಖಚಿತವಾದ ತೀರ್ಮಾನಗಳಿದ್ದವು. ಹಣಕಾಸಿನ ಆಡಳಿತ ವ್ಯವಸ್ಥೆಯು ದಕ್ಷ ಆಡಳಿತಗಾರರಿಂದ ನಿರ್ವಹಿಸಲ್ಪಡುತ್ತಿತ್ತು. ಈ ಹಣಕಾಸಿನ ಆಡಳಿತವು ಇಸ್ಲಾಮಿಕ್ ಕಾನೂನಿನ ಸಿದ್ಧಾಂತವನ್ನು ಆಧರಿಸಿ ಸ್ಥಳೀಯ ಸಂಪ್ರದಾಯಗಳನ್ನು ಅಳವಡಿಸಿಕೊಂಡು ರೂಪಿಸಲಾಗಿತ್ತು. ಇಸ್ಲಾಂ ಧರ್ಮದ ನ್ಯಾಯಶಾಸ್ತ್ರಜ್ಞರು ನ್ಯಾಯಯುತವಾದ ಆದಾಯದ ಮೂಲವನ್ನು ಎರಡು ಗುಂಪುಗಳನ್ನಾಗಿ ವಿಂಗಡಿಸಿ, ಮೊದಲನೆಯದಾಗಿ ಮುಸ್ಲಿಮರಿಂದ ರಾಜ್ಯವು ವ್ಯವಸ್ಥಿತ ಹಾಗೂ ಶಿಸ್ತಿನಿಂದ ವಸೂಲಿ ಮಾಡುತ್ತಿದ್ದ ಧಾರ್ಮಿಕ ಋಣ ಮತ್ತು ಈ ಸುಂಕವನ್ನು ಪ್ರತಿಯೊಬ್ಬ ಮುಸಲ್ಮಾನನು ತೆರಲೇಬೇಕಾಗಿತ್ತು. ಈ ತೆರಿಗೆಗಳನ್ನು ಉಷ್ರಿ ಮತ್ತು ಜಕಾತ್ ಎಂದು ಕರೆಯುತ್ತಿದ್ದರು. ಎರಡನೆಯದಾಗಿ ಆಡಳಿತ ನಿರ್ವಹಣೆಗೋಸ್ಕರ ಸಾಮ್ರಾಜ್ಯದಲ್ಲಿ ನೆಲೆಸಿದ್ದ ಪ್ರಜೆಗಳಿಂದ ವಸೂಲಿ ಮಾಡಲು ಖರಾಜ್, ಜಸಿಯಾ ಮತ್ತು ಇತರ ತೆರಿಗೆಗಳು ಜಾರಿಯಲ್ಲಿದ್ದವು.

'ಖುರಾನ್'ನಲ್ಲಿ ನಮೂದಿಸಿರುವಂತೆ ಜಕಾತ್ ತೆರಿಗೆಯು ಪ್ರತಿಯೊಬ್ಬ ಮುಸ್ಲಿಮನು ತನ್ನ ಆಸ್ತಿಯ ಮೇಲೆ ಸಲ್ಲಿಸಬೇಕಾಗಿದ್ದ ತೆರಿಗೆಯಾಗಿತ್ತು. ಇಸ್ಲಾಂ ಧರ್ಮದಲ್ಲಿ ನಂಬಿಕೆ ಇರುವವರು ತಮ್ಮ ಆಸ್ತಿಯಲ್ಲಿ ೧/೪೦ರಷ್ಟು ಭಾಗವನ್ನು ದಾನ ಕಾರ್ಯಗಳಿಗಾಗಿ ತೊಡಗಿಸಬೇಕಾಗಿತ್ತು. ಇಂತಹ ದಾನವನ್ನು ಹತ್ತಿರದ ಬಂಧುಗಳಿಗೂ ಹಾಗೂ ಅರ್ಹರಾದ ಬೇರೆಯವರಿಗೂ ಕೊಡಬೇಕಾಗಿತ್ತು. ಜಕಾತ್ ತೆರಿಗೆಯನ್ನು ವಸೂಲಿ ಮಾಡಲು ವ್ಯವಸ್ಥಿತ ಪದ್ಧತಿ ಇತ್ತು. ಪ್ರತಿಯೊಬ್ಬ ಮುಸ್ಲಿಮನು ಆತ್ಮವಂಚನೆಯನ್ನು ಮಾಡಿಕೊಳ್ಳದೆ ಈ ತೆರಿಗೆಯನ್ನು ತನ್ನ ಜವಾಬ್ದಾರಿಯೆಂದು ಪಾವತಿಸಬೇಕಾಗಿತ್ತು. ಜಕಾತ್ ತೆರಿಗೆಯನ್ನು ವಸ್ತುಗಳ ಮೇಲೂ ಸಹ ವಿಧಿಸಲಾಗುತ್ತಿತ್ತು, ಇವುಗಳಲ್ಲಿ ಆಮದು ಮತ್ತು ರಫ್ತಾಗುತ್ತಿದ್ದ ವಸ್ತುಗಳು ಸೇರಿರುತ್ತಿದ್ದವು. ವರ್ತಕರು ಆಮದು ಮಾಡಿಕೊಳ್ಳುತ್ತಿದ್ದ ಸರಕುಗಳ ಮೇಲೆ ೨.೫ ಪ್ರತಿಶತ ತೆರಿಗೆಯನ್ನು, ಕ್ರೈಸ್ತ ಮತ್ತು ಯಹೂದಿ ವ್ಯಾಪಾರಿಗಳು ೩.೫ ಪ್ರತಿಶತದಷ್ಟು ತೆರಿಗೆಯನ್ನು, ಹಿಂದೂಗಳು ೫ ಪ್ರತಿಶತದಷ್ಟು ತೆರಿಗೆಯನ್ನು ಜಕಾತ್ ರೂಪದಲ್ಲಿ ಕೊಡುತ್ತಿದ್ದರೆಂದು ತಿಳಿದುಬರುತ್ತದೆ.

ಉಷ್ರಿ ಮತ್ತು ಖರಾಜ್ ತೆರಿಗೆಗಳು ಭೂಮಿಗೆ ಸಂಬಂಧಪಟ್ಟ ತೆರಿಗೆಗಳಾಗಿದ್ದು ರಾಜ್ಯದ ಬೊಕ್ಕಸಕ್ಕೆ ಹೆಚ್ಚಿನ ಆದಾಯವನ್ನು ತಂದುಕೊಡುತ್ತಿದ್ದವು. ಉಷ್ರಿ ಭೂಮಿಯು ಸಾಮಾನ್ಯವಾಗಿ ಮುಸ್ಲಿಮರ ವಶದಲ್ಲಿದ್ದ ಭೂಮಿಯಾಗಿರುತ್ತಿತ್ತು. ಸುಲ್ತಾನರ ಅನುಮತಿಯನ್ನು ಪಡೆದು, ವ್ಯವಸಾಯಕ್ಕೊಳಪಡದೆ ಇದ್ದ ಭೂಮಿಯನ್ನು ಮುಸ್ಲಿಮರು ವ್ಯವಸಾಯಕ್ಕೆ ಒಳಪಡಿಸಿದರೆ ಅದನ್ನು ಉಷ್ರಿಯೆಂದು ಕರೆಯಲಾಗುತ್ತಿತ್ತು. ಈ ಉಷ್ರಿ ಭೂಮಿಯನ್ನು ಕಾನೂನುಬದ್ಧವಾಗಿ ವ್ಯವಸಾಯಕ್ಕೊಳಪಡಿಸಲು ಅನೇಕ ನಿಯಮಗಳನ್ನು ಪಾಲಿಸಬೇಕಾಗುತ್ತಿತ್ತು. ಖರಾಜ್ ಭೂಮಿಯನ್ನು ಯಾವುದೇ ಕಾರಣಕ್ಕೂ ಉಷ್ರಿ ಭೂಮಿಯನ್ನಾಗಿ ಪರಿವರ್ತಿಸಲು ಸಾಧ್ಯವಿರಲಿಲ್ಲ. ಈ ಭೂಮಿಯಿಂದ ಬರತಕ್ಕ ಆದಾಯವು ರಾಜ್ಯದ ಬೊಕ್ಕಸಕ್ಕೆ ಅಷ್ಟೇನೂ ಸಹಕಾರಿಯಾಗಿರಲಿಲ್ಲವೆಂದು ತಿಳಿದುಬರುತ್ತದೆ, ಏಕೆಂದರೆ ಉಷ್ರಿ ಭೂಮಿಯು ಮುಸ್ಲಿಂ ವಿದ್ವಾಂಸರ ಅಥವಾ ಧಾರ್ಮಿಕ ವ್ಯಕ್ತಿಗಳ ವಶದಲ್ಲಿದ್ದಂತಹ ಭೂಮಿಯಾಗಿದ್ದು, ಇವರಲ್ಲಿ ಕೆಲವರು ತೆರಿಗೆ ಸಲ್ಲಿಸುತ್ತಿದ್ದರು ಹಾಗೂ ಇನ್ನು ಕೆಲವರು ಸಲ್ಲಿಸುತ್ತಿರಲಿಲ್ಲ. ಮುಸ್ಲಿಮೇತರರು ಮತ್ತು ಮುಸ್ಲಿಮರು ಸಾಗುವಳಿ ಮಾಡುತ್ತಿದ್ದ ಭೂಮಿಗೆ ಕೊಡಬೇಕಾದ ತೆರಿಗೆಯನ್ನು ಖರಾಜ್ ಎಂದು ಕರೆಯುತ್ತಿದ್ದರು. ಸಾಮಾನ್ಯವಾಗಿ ಖರಾಜ್ ಭೂಮಿಯ ಮೇಲೆ ೧/೬ ಭಾಗದಷ್ಟು ಫಸಲಿನ ತೆರಿಗೆಯನ್ನು ವಸೂಲಿ ಮಾಡುತ್ತಿದ್ದು, ಇದರಿಂದ ರಾಜ್ಯಕ್ಕೆ ಹೆಚ್ಚಿನ ಆದಾಯ ಬರುತ್ತಿತ್ತು.

ಇಷ್ಟೆಲ್ಲಾ ತೆರಗೆಗಳ ಜೊತೆಗೆ ಬಹಮನಿ ರಾಜ್ಯದಲ್ಲಿ ಸುಲ್ತಾನರು ತಮಗೆ ಬೇಕೆನಿಸಿದಾಗ ಅಥವಾ ಆದಾಯದ ಕೊರತೆ ಉಂಟಾದಾಗ ಹೊಸ ತೆರಿಗೆಗಳನ್ನು ಪ್ರಜೆಗಳ ಮೇಲೆ ವಿಧಿಸುತ್ತಿದ್ದರು. ಈ ಹೊಸದಾಗಿ ಪ್ರಜೆಗಳ ಮೇಲೆ ಹಾಕುತ್ತಿದ್ದ ತೆರಿಗೆಗಳನ್ನು ಅಬ್‌ವಾಬ್ ಎಂದು ಕರೆಯುತ್ತಿದ್ದರು. ಸುಲ್ತಾನರ ಖಜಾನೆಗೆ ನಾಲ್ಕು ವಿಧದಲ್ಲಿ ಆದಾಯ ಬರುತ್ತಿತ್ತು, ಅವುಗಳೆಂದರೆ ಖಜಾನ–ಎ–ಅಮೀರ, ಖಜಾನ–ಎ–ಬಖಾಯ, ಖಜಾನ–ಎ–ಸಡಖಾತ್ ಮತ್ತು ಖಜಾನ–ಎ–ಜಿಜಿಯಾ. ಇಷ್ಟೇ ಅಲ್ಲದೆ ಸಂತಾನವಿಲ್ಲದೆ ಸತ್ತವರ ಹಾಗೂ ಉಯಿಲು ಬರದಿಡದೆ ಇದ್ದವರ ಆಸ್ತಿಯನ್ನು ಮುಟ್ಟುಗೋಲು ಹಾಕಿಕೊಳ್ಳಲು ಪ್ರತ್ಯೇಕ ಖಜಾನೆ ಇತ್ತು. ಖಜಾನ–ಎ–ಅಮೀರದಲ್ಲಿ ಎಲ್ಲಾ ಮೂಲಗಳಿಂದಲೂ ಬರುವ ಆದಾಯವನ್ನು ಸಂಗ್ರಹಿಸಲಾಗುತ್ತಿತ್ತು. ಖಜಾನ–ಎ–ಬಖಾಯದಲ್ಲಿ ಸುಲ್ತಾನರು ನೀಡಿದ್ದ ಸಾಲವನ್ನು ಹಿಂದಕ್ಕೆ ಪಡೆಯುವ ಹಣವನ್ನು ಸಂಗ್ರಹಿಸಲಾಗುತ್ತಿತ್ತು. ಖಜಾನ–ಎ–ಸಡಖಾತ್‌ನಲ್ಲಿ ಮುಸ್ಲಿಮರಿಂದ ವಸೂಲಿ ಮಾಡಿದ ಜಕಾತ್ ತೆರಿಗೆಯನ್ನು ಸಂಗ್ರಹಿಸಲಾಗುತ್ತಿತ್ತು. ಖಜಾನ–ಎ–ಜಿಜಿಯಾದಲ್ಲಿ ಜಸಿಯಾ ಕಂದಾಯವನ್ನು ವಸೂಲಿ ಮಾಡಿ ಶೇಖರಿಸಿಡಲಾಗುತ್ತಿತ್ತು. ಈ ಎಲ್ಲಾ ಸಂಗ್ರಹಿಸಿದ ಹಣವನ್ನು ಸಂದರ್ಭಕ್ಕನುಸಾರವಾಗಿ ರಾಜ್ಯದ ಆಡಳಿತ ಮತ್ತು ಅಭಿವೃದ್ಧಿಗೋಸ್ಕರ ಬಹಮನಿ ಸುಲ್ತಾನರು ಬಳಸಿಕೊಳ್ಳುತ್ತಿದ್ದರು.[೪೮]

### ೪.೨.೯. ನಾಣ್ಯಗಳು

ದಕ್ಷಿಣ ಭಾರತದಲ್ಲಿ ನಾಣ್ಯಗಳ ಚಲಾವಣೆಯ ಶ್ರೇಯಸ್ಸು ಬಹಮನಿ ಸುಲ್ತಾನರಿಗೆ ಸಲ್ಲುತ್ತದೆ. ಏಕೆಂದರೆ ನಾಣ್ಯ ಮುದ್ರಣ ಮತ್ತು ಚಲಾವಣೆಯನ್ನು ಬಹಮನಿ ಸುಲ್ತಾನರು ವ್ಯವಸ್ಥಿತವಾಗಿ ಜಾರಿಗೆ ತಂದಿದ್ದರು. ಗುಲ್ಬರ್ಗಾ, ಬೀದರ್ ಮತ್ತು ಫತೇಬಾದ್ ಬಹಮನಿ ಸುಲ್ತಾನರ ಪ್ರಮುಖ ನಾಣ್ಯ ಮುದ್ರಣ ಕೇಂದ್ರವಾಗಿದ್ದವು. ನಂತರದಲ್ಲಿ ಬಿಜಾಪುರವು ಪ್ರಮುಖ ನಾಣ್ಯ ಟಂಕಿಸುವ ಕೇಂದ್ರವಾಗಿ ಪ್ರಸಿದ್ಧಿ ಪಡೆಯಿತು. ಬಹಮನಿ ಸುಲ್ತಾನರ ಕಾಲದಲ್ಲಿ ತಾಮ್ರ, ಬೆಳ್ಳಿ ಮತ್ತು ಚಿನ್ನದ ನಾಣ್ಯಗಳು ಚಲಾವಣೆಯಲ್ಲಿದ್ದವೆಂದು ತಿಳಿದುಬರುತ್ತದೆ. ಈ ನಾಣ್ಯಗಳು ಬಹುಪಾಲು ದೆಹಲಿಯ ಸುಲ್ತಾನರ ನಾಣ್ಯಗಳ ಮಾದರಿಯನ್ನೇ ಅನುಕರಿಸಿ ಅಚ್ಚು ಹಾಕಲ್ಪಟ್ಟಿದ್ದವು. ಈ ಟಂಕಾಗಳು ಮಹಮ್ಮದ್ ಬಿನ್ ತುಘಲಕ್‌ನ ಕಾಲದ ದಿನಾರ್‌ದಷ್ಟೇ ತೂಕದ ನಾಣ್ಯಗಳಾಗಿದ್ದವು. ೧೭೦ರಿಂದ ೧೯೭ ಗ್ರೇನ್ ತೂಕದ ಚಿನ್ನದ ನಾಣ್ಯಗಳು, ಸುಮಾರು ೧೭೦ ಗ್ರೇನ್ ತೂಕದ ಬೆಳ್ಳಿ ಮತ್ತು ತಾಮ್ರದ ನಾಣ್ಯಗಳು ಸಾಮಾನ್ಯವಾಗಿ ಚಲಾವಣೆಯಲ್ಲಿದ್ದವು. ತಾಮ್ರದ ನಾಣ್ಯಗಳಲ್ಲಿ ಅತಿ ಹೆಚ್ಚಿನ ದರ ಮತ್ತು ತೂಕವಿದ್ದುದು ೨೪೯ ಗ್ರೇನ್ ಮತ್ತು ಅತಿ ಕಡಿಮೆ ದರ ಮತ್ತು ತೂಕವಿದ್ದುದು ೨೬ ಗ್ರೇನ್. ದುಂಡನೆಯ ಆಕಾರ ಹೊಂದಿದ್ದ ಈ ನಾಣ್ಯಗಳು ಎರಡೂ ಬದಿಗಳಲ್ಲಿ ಆಲೇಖಗಳನ್ನು ಹೊಂದಿರುತ್ತಿದ್ದವು. ಗುಲ್ಬರ್ಗಾದ ಅಹಸನಾಬಾದ್, ಬೀದರ್‌ನ ಮಹಮ್ಮದಾಬಾದ್ ಮತ್ತು ದೌಲತಾಬಾದ್‌ನ ಫತೇಬಾದ್ ಈ ಸ್ಥಳಗಳಲ್ಲಿ ನಾಣ್ಯಗಳ ಟಂಕಸಾಲೆಗಳಿದ್ದವು.

ಅಲ್ಲಾವುದ್ದೀನ್ ಹಸನ್ ಗಂಗೂ ಬಹಮನ್ ಷಾನ ನಾಣ್ಯಗಳು ಮೂರು ವಿವಿಧ ಗಾತ್ರಗಳಲ್ಲಿ ಟಂಕಿಸಲ್ಪಟ್ಟಿದ್ದವು. ಮುಂದೆ ಫಿರೋಜ್ ಷಾನು ಅತ್ಯಂತ ಸುಂದರವಾದ ನಾಣ್ಯಗಳನ್ನು ಅಚ್ಚು ಹಾಕಿಸಿದನೆಂದು ತಿಳಿದುಬರುತ್ತದೆ. ಬಹಮನಿ ಆಳ್ವಿಕೆಯ ಮಧ್ಯಮ ಅವಧಿಯಲ್ಲಿ ತಾಮ್ರ ನಾಣ್ಯಗಳೇ ಹೆಚ್ಚು ಚಲಾವಣೆಯಲ್ಲಿದ್ದುದಲ್ಲದೇ ಗ್ರಾಮಗಳ ಸಂತೆಗಳಲ್ಲಿಯೂ ಸಹ ತಾಮ್ರದ ನಾಣ್ಯಗಳದ್ದೇ ಜನಪ್ರಿಯತೆ ದ್ವಿಗುಣಗೊಂಡಿತ್ತು. ಮುಜಾಹಿದ್ ಷಾನ ಆಳ್ವಿಕೆಯ ಕಾಲದಲ್ಲಿ ಬೆಳ್ಳಿಯ ನಾಣ್ಯಗಳು ಚಲಾವಣೆಗೆ ಬಂದವೆಂದು, ಇವು ಭಾರತದಲ್ಲಿಯೇ ಅತ್ಯಂತ ಸುಂದರ ನಾಣ್ಯಗಳಾಗಿದ್ದವೆಂದು ಎಸ್.ಕೆ. ಸಿನ್ಹಾ ಬಣ್ಣಿಸಿದ್ದಾರೆ.[೪೯]

ದಖ್ಖನ್ ಸುಲ್ತಾನರು ನಾಣ್ಯಗಳಲ್ಲಿ ತಮ್ಮ ಹೆಸರು, ಬಿರುದುಗಳನ್ನು, ತಾವು ಸಿಂಹಾಸನಕ್ಕೆ ಬಂದ ತಾರೀಖನ್ನು ಮುಂತಾದ ಅಂಶಗಳನ್ನು ಮುದ್ರಿಸುತ್ತಿದ್ದರು. ಘಿಯಾಸುದ್ದೀನ್ ಸುಲ್ತಾನನು ಬೆಳ್ಳಿಯ ನಾಣ್ಯಗಳನ್ನು ಟಂಕಿಸಿದ್ದು, ಈಗ ಅವು ಹೈದರಾಬಾದಿನ ಸಂಗ್ರಹಾಲಯದಲ್ಲಿ ನೋಡಲು ಸಿಗುತ್ತವೆ. ಬೀದರ್‌ನ್ನು ರಾಜಧಾನಿಯಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದ ಮೊದಲ ಬಹಮನಿ ಸುಲ್ತಾನ ಅಹ್ಮದ್‌ಷಾ ಹೊರಡಿಸಿದ ತಾಮ್ರದ ನಾಣ್ಯದಲ್ಲಿ ಅಲ್–ಮುತಾವಕೀಲ್–ಅಲ್ಲಾಹಿ–ಉಲ್–ಘನಿ ಎಂದು ಮುದ್ರಿತವಾಗಿದ್ದರೆ, ಮತ್ತೊಂದೆಡೆ ಅಹ್ಮದ್‌ಷಾ ಇಬ್ನ್–ಇ–ಅಹ್ಮದ್‌ಷಾ, ಅಲ್–ವಲಿ–ಉಲ್–ಬಹಮನಿ ಎಂದು ಮುದ್ರಿತವಾಗಿತ್ತು. ಈ ಸುಲ್ತಾನನು ಹಿಂದೂ ಮತ್ತು ಮುಸ್ಲಿಮರಿಗೆ ಪ್ರಿಯವಾದ ಸುಲ್ತಾನನಾಗಿದ್ದನೆಂದು, ಉದಾರವಾದಿಯಾದ ಈತನನ್ನು ಹಿಂದೂಗಳು ಸಂತನೆಂದು ಗೌರವಿಸುತ್ತಿದ್ದರೆಂದು ಈ ನಾಣ್ಯಗಳ ಮೂಲಕ ತಿಳಿದುಬರುತ್ತದೆ.[೫೦]

ಮೊದಲ ಸುಲ್ತಾನನಾದ ಅಲ್ಲಾವುದ್ದೀನ್ ಬಹಮನ್ ಷಾನ ಬೆಳ್ಳಿಯ ನಾಣ್ಯದ ಹಿಮ್ಮುಖದಲ್ಲಿ ನಾಲ್ಕು ಸಾಲುಗಳಲ್ಲಿ ಅಸ್–ಸುಲ್ತಾ–ನೂಲ್–ಅಜಂ–ಅಲಾದದುನ್ಯಾವದ್ದಿನ್–ಅಬುಲ್–ಮುಜಫರ್–ಬಹಮನ–ಷಾ–ಅಸ–ಸುಲ್ತಾನ್ ಎಂದು ಉಲ್ಲೇಖಗಳು ಇವೆ. ಹುಮಾಯುನ್ ಸುಲ್ತಾನನು ಚಲಾವಣೆಗೆ ತಂದ ಎರಡು ವಿಧದ ಚಿನ್ನದ ಟಂಕಾಗಳಲ್ಲಿ ಒಂದು ಕಡೆ ಅಲ್–ಮುತವಕ್ಕಿಲ್–ಅಲೈಲ್ಲಾಹಿಲ್–ಖವಿಯಿಲ್–ಘನಿ–ಅಬ್ದುಲ್–ಮುಫಜಿ ಎಂದು ಮತ್ತೊಂದು ಕಡೆ ಅಲ್ಲಾವುದ್ದೀನ್–ಹುಮಾಯುನ್–ಷಾ–ಬಿನ್–ಅಹ್ಮದ್–ಅಲ್–ವಲಿಯಿಲ್–ಬಹಮನಿ ಎಂದು ಮುದ್ರಿಸಲಾಗಿತ್ತು. ಇಂತಹ ಹಲವಾರು ನಾಣ್ಯಗಳು ಇತ್ತೀಚೆಗೆ ದೊರೆತಿರುವುದಾಗಿ ತಿಳಿದುಬರುತ್ತದೆ.[೫೧]

**ಸಮಾರೋಪ**

ಬಹಮನಿ ಕಾಲದ ಅರ್ಥವ್ಯವಸ್ಥೆಯ ಮಜಲುಗಳನ್ನು ಗಮನಿಸಿದಾಗ ಅಂದಿನ ಕಾಲದ ಸಾಮಾಜಿಕ ಮತ್ತು ಆರ್ಥಿಕ ಜೀವನದಲ್ಲಿ ಸಾಕಷ್ಟು ಬದಲಾವಣೆಗಳು ಆಗಿರುವುದು ಕಂಡುಬರುತ್ತದೆ. ಅರ್ಥವ್ಯವಸ್ಥೆಯ ಪ್ರಮುಖ ಜೀವನಾಧಾರವಾಗಿದ್ದ ಕೃಷಿಯು ಅಂದಿನ ರಾಜ್ಯದ ಆರ್ಥಿಕತೆಯ ಮೇಲೆ ಪ್ರಭಾವ ಬೀರಿತ್ತು. ಬಹಮನಿ ಸಾಮ್ರಾಜ್ಯವು ವಿಜಯನಗರ ಸಾಮ್ರಾಜ್ಯದಷ್ಟು ಆರ್ಥಿಕವಾಗಿ ಸಂಪದ್ಭರಿತವಾಗಿರಲಿಲ್ಲದಿದ್ದರೂ, ಬಹಮನಿ ಸಾಮ್ರಾಜ್ಯದಲ್ಲಿ ಜನಜೀವನವು ಸಾಮಾನ್ಯವಾಗಿ ಮತ್ತು ಸಹನೀಯವಾಗಿಯೂ ಇದ್ದಿತ್ತೆಂದು ಹೇಳಬಹುದು. ಇತಿಹಾಸಕಾರರ ಪ್ರಕಾರ ಬಹಮನಿ ರಾಜ್ಯದಲ್ಲಿ ಬಡವ ಮತ್ತು ಶ್ರೀಮಂತರ ನಡುವಿನ ಅಂತರವು ತೀವ್ರವಾಗಿತ್ತೆಂದು ತಿಳಿದುಬರುತ್ತದೆ.

ಸಮಾಜದ ಕೆಳವರ್ಗದಲ್ಲಿ ರೈತರು, ಕೂಲಿಕಾರರು, ಶಿಲ್ಪಗಾರರು ಮೊದಲಾದವರಿದ್ದು, ಇವರ ಆರ್ಥಿಕ ಸ್ಥಿತಿಗತಿಯು ತುಂಬಾ ಶೋಚನೀಯವಾಗಿತ್ತು. ಅದೇ ರೀತಿ ರಾಜ್ಯದ ಬೆನ್ನೆಲುಬಾಗಿದ್ದ ರೈತನ ಸ್ಥಿತಿಯಲ್ಲಿಯೂ ಯಾವುದೇ ವ್ಯತ್ಯಾಸಗಳು ಇರಲಿಲ್ಲ. ಕೃಷಿ ವ್ಯವಸ್ಥೆಯಲ್ಲಿ ನೀರಾವರಿ ವ್ಯವಸ್ಥೆಯು ಪ್ರಮುಖವಾಗಿದ್ದು, ಬಹಮನಿ ಸುಲ್ತಾನರು ನೀರಾವರಿ ವ್ಯವಸ್ಥೆಯ ಸುಧಾರಣೆಗಾಗಿ ಅನೇಕ ಕಾರ್ಯಗಳನ್ನು ಕೈಗೊಂಡಿರುವುದು ಕಂಡುಬರುತ್ತದೆ. ಕೃಷಿ ಪ್ರಾಣಿಗಳಲ್ಲಿ ನಾವು ಹಸು, ಕುರಿ, ಮೇಕೆ, ಹಂದಿ, ಎಮ್ಮೆ ಹಾಗೂ ಹೈನು ಉತ್ಪಾದನೆಯ ಪ್ರಾಣಿಗಳನ್ನು ಅಂದಿನ ಜನರು ಸಾಕುತ್ತಿದ್ದುದು ಕಾಣಬಹುದು. ಇದೇ ರೀತಿ ಬಹಮನಿ ಸುಲ್ತಾನರು ಅಲ್ಲಲ್ಲಿ ಹರಿಯುವ ನದಿಗಳಿಗೆ ಚಿಕ್ಕ ಚಿಕ್ಕ ಆಣೆಕಟ್ಟುಗಳನ್ನು ನಿರ್ಮಿಸಿ ವ್ಯವಸಾಯಕ್ಕೋಸ್ಕರ ನೀರಿನ ಬಳಕೆಯನ್ನು ವ್ಯವಸ್ಥಿತಗೊಳಿಸಿದರು. ದಖ್ಖನ್ ಪ್ರಾಂತ್ಯದಲ್ಲಿ ಪ್ರಥಮವಾಗಿ ಕಾಲುವೆ ನೀರಾವರಿ ಪದ್ಧತಿಯನ್ನು ಬಹಮನಿ ಸುಲ್ತಾನರು ಜಾರಿಗೆ ತಂದರೆಂದು ತಿಳಿದು ಬರುತ್ತದೆ.

ಕೃಷಿ ಕಾರ್ಮಿಕರಲ್ಲಿ ಪ್ರಮುಖ ಪಂಗಡಗಳಾದ ಶೂದ್ರರು, ಗೌಡರು, ಒಕ್ಕಲಿಗರು, ಹೊಲೆಯರು ಮತ್ತು ಇತರ ಕೆಳ ಉಪಜಾತಿಗಳ ಜನರು ಪ್ರಮುಖರಾಗಿದ್ದರು. ಭೂಮಾಲೀಕರಲ್ಲಿ ಮಹಾಜನರು, ಪೆರ್ಗಡೆಗಳು, ಗಾವುಂಡರು, ಪ್ರಭುಗಾವುಂಡರು ಮುಂತಾದವರು ಸುಲ್ತಾನರ ಮತ್ತು ರೈತರ ನಡುವೆ ಮಧ್ಯವರ್ತಿಗಳಾಗಿ ಕಾರ್ಯನಿರ್ವಹಿಸುತ್ತಿದ್ದರು. ಸುಲ್ತಾನರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಭೂಮಿಯ ಅಳತೆ ಮಾಡಿ ನಂತರ ತೆರಿಗೆಯನ್ನು ನಿಗಧಿಪಡಿಸುತ್ತಿದ್ದರು. ಬಹಮನಿ ಕಾಲದ ಕಂದಾಯ ವ್ಯವಸ್ಥೆಯು ದೆಲ್ಲಿ ಸುಲ್ತಾನರ ಕಂದಾಯ ನೀತಿಯನ್ನು ಅನುಸರಿಸಿರುವುದು ಅಧ್ಯಾಯದಿಂದ ತಿಳಿಯಬಹುದು. ನಗರೀಕರಣ, ನಗರಗಳ ಬೆಳವಣಿಗೆ, ವ್ಯಾಪಾರ, ವಾಣಿಜ್ಯ, ಹಣಕಾರು ಮುಂತಾದ ಕ್ಷೇತ್ರಗಳಲ್ಲಾದ ಬೆಳವಣಿಗೆಗಳು ರಾಜ್ಯದ ಆರ್ಥಿಕ ಸ್ಥಿತಿಗತಿಗಳನ್ನು ಸುಧಾರಿಸಿರುವುದು ಕಂಡುಬರುತ್ತದೆ. ನಗರಗಳ ಬೆಳವಣಿಗೆಗಳು ಬಹಮನಿ ರಾಜ್ಯದ ರಾಜಕೀಯ ಮತ್ತು ಆರ್ಥಿಕ ಸ್ಥಿರತೆಗೆ ಮೂಲ ಕಾರಣವಾಗಿತ್ತು.

ಒಟ್ಟಾರೆಯಾಗಿ ಹೇಳಬೇಕೆಂದರೆ ಕೃಷಿ ವ್ಯವಸ್ಥೆ, ನೀರಾವರಿ ವ್ಯವಸ್ಥೆ, ಕೃಷಿ ಕಾರ್ಮಿಕರು, ಭೂಮಾಲೀಕರು, ಭೂಕಂದಾಯ, ವ್ಯಾಪಾರ ಮತ್ತು ವಾಣಿಜ್ಯ, ಕೈಗಾರಿಕೆಗಳು, ಮಧ್ಯವರ್ತಿಗಳು ಹಾಗೂ ದಲ್ಲಾಳಿಗಳು, ವರ್ತಕ ಸಂಘಗಳು, ಈ ಎಲ್ಲಾ ಮಜಲುಗಳಲ್ಲಿಯೂ ಬಹಮನಿ ರಾಜ್ಯದಲ್ಲಿ ಗ್ರಾಮೀಣ ಮತ್ತು ನಗರ ಆರ್ಥಿಕ ವ್ಯವಸ್ಥೆಗಳು ಸಮ್ಮಿಳಿತವಾಗಿ ಅಭಿವೃದ್ಧಿಗೊಂಡಿರುವುದನ್ನು ನಾವು ಪ್ರಸ್ತುತ ಅಧ್ಯಾಯದಲ್ಲಿ ಕಾಣಬಹುದು.

**ಕೊನೆ ಟಿಪ್ಪಣಿಗಳು**


೧. Jan S. Prybyla, Comparative Economic System, Meredith Corporation Ltd., New York, 2007, P.9.

೨. ಕೆ.ಎಸ್. ಶಿವಣ್ಣ, ಮಧ್ಯಕಾಲೀನ ಭಾರತದ ಆರ್ಥಿಕ ಇತಿಹಾಸ, ಇತಿಹಾಸ ಲೋಕ, ಮೈಸೂರು, ಪುಟ ೨೪೦.

೩. ಪಿ.ಆರ್. ಮಜುಮದಾರ್, ಭಾರದ್ವಜ್, ಆರ್.ಸಿ. ಚೌಧರಿ, ದಕ್ಷಿಣ ಭಾರತದ ಇತಿಹಾಸ, ಚೇತನ ಬುಕ್ ಹೌಸ್, ಮೈಸೂರು, ೧೯೯೯, ಪುಟ ೧೫೭.

೪. Alan Machado, Saraswati's Children-A History of the Mangalorean Christians I.J.A. Publications, Bangalore, p.44.

೫. ಬಿ. ಷೇಕ್ ಅಲಿ, ಕರ್ನಾಟಕ ಚರಿತ್ರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಸಂಪುಟ–೪, ೧೯೯೭, ಪು. ೨೧೧.

೬. ಪಿ.ಆರ್.ಮಜುಮದಾರ್, ಭಾರದ್ವಜ್, ಆರ್.ಸಿ. ಚೌಧರಿ, ದಕ್ಷಿಣ ಭಾರತದ ಇತಿಹಾಸ, ಚೇತನ ಬುಕ್ ಹೌಸ್, ಮೈಸೂರು, ೧೯೯೯, ಪುಟ ೧೫೭.

೭. ಬಿ. ಷೇಕ್ ಅಲಿ, ಕರ್ನಾಟಕ ಚರಿತ್ರೆ, ಸಂಪುಟ ೪, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಸಂಪುಟ–೪, ೧೯೯೭, ಪು. ೧೫೩.

೮. ಯು.ಎನ್. ಘೋಷಾಲ್(ಮೂಲ), ನೀಲತ್ತಹಳ್ಳಿ ಕಸ್ತೂರಿ(ಅನು), ಭಾಗ ೨, ಸಂಪುಟ ೧೨, ದೆಹಲಿ ಸುಲ್ತಾನರ ಆದಿಪತ್ಯ, ಭಾರತೀಯ ವಿದ್ಯಾಭವನ, ಬೆಂಗಳೂರು, ೨೦೦೧, ಪುಟ ೨೪೮.

೯. ಬಿ. ಷೇಕ್ ಅಲಿ, ಕರ್ನಾಟಕ ಚರಿತ್ರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಸಂಪುಟ–೪, ೧೯೯೭, ಪು. ೧೫೬.

೧೦. Salma Ahmed Farooqui, A Comprehensive History of the Mangalorean Christians. I.J.A.Publications, Bangalore, p.44.

೧೧. ಬಿ. ಷೇಕ್ ಅಲಿ, ಕರ್ನಾಟಕ ಚರಿತ್ರೆ, ಸಂಪುಟ ೪, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಸಂಪುಟ-೪, ೧೯೯೭, ಪು. ೧೫೩.

೧೨. ಬಿ. ಷೇಕ್ ಅಲಿ, ಕರ್ನಾಟಕ ಚರಿತ್ರೆ, ಸಂಪುಟ ೪, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಸಂಪುಟ-೪, ೧೯೯೭, ಪು. ೧೫೮.

೧೩. Saki.,Making History" Karnataks's People and their Past, Vol.I, Stone Age to Mercantilism, Vimukthi Prakashana, Bangalore,1998. P.309.

೧೪. ಬಿ. ಷೇಕ್ ಅಲಿ, ಕರ್ನಾಟಕ ಚರಿತ್ರೆ, ಸಂಪುಟ ೪, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಸಂಪುಟ-೪, ೧೯೯೭, ಪು. ೧೬೨-೧೬೩.

೧೫. ದೇವರಕೊಂಡರೆಡ್ಡಿ ಮತ್ತು ಹನಮಾಕ್ಷಿಗೋಗಿ, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ -೮, ಬೀದರ್ ಜಿಲ್ಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬, ಪುಟ ೧೩೦.

೧೬. Water Harvesting our Age Old Tradition. Public Health Engineering Department, Meghalaya, 2007-08, p.5.

೧೭. ಬಿ. ಷೇಕ್ ಅಲಿ, ಕರ್ನಾಟಕ ಚರಿತ್ರೆ, ಸಂಪುಟ ೪, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಸಂಪುಟ-೪, ೧೯೯೭, ಪುಟ ೧೬೪

೧೮. ಬಿ. ಷೇಕ್ ಅಲಿ, ಕರ್ನಾಟಕ ಚರಿತ್ರೆ, ಸಂಪುಟ ೪, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಸಂಪುಟ-೪, ೧೯೯೭, ಪುಟ ೧೬೫.

೧೯. ಪಿ.ಆರ್. ಮಜುಮದಾರ್, ಭಾರದ್ವಜ್, ಆರ್.ಸಿ. ಚೌಧರಿ, ದಕ್ಷಿಣ ಭಾರತದ ಇತಿಹಾಸ, ಚೇತನ ಬುಕ್ ಹೌಸ್, ಮೈಸೂರು, ೧೯೯೯, ಪುಟ ೧೫೭.

೨೦. ರಾಜಾರಾಮ ಹೆಗಡೆ, 'ಭಾರತೀಯ ಇತಿಹಾಸ, ಸಮಾಜ ಮತ್ತು ಸಂಸ್ಕೃತಿ' ಕರ್ನಾಟಕ ಸಾಹಿತ್ಯ ಆಕಾಡೆಮಿ, ಬೆಂಗಳೂರು. ೨೦೧೨, ಪು. ೧೯೭.

೨೧. ಕೆ.ಎಸ್. ಶಿವಣ್ಣ, ಮಧ್ಯಕಾಲೀನ ಭಾರತದ ಆರ್ಥಿಕ ಇತಿಹಾಸ, ಇತಿಹಾಸ ಲೋಕ, ಮೈಸೂರು, ಪು.೫

೨೨. ಬಿ. ಷೇಕ್ ಅಲಿ, ಕರ್ನಾಟಕ ಚರಿತ್ರೆ, ಸಂಪುಟ ೪, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಸಂಪುಟ-೪, ೧೯೯೭, ಪು. ೨೧೨.

೨೩. ಬಿ. ಷೇಕ್ ಅಲಿ, ಕರ್ನಾಟಕ ಚರಿತ್ರೆ, ಸಂಪುಟ ೪, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಸಂಪುಟ-೪, ೧೯೯೭, ಪು. ೨೧೩.

೨೪. ಕನ್ನಡ ವಿಷಯ ವಿಶ್ವಕೋಶ, ಸಂಪುಟ.೨, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ಪು. ೩೯೫.

೮. ಯು.ಎನ್. ಘೋಷಾಲ್(ಮೂಲ), ನೀಲತ್ತಹಳ್ಳಿ ಕಸ್ತೂರಿ(ಅನು), ಭಾಗ ೨, ಸಂಪುಟ ೧೨, ದೆಹಲಿ ಸುಲ್ತಾನರ ಆದಿಪತ್ಯ, ಭಾರತೀಯ ವಿದ್ಯಾಭವನ, ಬೆಂಗಳೂರು, ೨೦೦೧, ಪುಟ ೩೧೧.

೨೬. Count Wielhorski, Nititin of Twer Voyage to India, Paranthesis Publications, Cambridge, U.K, 1857, p 4-16.

೨೭. Namdev Shri Jadhav, History and Culture of Bidar 1400 to 1948.A.Study Ph.D.Thesis in History, Gulbarga University, Gulbarga, p.164-173.

೨೮. P.M.Joshi, Economic and Social Conditions Under the Bahamanis. History of the Medieval Deccan, Vol.I,Hyderabad, 1973, pp.209.213.

೨೯. Tarun Gupta Iitian, Indian Under the Mughal Empire-Growth of Trade. https://tarunguptaiitian. Wordpress.com

೩೦. ಯು.ಎನ್. ಘೋಷಾಲ್(ಮೂಲ), ನೀಲತ್ತಹಳ್ಳಿ ಕಸ್ತೂರಿ(ಅನು), ಭಾಗ ೨, ಸಂಪುಟ ೧೨, ದೆಹಲಿ ಸುಲ್ತಾನರ ಆದಿಪತ್ಯ, ಭಾರತೀಯ ವಿದ್ಯಾಭವನ, ಬೆಂಗಳೂರು, ೨೦೦೧, ಪುಟ ೨೭೯, ೨೯೮.

೩೧. ಕನ್ನಡ ವಿಷಯ ವಿಶ್ವಕೋಶ, ಸಂಪುಟ. ೨, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ಪುಟ ೩೯೪.

೩೨. ಯು.ಎನ್. ಘೋಷಾಲ್(ಮೂಲ), ನೀಲತ್ತಹಳ್ಳಿ ಕಸ್ತೂರಿ(ಅನು), ಭಾಗ ೨, ಸಂಪುಟ ೧೨, ದೆಹಲಿ ಸುಲ್ತಾನರ ಆದಿಪತ್ಯ, ಭಾರತೀಯ ವಿದ್ಯಾಭವನ, ಬೆಂಗಳೂರು, ೨೦೦೧, ಪುಟ ೨೭೦.

೩೩. ಬಿ. ಷೇಕ್ ಅಲಿ, ಕರ್ನಾಟಕ ಚರಿತ್ರೆ, ಸಂಪುಟ ೪, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಸಂಪುಟ-೪, ೧೯೯೭, ಪು. ೨೧೨.

೩೪. Vipul Singh, Intterpreting Medieval India: Early medieval, Delhi Sultanate,And regions(cira 750-1550).McMillan Publisherd India Pvt.Ltd., 2008, New Delhi, p 335.

೩೫. ಕನ್ನಡ ವಿಷಯ ವಿಶ್ವಕೋಶ, ಸಂಪುಟ. ೨, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ಪು. ೩೯೪.

೩೬. S.K. Sinha: Medieval History of the Deccan. Government of Andhra Pradesh,Vol, I, 1964, P-153.

೩೭. Travels of Athanasius Nikitin of Tver included in Major, India in the Fifteenth Century, Hakluyt Society, London,1857, pp.8-30.

೩೮. Mansel Longworth Dames: The Book of Duarte Barbosa, Asian Educaional Services, New Delhi, 1989, pp 170-180.

೩೯. ಬಿ. ಷೇಕ್ ಅಲಿ, ಕರ್ನಾಟಕ ಚರಿತ್ರೆ, ಸಂಪುಟ ೪, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಸಂಪುಟ-೪, ೧೯೯೭, ಪುಟ ೨೧೮.

೪೦. R.S.Chaurasia, History of Medieval India, Atlantic Publishers, New Delhi, 2002,pp-99-106.

೪೧. Count Wielhorski, Nititin of Twer Voyage to India, Paranthesis Publications, Cambridge, U.K, 1857, p 4-16.

೪೨. ಬಿ. ಷೇಕ್ ಅಲಿ, ಕರ್ನಾಟಕ ಚರಿತ್ರೆ, ಸಂಪುಟ ೪, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಸಂಪುಟ-೪, ೧೯೯೭, ಪುಟ ೨೧೯.

೪೩. ಪಿ.ಆರ್. ಮಜುಮ್‌ದಾರ್, ಆರ್. ಭಾರದ್ವಜ್, ಆರ್.ಸಿ. ಚೌಧರಿ, ದಕ್ಷಿಣ ಭಾರತದ ಇತಿಹಾಸ, ಚೇತನ ಬುಕ್ ಹೌಸ್, ಮೈಸೂರು, ೧೯೯೯, ಪುಟ ೧೫೭-೧೫೮.

೪೪. D.P. Chattopadhyaya, Economic History of Medieval India, Dorling Kindersley India Pvt.Ltd., New Delhi, 1987, p.126-138.

೪೫. ಯು.ಎನ್. ಘೋಷಾಲ್(ಮೂಲ), ನೀಲತ್ತಹಳ್ಳಿ ಕಸ್ತೂರಿ(ಅನು), ಭಾಗ ೨, ಸಂಪುಟ ೧೨, ದೆಹಲಿ ಸುಲ್ತಾನರ ಆದಿಪತ್ಯ, ಭಾರತೀಯ ವಿದ್ಯಾಭವನ, ಬೆಂಗಳೂರು, ೨೦೦೧, ಪುಟ ೩೦೮-೩೦೯.

೪೬. ಬಿ. ಷೇಕ್ ಅಲಿ, ಕರ್ನಾಟಕ ಚರಿತ್ರೆ, ಸಂಪುಟ ೪, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಸಂಪುಟ-೪, ೧೯೯೭, ಪುಟ ೨೨೦.

೪೭. ಕೆ.ಜಿ. ವಸಂತಮಾಧವ, ೧೭ ವಿಜಯನಗರ ಅರಸರ ಸಾಗರೋತ್ತರ ವ್ಯಾಪಾರ ಒಂದು ಅಧ್ಯಯನ ವಿಜಯನಗರ ಅಧ್ಯಯನ-ಸಂಪುಟ-೦೬, ೨೦೦೦, ಪು. ೧೦೪-೧೦೫.

೪೮. ಕೆ.ಎಸ್. ಶಿವಣ್ಣ, ಮಧ್ಯಕಾಲೀನ ಭಾರತದ ಆರ್ಥಿಕ ಇತಿಹಾಸ, ಇತಿಹಾಸ ಲೋಕ, ಮೈಸೂರು, ಪು-೨೪೦-೨೪೫.

೪೯. S.K.Sinha, Medieval History of the Deccan, Government of Andhra Pradesh,1964,Vol.I, p 153.

೫೦. Mohammad Abdul Wali Khan, Bahmani Coin the Andhra Pradesh Government Museum, Hyderabad, Government of Andhra Pradesh,1964.P.5.

೫೧. ಕನ್ನಡ ವಿಷಯ ವಿಶ್ವಕೋಶ, ಸಂಪುಟ-೩, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ಪು. ೩೯೯.

ಅಧ್ಯಾಯ–ಐದು

# ಬಹಮನಿ ಮತ್ತು ವಿಜಯನಗರಗಳ ನಡುವಿನ ರಾಜಕೀಯ ಹಾಗೂ ಸಾಂಸ್ಕೃತಿಕ ಸಂಬಂಧಗಳು

## ಅಧ್ಯಾಯ–೫

# ಬಹಮನಿ ಮತ್ತು ವಿಜಯನಗರಗಳ ನಡುವಿನ ರಾಜಕೀಯ ಹಾಗೂ ಸಾಂಸ್ಕೃತಿಕ ಸಂಬಂಧಗಳು

### ಪ್ರಸ್ತಾವನೆ

ಬಹಮನಿ ಸಾಮ್ರಾಜ್ಯದ ಸ್ಥಾಪನೆಯು ದಖ್ಖನ್ ಪ್ರದೇಶದಲ್ಲಿ ಮುಸ್ಲಿಂ ಸಂಸ್ಕೃತಿಯೊಂದರ ಹುಟ್ಟಿಗೆ ಕಾರಣವಾಯಿತು. ಸ್ಥಳೀಯ ಮುಸ್ಲಿಮೇತರ ಅರಸುಮನೆತನಗಳ ನೆರವನ್ನು ಪಡೆದು ಮಧ್ಯಕಾಲೀನ ಯುಗದಲ್ಲಿ ಕರ್ನಾಟಕದ ದಖ್ಖನ್ ಪ್ರದೇಶದಲ್ಲಿ ಪ್ರಥಮ ಮುಸ್ಲಿಂ ಸಾಮ್ರಾಜ್ಯವಾದ ಬಹಮನಿ ಸಾಮ್ರಾಜ್ಯವನ್ನು ಸ್ಥಾಪಿಸಲಾಯಿತು. ಇದು ಹಿಂದೂ–ಮುಸ್ಲಿಂ ಸಾಮರಸ್ಯದ ಕೇಂದ್ರ ಬಿಂದುವಾಯಿತು. ಸಮಕಾಲೀನ ರಾಜ್ಯಗಳಾದ ಬಹಮನಿ ಮತ್ತು ವಿಜಯನಗರ ಸಾಮ್ರಾಜ್ಯಗಳು ಹದಿಮೂರನೇ ಶತಮಾನದಲ್ಲಿ ಅಸ್ತಿತ್ವಕ್ಕೆ ಬಂದವು. ಅಲ್ಲಾವುದ್ದೀನ್ ಖಿಲ್ಜಿಯ ದಂಡಯಾತ್ರೆಯ ಪರಿಣಾಮವಾಗಿ ದಕ್ಷಿಣದಲ್ಲಿ ಹಿಂದೂ ಸಾಮ್ರಾಜ್ಯವಾದ ವಿಜಯನಗರ ಸಾಮ್ರಾಜ್ಯವು ಮತ್ತು ಮುಸ್ಲಿಂ ಸಾಮ್ರಾಜ್ಯವಾದ ದಖ್ಖನ್ನಿನ ಬಹಮನಿ ಸಾಮ್ರಾಜ್ಯವು ಒಂದೇ ಕಾಲದಲ್ಲಿ ಸ್ಥಾಪನೆಯಾದವು. ಈ ಎರಡೂ ಸಾಮ್ರಾಜ್ಯಗಳು ಅನೇಕ ಸಾಮಾಜಿಕ ಮತ್ತು ಆರ್ಥಿಕ ಸಾಮರಸ್ಯವನ್ನು ಹೊಂದಿದ್ದವು.

### ೫.೧. ಬಹಮನಿ ಮತ್ತು ವಿಜಯನಗರಗಳ ನಡುವಿನ ರಾಜಕೀಯ ಸಂಬಂಧಗಳು

ಇತಿಹಾಸದ ಪ್ರಕಾರ ಬಹಮನಿ ರಾಜ್ಯದ ಮುಖ್ಯ ಲಕ್ಷಣಗಳಲ್ಲೊಂದೆಂದರೆ ವಿಜಯನಗರ ಸಾಮ್ರಾಜ್ಯದೊಂದಿಗೆ ನಿರಂತರವಾದ ಘರ್ಷಣೆ. ಬಹಮನಿ ಸಾಮ್ರಾಜ್ಯವು ೧೩೪೭ರಲ್ಲಿ ಎಂದರೆ ವಿಜಯನಗರವು ಸ್ಥಾಪನೆಯಾದ ೧೧ ವರ್ಷಗಳ ನಂತರ ಸ್ಥಾಪಿತವಾಯಿತು. ಗುಲ್ಬರ್ಗಾ ಬಹಮನಿಯರ ಮೊದಲನೇ ರಾಜಧಾನಿಯಾಗಿತ್ತು. ಮೊದಲನೆಯ ಸುಲ್ತಾನ ಅಲ್ಲಾವುದ್ದೀನ್ ಗುಲ್ಬರ್ಗಾದಲ್ಲಿ ರಾಜ್ಯಭಾರ ಮಾಡುವ ಸಮಯದಲ್ಲಿ ವಿಜಯನಗರದಲ್ಲಿ ಮೊದಲನೇ ಹರಿಹರನು ರಾಜ್ಯವಾಳುತ್ತಿದ್ದನು. ಮಹಮ್ಮದ್ ಬಿನ್ ತುಘಲಕ್‌ನು ಗೆದ್ದುಕೊಂಡಿದ್ದ ತನ್ನ ರಾಜ್ಯವನ್ನು ಮರಳಿ ಸಂಪಾದಿಸಲು ಹರಿಹರನು ಮಲಪ್ರಭಾ ನದಿಯ ಉತ್ತರಕ್ಕೆ ಇರುವ ಕಲಡಗಿ ಜಿಲ್ಲೆಯವರೆಗೂ ಅರಸನಾದನು. ಮೊದಲನೇ ಬುಕ್ಕನ ಆಳ್ವಿಕೆಯಲ್ಲಿ ಕೃಷ್ಣಾ ನದಿಯ ದಕ್ಷಿಣಕ್ಕೆ ಬಹು ಭಾಗವು ಕೆನರಾ ಕರಾವಳಿಯೊಂದಿಗೆ ವಿಜಯನಗರದ ಆಳ್ವಿಕೆಯಡಿಯಲ್ಲಿ ಬಂದಿತು. ಸುಲ್ತಾನ್ ಮಹಮ್ಮದ್‌ಷಾನು ಒಂದು ಗಾಯಕ ತಂಡದ ಕಾರ್ಯಕ್ರಮವನ್ನು ಆಲಿಸಿ ಸಂತುಷ್ಟನಾಗಿ ಗಾಯಕ ತಂಡವರಿಗೆ "ವಿಜಯನಗರದ ರಾಯನ ಕೋಶದ ಮೇಲೆ ಒಂದು ಹುಂಡಿಯನ್ನು ಪ್ರೋತ್ಸಾಹಕವಾಗಿ ನೀಡಿದನು". ಇದು ಉದ್ದೇಶಪೂರ್ವಕವಾಗಿ ಬುಕ್ಕನಿಗೆ ಮಾಡಿದ ಅಪಮಾನವಾಗಿತ್ತು.[೧]

ಸಂಗಮ ಮನೆತನದ ಆರಂಭದ ವಿಜಯನಗರ ಅರಸರು ಗುಲ್ಬರ್ಗಾದ ಬಹಮನಿಯ ಮುಸ್ಲಿಂ ರಾಜರೊಂದಿಗೆ ಸತತ ಸಂಘರ್ಷದಲ್ಲಿ ತೊಡಗಿದ್ದರು. ಈ ಬಹಮನಿ ಸಂಸ್ಥಾನವನ್ನು ಸಹ ಕ್ರಿ.ಶ.೧೩೪೦ರ ಅವಧಿಯಲ್ಲಿ ಸ್ಥಾಪಿಸಲಾಗಿತ್ತು. ಇದು ವಿಜಯನಗರಕ್ಕೆ ಅಂಟಿಕೊಂಡಂತೆ ಇದ್ದುದರಿಂದ ಅಲ್ಲಿಂದ ಸಾಕಷ್ಟು ಕಿರುಕುಳವನ್ನು ವಿಜಯನಗರ ಎದುರಿಸಬೇಕಾಗಿತ್ತು. ವಿಜಯನಗರದ ಒಟ್ಟು ೧೪ ಅರಸರು ಹಾಗೂ ಬಹಮನಿಯ ಒಟ್ಟು ೧೩ ಸುಲ್ತಾನರ ನಡುವೆ ವಿವಿಧ ಕಾಲಘಟ್ಟದಲ್ಲಿ ಸುಮಾರು ೧೩೦ ವರ್ಷಗಳ ಅವಧಿಯಲ್ಲಿ ೧೧ ಯುದ್ಧಗಳು ನಡೆದವು. ಒಂದು ಕಡೆ ಮುಸ್ಲಿಂ ಆಕ್ರಮಣಕಾರರು ವಿಜಯನಗರವನ್ನು ಲೂಟಿ ಮಾಡಲು ಯತ್ನಿಸುತ್ತಿದ್ದರೆ, ಮತ್ತೊಂದು ಕಡೆ ಅವರ ದಾಳಿ ತಡೆದು ಹಿಂದೂ ಸಾಮ್ರಾಜ್ಯವನ್ನು ರಕ್ಷಿಸಲು ವಿಜಯನಗರದ ಅರಸರು ಶ್ರಮಿಸುತ್ತಿದ್ದರು. ಕೆಲವು ವೇಳೆ ಬಹಮನಿ ಸುಲ್ತಾನರು ವಿಜಯನಗರದ ಅರಸರನ್ನು ಸೋಲಿಸಿದರೂ ಅದನ್ನು ಸಂಪೂರ್ಣವಾಗಿ ತಮ್ಮ ತೆಕ್ಕಗೆ ತೆಗೆದುಕೊಳ್ಳುವುದು ಇರಲಿ, ಅದರ ರಾಜಧಾನಿಯನ್ನು ಮುಟ್ಟಲಾಗಲಿಲ್ಲ.[೨]

### ೫.೧.೧. ಒಂದನೆಯ ಬಹಮನಿ ಯುದ್ಧ(ಕ್ರಿ.ಶ. ೧೩೬೫)

ಕ್ರಿ.ಶ.೧೩೫೮ರಲ್ಲಿ ಒಂದನೇಯ ಮಹಮ್ಮದ್ ಷಾಹ್ ಬಹಮನಿ ಸಿಂಹಾಸನ ಏರಿದ. ಅದರೆ ಸಿಂಹಾಸನದ ಮೇಲಿನ ಅವನ ಸ್ಥಾನ ಸಾಕಷ್ಟು ಭದ್ರವಾಗಿರಲಿಲ್ಲ. ಎಲ್ಲ ಕಡೆಯಿಂದಲೂ ಅಪಾಯಗಳು ಅವನನ್ನು ಬೆದರಿಸಿದ್ದವು. ಅವನ ಕೆಲಸ ಆಸ್ಥಾನಿಕರು ಅವನ ಬಗ್ಗೆ ಅಸಮಧಾನಗೊಂಡಿದ್ದು ಅವನಗೆ ತೊಂದರೆ ಕೊಡಲು ಸಿದ್ದವಾಗಿದ್ದರು. ೧ನೇ ಬುಕ್ಕ ಮತ್ತು ಅವನು ಮೈತ್ರಿ ಬೆಳೆಸಿದ್ದಂತೆ ಕಾಣುವ ತೆಲಂಗಾಣದ ದೊರೆ ಇಬ್ಬರೂ ಮಹಮ್ಮದ್‌ಷಾಹನಿಗೆ ಒಂದು ಅಂತಿಮ ನಿರ್ದೇಶನ ಕಳುಹಿಸಿ ತಮ್ಮ ಬೇಡಿಕೆಗಳನ್ನು ಅವನು ಪೂರೈಸದಿದ್ದಲ್ಲಿ ಅವನ ಮೇಲೆ ಯುದ್ದ ಹೂಡುವ ಬೆದರಿಕೆ ಹಾಕಿದರು. ರಾಯಚೂರು ಮತ್ತು ಮುದಗಲ್‌ಗಳ ಕೋಟೆಗಳನ್ನು ಮತ್ತು ಕೃಷ್ಣಾ ನದಿಯವರೆಗೆ ಹರಡಿದ ಅವುಗಳ ಪರವ್ರತ ಪ್ರದೇಶವನ್ನು ತನಗೆ ವಾಪಸು ಮಾಡಬೇಕೆಂದು ಬುಕ್ಕ ಕೇಳಿದ. ಅಂತೆಯೇ ತೆಲಂಗಾಣದ ರಾಜ ತನ್ನಿಂದ ಅನ್ಯಾಯವಾಗಿ ಕಿತ್ತುಕೊಂಡಿದ್ದ ಕಾಲಸದ ಕೋಟೆ ಮತ್ತು ಅದರ ಸುತ್ತಲ ಪ್ರದೇಶವನ್ನು ತನಗೆ ಮರಳಿಸಬೇಕೆಂದು ಕೇಳಿದ. ಸ್ವಲ್ಪ ಕಾಲ ಸುಮ್ಮನಿದ್ದು ಮಹಮ್ಮದ್‌ಷಾ ಹಿಂದೂ ರಾಜರ ಮೇಲೆ ಯುದ್ಧ ಸಾರಿದ. ಒಂದನೆಯ ಬುಕ್ಕನು ಕೂಡಲೇ ಇಪ್ಪತ್ತು ಸಾವಿರ ಸೈನಿಕರನ್ನು ತನ್ನ ಮಿತ್ರನ ಬೆಂಬಲಕ್ಕೆ ಕಳುಹಿಸಿ ಒಂದು ಭಾರಿ ಸೈನದೊಡನೆ ಕೃಷ್ಣಾ–ತುಂಗಭದ್ರಾ ನಡುವಣ ಪ್ರದೇಶದ ಮೇಲೆ ದಾಳಿ ಮಾಡಿದ. ಫೆರಿಸ್ತಾನ ಕೊಟ್ಟಿರುವ ಯದ್ಧದ ವರದಿ ಒಂದನೆಯ ಮಹಮ್ಮದ್‌ಷಾ ಒಂದನೆಯ ಬುಕ್ಕನನ್ನು ಪ್ರತಿಯೊಂದು ರಣರಂಗದಲ್ಲೂ ಸೋಲಸಿ ಅವನನ್ನು ಜಾಗದಿಂದ ಜಾಗಕ್ಕೆ ಅಟ್ಟಿಕೊಂಡು ಹೋದ. ಕೊನೆಯಲ್ಲಿ ಬುಕ್ಕನು ತನ್ನ ರಾಜಧಾನಿಯೊಳಕ್ಕೆ ನುಸುಳಿಕೊಂಡು ಹೊಕ್ಕಾಗ ಅವನನ್ನು ತನ್ನ ಭದ್ರಸ್ತಾನದಿಂದ ಹೊರಬರುವಂತೆ ಪುಸಲಾಯಿಸಿ ವಿಧಿಸಿದ. ಕೊನೆಯಲ್ಲಿ ಅದು ಕೃಷ್ಣಾ ನದಿಯ ದಕ್ಷಿಣದ ದಡದ ಮೇಲಿನ ಕೆಲವು ಮಹಲುಗಳನ್ನು ಬಿಟ್ಟು ಕೃಷ್ಣಾ–ತುಂಗಭದ್ರೆಗಳ ನಡುವಣ ಇಡೀ ಪ್ರದೇಶಕ್ಕೆ ಒಂದನೆಯ ಬುಕ್ಕನನ್ನು ಒಡೆಯನ್ನಾಗಿಸಿದನು. ಈ ಯುದ್ಧ ಕ್ರಿ.ಶ.೧೩೬೫ರಲ್ಲಿ ಕೊನೆಗೊಂಡಿತು.[೩]

ಗುಲ್ಬಾರ್ಗದಲ್ಲಿ ಬಹಮನಿ ರಾಜ್ಯ ಉದಯವಾದರೂ ಅದು ಈ ಪ್ರಾಂತ್ಯದ ಜನರಿಗೆ ಪರಕೀಯವಾಗಿತ್ತು. ಆದರೆ ಕೆಲ ಕಾಲವಾದರೂ ಸ್ಥಿರವಾಗಿ ನಿಲ್ಲುವಂತೆ ಅದು ಕಂಡಿತು. ತುಂಗಭದ್ರಾ ನದಿಯ ಈಚೆಗೆ ವಿಜಯನಗರ ಸಾಮ್ರಾಜ್ಯವು ಆವಾಗಲೇ ಉದಯವಾಗಿತ್ತು. ಬಹಮನಿ ಅರಸರಿಗೂ ಮತ್ತು ವಿಜಯನಗರ ಅರಸರಿಗೂ ಘರ್ಷಣೆ ನಡೆಯುತ್ತಿತ್ತು. ಇವೆರಡು ಪಡೆಗಳು ತಾವು ಆಕ್ರಮಿಸಿದ ಭಾಗವನ್ನೆಲ್ಲ ಕೊಳ್ಳೆ

ಹೊಡೆಯುತ್ತ, ಸೂರೆ ಮಾಡುತ್ತ ಜನರ ಜೀವನಕ್ಕೆ ಹಿಂಸೆಯನ್ನುಂಟು ಮಾಡಿದವು. ಇಷ್ಟೆಲ್ಲಕ್ಕೆ ಕಾರ್ಯ ಕ್ಷೇತ್ರವಾದುದು ಈಗಿನ ಹೈದರಾಬಾದ್ ಕರ್ನಾಟಕ ಭಾಗ. ಸುಮಾರು ೨೫೦ ವರ್ಷಗಳವರೆಗೆ ಈ ಯುದ್ಧಗಳಿಗೆ ಜನ ಸಮುದಾಯ ತತ್ತರಿಸಿ ಹೋಗಿತ್ತು. ಯುದ್ಧಗಳ ನೆರಳಲ್ಲೇ ಬದುಕುವಂತಾಗಿತ್ತು. ಇದೇ ಸಂದರ್ಭದಲ್ಲಿಯೇ ನೂರಾರು ಜನ ಸೂಫಿಗಳು, ಅನುಭಾವಿಗಳು ಹಾಗೂ ದಾಸರು ಕಾಣಿಸಿಕೊಂಡರು. ಬಿಜಾಪುರದ ಆದಿಲ್‌ಷಾಹಿಗಳು ಈ ಪ್ರಾಂತದಲ್ಲಿ ಸಾಮರಸ್ಯವನ್ನುಂಟು ಮಾಡಲು ಆಗಮಿಸಿದರು. ಭಿನ್ನ ಮತ ಧರ್ಮಿಯರು ಸಂಘರ್ಷಗಳ ನಡುವೆಯು ಕೂಡಿ ಬಾಳಿ ಸಂತರ ಸಾಮರಸ್ಯ ಪರಿಸರ ನಿರ್ಮಾಣ ಮಾಡಿದರು.[೪]

ಕ್ರಿ.ಶ.೧೩೭೫-೭೬ ರಲ್ಲಿ ಬುಕ್ಕನು ೨೦೦೦ ಸೈನ್ಯದೊಂದಿಗೆ ದೋ-ಅಬ್ ಪ್ರದೇಶದ ಮೇಲೆ ದಾಳಿ ಮಾಡಿದನು. ಆಗ ಬಹಮನಿ ಸುಲ್ತಾನ ಬುಕ್ಕನೊಂದಿಗೆ ಒಪ್ಪಂದ ಮಾಡಿಕೊಂಡನು. ಆ ಒಪ್ಪಂದದ ಪ್ರಕಾರವಾಗಿ ಬುಕ್ಕನು ಈ ಪ್ರದೇಶಕ್ಕೆ ಒಡೆಯನಾದನು.[೫]

ಎರಡನೆಯ ಹರಿಹರನು ಮಹಮ್ಮದ್‌ಷಾಹನಿಗೂ ಮತ್ತು ಅವನ ಉತ್ತರಾಧಿಕಾರಿ ಫಿರೋಜ್ ಷಾನಿಗೂ ದುಸ್ಸಾಧ್ಯವಾಗಿ ಪರಿಣಮಿಸಿದನು. ಫೆರಿಸ್ತಾನ ಪ್ರಕಾರ "ತನ್ನ ಆಳ್ವಿಕೆಯ ಪ್ರಾರಂಭದಲ್ಲಿ ಮೊದಲನೇ ದೇವರಾಯನು ಫಿರೋಜ್‌ಷಾ ಬಹಮನಿಯೊಂದಿಗೆ ಯುದ್ಧ ಮಾಡಿದನಂತೆ. ಇದಕ್ಕೆ ಕಾರಣವಾದದ್ದು ಮುದ್ಗಲಿನಲ್ಲಿ ವಾಸ ಮಾಡುತ್ತಿದ್ದ ಸುಂದರಿಯಾದ ಕನ್ಯೆಯೊಬ್ಬಳನ್ನು ಕುರಿತು ಹಿಂದೂ ಚಕ್ರವರ್ತಿಗೆ ಬೆಳೆದ ವ್ಯಾಮೋಹ". ಮೊದಲ ಯುದ್ಧವು ಫಿರೋಜನಿಗೆ ಅಷ್ಟೇನು ಅನುಕೂಲಕರವಾಗಿರಲಿಲ್ಲ, ಆದರೆ ಕೊನೆಯಲ್ಲಿ ಹಿಂದೂ ಅರಸರು ಹೀನಾಯವಾಗಿ ಸೋತು ಸಂಧಿ ಮಾಡಿಕೊಳ್ಳಬೇಕಾಯಿತು. ಈ ಸಂಧಿಯ ಪ್ರಕಾರ ಹಿಂದೂ ಅರಸರು ಆಯಕಟ್ಟಿನ ಕೋಟೆಯಾದ ಬಂಕಾಪುರವನ್ನು ಬಹಮನಿಯವರಿಗೆ ಒಪ್ಪಿಸಬೇಕಾಯಿತು. ಈ ಕೋಟೆಯು ವಿಜಯನಗರದಿಂದ ಅರೇಬಿಯನ್ ಸಮುದ್ರಕ್ಕೆ ಬಹುಮುಖ್ಯವಾದ ಮಾರ್ಗದಲ್ಲಿದ್ದ ಪ್ರದೇಶವಾಗಿತ್ತು, ಇಷ್ಟೇ ಅಲ್ಲದೆ ಹಿಂದೂ ಅರಸನು ತನ್ನ ಹೆಣ್ಣುಮಕ್ಕಳಲ್ಲಿ ಒಬ್ಬಳನ್ನು ಬಹಮನಿ ಸುಲ್ತಾನನಿಗೆ ಮದುವೆ ಮಾಡಿ ಕೊಡಬೇಕಾಯಿತು. ಇದು ನಡೆದದ್ದು ಕ್ರಿ.ಶ. ೧೪೦೬ರಲ್ಲಿ. ಕ್ರಿ.ಶ. ೧೪೧೭ರಲ್ಲಿ ಫಿರೋಜ್‌ಷಾನು ವಾರಂಗಲ್ಲಿನ ವಾರಂಗಲ್ ದುರ್ಗಕ್ಕೆ ಮುತ್ತಿಗೆ ಹಾಕಿದನು. ಮೊದಲನೇ ದೇವರಾಯನು ತೆಲಂಗಾಣದ ವಾರಂಗಲ್ ರಾಜನನ್ನು ಸೇರಿಸಿಕೊಂಡು ಸುತ್ತಮುತ್ತಲಿನ ರಾಜರ ನೆರವನ್ನು ಪಡೆದು ಬಹಮನಿ ಸುಲ್ತಾನನ ಮೇಲೆ ದಂಡೆತ್ತಿ ಹೋದನು. ಯುದ್ಧ ರಂಗದಲ್ಲಿ ಸೋತ ಬಹಮನಿ ಸುಲ್ತಾನನು ಕಣ್ಣು ತಪ್ಪಿಸಿ ಯುದ್ಧರಂಗದಿಂದ ಓಡಿ ಹೋಗಬೇಕಾಯಿತು.

ಮೂರನೇ ಬುಕ್ಕನು ಸಿಂಹಾಸನಕ್ಕೆ ಬಂದು ತನ್ನ ಮಗ ಇಮ್ಮಡಿ ದೇವರಾಯನು ಸಹ ತನ್ನ ನೆರವಿಗೆ ಬಂದಿದ್ದಾಗ, ಗುಲ್ಬರ್ಗಾ ಮತ್ತು ವಿಜಯನಗರಗಳ ನಡುವಿನ ಸಂಬಂಧದ ಹಿನ್ನೆಲೆ ಈ ರೀತಿಯಾಗಿತ್ತು. ಈ ರಾಜ್ಯಗಳ ನಡುವಣ ಸಂಬಂಧವು ನಿರಂತರ ಅವಿಶ್ವಾಸ, ಪರಸ್ಪರ ಅವಮರ್ಯಾದೆ ಮತ್ತು ದ್ವೇಷಗಳಿಂದ ಕೂಡಿದ್ದಾಗಿತ್ತು. ವಿಜಯನಗರದ ಮೇಲೆ ಯುದ್ಧ ಮಾಡುವುದನ್ನು ಬಹಮನಿ ಸುಲ್ತಾನರು ಸದಾ ಏನಾದರೂ ನೆಪ ಮಾಡುತ್ತಿದ್ದರು. ಇದರ ಜೊತೆ ಕಪ್ಪ ಕಾಣಿಕೆಯ ಬಾಕಿ ವಸೂಲಿ ಮಾಡುತ್ತಿದ್ದರು. ಆದರೆ ನಿಜವಾದ ಕಾರಣ ರಾಯಚೂರು ದೋಅಬ್(ನದೀ ಮಧ್ಯ ಪ್ರದೇಶ) ಹಾಗೂ ಕೃಷ್ಣಾ ನದಿಯ ಉತ್ತರದ ತೆಲಂಗಾಣ ಪ್ರದೇಶಗಳನ್ನು ವಶಪಡಿಸಿಕೊಳ್ಳಬೇಕೆಂಬ ಬಹಮನಿ ಸುಲ್ತಾನರ ಆಸೆ ಮತ್ತು ಅದಕ್ಕೆ ಸಂಬಂಧಿಸಿದಂತೆ ಈ ಎರಡೂ ರಾಜ್ಯಗಳ ನಡುವೆ ಘರ್ಷಣೆಗಳು ನಡೆದವು.[೬]

ಅಹ್ಮದ್‌ಷಾನ ಚಟುವಟಿಕೆಗಳನ್ನು ಕೇಳಿ ಮೂರನೇ ಬುಕ್ಕರಾಯನು ವಾರಂಗಲ್ಲಿನ ನೆರವನ್ನು ಪಡೆದನು. ಜೊತೆಗೂಡಿದ ಸೈನ್ಯವು ತುಂಗಭದ್ರಾ ದಂಡೆಯ ಮೇಲೆ ಬೀಡುಬಿಟ್ಟಿತು. ಬಹಮನಿ ಸೇನೆಯು ಅವರಿಗೆ ಮುಖ ಮಾಡಿ ನದಿಯ ಉತ್ತರದ ದಂಡೆಯ ಮೇಲೆ ಪಾಳೆಹೂಡಿತು. ಇದೇ ಸಮಯಕ್ಕೆ ವಾರಂಗಲ್ ಸೇನೆಯು ಮಿತ್ರತ್ವವನ್ನು ಬಿಟ್ಟು ಯುದ್ಧದಿಂದ ಹಿಂದಕ್ಕೆ ಸರಿಯಿತು. ಕೆಲವು ಮಹಮ್ಮದೀಯ ನಾಯಕರು ರಾತ್ರಿ ವೇಳೆ ನದಿಯನ್ನು ಗುಟ್ಟಾಗಿ ದಾಟಿ, ಬುಕ್ಕ ರಾಯನ ಬಿಡಾರದ ಮೇಲೆ ದಾಳಿ ಮಾಡಿದರು. ಮಲಗಿದ್ದ ಬುಕ್ಕರಾಯನು ಒಮ್ಮೆಲೆ ನಡೆದ ದಾಳಿಯಿಂದಾಗಿ ಆಶ್ಚರ್ಯಗೊಂಡು ಅಲ್ಲಿಂದ ತಪ್ಪಿಸಿಕೊಂಡು ಓಡಿ ಹೋಗಿ ಒತ್ತಾಗಿ ಬೆಳೆದಿದ್ದ ಕಬ್ಬಿನ ಗದ್ದೆಯಲ್ಲಿ ತಲೆಮರಸಿಕೊಂಡನು. ಬುಕ್ಕರಾಯನು ಒಬ್ಬನೇ ಇದ್ದುದರಿಂದಲೂ, ಚಕ್ರವರ್ತಿ ಉಡುಗೆ-ತೊಡುಗೆಗಳು ಇಲ್ಲವಾದುದರಿಂದಲೂ ಅವನಿಗೆ ಜೀವನದಲ್ಲಿ ಸ್ವಾರಸ್ಯಕರವಾದ ಅನುಭವಗಳಾದವು. ಅವನ ಸೈನಿಕರೇ ತಮ್ಮ ಅರಸನನ್ನು ಗುರ್ತು ಹಿಡಿಯಲಿಲ್ಲ, ಕೊನೆಗೆ ಹೇಗೋ ಕಷ್ಟಪಟ್ಟು ಕೆಲವು ಅಧಿಕಾರಿಗಳ ನೆರವಿನಿಂದ ರಾಜಧಾನಿಗೆ ಬಂದನು. ಆಮೇಲೆ ಅಹ್ಮದ್‌ಷಾನು ತನ್ನ ಸೈನ್ಯದೊಂದಿಗೆ ನದಿಯನ್ನು ದಾಟಿ ವಿಜಯನಗರವನ್ನು ಲೂಟಿ ಮಾಡತೊಡಗಿದನು. ವಿಜಯನಗರದ ಹಳ್ಳಿಗಳಿಗೆ ನುಗ್ಗಿ ಅಮಾಯಕ ಜನರನ್ನು ಕೊಲೆ ಮಾಡಿ ನಾಶ ಮಾಡಿದನು ಎಂದು ಫೆರಿಸ್ತಾ ಹೇಳುತ್ತಾನೆ.[೭] ಅಹ್ಮದ್‌ಷಾನು ವಿಜಯನಗರದ ಕೋಟೆಯನ್ನು ಮುತ್ತಿಗೆ ಹಾಕಲು ಹೋಗದೆ ವಿಜಯನಗರದ ಹಳ್ಳಿಗಳಿಗೆ ನುಗ್ಗಿ ಹೋದಲ್ಲೆಲ್ಲಾ ಗಂಡಸರು, ಹೆಂಗಸರು, ಮಕ್ಕಳು ಎಂಬ ಸ್ವಲ್ಪವೂ ಕರುಣೆ ಇಲ್ಲದೆ ಅವರ ತಲೆಗಳನ್ನು ಕಡಿದನು. ಈತನ ತಂದೆಯು ವಿಜಯನಗರದ ರಾಯರೊಂದಿಗೆ ಮಾಡಿಕೊಂಡ ಸಂಧಿಯನ್ನು ಮುರಿದು ಅದಕ್ಕೆ ವಿರುದ್ಧವಾಗಿ ವರ್ತಿಸಿದನು. ಮಾನವೀಯತೆ ಸ್ವಲ್ಪವೂ ತೋರಿಸದೆ ಕೊಲೆ ಮಾಡಿದವರು ಸಂಖ್ಯೆಯು ಇಪ್ಪತ್ತು ಸಾವಿರವನ್ನು ಮೀರಿದಾಗ ಅಲ್ಲಿಯೇ ತಂಗಿ ಆ ದಿನ ಹಬ್ಬವನ್ನು(ರಕ್ತಪಾತದ ಸಂಭ್ರಮದ ಹಬ್ಬ) ಆಚರಿಸುತ್ತಿದ್ದನಂತೆ. ವಿಜಯನಗರದ ದೇವಾಲಯಗಳಲ್ಲಿದ್ದ ವಿಗ್ರಹಗಳನ್ನು ಒಡೆದು ಬ್ರಾಹ್ಮಣರ ಅಗ್ರಹಾರಗಳನ್ನು ನಾಶ ಮಾಡಿದನು.

ಕ್ರಿ.ಶ. ೧೪೨೩ರಲ್ಲಿ ಒಮ್ಮೆ ಅಹ್ಮದ್‌ಷಾನು ಭೇಟೆಯಾಡಲು ಹೋಗಿದ್ದಾಗ ಹಿಂದೂ ಆಶ್ವಾರೋಹಿ ಸೈನಿಕರ ಕೈಗೆ ಸಿಕ್ಕುಬಿದ್ದನು, ಆದರೆ ಅಷ್ಟರಲ್ಲಿಯೇ ಅವನ ನಿಷ್ಠಾವಂತ ಅಧಿಕಾರಿಯಾದ ಅಬ್ದುಲ್ ಖಾದಿರ್ ಒಂದು ಸೇನಾ ತುಕಡಿಯೊಂದಿಗೆ ಅಲ್ಲಿ ಬಂದು ಅಹ್ಮದ್‌ಷಾನನ್ನು ಗಂಡಾಂತರದಿಂದ ಪಾರು ಮಾಡಿದನು. ಈ ಸಾಹಸದಲ್ಲಿ ವಿದೇಶೀಯ ಅಶ್ವಾರೋಹಿ ಬಿಲ್ಲುಗಾರರು ಬಹುದೊಡ್ಡ ಸಂಖ್ಯೆಯಲ್ಲಿ ತಮ್ಮ ಪಾತ್ರವನ್ನು ನಿರ್ವಹಿಸಿದರು, ಈ ಕಾರಣಕ್ಕಾಗಿ ಈ ವಿದೇಶಿ ಬಿಲ್ಲುಗಾರರು ಬಹಮನಿ ಸೈನ್ಯದಲ್ಲಿ ಮುಂದಿನ ದಿನಗಳಲ್ಲಿ ಬಹಳ ಬಲಿಷ್ಠವಾದ ಸ್ಥಾನವನ್ನು ಪಡೆದರೆಂದು ತಿಳಿದುಬರುತ್ತದೆ. ಈ ರೀತಿಯಾಗಿ ಆರಂಭಗೊಂಡ ಬಹಮನಿ ಹಾಗೂ ವಿಜಯನಗರದ ಯುದ್ಧವು ಮೂರನೇ ಬುಕ್ಕರಾಯನು ಪೊಗದಿಯ ಬಾಕಿಯನ್ನು ಕೊಟ್ಟು ತೀರಿಸುವುದಾಗಿ ಒಪ್ಪಿಕೊಂಡ ಮೇಲೆಯೇ. ಈ ಮೊತ್ತವು ಅಗಾಧವಾದ ಮೊತ್ತವಾಗಿತ್ತು. ಬುಕ್ಕರಾಯನ ಮಗ ಇಮ್ಮಡಿ ದೇವರಾಯನು ಕೃಷ್ಣಾ ನದಿಯವರೆಗೂ ಸುಲ್ತಾನನ ಜೊತೆಯಲ್ಲಿಯೇ ಹೋದನೆಂದು ತಿಳಿದುಬರುತ್ತದೆ. ಸುಲ್ತಾನನು ತನ್ನೊಂದಿಗೆ ಅನೇಕ ಯುದ್ಧ ಕೈದಿಗಳನ್ನು ಸಹ ಕರೆದೊಯ್ದನು. ಈ ಯುದ್ಧದಲ್ಲಿ ಬುಕ್ಕರಾಯನು ಸೋಲಲು ಕಾರಣ ವಾರಂಗಲ್ ರಾಜನ ವಿಶ್ವಾಸದ್ರೋಹ.

ಚರಿತ್ರೆಕಾರನಾದ ಫೆರಿಸ್ತಾನು ಕ್ರಿ.ಶ.೧೪೧೯ರಲ್ಲಿ ಫಿರೋಜ್‌ಷಾನ ಮೇಲೆ ಮೊದಲನೇ ದೇವರಾಯನ ವಿಜಯವನ್ನು ಎಷ್ಟು ತೀವ್ರವಾಗಿ ವರ್ಣಿಸಿದ್ದನೋ ಅಷ್ಟೇ ತೀವ್ರವಾಗಿ ಅಹ್ಮದ್‌ಷಾನು ವಿಜಯನಗರ ರಾಜ್ಯವನ್ನು ಕೊಳ್ಳೆ ಹೊಡೆದುದನ್ನು ತನ್ನ ಬರಹಗಳಲ್ಲಿ ವರ್ಣಿಸಿದ್ದಾನೆ. ಯುದ್ಧದಲ್ಲಿ ಗೆದ್ದವರು ಮಹಮದೀಯರೇ

ಆಗಿರಲಿ ಅಥವಾ ಹಿಂದೂಗಳೇ ಆಗಿರಲಿ, ವಿಜೇತ ಸೈನ್ಯವು ಮಾಡುತ್ತಿದ್ದ ವಿಧ್ವಂಸಕ ಕೃತ್ಯಗಳನ್ನು ಫೆರಿಸ್ತಾನು ಒಂದು ನಿರ್ದಿಷ್ಟ ಶೈಲಿಯಲ್ಲಿ ತನ್ನ ಬರವಣಿಗೆಯಲ್ಲಿ ವರ್ಣಿಸಿದ್ದಾನೆ.[೮]

ಈ ರೀತಿಯಾಗಿ ಯುದ್ಧವು ಅಹ್ಮದ್‌ಷಾನ ಸಂಪೂರ್ಣ ವಿಜಯದಿಂದ ಕೊನೆಗೊಳ್ಳಲಿಲ್ಲ ಎಂದು ದಕ್ಷಿಣ ಕನ್ನಡ ಜಿಲ್ಲೆಯ ೧೪೩೦ರ ಒಂದು ಶಾಸನವು ಸ್ಪಷ್ಟಪಡಿಸುತ್ತದೆ. ಇಮ್ಮಡಿ ದೇವರಾಯನು ಆ ಸಮಯದಲ್ಲಿ ಭಾರಿಯಾದ ಹಾಗೂ ಬಲಿಷ್ಠವಾದ ತುರುಷ್ಕ ಅಶ್ವದಳವನ್ನು ಸೋಲಿಸಿದುದನ್ನು ಸಹ ಈ ಶಾಸನವು ಹೇಳುತ್ತದೆ. ಬುಕ್ಕನ ನಂತರ ಒಂದನೇ ದೇವರಾಯನು ಕ್ರಿ.ಶ. ೧೪೦೬ರಲ್ಲಿ ವಿಜಯನಗರದ ಸಿಂಹಾಸನವನ್ನು ಏರಿದನು. ಈತನು ಅಧಿಕಾರಕ್ಕೆ ಬಂದಾಗ ಸಾಮ್ರಾಜ್ಯದಲ್ಲಿ ಅಶಾಂತಿ ತಲೆದೋರಿತು. ಸುಲ್ತಾನರು ದೋಅಬ್ ಪ್ರದೇಶದ ಮೇಲೆ ಆಕ್ರಮಣ ನಡೆಸಿದಾಗ ಅನೇಕ ಸಾಮಂತರು ಸ್ವತಂತ್ರರಾದರು. ಬಹಮನಿ ಸುಲ್ತಾನ ಫಿರೋಜ್‌ಷಾನು ವಿಜಯನಗರದ ವಿರುದ್ಧ ಯುದ್ಧ ಘೋಷಿಸಿದನು, ಮುದ್ಗಲ್‌ನ ರೈತನ ಮಗಳ ಸೌಂದರ್ಯಕ್ಕೆ ಮಾರು ಹೋದ ದೇವರಾಯನು ಮುದ್ಗಲ್ ಕೋಟೆಗೆ ಮುತ್ತಿಗೆ ಹಾಕಿದನು. ಈ ಯುದ್ಧದಲ್ಲಿ ದೇವರಾಯನು ಸೋತು ೩೩ಲಕ್ಷ ಕಾಣಿಕೆ ಮತ್ತು ತನ್ನ ಮಗಳನ್ನು ಸುಲ್ತಾನನಿಗೆ ಕೊಟ್ಟು ವಿವಾಹ ಮಾಡಿದನೆಂದು ಇತಿಹಾಸ ಹೇಳುತ್ತದೆ.

ಇಮ್ಮಡಿ ದೇವರಾಯನ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯವು ವೈಭವೋಪೇತವಾದ ಅವಧಿಯಾಗಿತ್ತು. ಇಮ್ಮಡಿ ದೇವರಾಯನು ಅನೇಕ ಯುದ್ಧ ಕಲೆಗಳಲ್ಲಿ ಪಳಗಿದವನಾಗಿದ್ದನು. ಇಮ್ಮಡಿ ದೇವರಾಯನು ಅಧಿಕಾರ ವಹಿಸಿಕೊಂಡ ಸಮಯದಲ್ಲಿ ಸಾಮ್ರಾಜ್ಯದ ರಾಜಕೀಯ ಸ್ಥಿತಿ ಅಷ್ಟೊಂದು ಸುಗಮವಾಗಿರಲಿಲ್ಲ. ಮಹಮ್ಮದೀಯರಿಂದ ವಿಜಯನಗರದ ಪ್ರದೇಶಗಳ ಮೇಲೆ ನಿರಂತರವಾಗಿ ದಾಳಿಗಳಾಗುತ್ತಲೇ ಇದ್ದವು. ಮತ್ತೊಂದು ಆಂಧ್ರದ ರಾಜಕೀಯ ಸ್ಥಿತಿ ಅಲ್ಲೋಲ–ಕಲ್ಲೋಲಗೊಂಡ ರೆಡ್ಡಿ ಮನೆತನಗಳು ಪರಸ್ಪರ ಒಳ ಜಗಳಗಳಲ್ಲಿ ನಿರತರಾಗಿದ್ದವು. ಸಹಜವಾಗಿಯೇ ಈ ಸಮಯದಲ್ಲಿ ಇಲ್ಲಿ ಬಹಮನಿಯ ಹಸ್ತಕ್ಷೇಪ ಉಂಟಾಯಿತು. ವಿಜಯನಗರದ ಬಹುಭಾಗಗಳನ್ನು ಕೊಂಡವೀಡಿನ ರೆಡ್ಡಿ ದೊರೆಯು ಮುಸ್ಲಿಂರೊಂದಿಗೆ ಕೂಡಿಕೊಂಡನಲ್ಲದೇ ರಾಯನ ಸಾಮಂತರನ್ನು ಸೋಲಿಸುತ್ತಲೇ ಇದ್ದನು. ಇಂತಹ ಕ್ಲಿಷ್ಟ ಸಮಯದಲ್ಲಿ ವಿಜಯನಗರದ ಅರಸನಾದ ದೇವರಾಯನು ಸೈನ್ಯ ಹಾಗೂ ಆಡಳಿತದಲ್ಲಿ ಸಾಕಷ್ಟು ಅನುಭವ ಹೊಂದಿದ್ದನು. ತಂದೆಗೆ ಸಹಾಯಕನಾಗಿ ಕ್ರಿ.ಶ. ೧೪೨೬ರ ವರೆಗೆ ಸೇವೆ ಸಲ್ಲಿಸಿದನು. ಬಹಮನಿ ಸುಲ್ತಾನರು ಹಾಗೂ ಬೇಡರ ದಂಗೆಗಳನ್ನು ಸಮರ್ಥವಾಗಿ ಎದುರಿಸಿ ಯಶಸ್ವಿಯಾದನು.

ವಿಜಯನಗರದ ಅರಸರು ಯುದ್ಧ ಕೈಗೊಳ್ಳುವ ಮುನ್ನ ರಾಜ್ಯ ಮತ್ತು ಸೈನ್ಯದಲ್ಲಿ ಸುಧಾರಣೆಗಳನ್ನು ಕೈಗೊಂಡ ಅಂಶ ವ್ಯಕ್ತವಾಗುತ್ತದೆ. ಫೆರಿಸ್ತಾನ ಪ್ರಕಾರ ಕ್ರಿ.ಶ.೧೪೪೨ರ ಅವಧಿಯಲ್ಲಿ ಎರಡನೇ ದೇವರಾಯನು ತನ್ನ ಸೈನ್ಯದ ನ್ಯೂನ್ಯತೆಗಳನ್ನು ಸರಿಪಡಿಸಲು ಯತ್ನಿಸಿದ್ದನು. ಅದರಂತೆ ಮುಸ್ಲಿಂ ಯೋಧರನ್ನು ಸೇನೆಯಲ್ಲಿ ಸೇರಿಸಿಕೊಳ್ಳುವ ಮತ್ತು ಅಶ್ವಗಳನ್ನು ಆಮದು ಮಾಡಿಕೊಳ್ಳುವ ಪ್ರಯತ್ನ ನಡೆದುದು ತಿಳಿದು ಬರುತ್ತದೆ. ಫೆರಿಸ್ತಾ ಹೇಳುವಂತೆ ಕ್ರಿ.ಶ. ೧೪೪೨ರ ಹೊತ್ತಿಗೆ ವಿಜಯನಗರ ಸೈನ್ಯವು ಬಹಮನಿಗಳ ವಿರುದ್ಧದ ಯುದ್ಧ ಈ ಯುದ್ಧಗಳಲ್ಲಿ ಸೋಲನ್ನು ಅನುಭವಿಸಿದ್ದ. ಕ್ರಿ.ಶ.೧೪೦೬–೦೭ ರಲ್ಲಿ ಒಂದನೇ ದೇವರಾಯ, ೧೪೨೨–೨೩ರಲ್ಲಿ ಎರಡನೇ ದೇವರಾಯ ೧೪೨೬ರಲ್ಲಿ ಎರಡನೇ ದೇವರಾಯ ಬಹಮನಿಯವರೊಂದಿಗೆ ದೋಅಬ್ ಪ್ರದೇಶದ ರಾಯಚೂರು ಮುದಗಲ್‌ಗಳನ್ನು ವಶಪಡಿಸಿಕೊಳ್ಳಲು ನಡೆಸಿದ ಯುದ್ಧಗಳಲ್ಲಿ ವಿಜಯನಗರ ಸೈನ್ಯವು ಸೋಲು ಅನುಭವಿಸಿತ್ತು. ಈ ನಿಟ್ಟಿನಲ್ಲಿ ಎರಡನೇ ದೇವರಾಯ ತನ್ನ ಸೈನ್ಯಕ್ಕಾದ ಸೋಲಿಗೆ ಕಾರಣವೆಂದು ಆಸ್ಥಾನದ ಗಣ್ಯರಿಂದ ತಿಳಿದು ಅದನ್ನು ಸರಿಪಡಿಸುತ್ತಾನೆ.[೯]

### ೫.೧.೨. ಎರಡನೆಯ ಬಹಮನಿ ಯುದ್ಧ(ಕ್ರಿ.ಶ. ೧೪೩೬)

ಎರಡನೇ ಅಲ್ಲಾವುದ್ದೀನನು ಕ್ರಿ.ಶ.೧೪೩೬ರಲ್ಲಿ ಪಟ್ಟಕ್ಕೆ ಬಂದೊಡನೆ ತನ್ನ ಸಹೋದರನಾದ ಮಹಮ್ಮದ್ ಖಾನನನ್ನು ವಿಜಯನಗರದ ಮೇಲೆ ದಂಡೆತ್ತಿ ಹೋಗಿ ಪೊಗದಿ ಬಾಕಿ ವಸೂಲಿ ಮಾಡಿ ತರಲು ಕಳುಹಿಸಿಕೊಟ್ಟನು. ಇಮರ್-ಉಲ್-ಮುಲ್ಕ್ ಘೋರಿ ಮತ್ತು ಖ್ವಾಜಾಜನ್ ಇವರನ್ನು ಕರೆದುಕೊಂಡು ರಾಜಕುಮಾರನಾದ ಮಹಮ್ಮದ್‌ಖಾನನು ವಿಜಯನಗರದ ಮೇಲೆ ದಾಳಿ ಮಾಡಿ ಅಪಾರ ಲೂಟಿ ಮತ್ತು ಹಾನಿಗಳನ್ನುಂಟು ಮಾಡಿದನು. ಭಾರೀ ಸೈನ್ಯವಿದ್ದರೂ ಸಹ ಇಮ್ಮಡಿ ದೇವರಾಯನು ಸೋಲನ್ನು ಒಪ್ಪಿಕೊಳ್ಳಬೇಕಾಯಿತು. ೨೦ ಆನೆಗಳು, ಗಣನೀಯ ಮೊತ್ತದ ಹಣ, ಸಂಗೀತ ನೃತ್ಯಗಳಲ್ಲಿ ಕುಶಲೆಯರಾದಂತಹ ೨೦೦ ಹೆಣ್ಣುಮಕ್ಕಳು, ಇವೆಲ್ಲವನ್ನೂ ದೇವರಾಯನು ಸುಲ್ತಾನನಿಗೆ ಕಳುಹಿಸಿ, ಇದಷ್ಟೇ ಅಲ್ಲದೆ ರಾಜಕುಮಾರ ಮಹಮ್ಮದ್‌ಖಾನನಿಗೆ ಅಮೂಲ್ಯವಾದ ಉಡುಗೊರೆಗಳನ್ನು ನೀಡಿ ಕಳುಹಿಸಿಕೊಟ್ಟನು. ವಿಜಯನಗರದವರು ಮಾತು ಕೊಟ್ಟು ಕೊಡದೇ ಉಳಿಸಿಕೊಂಡ ಪೊಗದಿ ಬಾಕಿಯೇ ಈ ಯುದ್ಧಕ್ಕೆ ಕಾರಣವೆಂದು ಫೆರಿಸ್ತಾ ಹೇಳುತ್ತಾನೆ.[೧೦]

ಅಬ್ದುಲ್ ರಜಾಕ್ ಹೇಳುವ ಪ್ರಕಾರ ಇಮ್ಮಡಿ ದೇವರಾಯನು ತಮ್ಮ ಸೋಲಿಗೆ ಕಾರಣವೇನೆಂದು ಆತ್ಮ ಪರೀಕ್ಷೆಯಲ್ಲಿ ತೊಡಗಿದನು. ಮುಸ್ಲಿಂ ವೈರಿಗಳಿಂದ ಪದೇ ಪದೇ ಪರಾಭವವನ್ನು ಎದುರಿಸುತ್ತಿರುವ ಕಾರಣವನ್ನು ತಿಳಿದುಕೊಳ್ಳಲು ನಿರ್ಧರಿಸಿದನು, ತನ್ನ ಮಂತ್ರಿಗಳು ಮತ್ತು ಇತರ ಗಣ್ಯರೊಂದಿಗೆ ಚರ್ಚಿಸಿ ಸರಿಯಾದ ಪ್ರತಿಕ್ರಮವನ್ನು ಕೈಗೊಳ್ಳಬೇಕಾದ ವಿಧಾನಗಳನ್ನು ರೂಪಿಸಲು ಯೋಚಿಸಿದನು. ಈ ಯೋಜನೆಯ ಫಲವಾಗಿ ಮುಸ್ಲಿಮರಿಗೂ ಸಹ ವಿಜಯನಗರ ಸೈನ್ಯದಲ್ಲಿ ಸೇರಿಕೊಳ್ಳಲು ಅವಕಾಶ ನೀಡಲಾಯಿತು. ಅವರು ಧರ್ಮವನ್ನು ಅನಿರ್ಭಂದಿತವಾಗಿ ಆಚರಿಸಿಕೊಳ್ಳಲು ಅನುಮತಿ ಕೊಡಲಾಯಿತು. ವಿಜಯನಗರದ ರಾಜನ ಸಿಂಹಾಸನದ ಎದುರಿಗೆ ಕುರಾನಿನ ಒಂದು ಪ್ರತಿಯನ್ನು ಇರಿಸಲಾಯಿತು. "ತಮ್ಮ ಧರ್ಮ ನಿಯಮಗಳಿಗೆ ತಪ್ಪಿ ನಡೆಯದೇ ರಾಜನಿಗೆ ಅವರು ನಮಸ್ಕರಿಸಲು ಇದರಿಂದ ಮುಸ್ಲಿಂ ಸೈನಿಕರಿಗೆ ಅನುಕೂಲವಾಯಿತು,"[೧೧] ಇಷ್ಟೇ ಅಲ್ಲದೇ ಹಿಂದೂ ಸೈನಿಕರಿಗೆ ಬಿಲ್ವಿದ್ಯೆಯಲ್ಲಿ ವಿಶೇಷ ತರಬೇತಿಯನ್ನು ನೀಡಲಾಯಿತು. ಈ ಕಾರಣದಿಂದಾಗಿ ವಿಜಯನಗರ ಸೈನ್ಯವು ಹೆಚ್ಚು ಸಮರ್ಥವಾದ ಸೈನ್ಯವಾಯಿತು. ಕ್ರಿ.ಶ.೧೪೩೦ರ ಶ್ರೀರಂಗಪಟ್ಟಣದ ಒಂದು ಶಾಸನದ ಪ್ರಕಾರ ಇಮ್ಮಡಿ ದೇವರಾಯನ ಸೇನೆಯಲ್ಲಿ ಸುಮಾರು ಹತ್ತು ಸಾವಿರ ಜನ ಮುಸ್ಲಿಂ ಅಶ್ವಾರೋಹಿಗಳಿದ್ದರೆಂದು ತಿಳಿದುಬರುತ್ತದೆ. ಸಿವೆಲ್ ಹೇಳುವಂತೆ ಈ ಸೈನಿಕರು ಬಹುಶಃ ಉತ್ತರದಿಂದ ಬಂದವರಿದ್ದು, ಬಹಮನಿ ರಾಜ್ಯಕ್ಕೆ ಸೇರಿದ ಕೊಲೆಗಡುಕರೂ ಸಹ ಇವರಲ್ಲಿ ಸೇರಿದ್ದರು ಎಂದು ತಿಳಿಯಬಹುದು.

### ೫.೧.೩. ಮೂರನೆಯ ಬಹಮನಿ ಯುದ್ಧ(ಕ್ರಿ.ಶ. ೧೪೪೩)

ಇಮ್ಮಡಿ ದೇವರಾಯನು ಬಹಮನಿ ಸುಲ್ತಾನ ಅಲ್ಲಾವುದ್ದೀನನೊಂದಿಗೆ ಮಾಡಿದ ಮೂರನೇ ಬಹಮನಿ ಯುದ್ಧವು ಕ್ರಿ.ಶ.೧೪೪೩ರಲ್ಲಿ ನಡೆಯಿತು. ಅಬ್ದುಲ್ ರಜಾಕನ ಪ್ರಕಾರ ಈ ಯುದ್ಧದ ಕಾರಣಗಳು ಈ ರೀತಿಯಾಗಿವೆ. ಇಮ್ಮಡಿ ದೇವರಾಯನ ಸಹೋದರರಲ್ಲಿ ಒಬ್ಬನು ದೇವರಾಯನನ್ನು ಕೊಲೆ ಮಾಡಲು ಸಂಚು ಮಾಡಿದನು, ಈ ಸಂದರ್ಭದಲ್ಲಿ ರಾಜ್ಯದ ಹಲವಾರು ಅಧಿಕಾರಿಗಳ ಹಾಗೂ ಹಲವಾರು ಅಮಾಯಕ ಜನರ ಕೊಲೆ ನಡೆದು ರಾಜ್ಯದಲ್ಲಿ ಗೊಂದಲ ಮತ್ತು ಅರಾಜಕತೆಯ ಪರಿಸ್ಥಿತಿ ಉಂಟಾಯಿತು.[೧೨]

ನ್ಯೂನಿಜ್‌ನ ಪ್ರಕಾರ ಕೊಲೆಯ ಪಿತೂರಿಯನ್ನು ನಡೆಸಿದವನು ರಾಜನ ಸೋದರಳಿಯ. ಅಲ್ಲಾವುದ್ದೀನನು ಈ ಪರಿಸ್ಥಿತಿಯನ್ನು ಉಪಯೋಗಿಸಿಕೊಂಡು, ಈ ತಕ್ಷಣವೇ ಏಳು ಲಕ್ಷ ವರಹಗಳನ್ನು ದೇವರಾಯನು

ತನಗೆ ತಲುಪಿಸಬೇಕೆಂದು, ಇದಕ್ಕೆ ತಪ್ಪಿದರೆ ವಿಜಯನಗರದ ಮೇಲೆ ದಾಳಿ ಮಾಡುವುದಾಗಿಯೂ ಬೆದರಿಕೆ ಹಾಕಿದನು. ದೇವರಾಯನು ಈ ಬೆದರಿಕೆಗೆ ಬಗ್ಗಲಿಲ್ಲವಾದ್ದರಿಂದ ಯುದ್ಧವು ಪ್ರಾರಂಭವಾಯಿತು.[೧೩] ಈ ಸಮಯದಲ್ಲಿ ಲಕ್ಕಣ್ಣ ದಂಡನಾಯಕನು ತನ್ನ ಸಿಲೋನ್ ದಂಡಯಾತ್ರೆಯನ್ನು ಮುಗಿಸಿಕೊಂಡು ಹಿಂತಿರುಗಿದನು. ವಿಜಯನಗರದ ಸೈನ್ಯವನ್ನು ತಾನೇ ಮುಂದೆ ನಿಂತು ಮುನ್ನುಗ್ಗಿಸಿದನು, ಆ ಸಮಯಕ್ಕಾಗಲೇ ಇಮ್ಮಡಿ ದೇವರಾಯನು ವಿಜಯನಗರದ ಸೈನ್ಯವನ್ನು ಪುನರ್ ವ್ಯವಸ್ಥೆಗೊಳಿಸಿ, ಅದನ್ನು ಬಲಿಷ್ಠವಾದ ಸಮರ್ಥ ಹಾಗೂ ಆಕ್ರಮಣಕಾರಿ ಪಡೆಯನ್ನಾಗಿ ತಯಾರಿಸಿದ್ದನು. ರಾಯಚೂರು ದೋಅಬ್ ಮೇಲೆ ದಾಳಿ ಮಾಡಿ ಗುಂತಕಲನ್ನು ವಶಪಡಿಸಿಕೊಂಡರು. ರಾಯಚೂರು ಮತ್ತು ಬಂಕಾಪುರಗಳಿಗೆ ಮುತ್ತಿಗೆ ಹಾಕಿ, ಬಿಜಾಪುರ ಮತ್ತು ಸೂಗೂರುವರೆಗಿನ ಪ್ರದೇಶವನ್ನು ಪಾಳುಗೆಡವಿದರು. ಅಷ್ಟರಲ್ಲಿಯೇ ಬಹಮನಿ ಸೈನ್ಯವು ಮುನ್ನುಗ್ಗಿ ಬಂದಿತು. ಇಮ್ಮಡಿ ದೇವರಾಯನು ಹಿಮ್ಮೆಟ್ಟಿ ಮುದ್ಗಲ್ ಸೇರಿಕೊಳ್ಳಬೇಕಾಯಿತು. ಮಲಿಕ್-ಅಲ್-ತಿಜಾರನು ರಾಯಚೂರು ಮತ್ತು ಬಂಕಾಪುರದ ಮುತ್ತಿಗೆಯನ್ನು ಸ್ವತಂತ್ರಗೊಳಿಸಿದನು.

ಯುದ್ಧದ ಎರಡನೇ ಹಂತದಲ್ಲಿ ಫೆರಿಸ್ತಾನ ಪ್ರಕಾರ ಕ್ರಿ.ಶ. ೧೪೪೩ ಕೊನೆಯ ಭಾಗದಲ್ಲಿ ಎರಡು ತಿಂಗಳುಗಳ ಅವಧಿಯಲ್ಲಿ, ಎರಡು ಭಾರೀ ಸೇನೆಗಳ ನಡುವೆ ಮುದ್ಗಲ್ ಬಳಿ ಮೂರು ಕಾಳಗಗಳು ನಡೆದವು. ಮೊದಲನೇ ಕಾಳಗದಲ್ಲಿ ಹಿಂದೂಗಳು ಗೆದ್ದರು, ಎರಡನೇ ಕಾಳಗದಲ್ಲಿ ಮುಸ್ಲಿಮರು ಗೆದ್ದರು, ಮೂರನೇ ಕಾಳಗದಲ್ಲಿ ದೇವರಾಯನ ಹಿರಿಯ ಮಗನು ಕೊಲೆಯಾದನು ಮತ್ತು ಅವನ ಸೈನ್ಯವನ್ನು ಮುದ್ಗಲ್‌ವರೆಗೆ ಹಿಮ್ಮೆಟ್ಟಿಸಲಾಯಿತು. ಇದೇ ಸಮಯದಲ್ಲಿ ಬಹಮನಿ ಸೈನ್ಯದ ಇಬ್ಬರು ಮುಸ್ಲಿಂ ಅಧಿಕಾರಿಗಳನ್ನು ಹಿಡಿದು ವಿಜಯನಗರದ ಸೆರೆಮನೆಗೆ ಹಾಕಲಾಯಿತು. ಆಗ ಬಹಮನಿ ಸುಲ್ತಾನನು ನಮ್ಮ ಆ ಇಬ್ಬರು ಅಧಿಕಾರಗಳ ಬೆಲೆ "ಎರಡು ಲಕ್ಷ ಹಿಂದೂಗಳ ಪ್ರಾಣ ಎಂದು ವಿಜಯನಗರಕ್ಕೆ ಬೆದರಿಕೆ ಕಳಿಸಿದಾಗ ದೇವರಾಯನು ಹಿಂದೂಗಳ ಪ್ರಾಣಕ್ಕೋಸ್ಕರ ಸಂಧೀ ಮಾಡಿಕೊಳ್ಳಲು ಒಪ್ಪಿ ತಪ್ಪದೆ ಪೊಗದಿ ಸಲ್ಲಿಸುವುದಾಗಿ ಒಪ್ಪಿಕೊಂಡನು."[೧೪]

ಬಹಮನಿ ಸುಲ್ತಾನನೊಂದಿಗೆ ಇಮ್ಮಡಿ ದೇವರಾಯನು ಮಾಡಿದ ಯುದ್ಧಗಳು, ತುಂಗಭದ್ರಾ ದೋಅಬ್ ಪ್ರದೇಶದ ಮುಖ್ಯ ಕೋಟೆಗಳನ್ನು ವಶಪಡಿಸಿಕೊಳ್ಳುವುದಕ್ಕಾಗಿ ನಡೆದಂಥವು. ಆ ಕೋಟೆಗಳೆಂದರೆ ಪಾಂಗುಲ್, ರಾಯಚೂರು ಮತ್ತು ಮುದ್ಗಲ್ ಕೋಟೆಗಳು. ವಿಜಯನಗರ ಹಾಗೂ ಬಹಮನಿ ಚರಿತ್ರೆಗಳಲ್ಲಿ ಬರಹಗಾರರ ಗಮನವನ್ನು ಸೆಳೆಯುವ ಒಂದು ಅಂಶವೆಂದರೆ, ಮುದ್ಗಲ್ ಕೋಟೆಯು ಎರಡು ರಾಜ್ಯಗಳ ನಡುವೆ ನಿರಂತರವಾಗಿ ಪೈಪೋಟಿಯ ಪ್ರದೇಶವಾಗಿ ಪರಿಣಮಿಸಿ, ಬಹಮನಿ ರಾಜ್ಯದ ವಿಭಜನೆಯ ನಂತರ ರಾಯಚೂರು ಮತ್ತು ಮುದ್ಗಲ್‌ಗಳು ಬಿಜಾಪುರದ ಆದಿಲ್‌ಷಾಹಿಗಳಿಗೆ ಸೇರಿರುವುದನ್ನು ಗಮನಿಸಬಹುದು. ಹೀಗೆ ದೇವರಾಯ ಹಾಗೂ ಬಹಮನಿ ಸುಲ್ತಾನರ ನಡುವೆ ನಿರಂತರವಾದ ಕದನಗಳು ಏರ್ಪಟ್ಟು ಎರಡು ಪಡೆಗಳಲ್ಲಿ ಸಾಕಷ್ಟು ಸಂಖ್ಯೆಯ ಯೋಧರು, ಸ್ತ್ರೀ-ಪುರುಷರು, ಮಕ್ಕಳು ಹಾಗೂ ವೃದ್ಧರು ತಮ್ಮ ಪ್ರಾಣಗಳನ್ನು ಕಳೆದುಕೊಂಡರು.

### ೫.೧.೪. ಸಾಳುವ ಅರಸ ನರಸಿಂಹ ಮತ್ತು ಬಹಮನಿ ಸುಲ್ತಾನ(ಕ್ರಿ.ಶ. ೧೪೮೭)

ಎರಡನೇ ದೇವರಾಯನ ಮರಣದ ನಂತರ ಸಂಗಮ ವಂಶವು ಕ್ಷೀಣಿಸಿತು. ಸಾಳುವ ವಂಶದವರು ವಿಜಯನಗರದ ಅಧಿಕಾರವನ್ನು ವಹಿಸಿಕೊಂಡರು. ಸಾಳುವ ವಂಶದ ಮೊದಲ ವ್ಯಕ್ತಿಯಾದ ಗುಂಡನ ಮಗನಾದ ಸಾಳುವ ನರಸಿಂಹನು ತನ್ನ ಪರಾಕ್ರಮದಿಂದ ವಿಜಯನಗರದ ಸಿಂಹಾಸನವನ್ನೇರಿದನು. ಕ್ರಿ.ಶ. ೧೪೮೭ರಲ್ಲಿ ಕೃಷ್ಣಾ ನದಿಯ ದಕ್ಷಿಣ ಮತ್ತು ಕರಾವಳಿ ಪ್ರದೇಶಗಳು ನರಸಿಂಹ ಅರಸನ ಹಿಡಿತದಲ್ಲಿದ್ದವು.

ಬಹಮನಿ ಸುಲ್ತಾನನಾದ ಮಹಮ್ಮದ್ ಷಾನು ನಿಜಾಮ್-ಉಲ್-ಮುಲ್ಕ್ ಮತ್ತು ಅಜಂಖಾನರ ನೇತೃತ್ವದಲ್ಲಿ ಆರು ಸಾವಿರ ಸೈನ್ಯದೊಂದಿಗೆ ಕಾಂಜೀವರಂ ಮೇಲೆ ದಾಳಿಮಾಡಲು ಕಳುಹಿಸಿಕೊಟ್ಟನು.[೧೫] ಸುಲ್ತಾನನ ಸೈನ್ಯವು ಈ ಮುತ್ತಿಗೆಯಲ್ಲಿ ಯಶಸ್ವಿ ಕಾರ್ಯಾಚರಣೆ ಮಾಡಿ, ಅಲ್ಲಿಯ ದೇವಾಲಯಗಳನ್ನು ನಾಶಗೊಳಿಸಿ ಅಪಾರ ಸಂಪತ್ತನ್ನು ಕೊಳ್ಳೆ ಹೊಡೆದು ನಂತರ ಅಲ್ಲಿಂದ ಕಂಚಿಗೆ ಮುತ್ತಿಗೆ ಹಾಕಿದರು. ನರಸಿಂಹನು ಈಶ್ವರನಾಯಕನ ನೇತೃತ್ವದಲ್ಲಿ ಬಹಮನಿ ಸುಲ್ತಾನನ ಮೇಲೆ ಯುದ್ಧ ಮಾಡಲು ಸೈನ್ಯವನ್ನು ಕಳುಹಿಸಿದನು, ವಿಜಯನಗರದ ಸೈನ್ಯವು ಸುಲ್ತಾನಿನ ಸೈನ್ಯವನ್ನು ಸೋಲಿಸಿ, ನಾಶಗೊಳಿಸಿ ದೇವಾಲಯದ ಸಂಪತ್ತನ್ನು ಪುನಃ ವಶಪಡಿಸಿಕೊಂಡರು.

ಹಿಮ್ಮೆಟ್ಟಿದ ಸುಲ್ತಾನನ ಸೈನ್ಯವು ಪುನಃ ಮಚಲಿಪಟ್ಟಣಕ್ಕೆ ಮುತ್ತಿಗೆ ಹಾಕಿತು. ಯೂಸುಫ್ ಆದಿಲ್ ಖಾನ್ ಮತ್ತು ಫಕ್ರ್-ಉಲ್-ಮುಲ್ಕ್‌ರ ಹದಿನೈದು ಸಾವಿರ ಸೈನ್ಯವು ಸಹ ಸುಲ್ತಾನನಿಗೆ ನೆರವು ನೀಡಿತು. ಆದರೆ ನರಸಿಂಹನ ಸೈನ್ಯವು ಸುಲ್ತಾನಿನ ಈ ಸಂಯುಕ್ತ ಸೈನ್ಯವನ್ನು ಸೋಲಿಸಿ ಹಿಮ್ಮೆಟ್ಟಿಸಿತು. ವಿಜಯನಗರದ ಅರಸ ನರಸಿಂಹನು ಕೊಂಡವೀಡು, ಮಚಲಿಪಟ್ಟಣ ಹಾಗೂ ಕೃಷ್ಣ-ಗೋದಾವರಿ ಪ್ರದೇಶಗಳನ್ನು ಬಹಮನಿಯವರಿಂದ ವಶಪಡಿಸಿಕೊಂಡನು.[೧೬] ಇದರಿಂದಾಗಿ ವಿಜಯನಗರದ ಬಹುತೇಕ ಪ್ರದೇಶಗಳು ನರಸಿಂಹನ ಆಧೀನಕ್ಕೆ ಬಂದವು.

### ೫.೧.೫. ತುಳುವ ಅರಸ ಕೃಷ್ಣದೇವರಾಯ(ಕ್ರಿ.ಶ.೧೫೦೯-೧೫೨೯)

ಕ್ರಿ.ಶ. ೧೫೦೯ರಲ್ಲಿ ಕೃಷ್ಣದೇವರಾಯನು ವಿಜಯನಗರದ ಸಿಂಹಾಸನವನ್ನೇರಿದನು. ದಕ್ಷಿಣ ಭಾರತದ ಇತಿಹಾಸದಲ್ಲಿಯೇ ಪ್ರಸಿದ್ಧ ದೊರೆ ಎಂದು ಈತನು ಹೆಸರುಗಳಿಸಿರುವನು. ಈತನ ಕಾಲದಲ್ಲಿ ವಿಜಯನಗರವು ವೈಭವದ ಉತ್ತುಂಗ ಶಿಖರವನ್ನೇರಿತು. ಕೃಷ್ಣದೇವರಾಯನು ಅಧಿಕಾರಕ್ಕೆ ಬಂದಾಗ ಹಲವಾರು ಸಮಸ್ಯೆಗಳನ್ನು ಎದುರಿಸಬೇಕಾಗಿತ್ತು. ದಕ್ಷಿಣ ಭಾರತದ ರಾಜಕೀಯ ಪರಿಸ್ಥಿತಿ ಅಷ್ಟೇನು ಉತ್ತಮವಾಗಿರಲಿಲ್ಲ. ಹಿಂದಿನ ಅರಸರು ಅಸಮರ್ಥರಾಗಿದ್ದರಿಂದ ಸಹಜವಾಗಿಯೇ ರಾಜ್ಯ ದುರ್ಬಲಗೊಂಡು ಆಂತರಿಕ ಪ್ರತಿಭಟನೆಗಳು ಮೇಲ್ಗೈ ಸಾಧಿಸಿದ್ದವು. ಕೃಷ್ಣದೇವರಾಯನು ತನ್ನ ರಾಜ್ಯದ ಆಂತರಿಕ ಪ್ರತಿಭಟನೆಯನ್ನು ದಮನಗೊಳಿಸಿದ ನಂತರ ಪರಂಪರಾಗತವಾಗಿ ಬಂದ ಮುಸ್ಲಿಂರೊಂದಿಗಿನ ಹೋರಾಟವು ಒಂದು ದೊಡ್ಡ ಸಮಸ್ಯೆಯಾಗಿತ್ತು. ವಿಜಯನಗರ ಹಾಗೂ ದಖ್ಖನ್ನಿನ ಮುಸ್ಲಿಂ ರಾಜ್ಯಗಳ ನಡುವಿನ ಸಂಬಂಧವೂ ಎಂದೂ ಸೌಹಾರ್ದ್ಯವಾಗಿರಲಿಲ್ಲ. ಮುಸ್ಲಿಂ ಸಾಮ್ರಾಜ್ಯಗಳನ್ನು ಬಗ್ಗುಬಡೆಯಲು ಕೃಷ್ಣದೇವರಾಯನು ಅಗಾಧವಾದ ಸಿದ್ಧತೆಗಳನ್ನು ಮಾಡಿಕೊಂಡಿದ್ದನು. ಕೃಷ್ಣದೇವರಾಯನು ಮುಸ್ಲಿಂ ರಾಜ್ಯದ ಚಾರಿತ್ರಿಕ ವಿಷಯಗಳನ್ನು ಅರಿಯುವ ಸಲುವಾಗಿ ಗೂಢಾಚಾರರನ್ನು ಮತ್ತು ಸಲಹೆಗಾರರನ್ನು ನೇಮಿಸಿಕೊಂಡಿದ್ದನು. ಈ ವಿಷಯವು ಕೃಷ್ಣ ದೇವರಾಯನ 'ಶ್ರೀ ಕೃಷ್ಣರಾಯನ ದಿನಚರಿ' ಮತ್ತು 'ರಾಯವಾಚಕಮು' ಎಂಬ ಕೃತಿಗಳಿಂದ ನಮಗೆ ತಿಳಿದುಬರುತ್ತದೆ. ಈ ಕೃತಿಗಳಲ್ಲಿ ಮುಸ್ಲಿಂ ರಾಜ್ಯಗಳ ಸೈನ್ಯ ಶಕ್ತಿ ಅವರಿಗೆ ವಿಜಯನಗರದ ಬಗ್ಗೆ ಇದ್ದ ದ್ವೇಷ ಹಾಗೂ ನಿಲುವುಗಳು, ಆ ರಾಜರ ಗುಣ ದೋಷಗಳು ಹಾಗೂ ಅವರು ಮಾಡಿಕೊಳ್ಳುತ್ತಿದ್ದ ಯುದ್ಧ ಸಿದ್ಧತೆಗಳ ಬಗ್ಗೆಯ ವಿವರಗಳು ಇವೆ. ಮುಸ್ಲಿಂ ರಾಜ್ಯಗಳು ವಿಜಯನಗರದ ಬಗ್ಗೆ ಇಟ್ಟುಕೊಂಡಿದ್ದ ನಿಲುವಿನ ಮಾಹಿತಿಯು ತುಂಬಾ ಕುತೂಹಲಕಾರಿಯಾಗಿದೆ. ಗೂಢಚಾರರ ಪ್ರಕಾರ ಮುಸ್ಲಿಂ ರಾಜ್ಯಗಳ ಸುಲ್ತಾನರು ವಿಜಯನಗರವು ತಮ್ಮನ್ನು ಎಂದಾದರೂ ಆಕ್ರಮಿಸುತ್ತದೆಂಬ ಸಂದೇಹವನ್ನು ಹೊಂದಿದ್ದಾನೆಂದು ಕೃಷ್ಣದೇವರಾಯನಿಗೆ ವರದಿ ಮಾಡಿರುವುದು ತಿಳಿಯುತ್ತದೆ. ಕೃಷ್ಣದೇವರಾಯನು ಗೂಢಚಾರರನ್ನು ಪದೇ ಪದೇ ಈ ವಿಷಯವಾಗಿ ವಿವರಗಳನ್ನು ತಿಳಿದುಕೊಂಡು ಮಾಹಿತಿಗಳನ್ನು ಖಚಿತಪಡಿಸಿಕೊಳ್ಳುತ್ತಿದ್ದನು.

ಕೃಷ್ಣದೇವರಾಯನು ತನ್ನ ರಾಜ್ಯದ ಆಂತರಿಕ ಪ್ರತಿಭಟನೆಯನ್ನು ಸುಲಭವಾಗಿ ದಮನ ಮಾಡಿದನು. ಆದರೆ ಪರಂಪರಾಗತವಾಗಿ ಬಂದಿದ್ದ ಮುಸ್ಲಿಂರೊಡನೆ ಹೋರಾಟವು ಒಂದು ದೊಡ್ಡ ಸಮಸ್ಯೆಯಾಯಿತು. ವಿಜಯನಗರ ದಖ್ಖನ್ನಿನ ಮುಸ್ಲಿಂ ರಾಜ್ಯಗಳ ನಡುವಿನ ಸಂಬಂಧವನ್ನು ಸೌಹಾರ್ದಯುತವಾಗಿರಲಿಲ್ಲವೆಂದು 'ಶ್ರೀಕೃಷ್ಣರಾಯನ ದಿನಚರಿ', 'ರಾಯವಾಚಕಮು', ಇತರ ಸಾಹಿತ್ಯ ಕೃತಿಗಳು ಹಾಗೂ ಫೆರಿಸ್ತಾನ ಚಾರಿತ್ರಿಕ ವರದಿ ತಿಳಿಸುತ್ತವೆ. ಮೊದಲಿನಿಂದ ಕೃಷ್ಣದೇವರಾಯ ತನ್ನ ಸೈನ್ಯ ಬಲವನ್ನು ಹೆಚ್ಚಿಸಿಕೊಂಡು ಸಜ್ಜುಗೊಳಿಸಿ, ಗೆದ್ದುಕೊಂಡು ರಾಜ್ಯದ ಸರಹದ್ದನ್ನು ಸುರಕ್ಷಿತಗೊಳಿಸಿ ತಮ್ಮ ಸಾಮ್ರಾಜ್ಯವನ್ನು ವಿಸ್ತರಿಸಿಕೊಳ್ಳಲು ನಿರ್ಧರಿಸಿ ಕೊಂಡಿದ್ದನೆಂದು ಕಂಡುಬರುತ್ತದೆ. ಅವನು ದಖ್ಖನ್ನಿನ ಮುಸ್ಲಿಂ ರಾಜ್ಯಗಳ ಮೇಲೆ ಬೀಳಲು ಮಾಡಿಕೊಂಡ ಸಿದ್ಧತೆಗಳ ವಿವರಗಳು ರಾಯವಾಚಕಮು ಮತ್ತು ಶ್ರೀ ಕೃಷ್ಣದೇವರಾಯರ ದಿನಚರಿ ತಿಳಿಸುತ್ತದೆ.[೧೭]

ಮುಸ್ಲಿಂ ರಾಜ್ಯಗಳ ಶಕ್ತಿ ಸಾಮರ್ಥಗಳ ವಿಷಯದಲ್ಲಿ ಕೃಷ್ಣದೇವರಾಯನು ತನ್ನ ಮಂತ್ರಿಗಳೊಂದಿಗೆ ಸಮಾಲೋಚನೆಗಳನ್ನು ನಡೆಸಿರುವುದು ತಿಳಿದುಬರುತ್ತದೆ. ವಿಜಯನಗರ ಸೈನ್ಯದಲ್ಲಿ ಆನೆ ಹಾಗೂ ಕುದುರೆಗಳ ಸಂಖ್ಯೆ ಕಡಿಮೆ ಇದ್ದರೂ ಸಹ ಕಾಲ್ದಳದ ಸಂಖ್ಯೆ ಅಧಿಕವಾಗಿದ್ದು ಶೌರ್ಯ ಹಾಗೂ ಪರಾಕ್ರಮಗಳ ದೃಷ್ಟಿಯಿಂದ ವಿಜಯನಗರ ಸೈನ್ಯವು ಮುಸ್ಲಿಂರ ಸ್ಯನ್ಯಕ್ಕಿಂತ ಹೆಚ್ಚು ಬಲಿಷ್ಟವಾಗಿತ್ತೆಂದು ಮಂತ್ರಿಗಳ ಅಭಿಪ್ರಾಯವಾಗಿತ್ತು. ಮುಸ್ಲಿಂ ಸೈನ್ಯದ ಯುದ್ಧ ನೀತಿಯನ್ನು ವಿಜಯನಗರ ಸೈನ್ಯವು ಚೆನ್ನಾಗಿ ಅರಿತುಕೊಂಡು ಅವರ ಸೈನ್ಯದ ಗುಣದೋಷಗಳನ್ನು ತಿಳಿಯುವಲ್ಲಿ ಸಮರ್ಥರಾಗಿದ್ದರು. ಮುಸ್ಲಿಂ ಸೈನ್ಯಗಳು ಯುದ್ಧ ಮಾಡುವಾಗ ಎದುರಾಳಿಗಳ ಶಕ್ತಿ ಸಾಮರ್ಥ್ಯಗಳನ್ನು ಮುಂದಾಗಿ ಅರಿತುಕೊಳ್ಳಲು ಪ್ರಯತ್ನಿಸುವುದಿಲ್ಲ. ಶತ್ರು ಸೈನ್ಯವು ಸೋತು ಚದುರಿದಾಗ ಪರಾಕ್ರಮದಿಂದ ಆ ಸೈನ್ಯದ ಮೇಲೆ ಎರಗಿದರೆ ಮುಸ್ಲಿಂ ಸೈನ್ಯವು ನಮ್ರತೆಯಿಂದ ನಡೆದುಕೊಳ್ಳುವುದು ಎಂಬ ವಿವರಗಳನ್ನು ಯುದ್ಧ ಸಲಹೆಗಾರರು ಕೃಷ್ಣದೇವರಾಯನಿಗೆ ನೀಡಿದ್ದರು.

**ಯವನ ರಾಜ್ಯ ಸ್ಥಾಪನಾಚಾರ್ಯ**

ಕೃಷ್ಣದೇವರಾಯನಿಗೆ 'ಯವನ ರಾಜ್ಯ ಸ್ಥಾಪನಾಚಾರ್ಯ' ಎಂಬ ಬಿರುದಿರುವುದನ್ನು ಕ್ರಿ.ಶ.೧೫೧೪ರ ಸೆಪ್ಟೆಂಬರ ೧ನೇ ತಾರೀಖಿನ ಪ್ರಸಿದ್ಧವಾದ ಕೊಂಡರಸಯ್ಯನ ಕಂದಕೂರು ಶಾಸನವು ತಿಳಿಸುತ್ತದೆ. ಈ ಶಾಸನದಲ್ಲಿ ಕೃಷ್ಣದೇವರಾಯನನ್ನು ಯವನ ರಾಜ್ಯ ಸ್ಥಾಪನಾಚಾರ್ಯ ಎಂದು ಮೊಟ್ಟಮೊದಲ ಸಲ ಕರೆಯಲಾಗಿದೆ. ಇದೇ ಬಿರುದು ಧರಣೀಕೋಟೆ, ಅಹೋಬಲ, ಸಿಂಹಾಚಲ, ತಿರುಪತಿ, ಶ್ರೀಶೈಲ ಮುಂತಾದ ಸ್ಥಳಗಳಲ್ಲಿರುವ ಶಾಸನಗಳಲ್ಲಿ ಪುನರುಚ್ಚಾರವಾಗಿದೆ. 'ಮನುಚರಿತ್ರೆ'ಯಲ್ಲಿ 'ಯವನಕ್ಷೋಣಿ ಧವಸ್ಥಾಪನಾ ಮಂದೀಭೂತ ಕೃಪಾ ಕಟಾಕ್ಷ' ಎಂದು ಕೃಷ್ಣದೇವರಾಯನನ್ನು ವಿಶ್ಲೇಷಿಸಿ ಹೊಗಳಲಾಗಿದೆ. ಇದರಿಂದ ಕೃಷ್ಣದೇವರಾಯನು ಮುಸ್ಲಿಂ ರಾಜನಿಗೆ ನೆರವು ನೀಡಿರುವುದು ಗೋಚರವಾಗುತ್ತದೆ.

ಶಹಪುರದ ವಿಶ್ವಕರ್ಮ ಏಕದಂಡಿ ಮಠದಲ್ಲಿದ್ದ ತಾಮ್ರಶಾಸನವು ಕೃಷ್ಣದೇವರಾಯನು ಕ್ರಿ.ಶ.೧೫೦೯ ರಿಂದ ೧೫೨೯ ರವರೆಗೆ ಅಳ್ವಿಕೆ ಮತ್ತು ಕೃಷ್ಣದೇವರಾಯನು ಗುಲ್ಬರ್ಗಾ, ಬೀದರನ್ನು ಪ್ರವೇಶಿಸಿ ಕ್ರಿ.ಶ. ೧೫೨೩ರಲ್ಲಿ ೩ನೇ ಮಹಮ್ಮದಷಾನ ಮೊಮ್ಮಗನನ್ನು ಸುಲ್ತಾನನ್ನಾಗಿ ನೇಮಿಸಿದ್ದನ್ನು ಮತ್ತು ಸುಲ್ತಾನನ ಆಳ್ವಿಕೆಯನ್ನು ಪುನಶ್ಚೇತನಗೊಳಿಸಿದ್ದನ್ನು ಮುಸ್ಲಿಂ ಚಕ್ರಾಧಿಪತ್ಯದ ಮೇಲೆ ತನ್ನ ಹತೋಟಿಯನ್ನು ಸ್ಥಾಪಿಸಿದ್ದನ್ನು ಹಾಗೂ ಈ ರಾಜಕೀಯ ಸಾಧನೆಯಿಂದಾಗಿ ಬಿರುದು ಪ್ರಾಪ್ತವಾದದ್ದನ್ನು ಈ ಶಾಸನವು ತಿಳಿಸುತ್ತದೆ.[೧೮]

ಕೃಷ್ಣದೇವರಾಯನ ಮೊದಲ ದಿಗ್ವಿಜಯವು ಬೀದರ್ ಮತ್ತು ಬಿಜಾಪುರಗಳ ಸುಲ್ತಾನರಾಗಿದ್ದ ಎರಡನೇ ಮಹಮ್ಮದ್‌ಷಾ ಮತ್ತು ಯುಸುಫ್ ಆದಿಲ್‌ಷಾಹಿ ಇವರ ವಿರುದ್ಧವಾಗಿ ನಡೆಯಿತು. ರಾಯನು ಅವರ

ಮೇಲೇ ಸಿಡಿಲಿನಂತೆ ಎರಗಿ ಎರಡೂ ಸೈನ್ಯಗಳನ್ನೂ ಧೂಳೀಪಟ ಮಾಡಿದನು. ಯುದ್ಧದಲ್ಲಿ ಮಹಮ್ಮದ್ ಷಾನು ತೀವ್ರವಾಗಿ ಗಾಯಗೊಂಡು ಯುದ್ಧರಂಗದಿಂದ ನಿರ್ಗಮಿಸಿದನು. ಯೂಸುಫ್ ಷಾನು ಯುದ್ಧರಂಗದಲ್ಲಿಯೇ ಮರಣವನ್ನಪ್ಪಿದನು. ಇಂತಹ ಅಪಜಯವನ್ನು ಮುಸ್ಲಿಂ ಸೈನಿಕರಾಗಲಿ, ಸುಲ್ತಾನರಾಗಲಿ ಇಲ್ಲಿಯವರೆಗೂ ಕಂಡಿರಲಿಲ್ಲವೆಂದು ಹೇಳಬಹುದು. ನಂತರ ಕೃಷ್ಣದೇವರಾಯನು ರಾಯಚೂರು ಹಾಗೂ ಗುಲ್ಬರ್ಗಾ ಕೋಟೆಗಳ ಮೇಲೆ ದಾಳಿಮಾಡಿ ಅವುಗಳನ್ನು ವಶಪಡಿಸಿಕೊಂಡನು. ಸೈನ್ಯವನ್ನು ಮುನ್ನುಗ್ಗಿಸಿ ಬೀದರನಲ್ಲಿ ತನ್ನ ಮಂತ್ರಿಯ ಬಂಧಿಯಾಗಿದ್ದ ಎರಡನೇ ಮಹಮ್ಮದ್ ಷಾಹನನ್ನು ಬಂಧನದಿಂದ ಬಿಡಿಸಿ ಕೃಷ್ಣದೇವರಾಯನು ಅವನನ್ನು ಸಿಂಹಾಸನದಲ್ಲಿ ಪ್ರತಿಷ್ಠಾಪಿಸಿದನು. ಈ ಕಾರ್ಯದಿಂದಾಗಿ ಕೃಷ್ಣದೇವರಾಯನಿಗೆ 'ಯವನ ರಾಜ್ಯ ಪ್ರತಿಷ್ಠಾಪನಾಚಾರ್ಯ' ಎಂಬ ಬಿರುದು ಬಂದಿತು. ಬೀದರಿನ ಸುಲ್ತಾನನು ಕೃಷ್ಣದೇವರಾಯನಿಗೆ ಎಂದಿಗೂ ಚಿರಋಣಿಯಾದನು. ಈ ರೀತಿಯಾಗಿ ಬಹಮನಿ ಸುಲ್ತಾನನ ವಿರುದ್ಧದ ಕೃಷ್ಣದೇವರಾಯನ ಯುದ್ಧವು ಮುಕ್ತಾಯಗೊಂಡಿತು.

ಕ್ರಿ.ಶ. ೧೬ನೇ ಶತಮಾನವು ಭಾರತ ಇತಿಹಾಸದ ಹೋರಾಟದ ಕಾಲ. ದಕ್ಷಿಣದಲ್ಲಿ ಈ ಕಾದಾಟವು ಮುಖ್ಯವಾಗಿ ವಿಜಯನಗರ ಮತ್ತು ಬಹಮನಿ ರಾಜ್ಯಗಳಿಗೆ ಸೀಮಿತವಾಗಿದ್ದು, ಆಗಾಗ ಒರಿಸ್ಸಾ, ಗುಜರಾತ್ ಮತ್ತು ಮಾಳವಗಳಿಗೂ ಹಬ್ಬಿತ್ತು. ಈ ಕಡೆ ಉತ್ತರದಲ್ಲಿ ದೆಹಲಿ ಸುಲ್ತಾನರ ಆಡಳಿತ ಹದಗೆಟ್ಟ ಸಂದರ್ಭದಲ್ಲಿ, ಇನ್ನೊಂದು ಕಡೆ ದಖ್ಖನ್ನಿನಲ್ಲಿ ಬಹಮನಿ ಸಾಮ್ರಾಜ್ಯವು ಬೀರಾರ್, ಬೀದರ್, ಅಹಮದ್‌ನಗರ, ಬಿಜಾಪುರ ಮತ್ತು ಗೋಲ್ಕಂಡ ಐದು ಷಾಹಿ ರಾಜ್ಯಗಳಾಗಿ ಭಾಗವಾದರೆ. ವಿಜಯನಗರದಲ್ಲಿ ಆಂತರಿಕ ಭಿನ್ನತೆಗಳು ಮತ್ತು ಪರಸ್ಪರ ಅಸೂಯೆಗಳಿಂದಾಗಿ ಮುಳುಗಿತ್ತು. ಮುಸ್ಲಿಂ ರಾಜ್ಯಗಳು ಬಹುಬೇಗ ದುರ್ಬಲವಾದಂತಹ ಸಂದರ್ಭದಲ್ಲಿ ಕ್ರಿ.ಶ.೧೫೮೧ರಲ್ಲಿ ಬಾಬರನು ಭಾರತಕ್ಕೆ ಬಂದಾಗ ದಕ್ಷಿಣದಲ್ಲಿ ಈ ಎರಡೂ ಸಾಮ್ರಾಜ್ಯಗಳು ತಡೆಯದೆ ಹೋದರು. ಪರಿಣಾಮವಾಗಿ ಉತ್ತರದಲ್ಲಿ ಕ್ರಿ.ಶ. ೧೫೨೬ರಲ್ಲಿ ಬಾಬರ್ ಮೊಗಲ್ ಸಾಮ್ರಾಜ್ಯ ಸ್ಥಾಪಿಸಿದನ್ನು ಪ್ರಸ್ತುತ ಅಧ್ಯಾಯದಲ್ಲಿ ನೋಡಬಹುದು.[೧೯]

**೫.೨. ಬಹಮನಿ ಮತ್ತು ವಿಜಯನಗರಗಳ ನಡುವಿನ ಸಾಮಾಜಿಕ ಸಂಬಂಧಗಳು**

ಬಹಮನಿ ಕಾಲದ ಸಾಮಾಜಿಕ ಜೀವನದ ಅಧ್ಯಾಯವು ವಿಜಯನಗರ ಸಾಮ್ರಾಜ್ಯದಷ್ಟೇ ಆಸಕ್ತಿದಾಯಕವಾಗಿದೆ. ಅಂದಿನ ಶಾಸನಗಳು, ಕೃತಿಗಳು ಮತ್ತು ವಿದೇಶಿ ಪ್ರವಾಸಿಗರ ಬರಹಗಳು ಇವೆರಡೂ ಸಾಮ್ರಾಜ್ಯದ ಸಾಮಾಜಿಕ ಜೀವನದ ಮೇಲೆ ಸಾಕಷ್ಟು ಬೆಳಕನ್ನು ಚೆಲ್ಲಿವೆ. ಧರ್ಮ ಮತ್ತು ಸಂಸ್ಕೃತಿಗಳ ರಕ್ಷಣೆಗಾಗಿ ಇವೆರಡೂ ಸಾಮ್ರಾಜ್ಯಗಳಲ್ಲಿ ಅನೇಕ ಬದಲಾವಣೆಗಳು ಮತ್ತು ಸುಧಾರಣೆಗಳು ಉಂಟಾದವು. ಧರ್ಮದ ವಿಚಾರದಲ್ಲಿ ವಿಜಯನಗರ ಮತ್ತು ಬಹಮನಿ ಸಾಮ್ರಾಜ್ಯಗಳೆರಡರಲ್ಲಿಯೂ ಜನರು ತಮ್ಮ ತಮ್ಮ ಧರ್ಮವನ್ನು ಪಾಲಿಸುವಲ್ಲಿ ನಿರತರಾಗಿದ್ದರು. ಅರಸರು ಮತ್ತು ಸುಲ್ತಾನರು ಪ್ರಜೆಗಳ ಸನಾತನ ಧರ್ಮಗಳನ್ನು ಪೋಷಿಸುವಲ್ಲಿ ಮತ್ತು ಸಾಮಾಜಿಕ ಶಾಂತಿಯನ್ನು ಕದಡದಂತೆ ನೋಡಿಕೊಳ್ಳುವಲ್ಲಿ ಆಸಕ್ತಿ ಹೊಂದಿದ್ದರು ಈ ಕಾಲದಲ್ಲಿ ದಖ್ಖನ್ ಸಮಾಜದಲ್ಲಿ ಹಿಂದೂ ಮತ್ತು ಮುಸ್ಲಿಂ ಎರಡೂ ಪಂಗಡಗಳ ಸಂತರು ಸೇರಿ ಇವೆರಡರ ಮಧ್ಯೆ ಸಾಂಸ್ಕೃತಿಕವಾಗಿ ಏಕೀಕರಣಗೊಳಿಸಲು ಪ್ರಯತ್ನಿಸಿ ಸ್ವಲ್ಪಮಟ್ಟಿನ ಯಶಸ್ಸನ್ನು ಪಡೆದರು.[೨೦]

ಆಡಳಿತ ವರ್ಗಗಳೂ ಕೂಡ ಜನರಿಂದ ದೂರ ಉಳಿಯುವಂತಿರಲಿಲ್ಲ ಮತ್ತು ತಮ್ಮ ಸಮಾಜದ ಆಡಳಿತ ವೈಖರಿಯ ತೀಕ್ಷ್ಣತೆಯ ನ್ಯೂನ್ಯತೆಯನ್ನು ತೋರಿಸಿಕೊಳ್ಳುವಂತಿರಲಿಲ್ಲ, ಏಕೆಂದರೆ ಸ್ಥಳೀಯ ಜನರು ದಂಗೆ ಏಳದಂತೆ ನೋಡಿಕೊಳ್ಳಬೇಕಾಗಿತ್ತು. ಆದ್ದರಿಂದ ಇದನ್ನರಿತ ಬಹಮನಿ ಆಡಳಿತಗಾರರು

ಹಿಂದೂ ಪ್ರಜೆಗಳು ಮತ್ತು ತಮ್ಮ ನಡುವೆ ಕೊಡು-ಕೊಳ್ಳುವ ವ್ಯವಹಾರ ಇಟ್ಟುಕೊಂಡಿದ್ದರು. ಇದರಿಂದ ಬಹಮನಿ ಮತ್ತು ವಿಜಯನಗರ ಸಾಮ್ರಾಜ್ಯಗಳೆರಡೂ ದಂಗೆ ಏಳದಂತಹ ಪ್ರಯತ್ನವನ್ನು ಬಹಮನಿ ಸುಲ್ತಾನರು ಆಡಳಿತದಲ್ಲಿ ಮಾಡಿದರು.

ವಿಜಯನಗರ ಕಾಲದಲ್ಲಿ ಸಮಾಜವು ಶ್ರೇಣೀಕೃತ ಸಾಮಾಜಿಕ ರಚನೆಗೆ ಅನುಗುಣವಾಗಿಯೇ ರೂಪುಗೊಂಡಿತ್ತು. ಹಲವಾರು ಜಾತಿಗಳು, ಉಪಜಾತಿಗಳಿದ್ದು, ಮೇಲು-ಕೀಳೆಂಬ ಭಾವನೆಗಳು ಬೆಳೆದು ಬಂದಿದ್ದವು. ಬ್ರಾಹ್ಮಣರು ಸಮಾಜದಲ್ಲಿ ಶ್ರೇಷ್ಠ ಸ್ಥಾನಮಾನವನ್ನು ಹೊಂದಿ ಪ್ರಭಾವಶಾಲಿಗಳಾಗಿದ್ದರು. ಸಮಾಜದ ಉನ್ನತ ಹುದ್ದೆಗಳಾದಂತಹ ವಿದ್ವಾಂಸರು, ಜ್ಯೋತಿಷಿಗಳು, ಪುರೋಹಿತರು, ಮಂತ್ರಿಗಳು, ದಂಡನಾಯಕರು, ಭೂಮಾಲೀಕರು, ಮುಂತಾದವುಗಳನ್ನು ಹೆಚ್ಚಾಗಿ ಬ್ರಾಹ್ಮಣರೇ ಅಲಂಕರಿಸಿದ್ದರು. ನ್ಯೂನಿಜ್‌ನ ಪ್ರಕಾರ "ಇವರು ಪ್ರಾಮಾಣಿಕರು, ವ್ಯವಹಾರ ಕುಶಲರು, ಪ್ರತಿಭಾವಂತರು ಮತ್ತು ತೀಕ್ಷ್ಣಮತಿಗಳು, ಲೆಕ್ಕನಿಪುಣರು, ಸುಶಿಕ್ಷಿತರು, ಜ್ಞಾನಿಗಳು ಆಗಿದ್ದು ಶ್ರಮದ ಕೆಲಸಗಳಿಗೆ ಅನರ್ಹರಾಗಿದ್ದರು."[೨೧]

ಬಹಮನಿ ಸಾಮ್ರಾಜ್ಯದಲ್ಲಿ ದಖ್ಖನಿನ ಮುಸ್ಲಿಮರಲ್ಲಿ ಶ್ರೀಮಂತ ವರ್ಗವೊಂದು ಹುಟ್ಟಿಕೊಂಡಿತ್ತು. ಇವರಲ್ಲಿ 'ಅಫಾಕೀಸ್' ಮತ್ತು 'ಪರದೇಶಿ' ಎಂಬ ಎರಡು ಬಗೆಯ ಬಣಗಳಿದ್ದವು.[೨೨] ಸ್ಥಳೀಯ ಶ್ರೀಮಂತರಿಗೆ ದಖ್ಖನಿ ಶ್ರೀಮಂತರೆಂದು ಕರೆಯುತ್ತಿದ್ದರು. ಸದಾ ಕಾಲ ಈ ಬಣಗಳ ಮಧ್ಯೆ ಅಧಿಕಾರ, ಐಶ್ವರ್ಯ ಮತ್ತು ಪ್ರಾಮುಖ್ಯತೆಗಾಗಿ ಹೋರಾಟಗಳು ನಡದೇ ಇದ್ದವು. ಬಹಮನಿ ರಾಜ್ಯದಲ್ಲಿ ದಖ್ಖನ್ ಮುಸ್ಲಿಮರನ್ನು ನಾಲ್ಕು ವರ್ಗಗಳಲ್ಲಿ ವಿಂಗಡಿಸಬಹುದು, ಅವುಗಳೆಂದರೆ ಆಡಳಿತ ವರ್ಗ, ವ್ಯಾಪಾರಿಗಳು, ಗುಲಾಮರು ಮತ್ತು ಧಾರ್ಮಿಕ ಮುಖಂಡರು. ಅದೇ ರೀತಿ ಹಿಂದೂಗಳಂತೆ ಜಾತಿಯ ವರ್ಗೀಕರಣದಲ್ಲೂ ಶಿಯಾ, ಸುನ್ನಿ, ಶೇಖ್, ಸೈಯ್ಯದ್ ಎನ್ನುವ ಉಪಪಂಗಡಗಳಿದ್ದವು, ಇವುಗಳಲ್ಲಿ ಕೆಲವರು ಮತಾಂತರಿಗಳು ಮತ್ತು ಕೆಲವರು ಸ್ಥಳೀಯ ಸ್ತ್ರೀಯರನ್ನು ಮದುವೆಯಾಗಿ ಹಿಂದೂ-ಮುಸ್ಲಿಂ ಜನಾಂಗೀಯ ಮಿಶ್ರಣವಾಗಿರುವುದನ್ನು ಬಹಮನಿ ರಾಜ್ಯದಲ್ಲಿ ಕಾಣಬಹುದು.

ಸಮಾಜದಲ್ಲಿ ಎರಡೂ ರಾಜ್ಯಗಳಲ್ಲಿ ಗುಲಾಮರನ್ನು ಬಿಟ್ಟರೆ ಉಳಿದೆಲ್ಲಾ ವರ್ಗದವರು ಶ್ರೀಮಂತ ವರ್ಗದವರಾಗಿದ್ದರು. ಗುಲಾಮರು ಸುಲ್ತಾನರ ಅಥವಾ ಅರಸರ ಸೇವೆಗಳಲ್ಲಾಗಲ್ಲೀ, ಅಮೀರರ ಸೇವೆಗಳಲ್ಲಾಗಲೀ ನಿರತರಾಗಿರುತ್ತಿದ್ದರು. ಅವರಿಗೆ ಊಟ ಮತ್ತು ಉತ್ತಮ ಜೀವನ ಸಾಗಿಸಲು ಯಾವ ಕೊರತೆಯೂ ಇರಲಿಲ್ಲ, ಮೇಲಾಗಿ ಮುಸ್ಲಿಂ ಸಮಾಜದಲ್ಲಿ ದೆಹಲಿ ಸುಲ್ತಾನರಿಂದ ನಡೆದು ಬಂದಂತಹ ಗುಲಾಮಗಿರಿ ಪದ್ಧತಿಯು ಸಾಮಾನ್ಯವಾಗಿತ್ತು. ಕೆಲವು ಗುಲಾಮರು ಉನ್ನತ ಹುದ್ದೆಯನ್ನೂ ಸಹ ಅಲಂಕರಿಸಿದ್ದರು. ಬಹಮನಿ ಸಾಮ್ರಾಜ್ಯದಲ್ಲಿಯೂ ಸಹ ಮಹತ್ವದ ಗುಲಾಮರೆಂದರೆ ಮಹಮ್ಮದ್ ಗವಾನ್, ಯುಸುಫ್ ಆದಿಲ್ ಖಾನ್, ಮಲ್ಲಿಕ್ ಹಸನ್, ಖಾಸಿಂ ಬರೀದ್ ಮುಂತಾದವರು.[೨೩] ಬಹಮನಿ ರಾಜ್ಯದಲ್ಲಿ ವೈಭವಯುತ ಜೀವನ, ಕುಡಿತ, ಜೂಜುಗಳು ಶ್ರೀಮಂತರ ಜೀವನದಲ್ಲಿ ಹಾಸುಹೊಕ್ಕಾಗಿದ್ದವು. ಕುಡಿತದ ಹವ್ಯಾಸವು ಸಾಮಾನ್ಯವಾಗಿ ಎಲ್ಲಾ ಜನರಲ್ಲಿಯೂ ಕಂಡುಬರುತ್ತಿತ್ತು.

ವಿಜಯನಗರ ಕಾಲದಲ್ಲಿಯೂ ಸಹ ಗುಲಾಮಗಿರಿ ಪದ್ಧತಿ ಇತ್ತೆಂದು ತಿಳಿದುಬರುತ್ತದೆ. ಪುರುಷ ಮತ್ತು ಸ್ತ್ರೀ ಜೀತದಾಳುಗಳು ಇದ್ದರೆಂದು ಶಾಸನಗಳಿಂದ ಮತ್ತು ವಿದೇಶಿ ಪ್ರವಾಸಿಗಳ ಹೇಳಿಕೆಗಳಿಂದ ವೇದ್ಯವಾಗುತ್ತದೆ. ಬಡವರ ಮನೆಯ ಹೆಂಗಸರು ಧನಿಕರ ಗೃಹಗಳಲ್ಲಿ ಹೊಟ್ಟೆಪಾಡಿಗಾಗಿ ದುಡಿಮೆ ಮಾಡುವುದು, ನೀರು ತಂದುಕೊಡುವುದು ಮುಂತಾದ ಕೆಲಸಗಳನ್ನು ಮಾಡುತ್ತಿದ್ದರು. "ಅವರು ಅಸಂಖ್ಯಾತ ಗುಲಾಮರನ್ನು ಹೊಂದಿದ್ದರು, ದಿವಾಳಿಯಾದ ಸಾಲಗಾರನನ್ನು ಸಾಲ ಕೊಟ್ಟವರ ಆಸ್ತಿ ಎಂದು ತೀರ್ಮಾನಿಸಲಾಗುತ್ತಿತ್ತು" ಎಂದು ನಿಕೊಲೋ ಕಾಂಟಿ ತಿಳಿಸಿದ್ದಾನೆ.[೨೪]

ಬಹಮನಿ ಮತ್ತು ವಿಜಯನಗರದ ಆಸ್ಥಾನಗಳೆರಡರಲ್ಲೂ ಅನೇಕ ಪಂಡಿತರು, ಮಂತ್ರಿಗಳು ಮತ್ತು ಅತಿ ಪ್ರತಿಭಾಶಾಲಿ ವಿದ್ವಾಂಸರಿದ್ದರು. ಅರಸರು ಮತ್ತು ಸುಲ್ತಾನರು ಇವರೆಲ್ಲರ ಆಶ್ರಯದಾತರಾಗಿದ್ದರು. ವಿಜಯನಗರ ರಾಜರ ಕಾಲದಲ್ಲಿ ರಾಜರು ಹಾಗೂ ಪ್ರಜೆಗಳು ವರ್ಣಾಶ್ರಮ ಧರ್ಮವನ್ನು ಪಾಲಿಸುತ್ತಿದ್ದರು. ಸಾಮಾನ್ಯ ಪ್ರಜೆಗಳು ಸಾಂಘಿಕ ಜೀವನವನ್ನು ನಡೆಸುತ್ತಿದ್ದರು. ಪ್ರಜೆಗಳು ಸಾಮಾಜಿಕ ಸಂದರ್ಭಗಳಲ್ಲಿ ಅಧಿಕಾರಿಗಳ ಸಹಾಯವನ್ನು ಹೆಚ್ಚಾಗಿ ಅವಲಂಬಿಸಿರದೆ ತಾವೇ ತಮ್ಮ ಅವಶ್ಯಕತೆಗಳನ್ನು ನೆರವೇರಿಸಿ ಕೊಳ್ಳುತ್ತಿದ್ದರು. ಹಿಂದೂಗಳಲ್ಲಿ ಹಲವಾರು ಒಳಪಂಗಡಗಳಿದ್ದವೆಂದು ಬಾರ್ಬೊಸಾ ಹೇಳುತ್ತಾನೆ.[೨೫] ಈ ಒಳ ಪಂಗಡಗಳೆಂದರೆ, ಕ್ಷತ್ರಿಯರು, ಬ್ರಾಹ್ಮಣರು, ವೀರಶೈವರು. ಕ್ಷತ್ರಿಯರು ಹೆಚ್ಚಾಗಿ ಪ್ರಭುಗಳು, ಆಡಳಿತಗಾರರು ಅಥವಾ ಯೋಧರು ಆಗಿರುತ್ತಿದ್ದರು. ಬ್ರಾಹ್ಮಣರು ಹೆಚ್ಚಾಗಿ ಪುರೋಹಿತರಾಗಿದ್ದು, ದೇವಸ್ಥಾನದ ಮೇಲ್ವಿಚಾರಕರಾಗಿರುತ್ತಿದ್ದರು. ಇವರು ಸಸ್ಯಾಹಾರಿಗಳು, ಏಕ ಪತ್ನೀವ್ರತಸ್ಥರು ಹಾಗೂ ಇತರರಿಂದ ದಾನವನ್ನು ಸ್ವೀಕರಿಸುವವರು ಆಗಿದ್ದರು. ಇವರಿಗೆ ಸಮಾಜದಲ್ಲಿ ವಿಶೇಷ ಸ್ಥಾನಮಾನಗಳಿದ್ದವು. ಇಲ್ಲಿ ವೀರಶೈವರು, ಅನೇಕ ವರ್ತಕರು, ವಾಣಿಜ್ಯೋದ್ಯಮಿಗಳೂ ಸಹ ಆಗಿದ್ದರು. ಸತ್ತವರನ್ನು ಹೂಳುವ ಪದ್ಧತಿ ಇವರಲ್ಲಿತ್ತು. ವಿಜಯನಗರದಲ್ಲಿ ಇವರಲ್ಲದೇ ವೈಶ್ಯರು, ಜೈನರು ಸಹ ಇದ್ದರೆಂದು ಶಾಸನಗಳಿಂದ ಮತ್ತು ಪುರಂದರ ದಾಸರ ವಚನಗಳಿಂದ ತಿಳಿದುಬರುತ್ತದೆ.

ವಿಜಯನಗರ ಕಾಲದ ಮನೆಗಳನ್ನು ಕುರಿತು ನ್ಯೂನಿಜ್ ವರ್ಣಿಸುವುದೇನೆಂದರೆ–"ದೇವಸ್ಥಾನಗಳು, ಅರಮನೆಗಳು ಮತ್ತು ನಾಗರಿಕ ಭವನಗಳು ಅತ್ಯಂತ ಅಲಂಕೃತ ಮತ್ತು ಭವ್ಯವಾಗಿ ನಿರ್ಮಿಸಲ್ಪಟ್ಟಿದ್ದವು. ಆದರೆ ಬಡಜನರ ಮನೆಗಳಂತೂ ತೀರಾ ಕೊಳಕಿನ ಮುದ್ದೆಯಾಗಿದ್ದವು. ಹೀಗೆ ವಿಜಯನಗರ ಕಾಲದಲ್ಲಿ ಅಂದಿನ ಸಾಮಾನ್ಯ ಜನರ ಮನೆಗಳನ್ನು ಕಣ್ಣಾರೆ ಕಂಡ ಸಮಕಾಲೀನ ಪ್ರವಾಸಿಗರು ಕೊಡುವ ಚಿತ್ರ ಬೇರೆ ಬೇರೆಯೇ ಆಗಿದೆ."[೨೬] ಬಾರ್ಬೊಸನ ಪ್ರಕಾರ– "ಸಾಮಾನ್ಯ ಜನತೆಯ ಮನೆಗಳು ಹುಲ್ಲು ಹೊದಿಸಿದವುಗಳೇ ಆಗಿದ್ದರೂ, ಅವುಗಳು ಅವರವರ ವೃತ್ತಿಗನುಸಾರವಾಗಿ ವಿಂಗಡಿಸಲ್ಪಟ್ಟು, ಉದ್ದವಾದ ಬೀದಿಯ ಅಕ್ಕಪಕ್ಕದಲ್ಲಿ ಅಗಲವಾದ ಅಂಗಳದಿಂದ ಕೂಡಿ ನಿರ್ಮಿತವಾಗಿದ್ದವು."[೨೭] ಪೇಸ್ ತಿಳಿಸಿರುವಂತೆ– "ಹಂಪೆಯ ಬಜಾರವು ಅತ್ಯಂತ ಸುಂದರವಾದ ಮಹಡಿಗಳಿಂದ, ಕಮಾನಿನಂತೆ ಮೇಲ್ಛಾವಣಿಗಳಿಂದ ನಿರ್ಮಿತವಾದ ಮನೆಗಳಿಂದ ತುಂಬಿತ್ತು. ನಾಗಲಾಪುರದ ಮನೆಗಳೆಲ್ಲಾ ಒಂದು ಅಂತಸ್ತಿನ ತಾರಸಿ ಮನೆಗಳಾಗಿದ್ದವು. ಅತಿಥಿಗಳನ್ನು ಬರಮಾಡಿಕೊಂಡು ಕುಳ್ಳಿರಿಸಲು ತಕ್ಕ ವಿಶಾಲವಾದ ಅಂಗಳಗಳಿದ್ದವು. ಆ ಒಂದೊಂದು ಮನೆಗಳು ಅರಮನೆಗಳು ಎಂಬ ಭ್ರಮೆಯನ್ನುಂಟು ಮಾಡುತ್ತಿದ್ದವು."[೨೮] ಬಹಮನಿ ಕಾಲದಲ್ಲಿ ರಾಜಮನೆತನದವರು ಮತ್ತು ಶ್ರೀಮಂತ ಮನೆತನದವರು ವೈಭವದ ಜೀವನ ನಡೆಸುತ್ತಿದ್ದರು. ಸಾಮಾನ್ಯ ಗೃಹಗಳು ಕೂಡಾ ಮೂರು ಮತ್ತು ನಾಲ್ಕು ಕೊಠಡಿ ಹೊಂದಿದ್ದವೆಂದು ಭೂ ಸಂಶೋಧನೆಯಿಂದ ತಿಳಿದುಬರುತ್ತದೆ. ಬಹುತೇಕ ಗೃಹಗಳು ವಿಶಾಲ ಪ್ರಾಂಗಣಗಳನ್ನು ಹೊಂದಿದ್ದು, ರಂಗೋಲಿಯಿಂದ ಅಲಂಕೃತವಾಗಿರುತ್ತಿದ್ದವು. ಬಹಮನಿ ಮತ್ತು ವಿಜಯನಗರ ರಾಜ್ಯಗಳೆರಡರಲ್ಲೂ ಜನರು ಅಡುಗೆ ಮನೆಯಲ್ಲಿ ಜೇಡಿ ಮಣ್ಣಿನ ಮತ್ತು ಲೋಹದ ಪಾತ್ರೆಗಳನ್ನು ಬಳಸುತ್ತಿದ್ದರು ಹಾಗೂ ಈ ಜೇಡಿ ಮಣ್ಣಿನಿಂದ ತಯಾರಿಸಿದ ಆಟದ ಸಾಮಾನುಗಳು ಮಕ್ಕಳಿಗೆ ಖುಷಿ ತಂದುಕೊಡುತ್ತಿದ್ದವು.

ವಿಜಯನಗರದ ಸಮಾಜದಲ್ಲಿ ಸ್ತ್ರೀಯು ಗಣ್ಯವಾದ ಸ್ಥಾನವನ್ನು ಪಡೆದಿದ್ದಳು. ಸ್ತ್ರೀಯರಿಗೆ ವಿದ್ಯಾಭ್ಯಾಸ ಮತ್ತು ಲಲಿತ ಕಲೆಗಳನ್ನು ಅಭ್ಯಾಸ ಮಾಡಲು ಯಾವುದೇ ಪ್ರತಿಬಂಧವೂ ಇರಲಿಲ್ಲ. ಕೃಷ್ಣದೇವರಾಯನ ಆಸ್ಥಾನದಲ್ಲಿ ೪೦೦ ಜನ ಸೇವಕಿಯರಿದ್ದು, ಇವರೆಲ್ಲರೂ ನ್ಯಾಯ ದಾನ, ರಕ್ಷಾ ವಿಧಾನ, ಗಣಿತ, ಲೇಖನ

ಕಲೆ, ಕಾವ್ಯ, ಸಂಗೀತ, ನೃತ್ಯ, ವಾದನ ಮುಂತಾದ ಎಲ್ಲಾ ಪ್ರಕಾರಗಳಲ್ಲೂ ಪರಿಣಿತರಾಗಿದ್ದರು. ವಿವಾಹ ಮತ್ತು ಕುಟುಂಬವು ಸಮಾಜದ ಬಹುಮುಖ್ಯ ಭಾಗವಾಗಿತ್ತು, ಬಾಲ್ಯ ವಿವಾಹ ರೂಢಿಯಲ್ಲಿತ್ತು. ವರದಕ್ಷಿಣೆ ಮತ್ತು ವಧುದಕ್ಷಿಣೆ ಎರಡೂ ರೂಢಿಯಲ್ಲಿದ್ದವೆಂದು ಶಾಸನಗಳಿಂದ ತಿಳಿದುಬರುತ್ತದೆ. ಗೌಡರು ಮತ್ತು ನಾಯಕರು ಸತಿ ಸಹಗಮನ ಪದ್ಧತಿಯನ್ನು ಆಚರಿಸುತ್ತಿದ್ದು, ಈ 'ಸತಿ' ಪದ್ಧತಿ ಬಗ್ಗೆ ಬಾರ್ಬೋಸಾ, ನ್ಯೂನಿಜ್ ಮತ್ತು ಸೀಜರ್ ಫ್ರೆಡರಿಕ್ ಮುಂತಾದ ವಿದೇಶಿ ಪ್ರವಾಸಿಗರು ವಿಸ್ತಾರವಾದ ವಿವರಣೆಯನ್ನು ಕೊಟ್ಟಿದ್ದಾರೆ. ಹಿಂದೂಗಳಲ್ಲಿ ಪತಿಯ ಮರಣದ ಎರಡು–ಮೂರು ತಿಂಗಳುಗಳ ನಂತರ ವಿಧವೆಯರು 'ಸತಿ' ಪದ್ಧತಿಯನ್ನು ಆಚರಿಸುತ್ತಿದ್ದರು. ಸಮಾಜದಲ್ಲಿ ಮುಸ್ಲಿಮರ ಆಗಮನದಿಂದ ಈ ಪದ್ಧತಿಯು ಹೆಚ್ಚು ಜನಪ್ರಿಯವಾಯಿತು. ಸ್ತ್ರೀಯರು ತಮ್ಮ ಮಾನವನ್ನು ಕಾಪಾಡಿಕೊಳ್ಳಲು ಈ ಪದ್ಧತಿಯನ್ನು ಅನುಸರಿಸುತ್ತಿದ್ದರು. ಕರ್ನಾಟಕದಲ್ಲಿ ನಾವು ಕಾಣುವ ಅನೇಕ 'ಸತೀಕಲ್ಲು' ಮತ್ತು 'ಮಾಸ್ತಿಕಲ್ಲು'ಗಳು ಈ ಪದ್ಧತಿಯ ಅಸ್ತಿತ್ವದ ಸಾಕ್ಷಿಯಾಗಿ ನಿಂತಿವೆ. ಸತೀ ಪದ್ಧತಿಯನ್ನು ಪಾಲಿಸದ ಸ್ತ್ರೀಯರಿಗೆ ತಲೆಯನ್ನು ಬೋಳಿಸುವ ಶಿಕ್ಷೆ ನೀಡಲಾಗುತ್ತಿತ್ತು.[೨೯]

ವಿಜಯನಗರದಲ್ಲಿ ಸ್ತ್ರೀಯರು ವಾಣಿಜ್ಯ ಕ್ಷೇತ್ರಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದರು. ಇವರು ಅಂಗಡಿಗಳಿಗೆ ಭೂಷಣದಂತಿದ್ದರೆಂದು ಕನಕದಾಸರು ಹೇಳಿದ್ದಾರೆ. ಸಮಾಜದಲ್ಲಿ ಸ್ತ್ರೀಯರಿಗೆ ಗೌರವಾನ್ವಿತ ಸ್ಥಾನಮಾನಗಳು ಸಿಕ್ಕಿದ್ದರೂ ಸಹ ಅದರ ವಲಯ ಅತ್ಯಂತ ಪರಿಮಿತವಾಗಿತ್ತು. ರಾಜಮನೆತನದ ಮಹಿಳೆಯರು ಸುಶಿಕ್ಷಿತರು, ಸಂಗೀತ, ನೃತ್ಯ ಮತ್ತು ಕಲಾವಿಶಾರದೆಯರೂ ಆಗಿದ್ದರು. ಉದಾಹರಣೆಗೆ: ಗಂಗಾದೇವಿ, ವರದಾಂಬಿಕಾ, ಕೃಷ್ಣದೇವರಾಯನ ಮಡದಿಯರಾದ ತಿರುಮಲಾಂಬ ಮತ್ತು ಚಿನ್ನಾಂಬ ನೃತ್ಯ ಶಾರದೆಯರಾಗಿದ್ದರು. ಹೊನ್ನಮ್ಮ ಪ್ರೌಢದೇವರಾಯನ ಆಸ್ಥಾನದಲ್ಲಿ ವರದಿಗಾರಳಾಗಿದ್ದಳು. ಅಚ್ಯುತರಾಯನ ಕಾಲದಲ್ಲಿ ವರದಿಗಾರಳಾಗಿದ್ದ ತಿರುಮಲ್ಲಮ್ಮ ಸಂಸ್ಕೃತದಲ್ಲಿ ಕವಯಿತ್ರಿಯೂ ಆಗಿದ್ದಳು. ಅದೇ ರೀತಿ ವಿಜಯನಗರ ಸಮಾಜದಲ್ಲಿ ದೇವದಾಸಿ ಪದ್ಧತಿ ಮತ್ತು ವೇಶ್ಯಾವೃತ್ತಿ ಸಹ ಆಚರಣೆಯಲ್ಲಿತ್ತು. ದೇವರ ಹೆಸರಿನಲ್ಲಿ ರೂಢಿಯಲ್ಲಿದ್ದ ದೇವದಾಸಿ ಪದ್ಧತಿಯಿಂದ ಸ್ತ್ರೀಯರ ಶೋಷಣೆಯಾಗುತ್ತಿತ್ತು. ದೇವರ ಹೆಸರಿನಲ್ಲಿ ದೇವದಾಸಿಯರು ಸಾರ್ವಜನಿಕರ ಭೋಗ ವಸ್ತುವಾಗಿ ಪರಿಣಮಿಸುತ್ತಿದ್ದರು. ಇವರು ನೃತ್ತ ಮತ್ತು ಸಂಗೀತವನ್ನು ಬಲ್ಲವರಾಗಿದ್ದು ರಾಜನ ಆಸ್ಥಾನ ಮತ್ತು ದೇವಾಲಯಗಳಿಗೆ ಸಂಬಂಧಿಸಿದಂತಹ ಕೆಲಸವನ್ನು ಮಾಡುತ್ತಿದ್ದರು. ವೇಶ್ಯೆಯರು ಅಧಿಕೃತವಾಗಿ ಅರಸನ ಮನ್ನಣೆಯನ್ನು ಪಡೆದಿದ್ದರು. ಇವರ ಮೇಲೆ ತೆರಿಗೆಯನ್ನೂ ಸಹ ವಿಧಿಸಲಾಗಿತ್ತು. ನರ್ತನ ಮಾಡಲು ಬರುವ ಇವರಿಗೆ ದೊರೆಯ ಎದುರು ವೀಳ್ಯ ಮೆಲ್ಲುವ ವಿಶೇಷ ಅಧಿಕಾರವಿತ್ತು. ಕೆಲವು ಸಂದರ್ಭಗಳಲ್ಲಿ ವೇಶ್ಯೆಯರಿಗೆ ರಾಜನ ಆಸ್ಥಾನಕ್ಕೆ ಹಾಜರಾಗಲು ಅನುಮತಿ ನೀಡಲಾಗಿತ್ತು.

ಬಹಮನಿ ಸಮಾಜದಲ್ಲಿ ಸ್ತ್ರೀಗೆ ಗೌರವವಿದ್ದರೂ ಸಹ ಪಿತೃಪ್ರಧಾನ ಕುಟುಂಬ ವ್ಯವಸ್ಥೆ ಜಾರಿಯಲ್ಲಿದ್ದು, ಮಹಿಳೆಗೆ ಪೂರ್ಣ ಸ್ವಾತಂತ್ರ್ಯವು ಇರಲಿಲ್ಲ. ಮುಸ್ಲಿಂ ಮಹಿಳೆಗೆ ಆಸ್ತಿಯಲ್ಲಿ ಅಗ್ರವಾದ ಪಾಲಿತ್ತು. ಅವಳು ಮಗಳಾಗಿಯೂ, ಹೆಂಡತಿಯಾಗಿಯೂ ಮತ್ತು ತಾಯಿಯಾಗಿಯೂ ಆಸ್ತಿಯಲ್ಲಿ ಪಾಲು ಪಡೆಯುತ್ತಿದ್ದಳು. ಇಷ್ಟೆಲ್ಲಾ ಇದ್ದರೂ ಸಹ ಸ್ತ್ರೀಯ ಜೀವನ ನಾಲ್ಕು ಗೋಡೆಗಳ ಮಧ್ಯೆಯೇ ಕೇಂದ್ರೀಕೃತವಾಗಿರುತ್ತಿತ್ತು. ಮುಸ್ಲಿಂ ಸಮಾಜದಲ್ಲಿ ಬಹುಪತ್ನಿತ್ವ ಪದ್ಧತಿ ಜಾರಿಯಲ್ಲಿದ್ದು ಸಚ್ಚಾರಿತ್ರ್ಯ ಮತ್ತು ಕುಟುಂಬ ಜೀವನ ಶುದ್ಧೀಕರಣಕ್ಕೆ ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಟ್ಟಿದ್ದರು. ವ್ಯಭಿಚಾರವನ್ನು ಸಂಪೂರ್ಣವಾಗಿ ನಿಷೇಧಿಸಿದ್ದರು ಮತ್ತು ಇಂತಹ ಕೆಲಸ ಮಾಡಿದವರನ್ನು ಉಗ್ರವಾದ ಶಿಕ್ಷೆಗೆ ಒಳಪಡಿಸುತ್ತಿದ್ದರು. ಬಹುಪತ್ನಿತ್ವ ವ್ಯವಸ್ಥೆಯಲ್ಲಿ

ಕೇವಲ ನಾಲ್ಕು ಪತ್ನಿಯರನ್ನು ಹೊಂದಲು ಅವಕಾಶವಿತ್ತು. 'ಖುರಾನ್'ನ ಪ್ರಕಾರ ಎಲ್ಲಾ ಪತ್ನಿಯರಿಗೂ ಸಮಾನವಾದ ಪ್ರೀತಿ, ಗೌರವ ಮತ್ತು ಅವಶ್ಯಕತೆಗಳನ್ನು ಪೂರೈಸಬೇಕಾಗಿತ್ತು. ವಿವಾಹ-ವಿಚ್ಛೇಧನಕ್ಕೆ ಅವಕಾಶಗಳಿದ್ದು, ಸ್ತ್ರೀ-ಪುರುಷ ಇಬ್ಬರೂ ವಿಚ್ಛೇಧನ ಪಡೆಯಲು ಅವಕಾಶಗಳನ್ನು ಹೊಂದಿದ್ದರು. ವಿಚ್ಛೇದನಕ್ಕೆ ಇಷ್ಟಪಟ್ಟ ಒಂದು ತಿಂಗಳಿನ ನಂತರ 'ತಲಾಕ್' ಎಂದು ಮೂರು ಬಾರಿ ಘೋಷಿಸಿಕೊಂಡರೆ ಅದು ಊರ್ಜಿತವಾಗುತ್ತಿತ್ತು.[೩೦] ಮುಸ್ಲಿಂ ಸಮಾಜದಲ್ಲಿ ಪರದಾ ವ್ಯವಸ್ಥೆಯು ಕಡ್ಡಾಯವಾಗಿ ಜಾರಿಯಲ್ಲಿದ್ದಿತು. ದುಷ್ಟರಿಂದ ಮತ್ತು ಕಾಮುಕರಿಂದ ತಮ್ಮನ್ನು ತಾವು ರಕ್ಷಿಸಿಕೊಳ್ಳುವ ಉದ್ದೇಶದಿಂದ ಈ ವ್ಯವಸ್ಥೆಯನ್ನು ಜಾರಿಗೆ ತಂದಿದ್ದರು. ಶಿಕ್ಷಣ ವ್ಯವಸ್ಥೆಯಲ್ಲಿಯೂ ಸಹ ಸ್ತ್ರೀಯರಿಗೆ ಪ್ರತ್ಯೇಕತೆ ಇರುವುದು ಕಂಡುಬರುತ್ತದೆ.

ವಿಜಯನಗರ ಸಾಮ್ರಾಜ್ಯದಲ್ಲಿ ಲಿಂಗಾಯತರು ಮತ್ತು ವೀರಶೈವರು ಪ್ರಮುಖ ಸ್ಥಾನ ಹೊಂದಿದ್ದರು. ೧೨ನೇ ಶತಮಾನದ ಕ್ರಾಂತಿಯ ನಂತರ ಈ ಪಂಗಡಗಳು ಬಹಳ ಪ್ರಾಧಾನ್ಯತೆ ಪಡೆದವು. ಸಾಮ್ರಾಜ್ಯದಾದ್ಯಂತ ವೀರಶೈವ ಮಠಗಳು ತಲೆ ಎತ್ತಿದವು. ಅನೇಕ ವೀರಶೈವರು ರಾಜ್ಯದ ಗಣ್ಯ ಅಧಿಕಾರಿಗಳಾದರು. ಎಲ್ಲಾ ಕಡೆಯಲ್ಲಿಯೂ ಅಂಗೀಕೃತವಾಗಿದ್ದ ಮತ್ತು ಹೆಚ್ಚು ಪ್ರಾಮುಖ್ಯತೆ ಪಡೆದಿದ್ದ ವೈದಿಕ ಬ್ರಾಹ್ಮಣ ಸಂಸ್ಕೃತಿಗೆ ಬದಲಾಗಿ ವೀರಶೈವ ಧರ್ಮವು ಬದಲಿ ಸಾಮಾಜಿಕ ಮಾದರಿಯನ್ನು ಒದಗಿಸಿತು. ಇವರು ಜಾತಿ ಪದ್ಧತಿಗೆ ವಿರುದ್ಧವಾಗಿದ್ದರು ಮತ್ತು ಶಿವಲಿಂಗವನ್ನು ಧರಿಸುತ್ತಿದ್ದರು. ವೀರಶೈವ ಪುರೋಹಿತರಿಗೆ, ಜಂಗಮರಿಗೆ ಮತ್ತು ಗುರುಗಳಿಗೆ ಸಾಮ್ರಾಜ್ಯದಾದ್ಯಂತ ಮಠಗಳಿದ್ದವು. ಇವರು ಸಸ್ಯಹಾರಿಗಳಾಗಿದ್ದು ವಿಧವಾ ವಿವಾಹವನ್ನಾಗಲಿ, ವಿಚ್ಛೇದನವನ್ನಾಗಲಿ ನಿಷೇಧಿಸಲಿಲ್ಲ. ಅರಸರು ಸಹ ಪ್ರಜೆಗಳ ಬಗ್ಗೆ ಸಂರಕ್ಷಣೆಯ ಸಾಮಾಜಿಕ ನೀತಿಯನ್ನು ಅನುಸರಿಸಿದರು. ಪ್ರಜೆಗಳು ಕೃಷಿ, ವ್ಯಾಪಾರ, ಕೈಗಾರಿಕೆ, ಸಾರ್ವಜನಿಕ ಆಡಳಿತ, ಇತರ ಕೆಲಸಗಳು ಮತ್ತು ವಿದ್ಯೆಗೆ ಸಂಬಂಧಿತವಾದ ವೃತ್ತಿಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದರು.[೩೧]

ಬಹಮನಿ ರಾಜ್ಯದ ಮುಸ್ಲಿಂ ಸಮಾಜದಲ್ಲಿ ಸೂಫಿ ಪಂಥ ಎನ್ನುವ ಧಾರ್ಮಿಕ ಪಂಥವು ಹುಟ್ಟಿಕೊಂಡಿತು. ಮುಸ್ಲಿಮರು ದಖ್ಖನ್‌ನಲ್ಲಿ ಸಾಮ್ರಾಜ್ಯವನ್ನು ಸ್ಥಾಪಿಸಿದ ನಂತರ ಸೂಫಿಗಳು ಸಾಕಷ್ಟು ಪ್ರಭಾವಿತರಾಗಿ ಹೆಚ್ಚಿನ ಸಂಖ್ಯೆಯಲ್ಲಿ ಬಂದು ಸಮಾಜದಲ್ಲಿ ನೆಲೆಸಿದ್ದರು. ಸೂಫಿಗಳು ಸರಳತೆಯ ಸಂಕೇತವಾಗಿದ್ದರು. ಸೂಫಿ ಪಂಥವು ಪ್ರಪಂಚದ ಬೋಗ ವಸ್ತುಗಳ ವಿರುದ್ಧ ಮೌನ ಪ್ರತಿಭಟನೆಯದಾಗಿತ್ತು. ಈ ಪಂಥವು ಬಹಮನಿ ಕಾಲದಲ್ಲಿ ಪ್ರವರ್ಧಮಾನಕ್ಕೆ ಬಂದಿತು. ಸೂಫಿ ಪಂಥವನ್ನು ಇಸ್ಲಾಂ ಧರ್ಮದ ಅನುಭಾವಿಕ ಮುಖವೆಂದು ಹೇಳಬಹುದು. ವೈಯಕ್ತಿಕವಾಗಿ ಭಗವಂತನ ಅನುಭವವನ್ನು ಪಡೆಯುವುದು ಈ ಪಂಥದ ಮುಖ್ಯ ಉದ್ದೇಶ. ಮಾನವನ ಆತ್ಮವು ದಿವ್ಯವೂ, ಪರಿಪೂರ್ಣವೂ ಆಗಿದ್ದು ಸರಳವಾದಂತಹ ಜ್ಞಾನವನ್ನು ಮನುಷ್ಯನಿಗೆ ನೀಡುತ್ತದೆ. ದೇವರಲ್ಲಿ ಭಯ, ಭಕ್ತಿ, ಶ್ರದ್ಧೆ, ಅಹಿಂಸೆ, ತಪಸ್ಸು ಮುಂತಾದವುಗಳನ್ನು ಆಚರಿಸುವುದೇ ಸೂಫಿ ಪಂಥದ ಪ್ರಮುಖ ತತ್ವಗಳಾಗಿದ್ದವು. ಅನೇಕ ಸೂಫಿ ಸಂತರು ಹಿಂದೂಗಳನ್ನು ತಮ್ಮ ಪಂಥಕ್ಕೆ ಆಕರ್ಷಿಸಲು, ಹಿಂದೂಧರ್ಮದ ಅನೇಕ ಆಚರಣೆಗಳನ್ನು ಅನುಸರಿಸಿದರು. ಈ ಸೂಫಿ ಪಂಥದಲ್ಲಿ ಪುರುಷರಷ್ಟೇ ಅಲ್ಲದೆ ಮಹಿಳೆಯರೂ ಸಹ ಸೇರಿದ್ದರು. ಈ ಸೂಫಿ ಪಂಥದಲ್ಲಿಯ ಪ್ರಮುಖ ಪಂಗಡಗಳೆಂದರೆ 'ಸುರಾವರ್ತಿ' ಮತ್ತು 'ಚಿಸ್ತಿ' ಎಂದು ತಿಳಿದುಬರುತ್ತದೆ. ಬಹಮನಿ ಕಾಲದಲ್ಲಿ ಅನೇಕ ಸೂಫಿ ಸಂತರು ಉತ್ತಮವಾದ ಜೀವನ ಮೌಲ್ಯಗಳನ್ನು ಅಳವಡಿಸಿಕೊಂಡು ಪ್ರಜೆಗಳಿಗೆ ಮಾರ್ಗದರ್ಶನ ಮಾಡುವಲ್ಲಿ ಯಶಸ್ವಿಯಾಗಿದ್ದರು. ದಖ್ಖನ್ನಿನ ಬಹಮನಿ ಸಾಮ್ರಾಜ್ಯದಲ್ಲಿ ಸೂಫಿ ಸಂತರಿಗೆ ವಿಶೇಷವಾದ ಸ್ಥಾನಮಾನಗಳನ್ನು ನೀಡಲಾಗಿತ್ತು.[೩೨]

ಮಧ್ಯಯುಗೀನ ಭಾರತದ ಧಾರ್ಮಿಕ ಇತಿಹಾಸದಲ್ಲಿ ಬಹಮನಿಗಳ ಕಾಲ ಒಂದು ಮಹತ್ವಪೂರ್ಣವಾದ ಕಾಲವೆಂದು ಪ್ರಸಿದ್ಧಿಯಾಗಿದೆ. ಜಾತಿ-ಮತಗಳ ತಡೆಗೋಡೆಗಳನ್ನು ಕೆಡವಿ ಹೊಸ ಪ್ರಜ್ಞೆಯನ್ನು ಹುಟ್ಟಿಸಿದ ಜಾಗೃತಿಯ ಕಾಲವೆಂದು ಹೇಳಬಹುದು. ಜಗತ್ತಿನ ಎರಡು ಹಿರಿಯ ಧರ್ಮಗಳು ಒಂದಾಗಿ ಬೆರೆತು, ಮಾನವ ಜನಾಂಗಕ್ಕೆ ಭಕ್ತಿ ಪಂಥ ಮತ್ತು ಸೂಫಿ ಪಂಥಗಳನ್ನು ನೀಡಿದ ಪ್ರಾಮಾಣಿಕ ಯುಗವೆಂದು ಹೇಳಬಹುದು. ಇಂತಹ ಒಂದು ಧಾರ್ಮಿಕ ಸುಧಾರಣಾ ಚಳುವಳಿಯು, ಧಾರ್ಮಿಕ ವಿಕಾಸದ ಅತ್ಯಂತ ವಿಶಿಷ್ಟವಾದ ಲಕ್ಷಣಗಳೆಂದು ಕರೆಯಲ್ಪಡುವ ಸಂತರನ್ನು, ಅನುಭಾವಿಗಳನ್ನು ಮತ್ತು ಅನೇಕ ಭಕ್ತರನ್ನು ಅಂದಿನ ಕಾಲದಲ್ಲಿ ಬೆಳಕಿಗೆ ತಂದಂತಹ ಕಾಲ. ಈ ಎಲ್ಲಾ ಸಂತರು ಮತ್ತು ಅನುಭಾವಿಗಳು ಜಾತ್ಯಾತೀತರಾಗಿದ್ದರೆಂದು ತಿಳಿದುಬರುತ್ತದೆ. ಇವರು ಯಾವುದೇ ಒಂದು ಪಂಗಡದವರೆಂದು ತಮ್ಮನ್ನು ತಾವು ಗುರುತಿಸಿಕೊಳ್ಳಲಿಲ್ಲ. ಯಾವುದೇ ಜಾತಿ-ಮತಗಳ ಬಂಧನಗಳಿಂದ ಇವರು ಮುಕ್ತರಾಗಿದ್ದರು. ಈ ಕಾರಣಕ್ಕಾಗಿಯೇ ಮಧ್ಯಯುಗೀನ ಭಾರತದ ದಖ್ಖನ್ ಮತ್ತು ವಿಜಯನಗರ ಇತಿಹಾಸದಲ್ಲಿ ಈ ಕಾಲವು ಮಹತ್ವಪೂರ್ಣವಾದ ಕಾಲಘಟ್ಟವೆಂದು ಪರಿಣಮಿಸಲ್ಪಟ್ಟಿದೆ. ಹಿಂದೂ ಮತ್ತು ಮುಸ್ಲಿಂ ಧರ್ಮಗಳೆರಡರಲ್ಲೂ ಇದು ಪ್ರವರ್ಧಮಾನದ ಯುಗವೆಂದು ಹೆಸರು ಪಡೆದಿದೆ. ವಿಜಯನಗರ ಮತ್ತು ಬಹಮನಿ ಸಾಮ್ರಾಜ್ಯಗಳೆರಡರಲ್ಲೂ ಭಕ್ತಿ ಮತ್ತು ಸೂಫಿ ಪಂಥದ ಧಾರ್ಮಿಕ ಆಂದೋಲನಗಳು ಪ್ರಮುಖ ಪಾತ್ರ ವಹಿಸಿದವು.

ಬಹಮನಿ ಮತ್ತು ವಿಜಯನಗರ ಸಮಾಜಗಳೆರಡರಲ್ಲೂ ಆಹಾರ ಮತ್ತು ಉಡುಗೆ ತೊಡುಗೆಗಳಲ್ಲಿ ಸಾಮರಸ್ಯವನ್ನು ಕಾಣುತ್ತೇವೆ. ಈ ಎರಡೂ ರಾಜ್ಯಗಳಲ್ಲಿ ಸಾಮಾನ್ಯ ವರ್ಗದ ಜನರು ಹತ್ತಿ ಬಟ್ಟೆಗಳನ್ನೇ ಧರಿಸುತ್ತಿದ್ದರು. ಪುರುಷರು ಧೋತಿ, ನಿಲುವಂಗಿ ಮತ್ತು ಪಂಚೆಗಳನ್ನು ಧರಿಸಿದರೆ ಮಹಿಳೆಯರು ಹೆಚ್ಚಾಗಿ ಸೀರೆಗಳನ್ನು ಮತ್ತು ಕುರ್ತಾ-ಪೈಜಾಮಗಳನ್ನು ಧರಿಸುತ್ತಿದ್ದರು. ಶ್ರೀಮಂತರು, ರಾಜ ಪರಿವಾರದವರು ಮತ್ತು ಸುಲ್ತಾನರು ರೇಷ್ಮೆಯಂತಹ ಬೆಳೆಬಾಳುವ ವಸ್ತ್ರಗಳ ವಿನ್ಯಾಸಗಳನ್ನು ಧರಿಸುತ್ತಿದ್ದರು. ಹಿಂದೂ ಪುರುಷರು ಸಾಮಾನ್ಯವಾಗಿ ಪಂಚೆ, ನಿಲುವಂಗಿ ಮತ್ತು ಉತ್ತರೀಯಗಳನ್ನು ತೊಡುತ್ತಿದ್ದರು. ಹೆಂಗಸರು ಸೀರೆ ಮತ್ತು ಕಣಗಳನ್ನು ತೊಡುತ್ತಿದ್ದರು. ಮುಸ್ಲಿಂ ಗಂಡಸರು ಸಾಮಾನ್ಯವಾಗಿ ಬಿಗಿಯಾದ ಚಲ್ಲಣ, ನಿಲುವಂಗಿ ಮತ್ತು ರುಮಾಲು ಅಥವಾ ಟೋಪಿ ಧರಿಸುತ್ತಿದ್ದರು. ಮುಸ್ಲಿಂ ಹೆಂಗಸರು ಒಳಚಲ್ಲಣ, ಅದರ ಮೇಲೆ ಉದ್ದವಾದ ನಿಲುವಂಗಿ, ಚಿಕ್ಕ ವೇಸ್ಟ್ ಕೋಟ್ ಧರಿಸಿ, ಇವುಗಳನ್ನು ದುಪ್ಪಟ್ಟಾದಿಂದ ಮುಚ್ಚಿಕೊಳ್ಳುತ್ತಿದ್ದರು. ಆದರೆ ಹಿಂದೂ ಮತ್ತು ಮುಸ್ಲಿಂ ಹೆಣ್ಣುಮಕ್ಕಳ ಉಡುಗೆಯಲ್ಲಿ ಪ್ರಮುಖವಾದ ವ್ಯತ್ಯಾಸವೆಂದರೆ ಮುಸ್ಲಿಂ ಸ್ತ್ರೀಯರು ಪರದಾವನ್ನು ಕಡ್ಡಾಯವಾಗಿ ಧರಿಸಬೇಕಾಗಿತ್ತು. ಈ ಎರಡೂ ರಾಜ್ಯಗಳಲ್ಲಿ ಸ್ತ್ರೀ ಮತ್ತು ಪುರುಷರಿಬ್ಬರೂ ಹಲವು ಬಗೆಯ ಆಭರಣಗಳನ್ನು ತೊಡುತ್ತಿದ್ದರು. ಅವುಗಳೆಂದರೆ, ಚಿನ್ನದ ಆಭರಣಗಳಾದಂತಹ ಬಳೆಗಳು, ಉಂಗುರ, ಕೊರಳ ಸರಗಳು, ಚಿನ್ನದ ಸರಗಳು, ತೋಳು ಪಟ್ಟಿ, ವಂಕಿ, ಕಡಗ, ಕಾಲುಂಗುರ, ಸೊಂಟ ಪಟ್ಟಿ, ಮೂಗುತಿ, ಕಿವಿಯೋಲೆ, ಕಾಲು ಕಡಗ, ಕೈ ಕಡಗ, ಕಾಲುಚೈನು ಮುಂತಾದ ಆಭರಣಗಳನ್ನು ಉಪಯೋಗಿಸುತ್ತಿದ್ದರು.

ಕೊನೆಯದಾಗಿ ವಿಜಯನಗರ ಮತ್ತು ಬಹಮನಿ ಸಾಮ್ರಾಜ್ಯಗಳೆರಡರ ಸಮಾಜದಲ್ಲಿ ಆಹಾರ ಮತ್ತು ಬೆಳೆಗಳಲ್ಲಿಯೂ ಸಹ ಅಷ್ಟೇನು ವ್ಯತ್ಯಾಸಗಳಿಲ್ಲದೇ ಸಾಮರಸ್ಯತೆ ಕಂಡುಬರುತ್ತದೆ. ಹಿಂದೂ ಸಮಾಜದವರು ಅಕ್ಕಿ, ಜೋಳ, ಮೆಕ್ಕೆಜೋಳ, ಹಣ್ಣು-ಹಂಪಲಗಳು, ಹಾಲಿನ ಉತ್ಪನ್ನಗಳು, ಸಿಹಿ ತಿನಿಸುಗಳು, ಹೋಳಿಗೆ, ಖೀರು, ಲಾಡು, ಹಪ್ಪಳ, ಚಪಾತಿ ಮುಂತಾದವುಗಳನ್ನು ಹಬ್ಬ-ಹರಿದಿನಗಳಲ್ಲಿ ಸೇವಿಸುತ್ತಿದ್ದರು. ಹಿಂದುಯೇತರರು ವಿಶೇಷವಾಗಿ ಮುಸ್ಲಿಮರು ಹೆಚ್ಚಾಗಿ ಮಾಂಸಾಹಾರಿಗಳಾಗಿದ್ದರು. ಬಲಿಪೂಜೆಯು

ರೂಢಿಯಲ್ಲಿದ್ದು, ಹಿಂದೂಗಳು ಹಬ್ಬಗಳಲ್ಲಿ ಕೋಣ ಮತ್ತು ಕುರಿಗಳನ್ನು ಬಲಿ ಕೊಡುತ್ತಿದ್ದರೆಂದು ನ್ಯೂನಿಜ್‌ನ ಹೇಳಿಕೆಯಿಂದ ತಿಳಿದುಬರುತ್ತದೆ.[೩೩] ಹಿಂದೂ ಮತ್ತು ಮುಸ್ಲಿಂ ಸಮಾಜದವರಿಬ್ಬರೂ ಹಬ್ಬ ಹರಿದಿನಗಳಲ್ಲಿ ವಿಶೇಷವಾದ ಸಿಹಿಯೂಟವನ್ನು ಮಾಡುತ್ತಿದ್ದು, ನಶೆ ಬರುವ ಮದ್ಯ, ದ್ರಾಕ್ಷಾರಸ ಮತ್ತು ಇತರ ಪಾನೀಯಗಳನ್ನು ಸೇವಿಸುವುದು ಸಾಮಾನ್ಯ ಮತ್ತು ವಿಶೇಷ ಹವ್ಯಾಸವಾಗಿತ್ತು ಎಂದು ತಿಳಿದುಬರುತ್ತದೆ.

ಹಿಂದೂ ಮತ್ತು ಮುಸ್ಲಿಂ ಸಮಾಜದವರಿಬ್ಬರೂ ಯಾತ್ರೆಗಳು, ಜಾತ್ರೆಗಳು, ಹಬ್ಬ ಹರಿದಿನಗಳು ಮುಂತಾದವುಗಳನ್ನು ಆಚರಿಸುತ್ತಿದ್ದರು. ಹಿಂದೂಗಳು ಪ್ರಮುಖವಾಗಿ ನವರಾತ್ರಿ, ಯುಗಾದಿ, ಹೋಳಿ, ದೀಪಾವಳಿ, ಶಿವರಾತ್ರಿ ಮುಂತಾದ ಹಬ್ಬಗಳನ್ನು ಆಚರಿಸುತ್ತಿದ್ದರು. ಅದೇ ರೀತಿ ಮುಸ್ಲಿಮರು ಈದ್-ಮಿಲಾದ್, ಮೊಹರಂ, ಬಕ್ರೀದ್, ರಮಜಾನ್ ಎಂಬ ಹಬ್ಬಗಳನ್ನು ಆಚರಿಸುತ್ತಿದ್ದರು.

### ೫.೩. ಬಹಮನಿ ಮತ್ತು ವಿಜಯನಗರಗಳ ನಡುವಿನ ಆರ್ಥಿಕ ಸಂಬಂಧಗಳು

ಒಂದು ರಾಜ್ಯದ ಭದ್ರತೆ ಮತ್ತು ದೃಢತೆ ಆ ರಾಜ್ಯದ ಆರ್ಥಿಕ ವ್ಯವಸ್ಥೆಯನ್ನು ಅವಲಂಬಿಸಿರುತ್ತದೆ. ನೆರೆಹೊರೆ ರಾಜ್ಯಗಳಾದ ಬಹಮನಿ ಮತ್ತು ವಿಜಯನಗರ ರಾಜ್ಯಗಳ ಆರ್ಥಿಕ ಸ್ಥಿತಿಗತಿಗಳಲ್ಲಿ ಹಲವಾರು ವ್ಯತ್ಯಾಸಗಳಿದ್ದವು. ಬಹಮನಿ ಸಾಮ್ರಾಜ್ಯದಲ್ಲಿ ಮುಸ್ಲಿಮರೇ ಶ್ರೀಮಂತರಾಗಿದ್ದು ಉನ್ನತ ಹುದ್ದೆಗಳಾದಂತಹ ಮಂತ್ರಿ ಪದವಿ, ಇಕ್ತೆದಾರ, ಉಲೇಮಾ ಮುಂತಾದ ಹುದ್ದೆಗಳನ್ನು ಅಲಂಕರಿಸಿದ್ದರು. ರಾಜ್ಯದ ಬಹುತೇಕ ಆದಾಯವು ಈ ಉನ್ನತ ವರ್ಗದವರಲ್ಲಿ ಕೇಂದ್ರೀಕೃತವಾಗಿತ್ತು. ಇವರು ವೈಭವಯುತ ಜೀವನವನ್ನು ನಡೆಸುತ್ತಿದ್ದರೆಂದು ನಿಕೆಟಿನ್ ತಿಳಿಸುತ್ತಾನೆ.[೩೪] ನಿಕೆಟಿನ್ ಮುಂದುವರೆಸುತ್ತಾ ವಿಜಯನಗರ ಮತ್ತು ಬಹಮನಿ ಸುಲ್ತಾನರ ನಡುವೆ ಅಗಾಗ್ಗೆ ನಡೆಯುತ್ತಿದ್ದ ಕದನಗಳನ್ನು ವರ್ಣಿಸಿದ್ದಾನೆ. ಜೊತೆಗೆ ಆ ಕಾಲದ ವ್ಯವಸಾಯದ ಬಗ್ಗೆ ಹೆಚ್ಚು ಮಾಹಿತಿ ನೀಡಿದ್ದಾನೆ.[೩೫]

ಮಧ್ಯಮವರ್ಗದ ಜನರಾದ ಧರ್ಮಪ್ರವರ್ತಕರು, ಬ್ರಾಹ್ಮಣರು, ಮುಸ್ಲಿಂ ತರಫ್‌ದಾರರಿಗಿಂತ ಕೆಳಗಿನ ಅಧಿಕಾರಿಗಳು, ಊಳಿಗರು, ಸ್ಥಾನಿಕ ವ್ಯಾಪಾರಿಗಳು, ಐಶಾರಾಮಿಗಳಲ್ಲದಿದ್ದರೂ, ಉಡಲು-ಉಣ್ಣಲು ಯಾವ ಕೊರತೆಗಳು ಇರಲಿಲ್ಲ. ಜೀವನಾವಶ್ಯತೆಗಳನ್ನು ಪೂರೈಸಿಕೊಳ್ಳಬಲ್ಲವರಾಗಿದ್ದ ಅವರು ಸಾಧಾರಣವಾಗಿ ಉತ್ತಮ ಜೀವನವನ್ನು ನಡೆಸುತ್ತಿದ್ದರು. ಕೆಳವರ್ಗದಲ್ಲಿ ರೈತರು, ಕೂಲಿಕಾರರು, ಶಿಲ್ಪಗಾರರು, ವಿವಿಧ ಕಸುಬುಗಾರರು ಬರುತ್ತಿದ್ದರು. ಇವರ ಸ್ಥಿತಿ ಶೋಚನೀಯವಾಗಿದ್ದು, ಉನ್ನತ ಮಟ್ಟಕ್ಕೆಂದೂ ಏರಲಿಲ್ಲ. ಅದೇ ರೀತಿ ರೈತನ ಪರಿಸ್ಥಿತಿಯಲ್ಲಿಯೂ ಯಾವುದೇ ರೀತಿಯ ಪ್ರಗತಿ ಇರಲಿಲ್ಲ. ರೈತನಿಗಿಂತ ಇತರ ವರ್ಗದ ಕುಶಲಗಾರರ ಮತ್ತು ಕಾರ್ಮಿಕರ ಸ್ಥಿತಿ ಉತ್ತಮವಾಗಿತ್ತು, ಇದಕ್ಕೆ ಕಾರಣ ಅವರು ಸುಲ್ತಾನರ ಆಶ್ರಯವನ್ನು ಪಡೆದಿದ್ದರು ಮತ್ತು ವಿವಿಧ ಗುಡಿಕೈಗಾರಿಕೆಗಳನ್ನು ಸ್ಥಾಪಿಸಿದ್ದರು.

ಬಹಮನಿ ರಾಜ್ಯಕ್ಕೆ ಹೋಲಿಸಿದಾಗ ವಿಜಯನಗರ ಸಾಮ್ರಾಜ್ಯವು ಜಗತ್ತಿನಲ್ಲಿಯೇ ಮಧ್ಯಯುಗೀನ ಕಾಲದ ಅತ್ಯಂತ ಸಂಪತ್ಭರಿತ ಸಾಮ್ರಾಜ್ಯವಾಗಿತ್ತು. ವಿಜಯನಗರಕ್ಕೆ ಭೇಟಿ ಇತ್ತ ಎಲ್ಲಾ ವಿದೇಶಿ ಪ್ರವಾಸಿಗರು ಇದರ ಸಂಪತ್ತು ಮತ್ತು ವೈಭವವನ್ನು ತಮ್ಮ ಬರಹಗಳ ಮೂಲಕ ಪ್ರಶಂಸಿದ್ದಾರೆ. ೧೪೪೨ರಲ್ಲಿ ವಿಜಯನಗರಕ್ಕೆ ಭೇಟಿ ಇತ್ತ ಅಬ್ದುಲ್ ರಜಾಕ್‌ನು- "ಈ ರಾಜ್ಯವು ಜನಭರಿತವಾಗಿದ್ದು, ಸಂಕ್ಷಿಪ್ತವಾಗಿ ಇದನ್ನು ವಿವರಿಸಲು ಅಸಾಧ್ಯ. ರಾಜನ ಭಂಡಾರದಲ್ಲಿ ನೆಲಮಾಳಿಗೆಗಳಿದ್ದು, ಅದರ ತುಂಬಾ ಬಂಗಾರದ ಗಟ್ಟಿಗಳನ್ನು ತುಂಬಿಡ ಲಾಗಿದೆ. ಇಲ್ಲಿನ ಜನರು ಬಡವರಿರಲಿ, ಬಲ್ಲಿದರಿರಲಿ ಅತಿ ಶ್ರೀಮಂತನಿಂದ ಹಿಡಿದು ಬಜಾರದಲ್ಲಿರುವ ಕೂಲಿಯವನವರೆಗೂ ಪ್ರತಿಯೊಬ್ಬರೂ ತಮ್ಮ ಕೊರಳು, ಕೈ, ಕಿವಿ ಮತ್ತು ಬೆರಳುಗಳಿಗೆ ಥಳ-ಥಳ ಹೊಳೆಯುವ ಬಂಗಾರದ ಮತ್ತು ಇತರ ಲೋಹಗಳಿಂದ ಮಾಡಿದ ಆಭರಣಗಳನ್ನು ಧರಿಸುತ್ತಾರೆ" ಎಂದು ಬರೆದಿದ್ದಾನೆ.[೩೬]

ಪೋರ್ಚುಗೀಸ್ ಪ್ರವಾಸಿಗನಾದ ಪೇಯಿಸ್ ಪ್ರಕಾರ–"ರಾಜನ ಭಂಡಾರ ತುಂಬಿ ತುಳುಕುತ್ತಿದೆ, ಅವನಿಗೆ ಅಸಂಖ್ಯಾತ ಸೈನಿಕರು ಮತ್ತು ಆನೆಗಳು ಲಭ್ಯವಿರುವವು. ಈ ನಗರದಲ್ಲಿ ನಾನಾ ರಾಷ್ಟ್ರಗಳ ಜನರನ್ನು ಮತ್ತು ವ್ಯಾಪಾರಿಗಳನ್ನು ಕಾಣಬಹುದು, ಎಲ್ಲ ವಿಧವಾದ ವಜ್ರ–ವೈಢೂರ್ಯಗಳು ಇಲ್ಲಿ ಹೇರಳವಾಗಿ ದೊರೆಯುತ್ತವೆ. ಜಗತ್ತಿನಲ್ಲಿಯೇ ಇಂತಹ ಸಕಲ ಸೌಕರ್ಯಗಳನ್ನು ಹೊಂದಿದ ನಗರ ಬೇರೊಂದಿಲ್ಲ. ಅಕ್ಕಿ, ಗೋದಿ, ಬಾರ್ಲಿ, ಬೇಳೆ ಇತ್ಯಾದಿ ವಸ್ತುಗಳು ಅಗ್ಗದ ಬೆಲೆಗೆ ಹೇರಳವಾಗಿ ದೊರೆಯುತ್ತವೆ. ರಸ್ತೆಗಳು ಮತ್ತು ಮಾರುಕಟ್ಟೆಗಳು ಹೊರೆಹೊತ್ತ ಅಸಂಖ್ಯಾತ ಎತ್ತುಗಳಿಂದ ತುಂಬಿರುತ್ತವೆ" ಎಂದು ವಿವರಿಸಿದ್ದಾನೆ.[೩೭]

ಮತ್ತೊಬ್ಬ ಪ್ರವಾಸಿಯಾದ ಬಾರ್ಬೋಸನು– "ವಿಜಯನಗರವು ಅತಿ ವಿಶಾಲ, ಜನಭರಿತ ನಗರವಾಗಿದ್ದು, ಇದು ವಜ್ರ ವೈಢೂರ್ಯ, ಮುತ್ತು, ರತ್ನ, ಚೀನಿರೇಷ್ಮೆ, ರಸಸಿಂಧೂರ, ಕಸ್ತೂರಿ, ಮೆಣಸು, ಶ್ರೀಗಂಧ ಇತ್ಯಾದಿ ವಸ್ತುಗಳ ಕೇಂದ್ರವಾಗಿದೆ" ಎಂದು ವರ್ಣಿಸಿದ್ದಾನೆ.[೩೮] ಪೋರ್ಚುಗೀಸ್ ಪ್ರವಾಸಿಗರು ವಿಜಯನಗರದ ರಾಜ ಬೀದಿಗಳಲ್ಲಿ ವಜ್ರ, ವೈಢೂರ್ಯ, ಮುತ್ತು, ರತ್ನಗಳನ್ನು ಸೇರುಗಳಲ್ಲಿ ಅಳೆದು ಮಾರುತ್ತಿದ್ದರೆಂದು ವರ್ಣಿಸಿರುವರು. ಈ ಎಲ್ಲಾ ವಿದೇಶಿಗರ ಹೇಳಿಕೆಗಳು ವಿಜಯನಗರ ಸಾಮ್ರಾಜ್ಯದ ಸಮೃದ್ಧಿಯನ್ನು ಮತ್ತು ಸಂಪತ್ತನ್ನು ತಿಳಿಸುತ್ತವೆ. ಆದರೆ ಈ ಎಲ್ಲಾ ಹೇಳಿಕೆಗಳು ಅರಸುಕೇಂದ್ರಿತ, ಅರಮನೆಕೇಂದ್ರಿತ ಹಾಗೂ ಶ್ರೀಮಂತವರ್ಗಗಳ ಬದುಕಿನ ನಿರೂಪಣೆಗಳಾಗಿವೆ ಎನ್ನುವುದು ಚಾರಿತ್ರಿಕ ಸತ್ಯ. ವಿಜಯನಗರದಲ್ಲಿ ವಜ್ರದ ಗಣಿಗಳು ಲಾಭದಾಯಕವಾದ ಆರ್ಥಿಕ ಉದ್ದಿಮೆಗಳಾಗಿದ್ದವು. ಈ ಉದ್ದಿಮೆಗಳಲ್ಲಿ ಕೃತಕ ವಜ್ರಗಳು, ಪದ್ಮರಾಗ, ಕೆಂಪು ರತ್ನಗಳು, ಪುಶ್ಯರಾಗ, ನೀಲರತ್ನಗಳು ತಯಾರಿಸಲ್ಪಡುತ್ತಿದ್ದವು. ಈ ಎಲ್ಲಾ ಅಂಶಗಳನ್ನು ನೋಡಿದಾಗ ವಿಜಯನಗರ ಸಾಮ್ರಾಜ್ಯವು ಬಹಮನಿ ಸಾಮ್ರಾಜ್ಯಕ್ಕಿಂತ ಸರ್ವಾಂಗೀಣ ಪ್ರಗತಿಯನ್ನು ಹೊಂದಿತ್ತೆಂದು ತಿಳಿದುಬರುತ್ತದೆ. ಇಂತಹ ಅಭಿವೃದ್ಧಿಗೆ ಕಾರಣ ಅಲ್ಲಿನ ಫಲವತ್ತಾದ ಭೂಮಿ, ಅಭಿವೃದ್ಧಿ ಹೊಂದಿದ ಕೃಷಿ ಮತ್ತು ಕೈಗಾರಿಕೆಗಳು. ಬಾರ್ಬೋಸನು ಕ್ರಿ.ಶ.೧೫೦೦–೧೫೧೬ ರವರೆಗೆ ಭಾರತದಲ್ಲಿದ್ದನು. ಪೋರ್ಚುಗೀಸ್ ಪ್ರವಾಸಿಯಾದ ಇವನು ವಿಜಯನಗರದ ಶ್ರೀಮಂತಿಕೆಯನ್ನು ಮತ್ತು ಬಹಮನಿಯ ಆಮದು ಹಾಗೂ ರಫ್ತು, ಭೂಮಿಯ ಫಲವತ್ತತೆಯ ಬಗ್ಗೆ ತಿಳಿಸಿದ್ದಾನೆ.[೩೯]

ವಿಜಯನಗರದ ಅರಸರು ಕೈಗೊಂಡ ಪ್ರಗತಿಪರ ಸುಧಾರಣೆಗಳು ಮತ್ತು ನೀರಾವರಿ ಯೋಜನೆಗಳು ಕೃಷಿಯ ಮತ್ತು ಕೃಷಿಕರ ಪ್ರಗತಿಗೆ ಕಾರಣವಾಗಿದ್ದವು. ಹಲವಾರು ಕೈಗಾರಿಕೆಗಳಾದ ಬಟ್ಟೆ, ಗಣಿ, ಲೋಹ, ಆಭರಣ, ಸುಗಂಧ ದ್ರವ್ಯಗಳು ಮುಂತಾದವು ಅಭಿವೃದ್ಧಿ ಹೊಂದಿದ್ದವು. ಸಾಮ್ರಾಜ್ಯದ ಆರ್ಥಿಕ ಪ್ರಗತಿಗೆ ಮತ್ತೊಂದು ಪ್ರಧಾನ ಕಲಶವೆಂದರೆ ಸಾಮ್ರಾಜ್ಯವು ಹೊಂದಿದ್ದ ಆಂತರಿಕ ಮತ್ತು ವಿದೇಶಿಯ ವ್ಯಾಪಾರ ಮತ್ತು ವಾಣಿಜ್ಯ ಸಂಬಂಧಗಳು. ಅಬ್ದುಲ್ ರಜಾಕ್‌ನ ಪ್ರಕಾರ ವಿಜಯನಗರದಲ್ಲಿ ಸುಮಾರು ೩೦೦ ರೇವು ಪಟ್ಟಣಗಳಿದ್ದವು. ಸಾಮ್ರಾಜ್ಯವು ಜಾವಾ, ಸುಮಾತ್ರಾ, ಬೋರ್ನಿಯೋ, ಚೈನಾ, ಅರೇಬಿಯಾ, ಪರ್ಷಿಯಾ, ಪೂರ್ವ ಆಫ್ರಿಕಾ, ಅಭಿಸೀನಿಯಾ, ಪೋರ್ಚುಗಲ್ ಮುಂತಾದ ದೇಶಗಳೊಂದಿಗೆ ವ್ಯಾಪಾರ ಸಂಬಂಧಗಳನ್ನು ಹೊಂದಿತ್ತು.[೪೦] ಪ್ರಮುಖವಾಗಿ ಬಟ್ಟೆ, ಅಕ್ಕಿ, ಕಬ್ಬಿಣ, ಉಪ್ಪು, ಸಕ್ಕರೆ ಮತ್ತು ಸಾಂಬಾರು ಪದಾರ್ಥಗಳನ್ನು ರಫ್ತು ಮಾಡಲಾಗುತ್ತಿತ್ತು. ಆಮದು ಮಾಡುಕೊಳ್ಳುತ್ತಿದ್ದ ವಸ್ತುಗಳೆಂದರೆ ಕುದುರೆ, ಆನೆ, ಮುತ್ತು, ತಾಮ್ರ, ಪಾದರಸ, ಚೀನಿ ರೇಷ್ಮೆ, ವೆಲ್ವೆಟ್ ವಸ್ತುಗಳು ಮುಂತಾದವುಗಳು. ವ್ಯಾಪಾರವು ಕುದುರೆ, ಎತ್ತಿನ ಗಾಡಿ ಮತ್ತು ಮಾನವ ಶಕ್ತಿಗಳ ಆಧಾರದ ಮೇಲೆ ನಡೆಯುತ್ತಿತ್ತು. ನೌಕೆಗಳ ಮುಖಾಂತರ ವಿದೇಶಿ ವ್ಯಾಪಾರ ನಡೆಯುತ್ತಿತ್ತು. ಕಲ್ಲಿಕೋಟೆ ಮತ್ತು ಮಲಬಾರ್‌ಗಳು ಅಂದಿನ ಪ್ರಮುಖ ಬಂದರುಗಳಾಗಿದ್ದವು.

ವಿಜಯನಗರ ಸಾಮ್ರಾಜ್ಯವು ಹಡಗುಗಳನ್ನು ನಿರ್ಮಿಸುತ್ತಿತ್ತೆಂದು ಮತ್ತು ಅದೇ ರೀತಿ ಸಣ್ಣ ನೌಕಾ ಬಲವನ್ನು ಹೊಂದಿತ್ತೆಂದು ಶಾಸನಗಳಿಂದ ತಿಳಿದುಬರುತ್ತದೆ. ಇವೆಲ್ಲವನ್ನೂ ನೋಡಿದಾಗ ವಿಜಯನಗರ ಸಾಮ್ರಾಜ್ಯವು ಆರ್ಥಿಕವಾಗಿ ಸುಭಿಕ್ಷವಾಗಿತ್ತೆಂದು ವಿದೇಶಿ ಪ್ರವಾಸಿಗರ ದಾಖಲೆಗಳಿಂದ ವೇದ್ಯವಾಗುತ್ತದೆ.

ಬಹಮನಿ ರಾಜ್ಯದಲ್ಲಿಯೂ ಸಹ ಹಡಗು ನಿರ್ಮಾಣದ ನೂತನ ತಂತ್ರಗಳು ಬೆಳೆದು ಬಂದಿದ್ದವು. ಎರಡನೇ ಅಲ್ಲಾವುದ್ದೀನ್ ಬಹಮನ್‌ಷಾನ ಕಾಲದಲ್ಲಿ ಬಹಮನಿ ಸಾಮ್ರಾಜ್ಯದಲ್ಲಿ ಇಟಾಲಿಯನ್‌ದ ಹಡಗು ಕಟ್ಟೆಗಿಂತಲೂ ದೊಡ್ಡ ಹಡಗು ಕೇಂದ್ರಗಳಿದ್ದವೆಂದು ನಿಕೊಲೋ ಕಾಂಟಿ ವಿವರಿಸಿದ್ದಾನೆ. ಬಹಮನಿ ರಾಜ್ಯದಲ್ಲಿ ದೊಡ್ಡ ದೊಡ್ಡ ಹಡಗುಗಳನ್ನಲ್ಲದೇ ಚಿಕ್ಕ ಗಾತ್ರದ ದೋಣಿಗಳನ್ನು ಸಹ ನಿರ್ಮಿಸುತ್ತಿದ್ದರೆಂದು ತಿಳಿದುಬರುತ್ತದೆ. ಬಹಮನಿ ರಾಜ್ಯವು ಪರ್ಷಿಯಾ, ಅರೇಬಿಯಾ, ಆಫ್ರಿಕಾ, ಯುರೋಪ್ ಮುಂತಾದ ಪೂರ್ವದ ದೇಶದೊಂದಿಗೆ ವ್ಯಾಪಾರಿ ಸಂಬಂಧಗಳನ್ನಿಟ್ಟುಕೊಂಡಿದ್ದರಿಂದ ಬಂದರುಗಳು ಗಮನಾರ್ಹವಾಗಿ ಪ್ರಗತಿಯನ್ನು ಹೊಂದಿದ್ದವು.[೪೧] ಗೋವಾ, ದಾಬೋಲ್, ಚೌಲ್, ಮಾಹಿಮ್ ಮತ್ತು ಮಚಲಿ ಪಟ್ಟಣಗಳು ಬಹಮನಿ ರಾಜ್ಯದ ಪ್ರಥಮ ದರ್ಜೆಯ ಬಂದರುಗಳಾಗಿದ್ದವು. ಪೂರ್ವ ಕರಾವಳಿಯ ಕಾರವಾರ, ಭಟ್ಕಳ ಮುಂತಾದ ಬಂದರುಗಳು ಸುಲ್ತಾನರ ವ್ಯಾಪಾರಿ ಕೇಂದ್ರಗಳಾಗಿದ್ದವು ಎಂದು ನಿಕೆಟಿನ್‌ನ ಬರವಣಿಗೆಗಳಿಂದ ತಿಳಿಯುತ್ತದೆ. ಬಹಮನಿ ಮತ್ತು ವಿಜಯನಗರ ಕಾಲದ ಶಾಸನಗಳು ಭೂದಾನ, ಭೂಕಂದಾಯ, ಕಂದಾಯ ರದ್ದುಪಡಿಸುವುದು, ಹೊಸ ಕಂದಾಯ ಹಾಕುವುದು, ಹೊಸ ತೆರಿಗೆಗಳನ್ನು ಜಾರಿಗೆ ತರುವುದು ಮುಂತಾದ ವಿಚಾರಗಳ ಬಗ್ಗೆ ಮಾಹಿತಿಯನ್ನು ಒದಗಿಸುತ್ತವೆ. ಭೂಕಂದಾಯವು ವಿಜಯನಗರ ಮತ್ತು ಬಹಮನಿ ಸಾಮ್ರಾಜ್ಯದಲ್ಲಿ ಮುಖ್ಯ ಆದಾಯದ ಮೂಲವಾಗಿತ್ತು. ಈ ಎರಡೂ ರಾಜ್ಯಗಳಲ್ಲಿಯೂ ಕೃಷಿಯು ಬಹುಮುಖ್ಯವಾದ ಗ್ರಾಮೀಣ ಅರ್ಥವ್ಯವಸ್ಥೆಯ ಜೀವನಾಡಿಯಾಗಿತ್ತು.

ಬಹಮನಿ ರಾಜ್ಯದ ಭೂಕಂದಾಯಕ್ಕೆ ಹೋಲಿಸಿದಾಗ ವಿಜಯನಗರದ ಕಂದಾಯ ವ್ಯವಸ್ಥೆಯು ಹೆಚ್ಚು ದುಬಾರಿಯಾಗಿತ್ತು. ಅಠಾವಣೆ ಎಂಬ ಹೆಸರಿನ ವಿಭಾಗದಿಂದ ವಿಜಯನಗರದಲ್ಲಿ ಭೂಕಂದಾಯವನ್ನು ಸಂಗ್ರಹಿಸುತ್ತಿದ್ದರು. ಕಂದಾಯ ನಿರ್ಧರಿಸಲು ಜಮೀನುಗಳನ್ನು ತರಿ ಭೂಮಿ, ಖುಷ್ಕಿ ಭೂಮಿ, ಅರಣ್ಯ ಭೂಮಿ ಮತ್ತು ಹಣ್ಣಿನ ತೋಟಗಳೆಂದು ವಿಭಾಗಿಸಿದ್ದರು. ಒಟ್ಟು ಬೆಳೆಯ ೧/೯ ಭಾಗವನ್ನು ರೈತರು, ೧/೨೦ ಭಾಗವನ್ನು ಬ್ರಾಹ್ಮಣರು ಮತ್ತು ೧/೩೦ ಭಾಗವನ್ನು ದೇವಸ್ಥಾನಗಳು ಕಂದಾಯವಾಗಿ ರಾಜ ಭಂಡಾರಕ್ಕೆ ಒಪ್ಪಿಸಬೇಕಾಗಿತ್ತು. ಈ ಮೂರು ರೀತಿಯಲ್ಲಿ ವಾಣಿಜ್ಯ ತೆರಿಗೆಯನ್ನು ವಸೂಲಿ ಮಾಡಲಾಗುತ್ತಿತ್ತು. ಆಮದಾಗುತ್ತಿದ್ದ ವಸ್ತುಗಳಿಗೆ ಸ್ಥಳದಾಯ ಎಂಬ ಸುಂಕವನ್ನು ವಿಧಿಸಿದ್ದರು. ಬಹಮನಿ ಸಾಮ್ರಾಜ್ಯದಲ್ಲಿದ್ದಂತೆಯೇ ವಿಜಯನಗರದಲ್ಲೂ ಸಹ ತೆರಿಗೆಗಳನ್ನು ಹಣ ಅಥವಾ ವಸ್ತು ರೂಪದಲ್ಲಿ ಸಂದಾಯ ಮಾಡಬಹುದಾಗಿತ್ತು. ವಿಜಯನಗರದಲ್ಲಿ ಹೆಚ್ಚಿನ ತೆರಿಗೆಗಳಾದ ಹುಲ್ಲುಗಾವಲು ತೆರಿಗೆ ಮತ್ತು ಮದುವೆ ತೆರಿಗೆಯನ್ನು ಕೊಡಬೇಕಾಗಿತ್ತು. ಇಷ್ಟೆಲ್ಲಾ ತೆರಿಗೆಗಳ ಜೊತೆಗೆ ದಿನಬಳಕೆಯ ವಸ್ತುಗಳ ಮೇಲೆ 'ಆಕ್ಟ್ರಾಯ್' ತೆರಿಗೆಯನ್ನು ಪರೋಕ್ಷ ತೆರಿಗೆಯ ರೂಪದಲ್ಲಿ ಕೊಡಬೇಕಾಗಿತ್ತು.[೪೨] ಒಟ್ಟಿನಲ್ಲಿ ಹೇಳುವುದಾದರೆ, ಜನರ ಮೇಲೆ ವಿಧಿಸಿರುವ ತೆರಿಗೆಗಳು ಬಹಮನಿ ಸಾಮ್ರಾಜ್ಯಕ್ಕಿಂತ ವಿಜಯನಗರ ಸಾಮ್ರಾಜ್ಯದಲ್ಲಿ ಹೆಚ್ಚು ದುಬಾರಿಯಾಗಿದ್ದವೆಂದು ತಿಳಿಯುತ್ತದೆ.

ವಿಜಯನಗರ ಅರಸರು ಮತ್ತು ಬಹಮನಿ ಸುಲ್ತಾನರು ಕೃಷಿ ಅಭಿವೃದ್ಧಿಗಾಗಿ ನೀರಾವರಿ ಸೌಲಭ್ಯಕ್ಕೆ ಹೆಚ್ಚಿನ ಆಧ್ಯತೆಯನ್ನು ನೀಡಿದ್ದರು. ಎರಡೂ ರಾಜ್ಯಗಳು ತಮ್ಮ ಪ್ರಾಂತ್ಯಗಳ ಹಲವಾರು ಕಡೆ ಅನೇಕ ನಾಲೆಗಳನ್ನು ನಿರ್ಮಾಣ ಮಾಡಿದ್ದರು. ವಿಜಯನಗರ ಅರಸರ ನಿವಾಸದ ಆವರಣದಲ್ಲಿ ಸುಮಾರು ಇಪ್ಪತ್ತು ನೀರಿನ ಶೇಖರಣಾ ತೊಟ್ಟಿಗಳಿದ್ದುದು ಕಂಡುಬಂದಿದೆ.

ವಿಜಯನಗರ ಮತ್ತು ಬಹಮನಿ ರಾಜ್ಯಗಳೆರಡರಲ್ಲೂ ಭೂಮಿಯನ್ನು ಹಿಡುವಳಿಗಳನ್ನಾಗಿ ವಿಂಗಡಿಸಲಾಗಿತ್ತು. ಭೂಮಾಲೀಕ ಮತ್ತು ಉಳುವವರ ನಡುವೆ ಮಾಡಿಕೊಂಡ ಕರಾರಿನ ಮೇಲೆ ಭೂಮಿಯನ್ನು ಉಳುವವನಿಗೆ ಕೊಡುವ ಬಾಡಿಗೆಯನ್ನು ಗೇಣಿ ಎಂದು ಕರೆಯಲಾಗುತ್ತಿತ್ತು. ಗೇಣಿ ನೀಡುವವರನ್ನು ಗೇಣಿದಾರ ಎಂದು ಕರೆಯುತ್ತಿದ್ದರು. ಗುತ್ತಿಗೆ ಪದ್ಧತಿಯಲ್ಲಿ ಭೂಮಾಲೀಕನಿಂದ ಭೂಮಿಯನ್ನು ಪಡೆದು, ಗುತ್ತಿಗೆದಾರನು ಮೊದಲೇ ನಿಗಧಿಪಡಿಸಿದ ಧವಸ ಧಾನ್ಯಗಳನ್ನು ಕೊಟ್ಟು, ತಾನು ಆ ಭೂಮಿಯಲ್ಲಿ ಎಷ್ಟು ಬೆಳೆಯನ್ನಾದರೂ ಬೆಳೆದುಕೊಳ್ಳಬಹುದಾಗಿತ್ತು. ಬಹಮನಿಯ ಸುಲ್ತಾನರು ಮತ್ತು ವಿಜಯನಗರದ ಅರಸರು ಭೂಮಿಯನ್ನು ಹೇರಳವಾಗಿ ಧರ್ಮ ಸಂಸ್ಥೆಗಳಿಗೆ, ಸಂತರಿಗೆ ದತ್ತಿ ರೂಪದಲ್ಲಿ ದಾನ ಕೊಡುತ್ತಿದ್ದರು.

ಬಹಮನಿ ರಾಜ್ಯದಲ್ಲಿ ಮುಖ್ಯವಾಗಿ ತಾಮ್ರ, ಬೆಳ್ಳಿ ಮತ್ತು ಚಿನ್ನದ ನಾಣ್ಯಗಳು ಚಾಲನೆಯಲ್ಲಿದ್ದವು. ಅಲ್ಲಾವುದ್ದೀನ್ ಹಸನ್ ಬಹಮನ್‌ಷಾನ ನಾಣ್ಯಗಳು ಮೂರು ವಿಧದ ಗಾತ್ರಗಳಲ್ಲಿ ಮುದ್ರಿತವಾಗಿದ್ದವು. ಫಿರೋಜ್ ಷಾನು ಅತ್ಯಂತ ಸುಂದರವಾದ ನಾಣ್ಯಗಳನ್ನು ಅಚ್ಚು ಹಾಕಿಸಿದ್ದನು. ಕಾಲಾಂತರದಲ್ಲಿ ತಾಮ್ರದ ನಾಣ್ಯಗಳೇ ಹೆಚ್ಚು ಚಲಾವಣೆಗಳಲ್ಲಿದ್ದವಲ್ಲದೇ ಗ್ರಾಮಗಳ ಸಂತೆಗಳಲ್ಲಿ ತಾಮ್ರದ ನಾಣ್ಯಗಳ ಜನಪ್ರಿಯತೆ ದ್ವಿಗುಣಗೊಂಡಿತ್ತು. ಎಸ್.ಕೆ. ಸಿನ್ಹಾರವರ ಹೇಳಿಕೆಯ ಪ್ರಕಾರ ಮುಜಾಹಿದ್‌ಷಾನ ಕಾಲದಲ್ಲಿ ಚಲಾವಣೆಗೊಂಡ ಬೆಳ್ಳಿಯ ನಾಣ್ಯಗಳು ಭಾರತದಲ್ಲಿಯೇ ಅತ್ಯಂತ ಸುಂದರ ನಾಣ್ಯಗಳಾಗಿದ್ದವು. ಸುಲ್ತಾನರ ನಾಣ್ಯಗಳ ಮೇಲೆ ಅವರ ಹೆಸರುಗಳು, ಬಿರುದುಗಳು, ಅವರು ಸಿಂಹಾಸನವನ್ನೇರಿದ ತಾರೀಖುಗಳನ್ನು ಮುದ್ರಿಸುತ್ತಿದ್ದರು.

ಅದೇ ರೀತಿ ವಿಜಯನಗರ ರಾಜ್ಯದ ಚಿಹ್ನೆ ವರಾಹವಾಗಿದ್ದರೂ ಸಹ, ನಾಣ್ಯಗಳ ಮೇಲೆ ಹನುಮಾನ್, ಗರುಡ ಮತ್ತು ಆನೆಗಳ ಲಾಂಛನದ ಚಿತ್ರಗಳನ್ನು ಮುದ್ರಿಸುತ್ತಿದ್ದರು. ಹರಿಹರನ ಕಾಲದಲ್ಲಿ ದೇವನಾಗರಿ ಲಿಪಿಯಲ್ಲಿ 'ಶ್ರೀ ವೀರ ಹರಿಹರ' ಎಂಬ ಅಂಕಿತವಿರುವ ನಾಣ್ಯಗಳು ಕಂಡುಬಂದಿವೆ. ಚಿನ್ನದ ನಾಣ್ಯಗಳು ಅರ್ಧ ವರಹಗಳು ೨೬.೪ ಗ್ರೇನ್ ತೂಕವುಳ್ಳದ್ದಾಗಿದ್ದವು. ಈ ನಾಣ್ಯದ ಮೇಲ್ಮುಖದಲ್ಲಿ ಶಿವ–ಪಾರ್ವತಿ, ಲಕ್ಷ್ಮಿ–ನಾರಾಯಣ, ಸರಸ್ವತಿ–ಬ್ರಹ್ಮ ಮತ್ತು ಲಕ್ಷ್ಮಿ–ನರಸಿಂಹ ಇವರ ಚಿತ್ರಗಳಿರುತ್ತಿದ್ದವು. ನಾಣ್ಯದ ಹಿಂದಿನ ಭಾಗದಲ್ಲಿ 'ಶ್ರೀ ಪ್ರತಾಪ ಹರಿಹರ' ಎಂದು ನಾಗರಲಿಪಿಯಲ್ಲಿ ಕೆತ್ತಲಾಗುತ್ತಿತ್ತು. ತಾಮ್ರದ ೧/೮ ವರಹವು ೬ ಗ್ರೇನ್ ತೂಕವಿದ್ದು, ಇದರ ಮೇಲೆ ನಂದಿಶೂಲಗಳ ಚಿತ್ರವಿದ್ದು 'ಪ್ರತಾಪ ಹರಿಹರ'ವೆಂಬ ಅಂಕಿತವಿದೆ. ಅಬ್ದುಲ್ ರಜಾಕ್‌ನು ಈ ರಾಜ್ಯದಲ್ಲಿ ಪ್ರವಾಸ ಕೈಗೊಂಡಾಗ ಆ ಕಾಲದ ವರಹಗಳಾದ ಪಗೋಡ, ತಾರ, ಜಿತಲ್‌ಗಳ ಸಂಗತಿಯನ್ನು ತಿಳಿಸಿದ್ದಾನೆ. ೧/೪ ವರಹವು ಚಿನ್ನದ್ದಾಗಿದ್ದು ೧೩.೨ ಗ್ರೇನ್ ತೂಕವಿತ್ತು. ತಾರೆ ಎಂಬುದು ಬೆಳ್ಳಿಯ ನಾಣ್ಯವಾಗಿದ್ದು ಒಂದೆಡೆ ಅದರ ಮೇಲೆ ಆನೆಯ ಚಿತ್ರವು ಇನ್ನೊಂದೆಡೆ ದೇವನಾಗರಿ ಲಿಪಿಯಲ್ಲಿ 'ಶ್ರೀ ದೇವರಾಯ' ಎಂಬ ಅಂಕಿತವು ಮುದ್ರಿತವಾಗಿದ್ದವು. ದೇವರಾಯನು ಆನೆ ಬೇಟೆಗಾರನಾಗಿದ್ದರಿಂದ ಆ ಕಾಲದ ನಾಣ್ಯಗಳ ಮೇಲೆ ಆನೆಯ ಚಿತ್ರಗಳು ಕಂಡುಬಂದವು. ಕೃಷ್ಣ ದೇವರಾಯನ ಕಾಲದಲ್ಲಿ ಚಾಲ್ತಿಗೆ ಬಂದ ಸುವರ್ಣ ವರಹಗಳು ೫೨ ಗ್ರೇನ್ ತೂಕವಿದ್ದು, ನಂದಿ, ದುರ್ಗಾ, ವರಾಹ, ಶಂಕ ಮತ್ತು ಚಕ್ರಗಳ ಚಿತ್ರಗಳನ್ನು ಹೊಂದಿದ್ದವು. ನಾಣ್ಯಗಳ ಮತ್ತೊಂದು ಬದಿಯಲ್ಲಿ ನಾಗರಲಿಪಿಯಲ್ಲಿ 'ಶ್ರೀ ಪ್ರತಾಪ ಕೃಷ್ಣರಾಯ' ಎಂಬ ಲಿಖಿತವನ್ನು ಹೊಂದಿದ್ದವು. ವಿಜಯನಗರ ರಾಜ್ಯದಿಂದ ಭಾಗವಾದ ಅರವೀಡು ದೊರೆಗಳು ತಮ್ಮ ನಾಣ್ಯಗಳ ಮೇಲೆ ಶ್ರೀ ವೆಂಕಟೇಶ್ವರನ ಚಿತ್ರವನ್ನು ಮತ್ತು 'ಶ್ರೀ ವೆಂಕಟಪತಿರಾಯ' ಎಂಬ ಅಂಕಿತವನ್ನು ಮುದ್ರಿಸುತ್ತಿದ್ದರು.

ವಿಜಯನಗರ ಸಾಮ್ರಾಜ್ಯವು ದಖನ್ನಿನ ಸಮಸ್ತ ಪ್ರಾಚೀನ ಸಾಮ್ರಾಜ್ಯಗಳ ಪರಂಪರೆಯನ್ನು ಪ್ರತಿನಿಧಿಸುವಂತಿತ್ತು. ವಿಜಯನಗರದ ರಾಜ್ಯ ಚಿಹ್ನೆಯು ವರಾಹವಾಗಿದ್ದರೂ ನಾಣ್ಯಗಳ ಮೇಲೆ ಹನುಮಾನ್

ಗರುಡ ಮತ್ತು ಆನೆಗಳ ಲಾಂಛನವನ್ನು ಕಾಣುತ್ತೇವೆ. ಒಂದನೆ ಹರಿಹರನ ಕಾಲದ ನಾಣ್ಯಗಳ ಮೇಲೆ ಗರುಡ, ಹನೂಮಾನ್ ಅವರ ಚಿತ್ರಗಳಿರುವುವಲ್ಲದೆ, ಕನ್ನಡ ಇಲ್ಲವೆ ದೇವನಾಗರ ಲಿಪಿಯಲ್ಲಿ 'ಶ್ರೀವೀರ ಹರಿಹರ' ಎಂಬ ಅಂಕಿತವೂ ಕಂಡುಬರುತ್ತದೆ. ಮೊದಲನೆ ಬುಕ್ಕನ ಕಾಲದ ನಾಣ್ಯಗಳ ಮೇಲೆ 'ಶ್ರೀ ವೀರಬುಕ್ಕರಾಯ' 'ಶ್ರೀ ವೀರಭೂಪತಿರಾಯ ಎಂಬ ಲಿಖಿತವಿದೆ. ಎರಡನೆ ಹರಿಹರನ ಕಾಲದ ಚಿನ್ನದ ಅರ್ಧವರಹಗಳು, ೨೬.೪ ಗ್ರೇನ್ ತೂಕದಾಗಿದೆ. ನಾಣ್ಯದ ಮೇಲ್ಮುಖದಲ್ಲಿ ಶಿವ-ಪಾರ್ವತಿ, ಲಕ್ಷ್ಮೀ-ನಾರಾಯಣ, ಸರಸ್ವತೀ-ಬ್ರಹ್ಮ ಮತ್ತು ಲಕ್ಷ್ಮೀ-ನರಸಿಂಹ, ಇವರ ಚಿತ್ರಗಳಿವೆ. ಇದರ ಇನ್ನೊಂದು ಮುಖದ ಮೇಲೆ 'ಶ್ರೀ ಪ್ರತಾಪ ಹರಿಹರ' ಎಂದು ನಾಗರಲಿಪಿಯಲ್ಲಿ ಕೆತ್ತಲಾಗಿದೆ. ತಾಮ್ರದ ೧/೮ ವರಹವು ತೂಕದಲ್ಲಿ ೬ ಗ್ರೇನ್ ಇದ್ದು, ಅದರ ಮೇಲೆ ನಂದಿಶೂಲಗಳ ಚಿತ್ರವಿದ್ದು, 'ಪ್ರತಾಪಹರಿಹರ' ಎಂಬವ ಅಂಕಿತವಿದೆ. ಎರಡನೆಯ ಬುಕ್ಕ ಅಥವಾ ವಿಜಯದೇವರಾಯನ ಕಾಲದ ತಾಮ್ರದ ನಾಣ್ಯಗಳ ಮೇಲೆ ನಂದಿ, ಸೂರ್ಯ, ಚಂದ್ರರ ಚಿತ್ರವಿದ್ದು ನಾಗರಿಲಿಪಿಯಲ್ಲಿ 'ಜಯಬುಕ್ಕರಾಯ' ಎಂಬ ಅಂಕಿತವಿದೆ. ಒಂದನೆಯ ದೇವರಾಯನ ಕಾಲದ ಚಿನ್ನದ ವರಹಗಳು ೫೨.೩ ಗ್ರೇನ್ ತೂಕದವಾಗಿವೆ. ಅವುಗಳ ಮೇಲೆ ಶಿವ-ಪಾರ್ವತಿ ವಿಷ್ಣು-ಲಕ್ಷ್ಮೀ, ಇವರ ಚಿತ್ರಗಳು ಮತ್ತು ನಾಗರಿ ಲಿಪಿಯಲ್ಲಿ 'ಶ್ರೀ ಪ್ರತಾಪದೇವರಾಯ' ಎಂಬ ಅಂಕಿತ ಇದೆ. ಬಹುಶ: ಅವನ ಕಾಲದವಾದ ಮತ್ತು ತಾಮ್ರದ ನಾಣ್ಯಗಳ ಮೇಲೆ ನಂದಿ ಶಂಖ, ಸೂರ್ಯ, ಚಂದ್ರ ಇವರ ಚಿತ್ರವೂ ಕನ್ನಡದಲ್ಲಿ 'ದೇ' ಶ್ರೀ ದೇವರಾಯ' 'ಶ್ರೀ ನೀಲಕಂಠ' ಮತ್ತು ನಾಗರಿ ಲಿಪಿಯಲ್ಲಿ 'ಶ್ರೀ ಪ್ರತಾಪದೇವರಾಯ' ಎಂಬ ಅಂಕಿತಗಳೂ ಇವೆ.

ಎರಡನೆಯ ದೇವರಾಯನ ಕಾಲದಲ್ಲಿ ಈ ರಾಜ್ಯದಲ್ಲಿ ಪ್ರವಾಸ ಕೈಕೊಂಡ ಅಬ್ದುಲ್ ರಜಾಕನು ಈ ಕಾಲದ ವರಹ(ಪಗೋಡಾ, ತಾರ ಮತ್ತು ಜಿತಲ್)ಗಳ ಸಂಗತಿಯನ್ನು ಹೇಳಿದ್ದಾನೆ. ೪ ವರಹವು ಚಿನ್ನ ದ್ದಾಗಿದ್ದು ೧೩.೨ ಗ್ರೇನ್ ತೂಗುತ್ತಿತ್ತು. ದೇವರಾಯನು ಗಜಪೇಟೆಕಾರನಾಗಿದ್ದ ಕಾರಣ, ಅವನ ಕಾಲದ ನಾಣ್ಯಗಳ ಮೇಲೆ ಆನೆಯ ಚಿತ್ರಗಳು ಕಾಣಿಸುತ್ತವೆ. 'ತಾರ' ಎಂಬುದು ಒಂದು ಬೆಳ್ಳಿಯ ನಾಣ್ಯ. ಅದರ ಮೇಲೆ ಒಂದಡೆ ಆನೆಯ ಚಿತ್ರವೂ, ಇನ್ನೋದಡೆ ದೇವನಾಗರಿ ಲಿಪಿಯಲ್ಲಿ 'ಶ್ರೀ ದೇವರಾಯ' ಎಂಬ ಅಂಕಿತವೂ ಇದೆ. ಅನೇಕ ತಾಮ್ರದ ಹಾಗೂ ಮುಂಭಾಗದಲ್ಲಿ ಆನೆ, ಸೂರ್ಯ, ಮತ್ತು ರಾಜನು ಆನೆಯನ್ನು ಬೇಟೆಯಾಡುವ ಚಿತ್ರ ಇವೆ. ಹಿಂಬಾಗದಲ್ಲಿ ಕನ್ನಡ ಮತ್ತು ಸಂಸ್ಕೃತಗಳಲ್ಲಿ 'ಶ್ರೀದೇವರಾಯ' 'ಶ್ರೀಪ್ರತಾಪ ದೇವರಾಯ 'ಶ್ರೀ ದೇವರಾಯ ಗಜಬೇಂಟೆಕಾರ' 'ರಾಯಗಜಗಂಡಭೇರುಂಡ' ಎಂಬ ಉಲ್ಲೇಖಗಳಿವೆ.

ಸಾಳುವರ ಕಾಲದ ನಾಣ್ಯಗಳ ವಿಷಯ ನಮಗೆ ದೊರೆತಿಲ್ಲ. ಕೃಷ್ಣದೇವರಾಯನ ಕಾಲದ ಸುವರ್ಣವರಹಗಳು ೫೨ ಗ್ರೇನ್ ತೂಕವಿದ್ದು ನಂದಿ, ದುರ್ಗಾ, ವರಾಹ, ಶಂಖ ಮತ್ತು ಚಕ್ರಗಳ ಚಿತ್ರದಿಂದ ಕೂಡಿ, ನಾಗರಿಲಿಪಿಯಲ್ಲಿ 'ಶ್ರೀ ಪ್ರತಾಪಕೃಷ್ಣರಾಯ' ಎಂಬ ಲಿಖಿತವನ್ನು ಹೊಂದಿದೆ. ಆತನ ಅರ್ಧ ಮತ್ತು ಕಾಲುವರಹಗಳ ಮೇಲೆ ಬಾಲಕೃಷ್ಣನ ಚಿತ್ರವಿದೆ. ಅಚ್ಚುತನ ಕಾಲದ ವರಹಗಳ ಮೇಲೆ ಗಂಡಭೇರುಂಡವು ಆನೆಯನ್ನು ಆಕ್ರಮಿಸಿರುವ ಚಿತ್ರವೂ ನಾಗರಿ ಲಿಪಿಯಲ್ಲಿ 'ಶ್ರೀ ಪ್ರತಾಪ ಅಚ್ಯುತರಾಯ' ಎಂಬ ಅಂಕಿತವೂ ಇವೆ. ಚಕ್ರವರ್ತಿಯಾದ ಸದಾಶಿವನ ಕಾಲದ ನಾಣ್ಯಗಳ ಮೇಲೆ ಶಿವ ಪಾರ್ವತಿ, ಲಕ್ಷ್ಮೀ ನಾರಾಯಣ ಇವರ ಚಿತ್ರಗಳೂ ನಾಗರಿಲಿಪಿಯಲ್ಲಿ 'ಶ್ರೀ ಸದಾಶಿವರಾಯರು' ಎಂಬ ಅಂಕಿತವೂ ಇವೆ. ಅರವೀಡು ದೊರೆಗಳು ನಾವು ಹೊರಡಿಸಿದ ನಾಣ್ಯಗಳ ಮೇಲೆ ಶ್ರೀ ವೆಂಕಟೇಶ್ವರನ ಚಿತ್ರವನ್ನೂ 'ಶ್ರೀವೆಂಕಟಪತಿರಾಯ' ಹಾಗೂ ಅಂಕಿತವನ್ನು ಹಾಕಿಸಿದ್ದಾರೆ.[೪೩] ಈ ರೀತಿಯಾಗಿ ಮೇಲ್ಕಾಣಿಸಿದ ಎಲ್ಲಾ ಆರ್ಥಿಕ ವಿಷಯಗಳಲ್ಲೂ ಬಹಮನಿ ಮತ್ತು ವಿಜಯನಗರ ಸಾಮ್ರಾಜ್ಯಗಳೆರಡರಲ್ಲೂ, ಆರ್ಥಿಕ ವ್ಯವಸ್ಥೆಗಳು

ಅಲ್ಪ-ಸ್ವಲ್ಪ ವ್ಯತ್ಯಾಸಗಳನ್ನು ಹೊಂದಿ, ಭಾಗಶಃ ಏಕರೂಪವಾಗಿದ್ದವು ಎಂದು ಪ್ರಸ್ತುತ ಅಧ್ಯಾಯದಿಂದ ತಿಳಿದುಬರುತ್ತದೆ.

**೫.೪. ಬಹಮನಿ ಮತ್ತು ವಿಜಯನಗರಗಳ ನಡುವಿನ ಧಾರ್ಮಿಕ ಸಂಬಂಧಗಳು**

ಬಹಮನಿ ಸಾಮ್ರಾಜ್ಯವು ಮಧ್ಯಕಾಲೀನ ಯುಗದಲ್ಲಿ ದಖ್ಖನ್ ಪ್ರದೇಶದಲ್ಲಿ ಮೊದಲನೇ ಮುಸ್ಲಿಂ ಸಾಮ್ರಾಜ್ಯವಾಗಿ ೧೪ನೇ ಶತಮಾನದಲ್ಲಿ ಅಸ್ತಿತ್ವಕ್ಕೆ ಬಂದಿತು. ಹೆಚ್ಚು-ಕಡಿಮೆ ಇದೇ ಸಮಯಕ್ಕೆ ಬಹಮನಿಯ ಪಕ್ಕದ ರಾಜ್ಯವಾದ ವಿಜಯನಗರ ಸಾಮ್ರಾಜ್ಯವು ಸಹ ಅಸ್ತಿತ್ವವನ್ನು ಕಂಡಿತು. ಮೊದಲನೇ ಮುಸ್ಲಿಂ ಸಾಮ್ರಾಜ್ಯವಾಗಿದ್ದರೂ ಸಹ ಮಧ್ಯಕಾಲೀನ ಯುಗದಲ್ಲಿ ಬಹಮನಿ ಸಾಮ್ರಾಜ್ಯವು ಹಿಂದೂ-ಮುಸ್ಲಿಂ ಸಾಮರಸ್ಯವನ್ನು ಹೊಂದಿದಂತಹ ರಾಜ್ಯವೆಂದು ಹೇಳಲಾಗುತ್ತದೆ. ಅದೇ ರೀತಿ ವಿಜಯನಗರ ಸಾಮ್ರಾಜ್ಯದಲ್ಲಿ ಹಿಂದೂ ಸಂಸ್ಕೃತಿಯು ಉನ್ನತ ಮಟ್ಟವನ್ನು ಕಂಡಿತು. ಸಾಮ್ರಾಜ್ಯದ ಆರಂಭಿಕ ದಿನಗಳಲ್ಲಿ ವಿಜಯನಗರ ಸಾಮ್ರಾಜ್ಯದಲ್ಲಿ ಮುಸ್ಲಿಮರಿಗೆ ಹೆಚ್ಚಿನ ಪ್ರಾಮುಖ್ಯತೆಯೇನೂ ಇರಲಿಲ್ಲ. ಸಾಮಾನ್ಯವಾಗಿ ವಿಜಯನಗರ ಸಾಮ್ರಾಜ್ಯದಲ್ಲಿ ಹಿಂದೂಗಳ ಜನಸಂಖ್ಯೆಯೇ ಪ್ರಮುಖವಾಗಿದ್ದು ಮುಸ್ಲಿಮರು ಅಲ್ಪಸಂಖ್ಯಾತರಿದ್ದರು. ಈ ಕಾರಣದಿಂದಾಗಿ ಹಿಂದೂಗಳಿಗೆ ಹೆಚ್ಚಿನ ಪ್ರಾಮುಖ್ಯತೆ, ಉತ್ತಮ ಹುದ್ದೆಗಳು ಮತ್ತು ಪದವಿಗಳು, ಸಾಮಾಜಿಕ ಸ್ಥಾನಮಾನಗಳು ವಿಜಯನಗರದಲ್ಲಿ ದೊರೆತಿದ್ದವು. ರಾಜಕೀಯವಾಗಿ ಬಹಮನಿ ಮತ್ತು ವಿಜಯನಗರಗಳ ಮಧ್ಯ ನಿರಂತರ ಘರ್ಷಣೆಗಳು ನಡೆದು ಸದಾಕಾಲವೂ ದ್ವೇಷಮಯ ವಾತಾವರಣ ನೆಲೆಸಿರುತ್ತಿತ್ತು. ಈ ಕಾರಣದಿಂದಾಗಿ ಹಿಂದೂಗಳ ಕೊಲೆಗಳು, ಲೂಟಿಗಳು ಮಹಮ್ಮದೀಯರಿಂದ ನಡೆದೇ ಇದ್ದವು. ವಿಜಯನಗರವನ್ನು ರಾಜಕೀಯವಾಗಿ ಮುಸ್ಲಿಮರಿಂದ ರಕ್ಷಿಸಲು ಮತ್ತು ಪ್ರಬಲಗೊಳಿಸಲು, ನಂತರದ ದಿನಗಳಲ್ಲಿ ದೇವರಾಯನು ಹಿಂದೂ-ಮುಸ್ಲಿಂ ಸಾಮರಸ್ಯ ನೀತಿಯನ್ನು ಜಾರಿಗೆ ತಂದನು. ಈ ನೀತಿಯ ಪ್ರಕಾರ ವಿಜಯನಗರದಲ್ಲಿ ನೆಲೆಸಿದ್ದ ಮಹಮ್ಮದೀಯರನ್ನು ವಿಜಯನಗರದಲ್ಲಿಯೇ ಸಂತೃಪ್ತಿಯಿಂದ ಉಳಿಸಿಕೊಳ್ಳುವ ಸಲುವಾಗಿ ದೇವರಾಯನು ಈ ನೀತಿಯನ್ನು ಜಾರಿಗೆ ತಂದನು. ಸದೃಢ ಮುಸ್ಲಿಂ ಯುವಕರನ್ನು ತರಬೇತಿ ಕೊಟ್ಟು ವಿಜಯನಗರ ಸೈನ್ಯಕ್ಕೆ ಸೇರಿಸಿಕೊಳ್ಳಲಾಯಿತು ಮತ್ತು ಉತ್ತಮ ಪದವಿಗಳನ್ನು ಸಹ ಕೊಡಲಾಯಿತು. ರಾಜ್ಯದಲ್ಲಿ ಹಿಂದೂ-ಮುಸ್ಲಿಂ ಸಾಮರಸ್ಯವನ್ನು ತಕ್ಕಮಟ್ಟಿಗೆ ಸ್ಥಾಪಿಸಲಾಯಿತು. ವಿಜಯನಗರದ ಸಿಂಹಾಸನದ ಮುಂದೆ ಪವಿತ್ರ ಗ್ರಂಥವಾದ ಕುರಾನನ್ನು ಸ್ಥಾಪಿಸಲಾಯಿತು, ಇದರಿಂದಾಗಿ ಮುಸ್ಲಿಂ ಸೈನಿಕರಿಗೆ ತಮ್ಮ ಧರ್ಮವನ್ನು ಪಾಲಿಸುವುದಕ್ಕೆ ಅನುಕೂಲ ವಾಯಿತು. ಅವರು ಕುರಾನ್‌ಗೂ ಮತ್ತು ರಾಜನ ಸಿಂಹಾಸನಕ್ಕೂ ಏಕಕಾಲಕ್ಕೆ ನಮಿಸುತ್ತಿದ್ದರು.

ಕರ್ನಾಟಕದಲ್ಲಿ ಮುಸಲ್ಮಾನ ಧರ್ಮ ಪ್ರವೇಶಿಸಿ ಬೆಳೆಯಹತ್ತಿದ ನಂತರ ಹಿಂದೂ ಜನರು ಅದನ್ನು ಕೂಡ ಸ್ವಾಗತಿಸಿ ಅವರಿಗೆ ಅನುಕೂಲತೆಗಳನ್ನೊದಗಿಸಿ ಕೊಟ್ಟ ಉದಾಹರಣೆಗಳು ಈ ನಾಡಿನ ಇತಿಹಾಸದಲ್ಲಿ ದೊರೆಯುವವು. ವಿಜಯನಗರದ ದೊರೆಗಳು ತಮ್ಮ ಮುಸಲ್ಮಾನ ಪ್ರಜೆಗಳಿಗೆ ಗೌರವ ತೋರಿಸುವುದಕ್ಕೊಸ್ಕರ ತಮ್ಮ ಸಿಂಹಾಸನದ ಹತ್ತಿರ ಕುರಾನದ ಪ್ರತಿಯನ್ನು ಇಡುತ್ತಿದ್ದರಂತೆ. ಬಹಮನಿ ರಾಜ್ಯವನ್ನು ಕ್ರಿ.ಶ.೧೩೪೭ರಲ್ಲಿ ಸ್ಥಾಪಿಸಿದ ಹಸನ್ ಜಾಫರ್‌ಖಾನ್‌ನೆಂಬುವನು ತನ್ನ ಒಡೆಯನಿಗೆ ಗಂಗೂ ಬ್ರಾಹ್ಮಣನಿಗೆ ತನ್ನ ಕೃತಜ್ಞತೆಯನ್ನು ತೋರಿಸುವುದಕ್ಕಾಗಿ ಹಸನ್ ಗಂಗೂ ಬಹಮನಿ ಎಂದು ತನ್ನ ಹೆಸರೊಡನೆ ಅವನ ಹೆಸರನ್ನು ಜೋಡಿಸಿದುದಲ್ಲದೆ ತನ್ನ ವಂಶಕ್ಕೆ ಬಹಮನಿ ಎಂದು ಹೆಸರಿಸಿದನು. ಉದಾ;ಶಿರಹಟ್ಟಿಯ ಫಕೀರಸ್ವಾಮಿ, ಸಾಗುವಳಿಗೆಯ ಲಿಂಗೇಶ್ವರಸ್ವಾಮಿಮಠ, ಶಿಶುನಾಳ ಶರೀಫ ಸಾಹೇಬರ ಅನುಭವ ಪದಗಳು ಹಿಂದೂಸ್ತಾನದಲ್ಲಿ ರಾಮ ರಹಿಮರಿಗೆ ಭೇದವಿಲ್ಲೆಂದು ಸಾರಿದನ್ನು ನೋಡಬಹುದು.[೪೪]

ವಿಜಯನಗರದ ಪಟ್ಟಣಕ್ಕೆ ಸಂಬಂಧಿಸಿದಂತೆ ವಿವಿಧ ಧರ್ಮಗಳ ಜನರು ಈ ಪಟ್ಟಣದಲ್ಲಿದ್ದು, ಮುಸ್ಲಿಂರು ಪಟ್ಟಣದ ಪೂರ್ವ ಭಾಗದಲ್ಲಿದ್ದರೆಂದು ವಿದೇಶಿಯರ ಬರಹಗಳು ಈ ಧರ್ಮವಿರುವುದನ್ನು ಪ್ರಚುರ ಪಡಿಸಿವೆ. ಹೈದ್ರಾಬಾದ್‌ನ ಪಿ.ವಿ.ಆರ್‌ನಲ್ಲಿ ೧೯೭೬–೮೩, ೧೯೮೩–೮೪, ೧೯೮೪–೮೭ರಲ್ಲಿ ಧರ್ಮಶಾಲೆಗಳು, ಗೋರಿಗಳು, ಮಸೀದಿಗಳು, ಇರುವವು ಹಾಗೂ ಕಡ್ಡೆರಾಂಪುರದಲ್ಲಿರುವ ಬೃಹತ್ ಗೋರಿಗಳು ಒಳಕೋಟೆಯಲ್ಲಿರುವ ಗೋರಿಗಳು, ಶಾಸನಗಳು ಈ ಅಂಶವನ್ನು ಎತ್ತಿ ಹಿಡಿದಿವೆ.[೪೫]

ಶಾಸನಗಳಿಂದ ದೊರಕಿದ ಮಾಹಿತಿಗಳ ಪ್ರಕಾರ ವಿಜಯನಗರ ಸಾಮ್ರಾಜ್ಯದಲ್ಲಿ ಧಾರ್ಮಿಕ ಸಹಿಷ್ಣುತೆಯು ನೆಲೆಸಿದ್ದಿತೆಂದು ತಿಳಿದುಬರುತ್ತದೆ. ಸಂಗಮ ವಂಶದ ಮೊದಲ ದೊರೆಗಳು ಶೃಂಗೇರಿ ಮಠಕ್ಕೆ ಅನೇಕ ದಾನದತ್ತಿಗಳನ್ನು ನೀಡಿದ್ದರು. ಶ್ರವಣಬೆಳಗೊಳದ ಮೊದಲನೇ ಬುಕ್ಕನ ಶಾಸನ, ಶ್ರೀ ವೈಷ್ಣವಧರ್ಮ ಮತ್ತು ಜೈನಧರ್ಮಗಳಿಗೆ ವಿಜಯನಗರದವರು ಸಮಾಜವಾದ ರಕ್ಷಣೆ ಕೊಡುವ ಭರವಸೆಯನ್ನು ನೀಡಿದ್ದರೆಂದು ಶಾಸನ ತಿಳಿಸುತ್ತದೆ.[೪೬] ವಿಜಯನಗರದ ಸೈನಿಕರು ಮತ್ತು ಅರಸರು ಮುಸ್ಲಿಂ ಸುಲ್ತಾನರೊಂದಿಗೂ ಮತ್ತು ಸೈನಿಕರೊಂದಿಗೂ ಸೆಣಸಾಡಿದರೂ ಸಹ ಅನೇಕ ಯುದ್ಧಗಳಲ್ಲಿ ಭಾಗವಹಿಸಿದರೂ ಸಹ ಮುಸ್ಲಿಂ ಧರ್ಮದವರಿಗೆ ಮತ್ತು ಅವರ ಧರ್ಮಕ್ಕೆ ಎಂದೂ ಅಗೌರವವಾಗಿ ವರ್ತಿಸುತ್ತಿರಲಿಲ್ಲ ಎಂದು ತಿಳಿದುಬರುತ್ತದೆ.

ಸಂಗಮ ವಂಶದ ನಂತರ ಶ್ರೀ ವೈಷ್ಣವ ಧರ್ಮ ವಿಜಯನಗರದಲ್ಲಿ ಅತ್ಯಂತ ಪ್ರಸಿದ್ಧಿಗೆ ಬಂದಿತು. ಸಾಳುವ ಮತ್ತು ತುಳುವ ವಂಶದವರು ವೈಷ್ಣವ ಧರ್ಮದ ಪೋಷಕರಾಗಿದ್ದರು. ಒಡಗಲೈ ಅಥವಾ ಉತ್ತರದವರು ಮತ್ತು ಟೆಂಕಲೈ ಅಥವಾ ದಕ್ಷಿಣದವರು ಎಂಬ ಎರಡು ಶ್ರೀವೈಷ್ಣವ ಪಂಗಡಗಳು ಆಂಧ್ರ ಮತ್ತು ತಮಿಳುನಾಡುಗಳಲ್ಲಿ ಇದ್ದವು.[೪೭] ೧೩ನೇ ಶತಮಾನದಲ್ಲಿ ಶ್ರೀ ವೈಷ್ಣವ ಧರ್ಮ ಮತ್ತು ದ್ವೈತ ವೇದಾಂತದ ಬೆಳವಣಿಗೆಯಿಂದ ವೀರಶೈವ ಧರ್ಮವು ಅಷ್ಟಾಗಿ ಪ್ರಸಿದ್ಧಿಗೆ ಬರಲಿಲ್ಲ. ಅದರ ನಂತರ ಎರಡನೇ ದೇವರಾಯನ ಆಳ್ವಿಕೆಯಲ್ಲಿ ವೀರಶೈವ ಧರ್ಮವು ಪುನರುಜ್ಜೀವನಗೊಂಡಿತು. ದೇವರಾಯನ ಮಂತ್ರಿಯಾದ ಲಕ್ಕಣ್ಣ ಮತ್ತು ಆತನ ಸಹಚರರು ವೀರಶೈವ ಧರ್ಮದ ಪುನರುದ್ಧಾರಕ್ಕೆ ಶ್ರಮಿಸಿದರು, ಈ ಕಾರಣದಿಂದಾಗಿ ವೀರಶೈವ ಸಾಹಿತ್ಯವು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಸಂಪತ್ಭರಿತವಾಗಿದೆ.

೧೫ನೇ ಶತಮಾನದಲ್ಲಿ ತೋಂಟದ ಸಿದ್ಧಲಿಂಗೇಶ್ವರರು ವೀರಶೈವ ಧರ್ಮದ ಪ್ರಚಾರವನ್ನು ಕೈಗೊಂಡರು. ಇಡೀ ವಿಜಯನಗರದಾದ್ಯಂತ ವೀರಶೈವ ಮಠಗಳು ಸ್ಥಾಪನೆಯಾದವು. ಅದೇ ರೀತಿ ವೈಷ್ಣವ ಧರ್ಮ ಅಥವಾ ದ್ವೈತ ವೇದಾಂತವು ಮದ್ವಾಚಾರ್ಯರ ಶಿಷ್ಯರಾದ ನರಹರಿತೀರ್ಥ ಮತ್ತು ಅಕ್ಷೋಭ್ಯ ಮುಂತಾದವರಿಂದ ಪ್ರಚಾರವನ್ನು ಪಡೆಯಿತು.[೪೮] ಜಯತೀರ್ಥರು ಮದ್ವಾಚಾರ್ಯರ ಕೃತಿಗಳಿಗೆ ಅನೇಕ ವ್ಯಾಖ್ಯಾನಗಳನ್ನು ಸಹ ರಚಿಸಿದರು. ಕೃಷ್ಣದೇವರಾಯನ ಕಾಲದಲ್ಲಿ ಅಂದರೆ ಬಹಮನಿ ಸಾಮ್ರಾಜ್ಯದ ಕೊನೆಯ ಕಾಲದಲ್ಲಿ ವ್ಯಾಸರಾಯರು ವಿಜಯನಗರದಲ್ಲಿ ಅತ್ಯಂತ ಪ್ರಸಿದ್ಧರಾಗಿದ್ದರು. ಮಾಧ್ವತರ್ಕದ ಮೇಲೆ ವ್ಯಾಸರಾಯರು ಅನೇಕ ಕೃತಿಗಳನ್ನು ರಚಿಸಿದ್ದಾರೆ. ವಿಜಯನಗರದ ಸಮಾಜದಲ್ಲಿ ನೀತಿಗಿಂತ ಜಾತಿಗೆ, ಗುಣಕ್ಕಿಂತ ಕುಲಕ್ಕೆ, ಸದಾಚಾರಕ್ಕಿಂತ ಸಂಪ್ರದಾಯಕ್ಕೆ ಮಾನ್ಯತೆ ಮತ್ತು ಪ್ರಾಧಾನ್ಯತೆ ದೊರಕಿತು. ಸಮಾಜದ ಈ ತೂಕತಪ್ಪಿದ ಬೆಳವಣಿಗೆಯನ್ನು ಕನಕದಾಸರು, ಪುರಂದರದಾಸರು, ವಿಜಯದಾಸರು, ಸರ್ವಜ್ಞರು ಮತ್ತು ಅನೇಕ ಶರಣರು ತಮ್ಮ ಬಿಚ್ಚು ನುಡಿಗಳಿಂದ ಹಾಗೂ ಕೃತಿಗಳಿಂದ ನಿರೂಪಿಸಿ, ಈ ಬೆಳವಣಿಗೆಯನ್ನು ನಿಯಂತ್ರಿಸಿ ನಿವಾರಿಸಲು ಪ್ರಯತ್ನಿಸಿದ್ದಾರೆ ಎಂದು ಹೇಳಬಹುದು. ಇದರಿಂದ ಅಂದಿನ ಕಾಲದಲ್ಲಿ ದಕ್ಷಿಣ ಭಾರತದಾದ್ಯಂತ ಭಕ್ತಿ ಪಂಥವು ಪ್ರವರ್ಧಮಾನಕ್ಕೆ ಬರಲು ಸಹಕಾರಿಯಾಯಿತಲ್ಲದೇ, ಶರಣರು ಕನ್ನಡ ಮತ್ತು ಇತರ ಭಾಷೆಗಳಲ್ಲಿ ಅನೇಕ ವಚನಗಳನ್ನು, ಕಾವ್ಯಗಳನ್ನು, ದಾಸರ ಪದಗಳನ್ನು, ಕೃತಿಗಳನ್ನು, ಪದ್ಯಗಳನ್ನು ರಚಿಸಿದ್ದಾರೆ.

ವಿಜಯನಗರದ ಪ್ರಮುಖ ಅರಸನಾದ ಕೃಷ್ಣದೇವರಾಯನು ವೈಷ್ಣವ ಧರ್ಮದ ಅನುಯಾಯಿಯಾಗಿದ್ದರೂ ಸಹ ಅನ್ಯ ಧರ್ಮಗಳನ್ನು ಸಮಾನ ರೀತಿಯಲ್ಲಿ ಪ್ರೋತ್ಸಾಹಿಸುತ್ತಿದ್ದನೆಂದು ತಿಳಿದುಬರುತ್ತದೆ. ೧೫೧೨ರಲ್ಲಿ ಮಹಮ್ಮದ ಷಾನನ್ನು ಕೃಷ್ಣದೇವರಾಯನು ಪುನಃ ಬೀದರಿನ ಸುಲ್ತಾನನನ್ನಾಗಿ ಮಾಡಿರುವುದು ಇದಕ್ಕೆ ನಿದರ್ಶನವಾಗಿದೆ.[೪೯] ಕೃಷ್ಣದೇವರಾಯನು ಹಂಪೆಯ ವಿರುಪಾಕ್ಷ ದೇವಾಲಯದ ಜೀರ್ಣೋದ್ಧಾರವನ್ನು ಮಾಡಿ, ದೇವಾಲಯದ ಕೆಲವು ಭಾಗಗಳನ್ನು ಪುನರ್‌ರಚಿಸಿದನು. ಚಿದಂಬರಂ, ಶ್ರೀಶೈಲ, ಕಾಳಹಸ್ತಿ ಮುಂತಾದ ಶೈವ ದೇವಾಲಯಗಳಿಗೆ ಕೃಷ್ಣದೇವರಾಯನು ಅಪಾರವಾದ ದಾನ–ದತ್ತಿಗಳನ್ನು ನೀಡುವುದರೊಂದಿಗೆ, ತಿರುಪತಿ, ಕಂಚಿ, ಅಹೋಬಲಗಳಲ್ಲಿನ ವೈಷ್ಣವ ದೇವಾಲಯಗಳ ಪ್ರಗತಿಗೂ ಕಾರಣನಾದನು.[೫೦] ವಿದೇಶಿ ಪ್ರವಾಸಿಗರಾದಂತಹ ಅಬ್ದುಲ್ ರಜಾಕ್, ಬಾರ್ಬೊಸಾ, ನ್ಯೂನಿಜ್, ಮುಂತಾದವರು ವಿಜಯನಗರ ರಾಜ್ಯದ ಧಾರ್ಮಿಕ ನೀತಿಯ ಬಗ್ಗೆ ಈ ರೀತಿಯಾಗಿ ತಿಳಿಸಿದ್ದಾರೆ, "ಧಾರ್ಮಿಕ ಕ್ಷೇತ್ರಗಳಲ್ಲಿ ಪ್ರಜೆಗಳಿಗೆ ಸ್ವಾತಂತ್ರ್ಯ ಮತ್ತು ಸಮಾನತೆ ಇತ್ತು. ವಿಜಯನಗರವು ಮತೀಯ ರಾಜ್ಯವಾಗಿರದೆ ಜಾತ್ಯಾತೀತ ರಾಜ್ಯವಾಗಿತ್ತು" ಎಂದು ತಿಳಿಸಿದ್ದಾರೆ.[೫೧]

ವಿಜಯನಗರದ ಅರಸರು ಇಷ್ಟಧರ್ಮ ಪೂಜ್ಯತೆ ಮತ್ತು ಪರಧರ್ಮ ಸಹಿಷ್ಣುತ ಭಾವವನ್ನು ತಾಳಿದ್ದರು. ಹಿಂದೂ ಸಾಮ್ರಾಜ್ಯವಾದರೂ ವಿಜಯನಗರದ ದೊರೆಗಳೆಂದು ಇತರ ಧರ್ಮಗಳನ್ನು ವಿರೋಧಿಸಲಿಲ್ಲ. ಹೀಗಾಗಿ ವಿಜಯನಗರದಲ್ಲಿ ಸದಾ ಕಾಲ ಧಾರ್ಮಿಕ–ಸಾಮಾಜಿಕ ಶಾಂತಿ, ಸಮೃದ್ಧಿಗಳು ನೆಲೆಸಲು ಕಾರಣವಾಗಿತ್ತು. ಅದೇ ರೀತಿ ವಿಜಯನಗರದಲ್ಲಿ ಹಲವಾರು ಉತ್ಸವಗಳು ಅತಿ ವಿಜೃಂಭಣೆಯಿಂದ ಆಚರಿಸಲ್ಪಡುತ್ತಿದ್ದವು. ಹಿಂದೂ ಉತ್ಸವಗಳಲ್ಲಿಯೇ ನಾಡಹಬ್ಬವಾಗಿ ಅತ್ಯಂತ ಭಕ್ತಿ ಮತ್ತು ಶ್ರದ್ಧೆಯಿಂದ ಆಚರಿಸಲ್ಪಡುವ ಉತ್ಸವವೆಂದರೆ ಮಹಾನವಮಿ ಉತ್ಸವ. ಮಹಾನವಮಿ ಉತ್ಸವದ ಬಗ್ಗೆ ವಿದೇಶಿ ಪ್ರವಾಸಿಗರಾದ ನ್ಯೂನಿಜ್ ಮತ್ತು ಪೇಸ್ ಸುಧೀರ್ಘವಾಗಿ ಹೀಗೆ ವರ್ಣಿಸಿದ್ದಾರೆ, "ಎತ್ತರವಾದ ಮಹಾನವಮಿ ದಿಬ್ಬದಲ್ಲಿ ವಿಜಯನಗರದ ಅರಸನು ವಿಜೃಂಭಿಸುತ್ತಿದ್ದನು, ಆಗ ಅನೇಕ ಸಾಮಂತರು, ನಾಯಕರು, ಮಂತ್ರಿಗಳು ಮುಂತಾದ ಶ್ರೀಮಂತರು ರಾಜನಿಗೆ ಹೇರಳವಾದ ಕಾಣಿಕೆಗಳನ್ನು ನೀಡುತ್ತಿದ್ದರು. ದಿಬ್ಬದ ಎದುರುಗಡೆ ಸಂಗೀತ, ನೃತ್ಯ, ಕೋಲಾಟ, ಕುಸ್ತಿ ಮುಂತಾದ ಆಟಗಳು, ಮನರಂಜನೆಗಳು ನೆರವೇರುತ್ತಿದ್ದವು"[೫೨] ಎಂಬ ಹಲವಾರು ಅಂಶಗಳನ್ನು ವಿದೇಶೀ ಬರವಣಿಗೆಗಳಲ್ಲಿ ನಾವು ಕಾಣುತ್ತೇವೆ.

ಅದ್ವೈತ, ವಿಶಿಷ್ಟಾದ್ವೈತ, ದ್ವೈತ, ವೀರಶೈವ ಮತ್ತು ಜೈನ ಧರ್ಮಗಳು ವಿಜಯನಗರದಲ್ಲಿ ತಮ್ಮ ಪ್ರಭಾವವನ್ನು ಸಮಾಜದ ಮೇಲೆ ಬೀರಿದ್ದವು. ಒಟ್ಟಿನಲ್ಲಿ ಹೇಳಬೇಕೆಂದರೆ ವಿಜಯನಗರದಲ್ಲಿ ಎಲ್ಲಾ ಧರ್ಮಗಳ ಅನುಯಾಯಿಗಳು ಕೂಡಿ ಒಂದೆಡೆ ವಾಸಿಸುತ್ತಿದ್ದು, ಅನ್ಯ ಮತ ಸಹಿಷ್ಣುತೆಯನ್ನು ಬೆಳೆಸಿಕೊಂಡಿದ್ದರು. ಅದೇ ರೀತಿ ವಿಜಯನಗರದ ಅರಸರು ಎಲ್ಲಾ ಧರ್ಮದವರನ್ನು ಮತ್ತು ಜಾತಿಯವರನ್ನು ಸಹನೆಯಿಂದ ಕಂಡು, ಎಲ್ಲರಿಗೂ ಸಮಾನ ರಕ್ಷಣೆ ಮತ್ತು ಪ್ರೋತ್ಸಾಹವನ್ನು ಕೊಟ್ಟಿದ್ದರೆಂದು ಚರಿತ್ರೆಯಿಂದ ತಿಳಿದುಬರುತ್ತದೆ.

ದಖ್ಖನ್ ಪ್ರಾಂತ್ಯದ ಬಹಮನಿ ಇತಿಹಾಸದಲ್ಲಿ ಮಹತ್ವಪೂರ್ಣವಾದ ಕಾಲಘಟ್ಟವೆಂದರೆ ಧಾರ್ಮಿಕ ಚಳುವಳಿಯ ಸನ್ನಿವೇಶ. ಹಿಂದೂ–ಮುಸ್ಲಿಂ ಮತ ಹಾಗೂ ಧರ್ಮಗಳಲ್ಲಿ ಇದು ಪ್ರವರ್ಧಮಾನದ ಯುಗವೂ ಹೌದು. ಹಿಂದೂ–ಮುಸ್ಲಿಂ ಧಾರ್ಮಿಕ ಆಂದೋಲನದಲ್ಲಿ ಹಳೆಯ ಭಾವನೆಗಳು, ಮೂಢನಂಬಿಕೆಗಳು, ಸಂಪ್ರದಾಯಗಳು ವಿನಾಶವನ್ನು ಕಂಡು ಪುನರ್‌ನಮನಕ್ಕೆ ಹಾಗೂ ನಿಜವಾದ ಧರ್ಮವೆಂದರೇನು ಎಂಬುದನ್ನು ಹೊಸ ರೂಪವನ್ನು ಕಂಡುಕೊಂಡ ಯುಗವೂ ಹೌದು. ಬಹಮನಿ ಕಾಲದಲ್ಲಿ ನಡೆದ ಧಾರ್ಮಿಕ ಆಂದೋಲನಗಳೆಂದರೆ ಸೂಫಿ ಮತ್ತು ಭಕ್ತಿ ಆಂದೋಲನಗಳು.

ಸೂಫಿ ಪಂಥವು ಇಸ್ಲಾಮಿನ ಆಧ್ಯಾತ್ಮಿಕ ರೂಪವೆಂದೇ ಹೇಳಬಹುದು. ಜಗತ್ತಿನ ಎಲ್ಲಾ ಧರ್ಮಗಳ ಉನ್ನತ ಮೌಲ್ಯಗಳನ್ನು ತಮ್ಮಲ್ಲಿ ಅಳವಡಿಸಿಕೊಂಡ ಸೂಫಿಗಳು ಈ ಚಳುವಳಿಯ ಜನಪ್ರಿಯತೆಗೆ ಕಾರಣರಾದರು. ಮಾನವರೆಲ್ಲರೂ ಒಂದೇ, ಜಾತಿ ಬೇಧವಿಲ್ಲದೆ, ಮೇಲು-ಕೀಳೆಂಬ ಭಾವನೆ ಇಲ್ಲದೆ, ಎಲ್ಲರನ್ನೂ ಸಮಾನ ದೃಷ್ಟಿಯಿಂದ ನೋಡಿದ ಸೂಫಿಗಳು ಸಮಾನ ಮಾನವತಾವಾದವನ್ನು ಯಶಸ್ವಿಯಾಗಿ ಕಾರ್ಯರೂಪಕ್ಕೆ ತಂದರು. ದೇವರು ಹಲವರಿದ್ದರೂ ಭಗವಂತನ ಸಾಕ್ಷಾತ್ಕಾರ ಪಡೆಯಲು ಬಳಸುವ ಮಾರ್ಗ ಭಕ್ತಿ ಮಾರ್ಗ ಒಂದೇ, ಅದೇ ಸತ್ಯಾನ್ವೇಷಣೆ ಮಾರ್ಗ ಮತ್ತು ಜ್ಞಾನ ಮಾರ್ಗ. ದಖ್ಖನ್ ಪ್ರದೇಶದಲ್ಲಿ ಬಹಮನಿ ಕಾಲದಲ್ಲಿ ಅಸ್ತಿತ್ವದಲ್ಲಿದ್ದ ಶಿಯಾ ಮತ್ತು ಸುನ್ನಿ ಪಂಥಗಳಲ್ಲಿ ಯಾವುದೇ ಬೇಧ-ಭಾವವನ್ನು ಮಾಡದೆ, ಎರಡೂ ಪಂಗಡಗಳ ಶಾಂತಿ, ಸಮಾನತೆ ಮತ್ತು ಸಹಬಾಳ್ವೆಗೆ ಸೂಫಿಗಳು ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಟ್ಟರು.[೫೩] ಹಿಂದೂ-ಮುಸ್ಲಿಂ ಧರ್ಮಗಳಲ್ಲಿ ಐಕ್ಯತಾ ಭಾವವನ್ನು ಜಾಗೃತಗೊಳ್ಳುವಂತೆ ಮಾಡುವುದು ಸೂಫಿ ಚಳುವಳಿಯ ಮುಖ್ಯ ಉದ್ದೇಶ ಮತ್ತು ಮಹತ್ವದ ಸಾಧನೆಯೂ ಆಗಿತ್ತು. ಈಶ್ವರ, ಅಲ್ಲಾ, ರಾಮ, ರಹೀಮರೆಲ್ಲರೂ ಒಂದೇ ದೇವರು, ಅವನೊಬ್ಬನೇ ಈ ಜಗತ್ತಿಗೆ ಒಡೆಯ ಎಂದು ತಮ್ಮ ಪದ್ಯಗಳ ಮೂಲಕ ಸಾರಿ ಹೇಳಿ ಮಾನವೀಯ ಮೌಲ್ಯಗಳಿಗೆ ತಳಹದಿಯನ್ನು ಕಲ್ಪಿಸಿದರು. ಜಗತ್ತಿನ ಎರಡು ಮಹಾನ್ ಸಂಸ್ಕೃತಿಗಳಾದ ಹಿಂದೂ ಮತ್ತು ಮುಸ್ಲಿಂ ಸಂಸ್ಕೃತಿಯ ಸಮ್ಮಿಲನಕ್ಕೆ ಸೂಫಿಗಳು ಕಾರಣರಾದರು. ಸೂಫಿ ಚಳುವಳಿಯು ಬಹಮನಿ ಸಾಮ್ರಾಜ್ಯದ ಸಮಯದಲ್ಲಿ ಸಮಾಜ, ಸಂಸ್ಕೃತಿ, ಭಾಷೆ ಹಾಗೂ ಧರ್ಮಗಳ ಎಲ್ಲಾ ತಡೆಗೋಡೆಗಳನ್ನು ಮೀರಿ ನಿಲ್ಲುವಷ್ಟರ ಮಟ್ಟಿಗೆ ಜನಾನುರಾಗವನ್ನು ಪಡೆಯಿತು.

ಚಿಸ್ತಿ ಪಂಗಡದ ಶೇಖ್ ನಿಜಾಮುದ್ದೀನ್ ಔಲಿಯಾ ಸೂಫಿಗಳಲ್ಲಿ ಅತ್ಯಂತ ಖ್ಯಾತಿಯನ್ನು ಪಡೆದ ಸಂತನಾಗಿದ್ದನು.[೫೪] ಬಹಮನ್ ಷಾನಿಗೆ ನೀನು ಮುಂದೆ ದಖ್ಖನಿನ ಸುಲ್ತಾನನಾಗುವೆ ಎಂದು ಭವಿಷ್ಯ ನುಡಿದಿದ್ದ ಶೇಖ್ ನಿಜಾಮುದ್ದೀನ್ ಔಲಿಯಾರಿಗೆ ಬಹಮನ್‌ಷಾನು ಸೂಫಿ ಹೆಸರಿನಲ್ಲಿ ಅಪಾರ ಕಾಣಿಕೆಗಳನ್ನು ನೀಡಿದ್ದು ತಿಳಿದುಬರುತ್ತದೆ. ಸೂಫಿಯ ಇತರ ಪಂಗಡಗಳೆಂದರೆ ಖಾದ್ರಿಯ, ನಕ್ಷಬಂಧಿ ಮತ್ತು ಶಾತ್ತರಿಯ. ದಖ್ಖನ್ ರಾಜಕೀಯದಲ್ಲಿ ಸೂಫಿ ಪ್ರಮುಖ ಸಂತರೆಂದರೆ-ಶೇಖ್ ಬರ್ಹಾನುದ್ದೀನ್ ಘಾರಿಬ್, ಶೇಖ್ ಐನುದ್ದೀನ್ ಬಿಜಾಪುರಿ, ಶೇಖ್ ಸಿರಾಜುದ್ದೀನ್, ಮಹಮ್ಮದ್ ಗೇಸುದರಾಜ್, ಅಮೀರ್ ಹಸನ್ ಅಲ್ಯೆ ಸಿಜ್ಜಿ, ಜೈನುದ್ದೀನ್ ಮುಂತಾದವರು. ಸೂಫಿ ಸಂತರು ಬಹಮನಿ ಸಾಮ್ರಾಜ್ಯದಲ್ಲಿ ಧಾರ್ಮಿಕ ಚಳುವಳಿಯಲ್ಲಿ ತಮ್ಮನ್ನು ತಾವೇ ಭಾಗವಹಿಸಿಕೊಂಡರಲ್ಲದೇ, ಹಿಂದೂ-ಮುಸ್ಲಿಂ ಐಕ್ಯತಾ ಭಾವನೆಯನ್ನು ಮೂಡಿಸುವಲ್ಲಿ ಶ್ರಮಿಸಿದರು ಮತ್ತು ಬಹಮನಿ ಸುಲ್ತಾನರ ಆಧ್ಯಾತ್ಮಿಕ ಮಾರ್ಗದರ್ಶಕರೂ ಆಗಿದ್ದರು.

ಇದೇ ರೀತಿ ಬಹಮನಿ ಮತ್ತು ವಿಜಯನಗರ ಸಾಮ್ರಾಜ್ಯಗಳೆಡರಲ್ಲಿಯೂ ಕಂಡುಬಂದ ಪ್ರಸಿದ್ಧ ಪಡೆದ ಧಾರ್ಮಿಕ ಚಳುವಳಿಯೆಂದರೆ ಭಕ್ತಿ ಚಳುವಳಿ. ಭಕ್ತಿ ಎಂದರೆ ದೇವರಿಗೆ ಮಾನವನು ತನ್ನನ್ನು ತಾನು ಅರ್ಪಿಸಿಕೊಳ್ಳುವುದು ಎಂದರ್ಥ. ಭಕ್ತಿ ಚಳುವಳಿಯು ವಿಜಯನಗರ ಹಾಗೂ ಬಹಮನಿ ಸಾಮ್ರಾಜ್ಯಗಳ ಕಾಲದಲ್ಲಿ ನಡೆದ ಚರಿತ್ರೆಯ ಮಹತ್ವದ ಕಾಲಘಟ್ಟವಾಗಿದೆ. ಹಿಂದೂ ಸಮಾಜದಲ್ಲಿದ್ದ ಧಾರ್ಮಿಕ ಜಟಿಲತೆಯನ್ನು ತೊಡೆದು ಹಾಕಿ ಉದಾರ ಮತವನ್ನು ಕ್ರಿಯಾಶೀಲ ಮಾಡುವ ನಿಟ್ಟಿನಲ್ಲಿ ಚಿಂತಕರು, ಸುಧಾರಕರು ನಡೆಸಿದ ಧಾರ್ಮಿಕ ಚಳುವಳಿಯ ಫಲವೇ ಭಕ್ತಿ ಪಂಥ. ಭಕ್ತಿ ಪಂಥದ ಹರಿಕಾರರು ತಮ್ಮನ್ನು ಯಾವುದೇ ಧರ್ಮಕ್ಕೆ ಬಂಧಿಸಿಕೊಳ್ಳದೆ ಜಾತಿಯಿಂದ ಅತೀತರಾದವರಾಗಿದ್ದರು. ಅಂದಿನ ಕಾಲದಲ್ಲಿ ಹಿಂದೂ ಧರ್ಮದಲ್ಲಿ ಬೇರೂರಿದ ಮೂಢನಂಬಿಕೆಗಳು, ಯಜ್ಞ-ಯಾಗಗಳು, ಮೂರ್ತಿ ಪೂಜೆಗಳು ಮುಂತಾದ ಹಲವಾರು ಅಂಶಗಳನ್ನು ಖಂಡಿಸಿ ನಮ್ಮನಾಳುವ ದೇವನು ಒಬ್ಬನೇ ಆತನೇ ಸಕಲ

ಮಾನವರ ಒಡೆಯ, ನಾಮ ಹಲವಿದ್ದರೂ ದೇವರೊಬ್ಬನೆ, ಭಕ್ತಿಯ ಮೂಲಕ ಸಾಕ್ಷಾತ್ಕಾರವನ್ನು ಪಡೆಯಬೇಕೆಂದು ಜನರಲ್ಲಿ ಸಾರಿ ಹೇಳಿದರು ಮತ್ತು ಭಕ್ತಿ ಮಾರ್ಗವನ್ನು ಬೋಧಿಸಿದರು.[೩೩]

ಧಾರ್ಮಿಕ ಆಂದೋಲನಗಳಾದ ಸೂಫಿ ಮತ್ತು ಭಕ್ತಿ ಪಂಥದ ತತ್ವಗಳು ಬಹುಮಟ್ಟಿಗೆ ಸಮವಾಗಿದೆ. ಈ ಎರಡೂ ತತ್ವಗಳು, ದೇವರು ದೇವಾಲಯದಲ್ಲಿಲ್ಲ ಮನುಷ್ಯನ ಹೃದಯದಲ್ಲಿದ್ದಾನೆ, ಮಾನವನು ಪರಸ್ಪರರನ್ನು ಗೌರವಿಸುವ ಮೂಲಕ, ಪ್ರೇಮಿಸುವ ಮೂಲಕ ಭಕ್ತಿಯ ಮಾರ್ಗದಲ್ಲಿ ನಡೆದು ದೇವರನ್ನು ಕಾರಣಬಹುದೇ ಹೊರತು ದೇವಾಲಯಗಳಲ್ಲಲ್ಲ ಎಂದು ಸಾರಿದರು.[೩೬] ಎರಡೂ ಪಂಥದ ಸುಧಾರಕರು ತಮ್ಮದೇ ಆಡು ಭಾಷೆಯಲ್ಲಿ ತಮ್ಮ ತತ್ವಗಳನ್ನು ಸಾರಿದರು. ಈ ಕಾರಣಕ್ಕಾಗಿಯೇ ಈ ಎರಡೂ ಧಾರ್ಮಿಕ ಆಂದೋಲನಗಳು ಯಶಸ್ವಿಯಾದವು. ಜಾತಿ–ಮತ– ಬೇಧವಿಲ್ಲದೆ ಪ್ರತಿಯೊಬ್ಬ ಮಾನವನ ಮನಸ್ಸಿಗೂ ಈ ತತ್ವಗಳು ಮುಟ್ಟಿದವು, ಇದರಿಂದಾಗಿ ಜನರ ಆತ್ಮಶುದ್ಧಿ ಮತ್ತು ಮನಃಶುದ್ಧಿ ಬೆಳೆಯಿತು.

ಈ ರೀತಿಯಾಗಿ ಮಧ್ಯಯುಗೀನ ಕಾಲದಲ್ಲಿ ದಖ್ಖನ್ ಪ್ರಾಂತ್ಯದಲ್ಲಿ, ಬಹಮನಿ ಹಾಗೂ ವಿಜಯನಗರ ಸಾಮ್ರಾಜ್ಯಗಳೆರಡರಲ್ಲಿಯೂ ಭಕ್ತಿ ಮತ್ತು ಸೂಫಿ ಪಂಥಗಳು ಪ್ರಾಮುಖ್ಯತೆಯನ್ನು ಪಡೆದವು. ಈ ಪಂಥಗಳ ಸಂತರು ಜಾತಿ ವೈಷಮ್ಯವನ್ನು ತೊಡೆದು ಹಾಕಿ ಪರಿಪೂರ್ಣ ಸಮಾಜವನ್ನು ನಿರ್ಮಿಸಲು, ಮಾನವ ಕುಲವನ್ನು ಪವಿತ್ರ ಬಂಧನಕ್ಕೊಳಪಡಿಸಲು ಮತ್ತು ಹಿಂದೂ–ಮುಸ್ಲಿಂ ಜನಾಂಗದ ಮಧ್ಯೆ ಸಾಮರಸ್ಯವನ್ನು ಕಾಪಾಡುವುದು ಮತ್ತು ನೆಲೆಗೊಳಿಸುವುದು ಸೂಫಿ ಮತ್ತು ಭಕ್ತಿ ಆಂದೋಲನಗಳ ಪ್ರಮುಖ ಉದ್ದೇಶವಾಗಿತ್ತು. ಸಾಧು–ಸಂತರು, ಅನುಭಾವಿಗಳು ತಮ್ಮನ್ನು ಯಾವುದೇ ಜಾತಿಗೆ ಒಳಪಡಿಸಿಕೊಳ್ಳದೆ ವಿಶ್ವಮಾನವರಾಗಿ, ಕೆಲವರು ವೈರಾಗ್ಯವನ್ನು ಹೊಂದಿ, ಪರಸ್ಪರ ಮನುಷ್ಯರಲ್ಲಿ ಗೌರವಾದರಗಳನ್ನು ಮತ್ತು ಪ್ರೀತಿಯನ್ನು ತುಂಬಲು ಶ್ರಮಿಸಿದರು. ಸೂಫಿ ಸಂತರು ಹಾಗೂ ಭಕ್ತಿ ಆಂದೋಲನದ ಹರಿಕಾರರು ಮಾಡಿದ ಈ ಕಾರ್ಯದಿಂದಲೇ ಹಿಂದೂ–ಮುಸ್ಲಿಂ ಸಂಸ್ಕೃತಿಯ ಸಾಮರಸ್ಯವು ಸಾಧ್ಯವಾಯಿತೆಂದು ಹೇಳಬಹುದು. ಈ ರೀತಿಯಾಗಿ ಬಹಮನಿ ಹಾಗೂ ವಿಜಯನಗರ ಸಾಮ್ರಾಜ್ಯ ಗಳೆರಡರಲ್ಲಿಯೂ ಹೊಸ ಸಾಮಾಜಿಕ ಸಂಚಲನಕ್ಕೆ ಈ ಚಳುವಳಿಗಳು ನಾಂದಿಯಾಗಿರುವುದನ್ನು ಪ್ರಸ್ತುತ ಅಧ್ಯಾಯದಲ್ಲಿ ನೋಡಬಹುದು.

### ೩.೩. ಬಹಮನಿ ಮತ್ತು ವಿಜಯನಗರಗಳ ನಡುವಿನ ಸಾಹಿತ್ಯಿಕ ಸಂಬಂಧಗಳು

ಒಂದೇ ಕಾಲದಲ್ಲಿ ಅಸ್ತಿತ್ವಕ್ಕೆ ಬಂದಂತಹ ವಿಜಯನಗರ ಮತ್ತು ಬಹಮನಿ ಸಾಮ್ರಾಜ್ಯಗಳು ಸಾಮಾಜಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಕಲೆ, ಸಾಹಿತ್ಯ, ಶಿಲ್ಪಕಲೆ ಮುಂತಾದವುಗಳಲ್ಲಿ ತಮ್ಮದೇ ಆದ ರೀತಿಯಲ್ಲಿ ಅಭಿವೃದ್ಧಿಯನ್ನು ಕಂಡಿದ್ದವು. ಬಹಮನಿ ಸಾಮ್ರಾಜ್ಯಕ್ಕೆ ಹೋಲಿಸಿದರೆ ವಿಜಯನಗರವು ಸಾಂಸ್ಕೃತಿಕವಾಗಿ ಹೆಚ್ಚಿನ ಅಭಿವೃದ್ಧಿಯನ್ನು ಹೊಂದಿತ್ತೆಂದು ಹೇಳಬಹುದು. ಹಿಂದೂ ಸಾಮ್ರಾಜ್ಯವಾದ ವಿಜಯನಗರವು ಸಾಂಸ್ಕೃತಿಕವಾಗಿ ಅತ್ಯಂತ ಉನ್ನತ ಮಟ್ಟದಲ್ಲಿತ್ತು. ವಿಜಯನಗರದ ಅರಸರು ಸರ್ವಧರ್ಮಗಳ ಸಹಿಷ್ಣುಗಳಾಗಿದ್ದು, ಸಾಂಸ್ಕೃತಿಕವಾಗಿ ಕವಿಗಳಿಗೆ, ಪಂಡಿತರಿಗೆ ಮತ್ತು ಕಲೆಗಾರರಿಗೆ ಹೆಚ್ಚಿನ ಪ್ರೋತ್ಸಾಹವನ್ನು ಮತ್ತು ಆಶ್ರಯವನ್ನು ನೀಡಿದ್ದರು. ಎಲ್ಲ ಧರ್ಮದವರಿಗೂ ಮುಕ್ತ ಅವಕಾಶಗಳನ್ನು ವಿಜಯನಗರದ ಅರಸರು ಕಲ್ಪಿಸಿಕೊಟ್ಟಿದ್ದ ಕಾರಣ ರಾಜ್ಯದಲ್ಲಿ ಶೈವ, ವೈಷ್ಣವ, ಜೈನ, ಬೌದ್ಧ, ಕ್ರಿಶ್ಚಿಯನ್, ಇಸ್ಲಾಂ ಮುಂತಾದ ಎಲ್ಲಾ ಜನಾಂಗದವರು ಸಹಬಾಳ್ವೆಯನ್ನು ನಡೆಸಿದ್ದರು.

ವಿಜಯನಗರದ ಅರಸರು ಇಸ್ಲಾಂ ಧರ್ಮೀಯರಿಗೆ ಉದಾರವಾಗಿ ಎಲ್ಲಾ ರೀತಿಯ ಆಶ್ರಯ ಹಾಗೂ ಪ್ರೋತ್ಸಾಹವನ್ನು ನೀಡಿದ್ದರು. ಮುಸ್ಲಿಮರು ಸಹ ತಮ್ಮ ಸಂಸ್ಕೃತಿ ಮತ್ತು ಧರ್ಮದ ಆಚರಣೆಗಳನ್ನು ನಿರಾತಂಕವಾಗಿ ಆಚರಿಸಲು ಅವಕಾಶವಿತ್ತು. ಇಸ್ಲಾಂ ಧರ್ಮದವರಾದ ಯೋಧರು, ವ್ಯಾಪಾರಿಗಳು,

ಪಂಡಿತರು, ಕವಿಗಳು, ಸಂತರು ಮುಂತಾದವರು ವಿಜಯನಗರ ರಾಜಧಾನಿಯಲ್ಲಿ ನಿರ್ಭೀತಿಯಿಂದ ನೆಲೆಸಿದ್ದರು. ವಿಜಯನಗರದ ಅರಸರು ಶಿಕ್ಷಣ ಮತ್ತು ಪಾಂಡಿತ್ಯಕ್ಕೆ ಹೆಚ್ಚಿನ ಪ್ರೋತ್ಸಾಹವನ್ನು ನೀಡಿದ್ದರು. ಅಗ್ರಹಾರಗಳಲ್ಲಿ, ಮಠಗಳಲ್ಲಿ ಹಿಂದೂ ಶಿಕ್ಷಣಕ್ಕೆ ಅವಕಾಶವನ್ನು ಮಾಡಿಕೊಟ್ಟಿದ್ದರು.[೫೭] ವಿಜಯನಗರ ಸಾಮ್ರಾಜ್ಯದಲ್ಲಿ ಸ್ತ್ರೀಯರಿಗೂ ಸಹ ಸಮಾನವಾಗಿ ಶಿಕ್ಷಣವನ್ನು ಪಡೆಯುವ ಅವಕಾಶವನ್ನು ಮಾಡಿ ಕೊಡಲಾಗಿತ್ತು. ವಿಜಯನಗರ ಸಮಾಜದಲ್ಲಿ ಸ್ತ್ರೀ ಬಹು ಗಣ್ಯವಾದ ಸ್ಥಾನವನ್ನು ಪಡೆದಿದ್ದಳು, ಆಕೆಯು ವಿದ್ಯಾಭ್ಯಾಸ ಹಾಗೂ ಲಲಿತಕಲೆಗಳನ್ನು ರೂಢಿಸಿಕೊಳ್ಳಲು ಎಲ್ಲಾ ರೀತಿಯ ಪ್ರೋತ್ಸಾಹವನ್ನು ನೀಡಲಾಗುತ್ತಿತ್ತು.[೫೮] ಕೃಷ್ಣದೇವರಾಯನ ಆಸ್ಥಾನದಲ್ಲಿ ೪೦೦ ಜನ ಸೇವಕಿಯರಿದ್ದು ಇವರೆಲ್ಲರೂ ನ್ಯಾಯದಾನ, ರಕ್ಷಾವಿಧಾನ, ಗಣಿತ, ಲೇಖನ ಕಲೆ, ಕಾವ್ಯ, ಸಂಗೀತ, ನೃತ್ಯ, ವಾದನ ಮುಂತಾದ ವಿವಿಧ ಕಲೆಗಳಲ್ಲಿ ಪರಿಣತಿಯನ್ನು ಹೊಂದಿದ್ದರು.

ವಿಜಯನಗರ ಸಾಮ್ರಾಜ್ಯದ ಕಾಲವು ಸಾಹಿತ್ಯದ ಸುವರ್ಣಯುಗವೆಂದು ಪರಿಗಣಿಸಲಾಗಿದೆ. ಸಮಾಜದಲ್ಲಿ ಏರ್ಪಟ್ಟಿದ್ದ ಶಾಂತಿ ಮತ್ತು ಸುವ್ಯವಸ್ಥೆ, ಆರ್ಥಿಕ ಪ್ರಗತಿ, ರಾಜರು ಮತ್ತು ಜನತೆ ನೀಡಿದ ಉದಾರ ಪ್ರೋತ್ಸಾಹದ ಫಲವಾಗಿ ಸಾಹಿತ್ಯ ಮತ್ತು ಸಂಸ್ಕೃತಿಗಳು ವಿಜಯನಗರದಲ್ಲಿ ವಿಫುಲವಾಗಿ ಅಭಿವೃದ್ಧಿ ಕಂಡವು. ಈ ಕಾಲದ ಅರಸರು, ಸಂಸ್ಕೃತ, ಕನ್ನಡ, ತೆಲುಗು ಮತ್ತು ತಮಿಳು ಭಾಷೆಯ ಸಾಹಿತ್ಯಗಳಿಗೆ ಮತ್ತು ಸಾಹಿತಿಗಳಿಗೆ ಪ್ರೋತ್ಸಾಹ ಮತ್ತು ಆಶ್ರಯವನ್ನು ನೀಡಿ ಬೆಳೆಸಿದರು.[೫೯] ಈ ಕಾರಣಕ್ಕಾಗಿ ಸಾಹಿತ್ಯದ ವಿಫುಲ ಸೃಷ್ಟಿಯೇ ಆಯಿತು. ವಿಜಯನಗರದ ಅರಸರಲ್ಲಿಯೇ ಕೆಲವರು ತೆಲುಗು, ಸಂಸ್ಕೃತ ಹಾಗೂ ಕನ್ನಡ ಭಾಷೆಗಳಲ್ಲಿ ಪಂಡಿತರಾಗಿದ್ದು, ಸ್ವತಃ ಕವಿಗಳು ಮತ್ತು ಗ್ರಂಥಕರ್ತರು ಆಗಿದ್ದರು.

ವಿಜಯನಗರದ ಅರಸರು ಹಲವಾರು ವಿದ್ವಾಂಸರಿಗೆ, ಕವಿಗಳಿಗೆ ಮತ್ತು ಬ್ರಾಹ್ಮಣರಿಗೆ ನೀಡಿದ ಆಶ್ರಯದ ಕಾರಣವಾಗಿ ಸಂಸ್ಕೃತ ಭಾಷೆಯಲ್ಲಿ ಸಾಹಿತ್ಯರಾಶಿಯ ಸೃಷ್ಟಿಯಾಯಿತು. ಹೆಚ್ಚಾಗಿ ಧಾರ್ಮಿಕ ಗ್ರಂಥಗಳಾಗಿದ್ದರೂ ಈ ಕೃತಿಗಳು ಶ್ರೇಷ್ಠ ಕೃತಿಗಳೆನಿಸಿದವು. ವಿದ್ಯಾಶಂಕರ, ವಿದ್ಯಾರಣ್ಯ, ಸಾಯಣ ಮತ್ತು ಮಾಧವ ಪಂಡಿತರು ಸಂಸ್ಕೃತದಲ್ಲಿ ಹಲವಾರು ಗ್ರಂಥಗಳನ್ನು ರಚಿಸಿರುವರು. ಸುಮಾರು ೬೦ಕ್ಕೂ ಹೆಚ್ಚಿನ ಕೃತಿಗಳನ್ನು ವಿದ್ಯಾರಣ್ಯರು ರಚಿಸಿದ್ದು, ಅವುಗಳಲ್ಲಿ ಮುಖ್ಯವಾದವುಗಳೆಂದರೆ ಸರ್ವದರ್ಶನ ಸಂಗ್ರಹ, ರಾಜಕಾಲ ನಿರ್ಣಯ, ವೇದಭಾಷ್ಯ, ಶಂಕರ ವಿಜಯ, ಅನುಭೂತಿ ಪ್ರಕಾಶ, ಪರಾಶರ ಮಾಧವೀಯ ಮುಂತಾದವುಗಳು.[೬೦] ರಾಜಕಾಲ–ನಿರ್ಣಯವು ವಿಜಯನಗರದ ಹುಟ್ಟಿನಿಂದ ಹಿಡಿದು ಎಲ್ಲಾ ಸಮಕಾಲೀನ ವಿಷಯಗಳನ್ನು ಒಳಗೊಂಡ ಕೃತಿಯಾಗಿದೆ. ಸಾಯಣಾಚಾರ್ಯರಿಂದ ವೇದಾರ್ಥ ಪ್ರಕಾಶ, ಆಯುರ್ವೇದ ಸುಧಾನಿಧಿ, ಪ್ರಾಯಶ್ಚಿತ್ತ ಸುಧಾನಿಧಿ, ಪುರುಷಾರ್ಥ ಸುಧಾನಿಧಿ ಎಂಬ ಗ್ರಂಥಗಳು ರಚನೆಗೊಂಡವು. ಬುಕ್ಕರಾಯನ ಸೊಸೆಯಾದ ಗಂಗಾದೇವಿಯು 'ಮಧುರಾ ವಿಜಯಂ' ಎಂಬ ಕೃತಿಯನ್ನು ರಚಿಸಿದ್ದಾಳೆ, ಇದು ಆಕೆಯ ಪತಿಯಾದ ಕಂಪಣನ ದಂಡಯಾತ್ರೆಯನ್ನು ಹಾಗೂ ಅಲ್ಲಿಯ ಪವಿತ್ರ ಸ್ಥಳಗಳ ವರ್ಣನೆಯನ್ನು ತಿಳಿಸುತ್ತದೆ. ಇಷ್ಟೇ ಅಲ್ಲದೇ ಈ ಕೃತಿಯಲ್ಲಿ ವಿಜಯನಗರ ಸಾಮ್ರಾಜ್ಯದ ವರ್ಣನೆಯು ಮನೋಹರವಾಗಿ ಮೂಡಿಬಂದಿದೆ.[೬೧]

ವಿಜಯನಗರ ಸಾಮ್ರಾಜ್ಯದಲ್ಲಿ ಹರಿಹರನ ಕಾಲದಿಂದಲೂ 'ಡಿಂಡಿಮ' ಎಂಬ ಮನೆತನವು ನೆಲೆಸಿದ್ದು, ಈ ಮನೆತನವು ಅಪಾರವಾದ ಸಾಹಿತ್ಯ ಕೃಷಿಯನ್ನು ನೆರವೇರಿಸಿದೆ. ಈ ವಂಶದವರು ಹೆಚ್ಚಿನ ಭಾಷಾ ಪಂಡಿತರಾಗಿದ್ದು, ವಂಶದ ಬಹುಪಾಲು ಲೇಖಕರಿಗೆ 'ಡಿಂಡಿಮ ಕವಿಸಾರ್ವಭೌಮ' ಎಂಬ ಬಿರುದನ್ನು ಕೊಡಲಾಗಿದೆ.[೬೨] ವಂಶದ ಮೊದಲ ಪಂಡಿತ ಅರುಣಗಿರಿನಾಥನಿಗೆ 'ಅಷ್ಟ ಭಾಷಾಪರಮೇಶ್ವರ' ಎಂಬ

ಬಿರುದಿತ್ತೆಂದು ತಿಳಿದುಬರುತ್ತದೆ. ಎರಡನೇ ಡಿಂಡಿಮ ಕವಿಯಾದ ರಾಜನಾಥನು ತನ್ನ ಆಶ್ರಯದಾತನಾದ ಸಾಳುವ ನರಸಿಂಹ ಅರಸನನ್ನು ಪ್ರಸಂಶಿಸಿ 'ಸಾಳುವಾಭ್ಯುದಯಂ' ಕೃತಿಯನ್ನು ರಚಿಸಿರುವನು. ಮೂರನೇಯ ಡಿಂಡಿಮ ಕವಿಯು 'ಅಚ್ಯುತರಾಯಾಭ್ಯುದಯ' ಹಾಗೂ ಭಾಗವತ ಚಂಪೂ ಕೃತಿಗಳನ್ನು ರಚಿಸಿದ್ದಾನೆ. 'ಅಚ್ಯುತರಾಯಾಭ್ಯುದಯ'ವು ಅಚ್ಯುತರಾಯನ ದಕ್ಷಿಣದ ದಿಗ್ವಿಜಯ ಹಾಗೂ ಆತನು ತೀರ್ಥಯಾತ್ರೆ ಮಾಡಿದ ಶ್ರೀರಂಗ, ಕಾಳಹಸ್ತಿ ಮುಂತಾದ ಕ್ಷೇತ್ರಗಳ ವಿವರಣೆಯನ್ನು ಒಳಗೊಂಡಿದೆ. ಭಾಗವತ ಚಂಪೂ ಕಾವ್ಯವು ಶ್ರೀ ಕೃಷ್ಣ ಪರಮಾತ್ಮನ ಚರಿತ್ರೆಯನ್ನು ಒಳಗೊಂಡಿದೆ. ಡಿಂಡಿಮ ಕವಿಯಾದ ಸ್ವಯಂಭೂತನಾಥನು 'ಕೃಷ್ಣ ವಿಲಾಸ, ಶಂಕರಾನಂದ ಚಂಪೂ' ಎಂಬ ಕಾವ್ಯಗಳನ್ನು ರಚಿಸಿರುವನು. ಕೃಷ್ಣ ವಿಲಾಸ ಕಾವ್ಯವು ಕೃಷ್ಣ ಪರಮಾತ್ಮನ ಜೀವನ ಚರಿತ್ರೆಯನ್ನು ಒಳಗೊಂಡಿದೆ.

ಗುರುರಾಯನು ಹರೀಶ್ಚಂದ್ರ ಚಂಪೂ ಎಂಬ ಕಾವ್ಯವನ್ನು ರಚಿಸಿರುವನು. ಅಚ್ಯುತರಾಯನ ಆಸ್ಥಾನದಲ್ಲಿದ್ದ ತಿರುಮಲಾಂಬೆಯು 'ವರದಾಂಬಿಕೆ ಪರಿಣಯಂ' ಎಂಬ ಕೃತಿಯನ್ನು ರಚಿಸಿದ್ದಾರೆ. ಸ್ವತಃ ಎರಡನೇ ದೇವರಾಯ ಮತ್ತು ಶ್ರೀ ಕೃಷ್ಣದೇವರಾಯರು ರಾಜಕವಿಗಳಾಗಿದ್ದರು. ದೇವರಾಯನು ಸಂಸ್ಕೃತದಲ್ಲಿ ಬಾದರಾಯಣನ ಬ್ರಹ್ಮ ಸೂತ್ರಗಳಿಗೆ ಸೂಕ್ತಿಯನ್ನು, ಮಹಾನಾಟಕ, ಸುಧಾನಿಧಿ ಎಂಬ ಕೃತಿಗಳನ್ನು ರಚಿಸಿದ್ದಾನೆ. ಕೃಷ್ಣದೇವರಾಯನು ಸಂಸ್ಕೃತದಲ್ಲಿ 'ಜಾಂಬವತಿ ಕಲ್ಯಾಣಂ', 'ಮದಲಿಸಚರಿತಂ', 'ರಸಮಂಜರಿ', 'ಉಷಾಪರಿಣಯ', 'ಜ್ಞಾನ ಚಿಂತಾಮಣಿ', 'ಸಕಲ ಕಥಾಸಾರ ಸಂಗ್ರಹಳು' ಎಂಬ ಕೃತಿಗಳನ್ನು ರಚಿಸಿರುವನೆಂದು ಇತಿಹಾಸದಿಂದ ತಿಳಿದುಬರುತ್ತದೆ.[೬೩] ವಿದ್ಯಾರಣ್ಯರ ಕಾಲಮಾಧವ, ಸಂಗೀತಸಾರ, ಲಕ್ಷ್ಮೀನಾರಾಯಣನ ಸಂಗೀತ ಸೂರ್ಯೋದಯ, ಆಯುರ್ವೇದ ಸುಧಾನಿಧಿ, ಲಕ್ಷ್ಮಣ ಪಂಡಿತನ ವೈಧ್ಯರಾಜವಲ್ಲಭ ಮುಂತಾದ ಗ್ರಂಥಗಳು ಸಂಸ್ಕೃತದಲ್ಲಿ ರಚನೆಯಾದ ಲೌಕಿಕ ಸಾಹಿತ್ಯ ಗ್ರಂಥಗಳಾಗಿವೆ. ಅಭಿರಾಮ ಕಾಮಾಕ್ಷಿ ಮತ್ತು ತಿರುಮಲಾಂಬ ವಿಜಯನಗರ ಸಾಮ್ರಾಜ್ಯದ ಮುಖ್ಯ ಕವಿಯತ್ರಿಗಳಾಗಿದ್ದರು.[೬೪]

ಕನ್ನಡ ಭಾಷೆಯಲ್ಲೂ ಸಹ ಅಪಾರವಾದ ಕೃತಿಗಳು ರಚನೆಯಾದವು. ಹರಿಹರನ ಕಾಲದ ಜೈನ ಕವಿ ಧರ್ಮನಾಥ ಪುರಾಣವನ್ನು, ಭೀಮಕವಿಯು ಪಾಲ್ಕುರಿಕೆ ಸೋಮನಾಥನ ತೆಲುಗು ಕೃತಿಯಾದ ಬಸವಪುರಾಣವನ್ನು ಕನ್ನಡದಲ್ಲಿ ರಚಿಸಿರುವನು. ಶ್ರೇಷ್ಠ ಜೈನ ಕವಿ ರತ್ನಾಕರವರಣಿಯು 'ಭರತೇಶವೈಭವ' ಎಂಬ ಶ್ರೇಷ್ಠ ಕೃತಿಯನ್ನು ರಚಿಸಿರುವನು, ಇದು ಸುಮಾರು ಹತ್ತು ಸಾವಿರ ಪದ್ಯಗಳಿಂದ ಕೂಡಿದ್ದು, ಜೈನ ಮೊದಲನೇ ತೀರ್ಥಂಕರನಾದ ಭರತನ ಪರಿಚಯದ ಚಿತ್ರಣ, ನರ್ತನ, ಸಂಗೀತಗಳ ಚಿತ್ರಣ ಹಾಗೂ ಆಧಾತ್ಮಪೂರಿತ ಜೀವನದ ಚಿತ್ರಣವನ್ನು ಒಳಗೊಂಡಿದೆ.[೬೫] ಇನ್ನೊಬ್ಬ ಜೈನ ಕವಿಯಾದ ಭಟ್ಟಾಕಳಂಕದೇವನು 'ಕರ್ನಾಟಕ ಶಬ್ದಾನುಶಾಸನ' ಎಂಬ ಕೃತಿಯನ್ನು ರಚಿಸಿದ್ದಾನೆ, ಇದೊಂದು ಉತ್ತಮ ಕನ್ನಡ ವ್ಯಾಖರಣ ಗ್ರಂಥವಾಗಿದೆ. ವಿಜಯನಗರ ಅರಸರ ಕಾಲದಲ್ಲಿ ವೀರಶೈವ ಕವಿಗಳು ಕನ್ನಡ ಸಾಹಿತ್ಯವನ್ನು ಶ್ರೀಮಂತ ಗೊಳಿಸಿದರು. ಲಕ್ಕಣ್ಣನ 'ಶಿವತತ್ವ ಚಿಂತಾಮಣಿ', ಚಾಮರಸ ಕವಿಯ 'ಪ್ರಭುಲಿಂಗಲೀಲೆ', ವಿರುಪಾಕ್ಷ ಪಂಡಿತನ 'ಚನ್ನಬಸವ ಪುರಾಣ' ಎಂಬ ಕೃತಿಗಳು ರಚಿಸಲ್ಪಟ್ಟವು. ಕೃಷ್ಣದೇವರಾಯನ ಆಸ್ಥಾನ ಕವಿಯಾದ ಗುಬ್ಬಿಯ ಮಲ್ಲಣ್ಣನು ಗುಣಭಾಷ್ಯ ರತ್ನಮಾಲೆ, ವಾತುಲತಂತ್ರಟೀಕೆ ಎಂಬ ಗ್ರಂಥಗಳನ್ನು ರಚಿಸಿದ್ದಾನೆ. ಈತನ ಮಗನಾದ ಮಲ್ಲಣಾರ್ಯನು 'ಭಾವಚಿಂತಾರತ್ನ' ಮತ್ತು 'ವೀರಶೈವಾಂಮೃತ ಪುರಾಣ' ಎಂಬ ಗ್ರಂಥಗಳನ್ನು ರಚಿಸಿರುವನು. ವೀರಶೈವಾಂಮೃತ ಪುರಾಣವು ಶಿವಶರಣರ ಮಹತ್ವಗಳನ್ನು ಮತ್ತು ಶಿವನ ಲೀಲೆಗಳ ವಿವರಣೆಯನ್ನು ಒಳಗೊಂಡಿದೆ.

ಬ್ರಾಹ್ಮಣ ಕವಿಯಾದ ಕುಮಾರವ್ಯಾಸನು ವಿಜಯನಗರ ಆಸ್ಥಾನದ ಅತ್ಯಂತ ಪ್ರಸಿದ್ಧ ಕವಿಯಾಗಿದ್ದು, ಕನ್ನಡದಲ್ಲಿ 'ಮಹಾಭಾರತವನ್ನು' ರಚಿಸಿದ್ದಾನೆ. ೧೬ನೇ ಶತಮಾನದಲ್ಲಿದ್ದ ನರಹರಿಯು 'ತೊರವೇ ರಾಮಾಯಣ'ವನ್ನು, ಲಕ್ಷ್ಮೀಶನು 'ಜೈಮಿನಿಭಾರತ'ವನ್ನು ರಚಿಸಿದ್ದಾರೆ. ಇಷ್ಟೇ ಅಲ್ಲದೇ ಕನ್ನಡದಲ್ಲಿ ಮಾನವ ವೈದ್ಯಶಾಸ್ತ್ರ, ಪಶುವೈದ್ಯಶಾಸ್ತ್ರ, ಕಾವ್ಯಶಾಸ್ತ್ರ, ಜೋತಿಷ್ಯಶಾಸ್ತ್ರ, ಪಾಕಶಾಸ್ತ್ರ ಮುಂತಾದ ಕೃತಿಗಳು ರಚನೆಯಾಗಿವೆ.

ವಿಜಯನಗರ ಕಾಲದಲ್ಲಿ ದಾಸ ಸಾಹಿತ್ಯವು ಅತ್ಯಂತ ಪ್ರಾಮುಖ್ಯತೆಯನ್ನು ಪಡೆದಿತ್ತು. ದಾಸ ಸಾಹಿತ್ಯ ಪ್ರಮುಖರಾಗಿದ್ದ ಶ್ರೀಪಾದರಾಯರು, ಪುರಂದರದಾಸರು, ಕನಕದಾಸರು ಅನೇಕ ಗೀತೆಗಳನ್ನು ರಚಿಸಿದ್ದಾರೆ. ಶ್ರೀಪಾದರಾಯರ ವೇಣುಗೀತೆ, ಗೋಪಾಲ ಗೀತೆಗಳು ಪ್ರಸಿದ್ಧವಾಗಿವೆ. ಪುರಂದರದಾಸರು ತಮ್ಮದೇ ಆದ ಜನಸಾಮಾನ್ಯ ಶೈಲಿಯಲ್ಲಿ ಜೀವನದ ಸತ್ಯ ಮತ್ತು ವಸ್ತುನಿಷ್ಟ ಸಂಗತಿಗಳನ್ನು ಕುರಿತು ಅನೇಕ ಕೀರ್ತನೆಗಳನ್ನು ರಚಿಸಿದ್ದಾರೆ. ಕರ್ನಾಟಕ ಸಂಗೀತಶಾಸ್ತ್ರ ಪದ್ಧತಿಯನ್ನು ಅಸ್ತಿತ್ವಕ್ಕೆ ತಂದಂತಹ ದಾಸರಲ್ಲಿ ಶ್ರೇಷ್ಠರಾದ ಕನಕದಾಸರು ಮೋಹನ ತರಂಗಿಣಿ, ನಳಚರಿತ್ರೆ, ಹರಿಭಕ್ತಸಾರ ಮತ್ತು ರಾಮಧಾನ್ಯ ಚರಿತ್ರೆ ಎಂಬ ಕೃತಿಗಳನ್ನು ರಚಿಸಿದ್ದಾರೆ.

ವಿಜಯನಗರ ಕಾಲದಲ್ಲಿ ತೆಲುಗು ಸಾಹಿತ್ಯದಲ್ಲಿ ಅನೇಕ ಉತ್ತಮ ಕೃತಿಗಳು ರಚಿಸಲ್ಪಟ್ಟಿವೆ. ಎರಡನೇ ದೇವರಾಯನ ಆಸ್ತಾನ ಕವಿಯಾಗಿದ್ದ, ಶ್ರೀನಾಥನು ಪಂಡಿತ ಡಿಂಡಿಮ ಕವಿಯನ್ನು ಸಂವಾದಗೋಷ್ಠಿಯಲ್ಲಿ ಸೋಲಿಸಿದ್ದು ಮತ್ತು ಶ್ರೀನಾಥನಿಗೆ ಚಿನ್ನದ ಟಂಕಗಳ ಮಳೆಗರೆದು ಕನಕಾಭಿಷೇಕ ಮಾಡಿ ಗೌರವಿಸಿಲಾಯಿತು. ಶ್ರೀ ಕೃಷ್ಣದೇವರಾಯನು ತೆಲುಗಿನಲ್ಲಿ ಉದ್ದಾಮ ಪಂಡಿತನಾಗಿದ್ದು ಆಮುಕ್ತ ಮೌಲ್ಯದ ಎಂಬ ಶ್ರೇಷ್ಠ ಕೃತಿಯನ್ನು ರಚಿಸಿರುವನು. ಕೃಷ್ಣದೇವರಾಯನ ಆಸ್ಥಾನದಲ್ಲಿ ಅಷ್ಟದಿಗ್ಗಜಗಳೆಂಬ ಅಲ್ಲಸಾನಿಪೆದ್ದಣ್ಣ, ನಂದಿತಿಮ್ಮಣ್ಣ, ರಾಮಭದ್ರ, ದೂರ್ಜಟ, ಮಲ್ಲಣ, ಪಿಂಗಳಿಸೂರ, ರಾಮರಾಜ ಭೂಷನ ಮತ್ತು ತೆನಾಲಿ ರಾಮಕೃಷ್ಣ ಎಂಬ ಪ್ರಸಿದ್ಧ ಕವಿಗಳಿದ್ದುದು ಇತಿಹಾಸದಿಂದ ತಿಳಿಯಬಹುದು.[೬೬] ಅಲ್ಲಸಾಣಿ ಪೆದ್ದಣ್ಣನ 'ಮನುಚರಿತಮು', ತಿಮ್ಮಣನ 'ಪಾರಿಜಾತಹಪಹರಣಂ', ರಾಮಭದ್ರನ 'ರಾಧಾಮಾಧವಂ', ದೂರ್ಜಟನ 'ಕಾಳಹಸ್ತಿಶತಕಂ', ಪಿಂಗಳಿಸೂರನ 'ಕಾಲಪೂರ್ಣೋದಯಂ', ರಾಮರಾಜ ಭೂಷಣನ 'ವಸುಚರಿತಂ' ಹಾಗೂ ತೆನಾಲಿ ರಾಮಕೃಷ್ಣನು ರಚಿಸಿದ್ದ 'ಉಭಟಾರಾಧ್ಯ ಚರಿತಂ' ಮತ್ತು 'ಪಾಂಡುರಂಗ ಮಹಾತ್ಮಂ' ಎಂಬ ಕೃತಿಗಳು ಇಂದಿಗೂ ಪ್ರಸಿದ್ಧವಾಗಿವೆ.

### ೫.೬. ಬಹಮನಿ ಮತ್ತು ವಿಜಯನಗರ ಅರಸರ ನಡುವಿನ ಕಲೆ ಮತ್ತು ವಾಸ್ತುಶಿಲ್ಪದ ಸಂಬಂಧಗಳು

### ೫.೬.೧. ಬಹಮನಿಯರ ಕಲೆ ಮತ್ತು ವಾಸ್ತುಶಿಲ್ಪ

ಒಂದು ಕಡೆ ವಿಜಯನಗರದ ಸಾಮ್ರಾಜ್ಯ ಹಿಂದೂ ವಾಸ್ತುಶಿಲ್ಪವನ್ನು ಬೆಳೆಸುತ್ತಿದ್ದರೆ ಅದೇ ಕಾಲದಲ್ಲಿ ಕರ್ನಾಟಕದ ಕೆಲವು ಭಾಗಗಳಲ್ಲಿ ಬಹಮನಿ ಸುಲ್ತಾನರ ಆಳ್ವಿಕೆ ನಡೆಯುತ್ತಿತ್ತು. ಅವರ ಆಳ್ವಿಕೆಯಲ್ಲಿ ಮುಸ್ಲಿಂ ವಾಸ್ತುಶಿಲ್ಪ ತನ್ನದೇ ಆದ ರೀತಿಯಲ್ಲಿ ಬೆಳೆಯತೊಡಗಿತ್ತು. ಈ ನಮೂನೆಯ ಕಟ್ಟಡಗಳು ಸ್ವಲ್ಪಮಟ್ಟಿಗೆ ಹಿಂದೂ ವಾಸ್ತುಶಿಲ್ಪದಿಂದ ಪ್ರಭಾವಗೊಂಡಿದ್ದಾಗ್ಯು ತನ್ನದೇ ಆದ ಲಕ್ಷಣಗಳನ್ನು ಹೊಂದಿವೆ. ಗುಲ್ಬರ್ಗಾ, ಬೀದರ್, ಗೋಲ್ಕಂಡ ಮತ್ತು ಬಿಜಾಪುರಗಳು ಇದಕ್ಕೆ ಕೇಂದ್ರಗಳಾಗಿ ಮುಸ್ಲಿಂ ವಾಸ್ತುಶಿಲ್ಪದಲ್ಲಿ ಒಂದು ಪ್ರಮುಖ ಶಾಖೆಯಾದ ದಖ್ಖನ್ ಶೈಲಿಯನ್ನು ಬೆಳೆಸಲು ಕಾರಣವಾದವು.[೬೭]

ಬಹಮನಿಯರ ಚರಿತ್ರೆಯಲ್ಲಿ ಮುಸ್ಲಿಂ ವಾಸ್ತುಶಿಲ್ಪದಲ್ಲಿ ಪ್ರಮುಖ ಉದ್ದೇಶ ಮತ್ತು ಋತು ಪರಿವರ್ತನೆ ತಕ್ಕಂತಹ ನಿಯೋಜನೆ, ಇವು ಪ್ರಮುಖ ಲಕ್ಷಣಗಳಾಗಿ ಕಾಣಿಸುತ್ತವೆ. ಹಿಂದೂ ವಾಸ್ತುಶಿಲ್ಪದಲ್ಲಿ ಇವು ಅಷ್ಟು ಪ್ರಮುಖವಲ್ಲ. ಮುಸ್ಲಿಂ ಮಂದಿರಗಳನ್ನು ಕಣ್ಣಿಗೆ ಅಂದವಾಗಿ ಕಾಣುವಂತೆ ಮಾಡಲು ಶ್ರಮ

ಹಣವನ್ನು ಲೆಕ್ಕಿಸಲಿಲ್ಲ. ಒಟ್ಟಿನಲ್ಲಿ ದೆಹಲಿ ಮತ್ತು ದಕ್ಷಿಣದ ಬಹಮನಿ ರಾಜ್ಯದಂತಹ ಮುಸ್ಲಿಂ ರಾಜ್ಯಗಳ ರಾಜಕೀಯ ಸಂಬಂಧವು ಕ್ರಿ.ಶ. ೧೩೪೭ರಲ್ಲಿ ಕಡಿದು ಹೋದರೂ ದೆಹಲಿಯ ವಾಸ್ತುಶಿಲ್ಪದ ಮೇಲ್ಪಂಕ್ತಿಯನ್ನು ದಕ್ಷಿಣದಲ್ಲಿ ಅನುಕರಿಸಿದರು. ಹಿಂದೂ ರಾಜರಂತೆ ಬಹಮನಿ ದೊರೆಗಳು ಅವರ ಪಾಂಡಿತ್ಯಗಳ ಉದಾರ ಪೋಷಕರಾಗಿದ್ದರು. ಆರಂಭದಲ್ಲಿ ಬಹಮನಿ ರಾಜ್ಯದ ವಾಸ್ತು ಶೈಲಿಯು ಇತರ ಯಾವುದೇ ಮುಸ್ಲಿಂ ವಾಸ್ತುಶಿಲ್ಪದ ಪ್ರಾಂತೀಯ ಶೈಲಿಗಿಂತಲೂ ಕಡಿಮೆ ಪ್ರಮಾಣದಲ್ಲಿ ತನ್ನ ಸುತ್ತಮುತ್ತಣ ಶೈಲಿಗಳಿಂದ ಪ್ರಭಾವಿತವಾಗಿದ್ದಿತು. ಬಹಮನಿಗಳ ರಾಜ್ಯದಲ್ಲಿ ಯುರೋಪ್ ಮತ್ತು ಪರ್ಶಿಯಾದಿಂದ ಬಂದ ಶಿಲ್ಪಿಗಳು, ಅವರ ಸೈನ್ಯದಲ್ಲಿ ಅಲ್ಲಿಂದಲೇ ಬಂದ ಕೂಲಿ ಸಿಪಾಯಿಗಳು ಕೆಲಸ ಮಾಡುತ್ತಿದ್ದರು. ಗುಲ್ಬರ್ಗಾದ ಜಾಮಿಮಸೀದಿ, ದೌಲತಾಬಾದಿನ ಚಾಂದಮಿನಾರ್(ಕ್ರಿ.ಶ.೧೪೩೫) ಪದಡ ಕೋಟೆ, ಬೀದರಿನ ಮಹ್ಮದ್‌ಗವಾನ್ ವಿದ್ಯಾಲಯ ಮುಂತಾದವು ಮುಖ್ಯವಾಗಿ ಪರ್ಶಿಯನ್ ಶೈಲಿಯ ಮಸೀದಿಗಳನ್ನು ಸಮಾಧಿ ಭವನಗಳನ್ನು ಕಟ್ಟಲು ಆ ಶಿಲ್ಪಗಳನ್ನು ನೇಮಿಸಿಕೊಳ್ಳಲಾಗಿದ್ದಿತು.[೬೮]

ಕ್ರಿ.ಶ. ೧೫ನೇ ಶತಮಾನದ ಉತ್ತರಾರ್ಧದ ಹೊತ್ತಿಗೆ ಬಿಜಾಪುರದ ವಾಸ್ತುಶೀಲ್ಪದ ಮೇಲೆ ದಖ್ಖನ್ನಿನ ಹಿಂದೂ ಸಂಪ್ರದಾಯಗಳು ತಮ್ಮ ಪ್ರಭಾವವನ್ನು ಸ್ಥಾಪಿಸಿಕೊಳ್ಳಲಾರಂಬಿಸಿದವು. ಇದಕ್ಕೆ ಕಾರಣ ದೇಶಿಯ ಕೆಲಸಗಾರರನ್ನು ಹೆಚ್ಚು ಸಂಖ್ಯೆಯಲ್ಲಿ ನೇಮಿಸಿಕೊಳ್ಳಲಾರಂಬಿಸಿದ್ದು. ಕ್ರಿ.ಶ.೧೨೯೪–೧೩೪೭ ಈ ಅವಧಿಯಲ್ಲಿ ಅನೇಕ ಹಿಂದೂ ದೇವಾಯಲಯಗಳು ಹಾಗೂ ಕೋಟೆಗಳು ಮಸೀದಿಗಳಾಗಿ ಹಾಗೂ ಸಮಾಧಿಭವನಗಳಾಗಿ ಪರಿವರ್ತಿತವಾದವು. ಉದಾ: ದೌಲತಾಬಾದದ–ಜಾಮಿಮಸೀದಿ, ಬೋಧನ್ನಿನ ದೇವಲ್ ಮಸೀದಿ.[೬೯]

ಕನಾಟಕದಲ್ಲಿ ಸ್ಥಾಪನೆಗೊಂಡಿದ್ದ ಬಹಮನಿ ರಾಜ್ಯದ ಕಾಲದಲ್ಲಿ ಗುಲ್ಬರ್ಗಾ ಮತ್ತು ಬೀದರಿನಲ್ಲಿ ಕಟ್ಟಲಾದ ಮಸೀದಿ ಮತ್ತು ಗೋಪುರಗಳ ಶೈಲಿಯ ಮೇಲೆ ಇಸ್ಲಾಮಿನ ಪ್ರಭಾವ ಬಿದ್ದಿದೆ. ಕಲಾತ್ಮಕ ಸೌಂದಾರ್ಯಕ್ಕೆ ಇವು ಸಾಕ್ಷಿಯಾಗಿದೆ. ಜುಮ್ಮಾ ಮಸೀದಿ ಬೀದರಿನ ೧೬ ಸ್ಥಂಭಗಳ ಮಸೀದಿ, ರಂಗೀನ್ ಮತ್ತು ತಾರ್‌ಕಶ್ ಮಹಲ್, ಬೀದರ್ ಜಿಲ್ಲೆಯ ಅಷ್ಟೂರಿನಲ್ಲಿ ಕಟ್ಟಲಾದ ಹನ್ನೆರಡು ಗೋಪುರಗಳು, ಮಹಮ್ಮದ್ ಗವಾನ್ ಕಟ್ಟಿಸಿದ ವಿಶ್ವವಿದ್ಯಾಲಯ ಇಂದು ತಮ್ಮ ವೈಭವಕ್ಕೆ ಸಾಕ್ಷಿಗಳಾಗಿ ನಿಂತಿವೆ.[೭೦]

ಗುಲ್ಬರ್ಗಾ ಮತ್ತು ಬೀದರ್‌ಗಳು ಮುಸ್ಲಿಂ ದೊರೆಗಳು ಸಮಾಧಿ ಮತ್ತು ಸಮಾಧಿ ಭವನಗಳಿಗೆ ಕೇಂದ್ರಗಳಾಗಿದ್ದವು. ಅಲಂಕರಣ ವಿವರಗಳಲ್ಲಿ ಕಾಲದಿಂದ ಕಾಲಕ್ಕೆ ವ್ಯತ್ಯಾಸಗಳು ನಡೆದಿರುವುದನ್ನು ಗುರುತಿಸಬಹುದು. ಮೊದನೆಯದು ಸುಲ್ತಾನ ಹಸನ್ನ್‌ನ ಸಮಾಧಿಯು ದೆಹಲಿಯ ತೊಘಲಕನ ಶೈಲಿಯನ್ನು ಅನುಕರಿಸುತ್ತದೆ. ಘೀಯಾಸುದ್ದೀನ ಸಮಾಧಿಯು ೧೪ನೇ ಶತಮಾನದ ಅವು ಪ್ರಾರ್ಥನೆಗಳು ಗೂಡಿನ ಸುತ್ತ ಇರುವ ಅಲಂಕಣದ ವಿನ್ಯಾಸಗಳು ಹಿಂದೂ ಶೈಲಿಯಾಗಿದೆ. ಮುಂದಿನ ಘಟ್ಟದಲ್ಲಿ ಅದರಲ್ಲೂ ಫಿರೋಜ್‌ಷಾ ಮತ್ತು ಅವನ ಮನೆತನದವರ ಸಮಾಧಿ ಭವನದಲ್ಲಿ ಹಿಂದೂ ಪ್ರಭಾವ ಬೆಳೆಯುತ್ತಿರುವುದನ್ನು ಗುರುತಿಸಬಹುದು. ಏಕೆಂದರೆ ಹೊರಭಾಗದಲ್ಲಿ ಅದು ಹಿಂದೂ ಆಗಿದೆ. ಒಳಭಾಗದ ಹೊಳೆ ಹೊಳೆಯುವ ಗಾರೆ ಕೆಲಸ ಮತ್ತು ವರ್ಣಾಲಂಕಾರಗಳು ಪರ್ಷಿಯಾದ ಪುಸ್ತಕಗಳು ರಟ್ಟುಗಳ ಮತ್ತು ಕಸೂತಿ ಕೆಲಸಗಳ ಉಜ್ವಲ ವಿನ್ಯಾಸಗಳನ್ನು ನೆನಪಿಗೆ ತರುತ್ತದೆ.[೭೧] ಮುಸ್ಲಿಂ ಶೈಲಿಯ ಕಟ್ಟಡಗಳಾದ ಗಗನ್ ಮಹಲ್, ರಂಗೀನ್ ಮಹಲ್, ತಖ್ತ್‌ಮಹಲ್, ನೇಲಾಕಂಬ ಅಷ್ಟೂರ ಸಭಾಸದನ ಜುಮ್ಮಾ ಮಸೀದಿ ಮುಂತಾದ ಕಟ್ಟಡಗಳು ಬಹಮನಿ ಹಾಗೂ ಬಿಜಾಪುರದ ಆದಿಲ್‌ಷಾಹಿ ಸುಲ್ತಾನರ ಕಾಲದಲ್ಲಿ ಕಲೆಗೆ ಹೆಸರಾಗಿದೆ.[೭೨] ಬಹಮನಿ ಕಾಲದಲ್ಲಿ ಕಟ್ಟಡಗಳಾದ ದರ್ಗಾಗಳು, ಮಸಿದಿಗಳು, ಅರಮನೆ, ಸಮಾದಿಗಳನ್ನು ಪ್ರಸ್ತುತ ಅಧ್ಯಾಯದಲ್ಲಿ ನೋಡಬಹುದು.

೧. ಜಾಮೀ ಅಥವಾ ಜುಮ್ಮಾ ಮಸೀದಿ(೧೩೬೭)

ಜುಮ್ಮಾ ಮಸೀದಿಯನ್ನು ಬಹಮನಿ ಸುಲ್ತಾನನಾದ ಫಿರೋಜ ಬಹಮನ್ ಷಾನು ನಿರ್ಮಿಸಿದನು. ಈ ಕಟ್ಟಡದ ಪ್ರಧಾನ ಶಿಲ್ಪಿ ರಫಿಕಜ್ವಿನ್. ಈ ಮಸೀದಿಯು ಗುಲ್ಬರ್ಗಾ ಕೋಟೆಯ ಮಧ್ಯ ಭಾಗದಲ್ಲಿದೆ. ಇಲ್ಲಿರುವ ಒಂದು ಶಾಸನದ ಪ್ರಕಾರ ಈ ಮಸೀದಿಯು ೧೩೬೭ರಲ್ಲಿ ಪೂರ್ಣಗೊಂಡಿತೆಂದು ತಿಳಿಯುತ್ತದೆ. ಇಡೀ ಭಾರತದಲ್ಲಿಯೇ ಇದು ವಿಶಿಷ್ಟ ಮಾದರಿಯಲ್ಲಿ ಕಟ್ಟಿದ ಮಸೀದಿಯಾಗಿದೆ. ಏಕೆಂದರೆ ಇತರ ಮಸೀದಿಗಳಿಗಿರುವಂತೆ ಮೇಲ್ಛಾವಣಿ ಇಲ್ಲದೆ, ತೆರೆದ ಒಳಾಂಗಣ ಇದಕ್ಕಿಲ್ಲ. ಮಸೀದಿಯ ಇಡೀ ರಚನೆ ಮೇಲ್ಛಾವಣಿಯನ್ನು ಒಳಗೊಂಡ ಕಟ್ಟಡವಾಗಿದೆ. ಮುಸ್ಲಿಂ ಮಸೀದಿಗಳ ನಿರ್ಮಾಣ ತತ್ವಕ್ಕೆ ಇದು ವ್ಯತಿರಿಕ್ತವಾಗಿದೆ. ಉತ್ತರ ಪರ್ಶಿಯಾದ ಕಜ್ವಿನ್ ಪಟ್ಟಣದ ರಫಿ ಎಂಬ ವಾಸ್ತುಶಿಲ್ಪಿಯ ನೇತೃತ್ವದಲ್ಲಿ ಈ ಕಟ್ಟಡದ ನಿರ್ಮಾಣ ನಡೆಯಿತೆಂದು ಇಲ್ಲಿ ತಿಳಿದು ಬರುತ್ತದೆ.[೩] ರೋಮಿನಲ್ಲಿರುವ ಬಸಿಲಿಕ್ ಮಾದರಿಯನ್ನು ಅನುಸರಿಸಿ ಈತನು ಕಮಾನಿನ ಮೇಲ್ಛಾವಣಿಯನ್ನು ಮತ್ತು ಎತ್ತರವಾದ ಗೋಪುರವನ್ನುಳ್ಳ ಒಳಸಭಾಂಗಣವನ್ನು ನಿರ್ಮಿಸಲು ಉದ್ದೇಶ ಪಟ್ಟನು. ಹೀಗಾಗಿ ಪರ್ಶಿಯಾ ಮತ್ತು ಭಾರತದ ಮಸೀದಿಗಳಲ್ಲಿನ ಬೇಕಾದ ಅಂಶಗಳನ್ನು ತೆಗೆದುಕೊಂಡು ತನ್ನದೇ ಆದ ಸ್ವತಂತ್ರ ಮಾದರಿಯಲ್ಲಿ ಕಜ್ವಿನ್‌ನು ಈ ಮಸೀದಿಯನ್ನು ನಿರ್ಮಿಸಿದನು.

ಈ ಮಸೀದಿಯು ೨೧೬ ಅಡಿ ಉದ್ದ, ೧೭೬ ಅಡಿ ಅಗಲದ ದೀರ್ಘ ಚತುರಸ್ರಾಕಾರದ ಮೇಲೆ ನಿರ್ಮಾಣವಾಗಿದೆ. ಮಸೀದಿಯ ಮೂರು ಕಡೆಗಳಲ್ಲಿ ವಿಸ್ತಾರವಾದ ಕೈ ಸಾಲೆಗಳಿವೆ. ಪಶ್ಚಿಮದ ಕಡೆಗೆ ಪ್ರಾರ್ಥನೆಗೆ ಮೀಸಲಾದ ವಿಸ್ತಾರವಾದ ಮಂಟಪವಿದೆ. ಇದರ ಮೇಲ್ಛಾವಣಿಯ ಮೇಲೆ ದೊಡ್ಡ ಗೋಪುರ ನಿರ್ಮಾಣವಾಗಿದೆ. ಇವೆಲ್ಲವುಗಳ ಮಧ್ಯದಲ್ಲಿರುವ ಒಳಾಂಗಣ ಮಾತ್ರ ಇತರ ಮಸೀದಿಗಳಲ್ಲಿರುವಂತೆ ಛಾವಣಿ ಇಲ್ಲದ ಬಯಲು ಪ್ರದೇಶವಾಗಿಲ್ಲ. ಮಸೀದಿಯು ೬೮ ಹಜಾರಗಳಿಂದ ಮತ್ತು ಚಾಚು ಪೀಠಗಳ ಸಾಲುಗಳಿಂದ ಕೂಡಿದ್ದು, ಅರ್ಧಗೋಳಾಕೃತಿಯ ಮೇಲ್ಛಾವಣಿಯಿಂದ ಆವೃತವಾಗಿವೆ. ಈ ಮೇಲ್ಛಾವಣಿ ಯಿಂದಾಗಿ ಒಳಾಂಗಣವೆಲ್ಲಾ ವಿಸ್ತಾರವಾದ ಮಂಟಪವಾಗಿ ಪರಿವರ್ತಿತವಾಗಿದೆ. ಕಟ್ಟಡದ ಮೇಲೆ ಎತ್ತರವಾಗಿ ನಿಲ್ಲಿಸಿರುವ ಗುಮ್ಮಟವು ಕಟ್ಟಡದ ಸೌಂದರ್ಯವನ್ನು ಹೆಚ್ಚಿಸಿದೆ ಮತ್ತು ಮಸೀದಿಗೆ ಒಂದು ಗಂಭೀರತೆಯನ್ನು ತಂದುಕೊಟ್ಟಿದೆ.

ತೆರೆದ ಅಂಗಳಗಳುಳ್ಳ ಮಸೀದಿಗಳಿಗಿಂತ ಇದು ವಿಶಿಷ್ಟವಾಗಿದ್ದು, ಹೆಚ್ಚು ಅನುಕೂಲಕರವಾಗಿದೆ. ಇದು ಮುಸ್ಲಿಂ ಸಂಪ್ರದಾಯಕ್ಕೆ ವಿರುದ್ಧವಾಗಿದ್ದು, ಇಂತಹ ಮಸೀದಿಗಳು ಮತ್ತಾವ ಕಡೆಯೂ ನಿರ್ಮಾಣವಾಗಿಲ್ಲ. ಜುಮ್ಮಾ ಮಸೀದಿಯ ಹೊರ ಭಾಗದಲ್ಲಿ ಕಮಾನುಗಳುಳ್ಳ ದ್ವಾರಗಳಿವೆ. ಗಾರೆಯಿಂದ ನಿರ್ಮಿಸಲ್ಪಟ್ಟ ಜಾಲಂದರದ ಕಿಟಕಿಗಳನ್ನು ಪರದೆಗಳಂತೆ ದ್ವಾರಗಳ ಬಳಿ ಅಳವಡಿಸಲಾಗಿದೆ. ಈ ಬೃಹತ್ ಮಸೀದಿಯಲ್ಲಿ ೫೦೦೦ ಜನರು ಕುಳಿತು ಪ್ರಾರ್ಥನೆ ಮಾಡುವ ವ್ಯವಸ್ಥೆ ಮಾಡಲಾಗಿದೆ. ಈ ಕಾರಣದಿಂದಾಗಿ ಜುಮ್ಮಾ ಮಸೀದಿಯು ಇಡೀ ದಕ್ಷಿಣ ಭಾರತದಲ್ಲಿ ಬೃಹತ್ ಮಸೀದಿ ಎಂಬ ಕೀರ್ತಿಗೆ ಪಾತ್ರವಾಗಿದೆ. ಈ ಮಸೀದಿಯ ಮತ್ತೊಂದು ವಿಶೇಷವೆಂದರೆ ಇಲ್ಲಿ ಎತ್ತರದ ವೇದಿಕೆ ಅಥವಾ ಮಿನ್‌ಬರ್ ಇಲ್ಲದಿರುವುದು. ಈ ಮಸೀದಿಯಲ್ಲಿ ಕೈಕಾಲು ತೊಳೆಯುವ ಸಲುವಾಗಿ ನೀರಿನ ಕೊಳ ಅಥವಾ ಮತ್ತೇನು ವ್ಯವಸ್ಥೆ ಇಲ್ಲದಿರುವುದು ಇದರ ಮತ್ತೊಂದು ವಿಶೇಷ ಲಕ್ಷಣವಾಗಿದೆ. ಇನ್ನೊಂದು ವಿಶೇಷವೆಂದರೆ ಈ ಮಸೀದಿಯನ್ನು ಬಹಮನಿ ಸುಲ್ತಾನರು ರಾಜಕೀಯ ಗುಪ್ತಾಲೋಚನೆಗಳಿಗೆ ಬಳಸುತ್ತಿದ್ದರಂತೆ.

**೨. ಷಾ ಬಜಾರ್ ಮಸೀದಿ(೧೩೭೫)**

ಷಾ ಬಜಾರ್ ಮಸೀದಿಯನ್ನು ಬಹಮನಿ ಸುಲ್ತಾನನಾದ ಒಂದನೇ ಮಹಮ್ಮದ್ ಬಹಮನ್ ಷಾನು ನಿರ್ಮಿಸಿದನು. ಗುಲ್ಬರ್ಗಾ ನಗರದಲ್ಲಿ ಇದು ಮೊಟ್ಟಮೊದಲ ಮಸೀದಿಯೆನಿಸಿದೆ. ಈ ಮಸೀದಿಯ ಗೋಡೆಗಳು ಎತ್ತರವಾಗಿಲ್ಲದೆ ಕುಳ್ಳಾಗಿವೆ. ಈ ಮಸೀದಿಯ ಸಭಾಂಗಣವನ್ನು ೧೫ ಅಂಕಣಗಳನ್ನಾಗಿ ವಿಭಾಗ ಮಾಡಿದ್ದಾರೆ. ಮಸೀದಿಯ ಸುತ್ತಲೂ ಸಣ್ಣ ಕಿಂಡಿಗಳನ್ನು ಅಳವಡಿಸಲಾಗಿದೆ. ಈ ಮಸೀದಿಯಲ್ಲಿ ತುಘಲಕ್ ಮನೆತನದ ಮತ್ತು ಆ ಕಾಲದ ವಾಸ್ತುಶಿಲ್ಪವನ್ನು ನಾವು ಕಾಣಬಹುದು.[೭೪]

**೩. ಬಂದೇನವಾಜ ದರ್ಗಾ(ಗೇಸುದರಾಜನ ದರ್ಗಾ)(೧೪೨೨)**

ದರ್ಗಾವು ಸೂಫಿ ಪಂಥದ ಅತ್ಯಂತ ಜನಪ್ರಿಯ ಸಂತನಾದ ಗೇಸುದರಾಜನ ದರ್ಗಾ. ಈ ದರ್ಗಾದಲ್ಲಿ ಅನೇಕ ಸೂಫಿ ಸಂತರ ಸಮಾಧಿಗಳು, ಮಸೀದಿಗಳು, ಮದ್ರಸಾಗಳು, ಅರೇಬಿಕ್ ಧರ್ಮಶಾಲೆಗಳು, ಖನ್‌ಖಾನ್‌ಗಳು ಸೇರಿಕೊಂಡಿವೆ. ಈ ದರ್ಗಾದ ನಿರ್ಮಾಣ ೧೫ನೇ ಶತಮಾನದಿಂದ ೧೭ನೇ ಶತಮಾನ ದವರೆಗೆ ನಡೆಯಿತೆಂದು ತಿಳಿದುಬರುತ್ತದೆ. ಈ ಬೃಹತ್ ದರ್ಗಾದಲ್ಲಿ ಕನ್ನಡಿಗಳ ಅಲಂಕಾರಗಳು, ವರ್ಣಾಲಂಕಾರಗಳು, ಕಲಾತ್ಮಕ ಗೋಪುರಗಳು, ಎತ್ತರವಾದ ಗುಮ್ಮಟಗಳು, ವರ್ಣರಂಜಿತವಾಗಿ ಕಟ್ಟಲ್ಪಟ್ಟಿದ್ದು ದರ್ಗಾದ ಆಕರ್ಷಣೆಯನ್ನು ಹೆಚ್ಚಿಸಿದೆ. ಬಂದೇನವಾಜ ದರ್ಗಾದ ಬಳಿ ಚಿಕ್ಕ ಮಸೀದಿ ಇದೆ, ಇದನ್ನು ಬಿಜಾಪುರದ ದಳಪತಿ ಅಫ್ಜಲ್‌ಖಾನ್‌ನು ಕಟ್ಟಿಸಿದ್ದನೆಂದು ತಿಳಿದುಬರುತ್ತದೆ. ಈ ಮಸೀದಿಯಲ್ಲಿ ಪ್ರಾಣಿಗಳಿಂದ ಅಲಂಕೃತವಾದ ಗಾರೆಯ ಕಮಾನುಗಳನ್ನು ನಾವು ಕಾಣಬಹುದು.[೭೫]

ಬಂದೇನವಾಜ ಗೇಸುದರಾಜನು ದೆಹಲಿಯ ಪ್ರಸಿದ್ಧ ಚಿಸ್ತಿ ಸೂಫಿ ಸಂತರಾದ ನಾಸಿರುದ್ದೀನ್‌ನ ಶಿಷ್ಯರು. ಬಂದೇನವಾಜ ಎಂದರೆ 'ಮೊರೆಹೊಕ್ಕವರ ಪೊರೆಯುವವನು' ಮತ್ತು ಗೇಸುದರಾಜ ಎಂದರೆ 'ಉದ್ದ ಕೇಶವುಳ್ಳವನು'. ಇವೆರಡು ಬಿರುದುಗಳು ಇವನ ನಿಜನಾಮಗಳು. ಸಂಸ್ಕೃತ, ಅರಬ್ಬಿ, ಪಾರಸಿ, ದಖ್ಖನಿ ಹೀಗೆ ಬಹು ಭಾಷೆಗಳನ್ನು ಬಲ್ಲಂತಹ ಬಂದೇನವಾಜರು ಗುಲ್ಬರ್ಗಾಕ್ಕೆ ಬಂದು ನೆಲೆಸಿದರು. ಗುಲ್ಬರ್ಗಾದಲ್ಲಿಯ ಖಾನ್‌ಖಾನವು ಅವರ ವಿದ್ಯಾಕೇಂದ್ರವಾಯಿತು, ಈಗಲೂ ಸಹ ಈ ದರ್ಗಾದಲ್ಲಿ ಒಂದು ದೊಡ್ಡ ಪುಸ್ತಕ ಬಂಡಾರವನ್ನು ನಾವು ಕಾಣುತ್ತೇವೆ. ಅಂದಿನ ಕಾಲದಲ್ಲಿ ಬಂದೇನವಾಜರ ಜೊತೆ ಚರ್ಚಿಸಲು ಹಾಗೂ ಕಲಿಯಲು ದೇಶದ ನಾನಾ ಮೂಲೆಗಳಿಂದ ಆಡಳಿತಗಾರರು, ವಿದ್ವಾಂಸರು ಹಾಗೂ ಶಿಷ್ಯರು ಬರುತ್ತಿದ್ದರು. ಬಂದೇನವಾಜರು ಸ್ಥಳೀಯ ಹಿಂದು ಸಂತರ ಜೊತೆ ಕೂಡ ಚರ್ಚೆ ನಡೆಸುತ್ತಿದ್ದರೆಂದು ಚರಿತ್ರೆಯಿಂದ ತಿಳಿದುಬರುತ್ತದೆ.

ಬಂದೇನವಾಜರನ್ನು ಮೊದಲ ಬಾರಿಗೆ ದಖ್ಖನ್‌ಗೆ ಸುಲ್ತಾನನಾದ ಫಿರೋಜ್‌ಷಾನು ದೌಲತಾಬಾದಿಗೆ ಹೋಗಿ ಎದುರುಗೊಂಡು ಕರೆತಂದಿರುತ್ತಾನೆ. ಈತನಿಗಾಗಿ ದೊಡ್ಡ ಖಾನ್‌ಖಾನವನ್ನೇ ಕಟ್ಟಿಸಿ ವಸತಿ ವ್ಯವಸ್ಥೆಯನ್ನು ಮಾಡಿರುತ್ತಾನೆ. ಬಹಮನ್‌ಷಾಹಿ ದೊರೆಗಳು ಬಂದೇನವಾಜ ಗೇಸುದರಾಜನ ಮಾರ್ಗದರ್ಶನ ಪಡೆಯದೇ ಆಡಳಿತ ನಡೆಸುತ್ತಿರಲಿಲ್ಲ. ಅನೇಕ ಶರಣರು, ಸೂಫಿಗಳು ಮತ್ತು ಸಂತರು ಬಂದೇನವಾಜರೊಂದಿಗೆ ಆಧ್ಯಾತ್ಮಿಕ ಚರ್ಚೆ ಮಾಡಲು ಬಂದು ಅವರ ಆಶೀರ್ವಾದ ಮತ್ತು ಸಲಹೆಗಳನ್ನು ಪಡೆಯುತ್ತಿದ್ದರು. ಬಹಮನಿ ಮತ್ತು ಬಿಜಾಪುರದ ದೊರೆಗಳು ಸೂಫಿ ಸಂತರಿಗೆ ಆಶ್ರಯ ನೀಡಿ ಅವರ ಮಾರ್ಗದರ್ಶನ ಪಡೆಯುತ್ತಿದ್ದರು ಮತ್ತು ದೀಕ್ಷೆಯನ್ನು ಸಹ ಪಡೆಯುತ್ತಿದ್ದರು. ಸಂತರ ಮರಣಾನಂತರ ಅವರಿಗಾಗಿ ದರ್ಗಾಗಳನ್ನು ಕಟ್ಟಿಸುತ್ತಿದ್ದರು.

ಸೂಫಿ ಸಂತರ ಇತಿಹಾಸದಲ್ಲಿ ಅಗ್ರಗಣ್ಯರೆನಿಸಿರುವ ಖ್ವಾಜಾ ಬಂದೇನವಾಜ್ ಗೇಸುದರಾಜರು 'ಹಿಂದುಲ್‌ವಲಿ'(ದಕ್ಷಿಣದ ಭಗವಂತನ ಮಿತ್ರ) ಎಂಬ ಬಿರುದನ್ನು ಪಡೆದಿದ್ದರು. ಗೇಸುದರಾಜರು, ಮಹಮ್ಮದ್ ಬಿನ್ ತುಘಲಕ್‌ನು ರಾಜಧಾನಿಯನ್ನು ದೆಹಲಿಯಿಂದ ದೌಲತಾಬಾದ್‌ಗೆ ವರ್ಗಾಯಿಸಿದಾಗ ತಮ್ಮ ಅನುಯಾಯಿಯೊಂದಿಗೆ ದಕ್ಷಿಣ ಭಾರತಕ್ಕೆ ಬಂದರು. ೧೪೦೧ರಲ್ಲಿ ಗುಲ್ಬರ್ಗಾವನ್ನು ತಮ್ಮ ಆಧ್ಯಾತ್ಮಿಕ ನೆಲೆಯನ್ನಾಗಿ ಮಾಡಿಕೊಂಡರು. ಈ ಸಂತರು ದಖ್ಖನಿ(ಉರ್ದು) ಭಾಷೆಯಲ್ಲಿ ೧೦೪ ಗ್ರಂಥಗಳನ್ನು ಬರೆದಿದ್ದಾರೆ.[೨೬] ಇಷ್ಟೇ ಅಲ್ಲದೆ ಇವರು ೧೦೪ ವರ್ಷಗಳವರೆಗೆ ಜೀವಿಸಿದ್ದರೆಂಬುದು ವೈಶಿಷ್ಟ್ಯವೆನಿಸುತ್ತದೆ. ಕ್ರಿ.ಶ. ೧೪೨೨ರಲ್ಲಿ ಬಂದೇನವಾಜರು ಮರಣವನ್ನು ಹೊಂದಿದರು. ಇವರ ನೆನಪಿಗಾಗಿ ೧೪೨೨ರಲ್ಲಿ ಕಟ್ಟಿಸಿದ ಸಮಾಧಿಯೇ 'ಬಂದೇನವಾಜ್ ದರ್ಗಾ' ಎಂದು ಪ್ರಸಿದ್ಧಿಯನ್ನು ಹೊಂದಿದೆ.

ಈ ದರ್ಗಾವು ಗುಲ್ಬರ್ಗಾ ನಗರದ ರೋಜ್‌ಬುರ್ಜಾ ಸಮೀಪದಲ್ಲಿದ್ದು ಚೌಕಾಕಾರದ ಬೃಹತ್ ಕಟ್ಟಡವಾಗಿದ್ದು ಎತ್ತರವಾದ ಗೊಮ್ಮಟವನ್ನು ಹೊಂದಿದೆ. ಈ ದರ್ಗಾಕ್ಕೆ ಮೂರು ಕಮಾನುಗಳುಳ್ಳ ಪ್ರವೇಶ ದ್ವಾರಗಳಿದ್ದು, ದ್ವಾರದ ಗೋಡೆಗಳಲ್ಲಿ ಎರಡು ಕಮಾನುಗಳ ಸಾಲುಗಳಿವೆ. ಇದು ನೋಡಲು ಎರಡಂತಸ್ತಿನ ಕಟ್ಟಡಗಳಂತೆ ಕಾಣುತ್ತದೆ. ಇದು ಒಳಗಡೆ ಮೂರು ಗೋರಿಗಳನ್ನು ಹೊಂದಿದ್ದು ನಡುವಿನದು ಬಂದೇನವಾಜರ ದರ್ಗಾವಾಗಿರುತ್ತದೆ. ಕ್ರಿ.ಶ. ೧೫ನೇ ಶತಮಾನದಲ್ಲಿ ಗುಲ್ಬರ್ಗಾದ ಬಹಮನಿ ಸುಲ್ತಾನನಾದ ಅಹ್ಮದ್‌ಷಾನು, ವಲಿಗಳ ಮಜಾರದ(ಗೋರಿ) ಮೇಲೆ ಅಮೃತಶಿಲೆಯಿಂದ ಭವ್ಯವಾದ ದರ್ಗಾ ಶರೀಫನ್ನು ನಿರ್ಮಿಸಿರುವನು. ಕ್ರಿ.ಶ. ೧೬೪೦ರಲ್ಲಿ ಬಿಜಾಪುರದ ಸುಲ್ತಾನನಾದ ಎರಡನೇ ಇಬ್ರಾಹಿಂನು ಈ ದರ್ಗಾಕ್ಕೆ ವಿಶಾಲವಾದ ಮಂದಿರವನ್ನು ಕಟ್ಟಿಸಿರುವನು. ಹೀಗೆ ಕಾಲಕಾಲಕ್ಕೆ ವಿಸ್ತೀರ್ಣಗೊಳ್ಳುತ್ತಾ ಬಂದು, ಅನೇಕ ಬಜಾರ ಸಮಾಧಿಗಳು, ಮಸೀದಿಗಳು, ಮದರಸಾಗಳು, ವಿಶ್ರಾಂತಿ ಕೋಣೆಗಳು, ವಿಶಾಲವಾದ ಒಳಾಂಗಣಗಳು ಮತ್ತು ಭವ್ಯವಾದ-ಸುಂದರವಾದ ದ್ವಾರಗಳಿಂದ ಕೂಡಿವೆ.

ದಕ್ಷಿಣ ಭಾರತದ ಇಸ್ಲಾಮಿಕ್ ಕೇಂದ್ರಗಳಲ್ಲಿ ಖ್ವಾಜಾ ಬಂದೇನವಾಜರ ದರ್ಗಾ ಒಂದಾಗಿದೆ. ಈ ದರ್ಗಾದ ಮುಂಭಾಗವು ಎರಡು ಅಂತಸ್ತುಗಳನ್ನು ಹೊಂದಿದ್ದು, ಕಮಾನು ಗೋಡೆಗಳಿಂದ ಅಲಂಕೃತವಾಗಿದೆ. ಗುಮ್ಮಟದೊಳಗಿನ ವರ್ಣಾಲಂಕಾರಗಳು ಬಹಳ ಸುಂದರವಾಗಿ, ಬಜಾರದ(ಸಮಾಧಿ) ಮೇಲಿರುವ ಮೇಲುಕಟ್ಟು ಕನ್ನಡಿ ಹರಳುಗಳಿಂದ ಮತ್ತು ಮುತ್ತುಗಳಿಂದ ಶೃಂಗರಿಸಲ್ಪಟ್ಟಿದೆ. ಅಲ್ಲಿರುವ ಎಲ್ಲಾ ಬಜಾರಗಳಿಗಿಂತಲೂ ಸಂತ ಗೇಸುದರಾಜ ವಲಿಗಳ ಮಜಾರದ ಶಿಲ್ಪ ಕಲೆಯು ಬಹಳ ಅಲಂಕೃತವಾಗಿದ್ದು ಆಕರ್ಷಣೀಯವಾಗಿದೆ.

### ೪. ಶೇಖ್ ರೌಜಾ-ಶೇಖ್ ಶಿರಾಜುದ್ದೀನ್ ಜುನೈದಿ ದರ್ಗಾ(೧೩೫೦)

ಈ ಸೂಫಿ ಸಂತರು ಬಹಮನಿ ರಾಜ್ಯದ ಆರಂಭಿಕ ಕಾಲದಲ್ಲಿ ಅಂದರೆ ಕ್ರಿ.ಶ.೧೩೫೦ರಲ್ಲಿ ಗುಲ್ಬರ್ಗಾಕ್ಕೆ ಬಂದು ನೆಲೆಸಿದ್ದರು. ಇವರ ದರ್ಗಾ ಗುಲ್ಬರ್ಗಾದ ಷಾ ಬಜಾರ್ ಮಸೀದಿಯ ಹಿಂಭಾಗದಲ್ಲಿದೆ. ಮೂಲದಲ್ಲಿ ಇದು ಸಂತನ ಗೋರಿ ಮತ್ತು ಮಸೀದಿಯಿಂದ ಕೂಡಿತ್ತು, ನಂತರದಲ್ಲಿ ಸಂತನ ಸಮಾಧಿಯ ಪಕ್ಕದಲ್ಲಿ ಇನ್ನೂ ಹಲವರ ಸಮಾಧಿಗಳು ಮತ್ತು ಗೋರಿಗಳು ಕೂಡಿಕೊಂಡು ಒಂದು ಸಂಕೀರ್ಣವಾಗಿ ಬೆಳೆದಿದೆ. ಈ ದರ್ಗಾಕ್ಕೆ ಒಂದು ಮಹಾದ್ವಾರವಿದ್ದು, ಇದನ್ನು ಬಿಜಾಪುರದ ಆದಿಲ್‌ಶಾಹಿ ಸುಲ್ತಾನನಾದ ಯೂಸುಫ್ ಅದಿಲ್‌ಖಾನ್ ಕಟ್ಟಿಸಿದ್ದಾನೆ.[೨೭] ಬಹಮನಿ ರಾಜ್ಯದ ಆರಂಭಿಕ ಸುಲ್ತಾನರ ಸಮಾಧಿಗಳು ಈ ಸಂತನ ದರ್ಗಾದ ದಕ್ಷಿಣಕ್ಕೆ ಇರುವವು. ಸಂತನ ಅನುಯಾಯಿಗಳ ಸಮಾಧಿಗಳು ದರ್ಗಾದ ಸುತ್ತಲೂ ಕಂಡುಬರುತ್ತವೆ. ಈ ದರ್ಗಾವು ಒಂದು ಧಾರ್ಮಿಕ ಕೇಂದ್ರವಾಗಿ ಬೆಳೆದು ಬಂದಿದೆ. ಈ ದರ್ಗಾವು

೧೪ನೇ ಶತಮಾನದ ಕೊನೆಯ ಭಾಗದ ಕಟ್ಟಡ ಶೈಲಿಯಲ್ಲಿದೆ. ಈ ಭವ್ಯವಾದ ಕಟ್ಟಡಕ್ಕೆ ಎರಡು ಎತ್ತರವಾದ ವೃತ್ತಾಕಾರದ ಮೆಟ್ಟಿಲುಗಳಿರುವ ಸ್ತಂಭ ಗೋಪುರಗಳಿವೆ ಹಾಗೂ ಎರಡು ಅಂತಸ್ತಿನ ಮುಂಭಾಗವು ಮತ್ತು ಕಮಾನು ಪ್ರವೇಶ ದ್ವಾರಗಳು ಈ ದರ್ಗಾಕ್ಕೆ ಇವೆ.

**೫. ಹಜರತ್ ಸೈಯದ್ ಷಾ ಕಮಲ್ ಮುಜ್ರೌದ ದರ್ಗಾ**

ಈ ದರ್ಗಾವು ಹಜರತ್ ಗೇಸುದರಾಜನ ದರ್ಗಾದ ಆಗ್ನೇಯ ದಿಕ್ಕಿನಲ್ಲಿದೆ. ಮೈದುಲ್ಲಾ ಓಣಿಯಲ್ಲಿ ಇರುವ ಹಜರತ್ ಕಮಲ್ ಮುಜ್ರೌದರ ದರ್ಗಾ ಪ್ರಸಿದ್ಧ ಸ್ಥಳವಾಗಿದೆ. ಇದನ್ನು ಶಿಲೆಯಿಂದ ಕಟ್ಟಲಾಗಿದೆ. ಗೊಮ್ಮಟವಿದ್ದು ಚೌಕಾಕಾರದ ಗೋಡೆಗಳಿವೆ, ಗಾರೆಯ ಲೇಪನವಿದ್ದು ಗೊಮ್ಮಟದ ಕೋಣೆಯನ್ನು ಎತ್ತರವಾದ ಜಗಲಿಯ ಮೇಲೆ ಕಟ್ಟಲಾಗಿದೆ. ಇದಕ್ಕೆ ಉತ್ತರ ಮತ್ತು ದಕ್ಷಿಣದ ಗೋಡೆಗಳಲ್ಲಿ ಕಮಾನುಗಳುಳ್ಳ ಎರಡು ದ್ವಾರಗಳಿವೆ. ಆಳ ಗೂಡುಗಳುಳ್ಳ ಕಮಾನುಗಳಿಗೆ ಆಯತಾಕಾರದ ಚೌಕಟ್ಟಿನ ಬಾಗಿಲಿದೆ. ಗೋಡೆಯ ನಡುವೆ ಕಿಟಕಿ ಇದ್ದು, ಕಮಾನುಗಳು ಶಿಲಾಕಟ್ಟೆಯ ಮೇಲಿನ ಅರೆಕಂಬಗಳ ಮೇಲಿವೆ. ಇನ್ನೆರಡು ಗೋಡೆಗಳಲ್ಲಿ ಕಮಾನುಗಳನ್ನು ತೋರಿಸಲಾಗಿದೆ. ಇವೆಲ್ಲದರ ನಡುವೆ ಒಳಗಡೆ ಕಮಲ್ ಮುಜ್ರೌದರ ಗೋರಿ ಇದೆ. ನಾಲ್ಕು ಗೋಡೆಗಳಿಗೂ ಎತ್ತರವಾದ ಕಮಾನುಗಳಿದ್ದು, ತುದಿಗಳಿಗೆ ಸಮಾನವಾಗಿ ಮೂಲೆಗಳುಳ್ಳ ಕಮಾನುಗಳಿವೆ. ಇದು ಎಂಟು ಮುಖಗಳುಳ್ಳ ಕಮಾನುಗಳ ಕಟ್ಟಡವಾಗಿದೆ, ಈ ಕಮಾನುಗಳ ಮೇಲೆ ಗೊಮ್ಮಟವನ್ನು ಇರಿಸಲಾಗಿದೆ. ಈ ಗೋಡೆ ಮತ್ತು ಗೊಮ್ಮಟಗಳಿಗೆ ಸುಣ್ಣದ ಲೇಪನವಿದ್ದು, ಇಳಿಜಾರಾದ ಗೋಡೆಗಳಿಗೆ ಚಪ್ಪಟೆ ಗೊಮ್ಮಟಗಳ ಲಕ್ಷಣಗಳಿವೆ. ಮಾಳಿಗೆ ಹಂಚಿನ ಗೋಡೆಯನ್ನು ಜೀರ್ಣೋದ್ಧಾರ ಮಾಡಲಾಗಿದೆ. ಇದು ೧೫ನೇ ಶತಮಾನದ ಸರಳವಾದ ಸಮಾಧಿ ಭವನವಾಗಿದೆ. ಈ ದರ್ಗಾದ ಸಮೀಪದಲ್ಲಿ ಸಣ್ಣ ಮಸೀದಿ ಮತ್ತು ಇನ್ನಿತರ ಕಟ್ಟಡಗಳಿವೆ. ಮಸೀದಿಯಲ್ಲಿ ೫೩ ಅಳತೆಯ ಗುಮ್ಮಟವುಳ್ಳ ಅಂಕಗಳ ಪ್ರಾರ್ಥನಾ ಅಂಗಳವಿದೆ. ಅಂಗಳದ ತುಂಬಾ ಗಚ್ಚು– ಗಾರೆಯಿಂದ ಮಾಡಿದ ಅಲಂಕಾರ, ತುಂಬಿದ ಕಮಾನು, ಗೊಂಬೆಗಳು, ರೇಖಾ ಗಣಿತದ ವಿನ್ಯಾಸಗಳು, ಎಲೆ ಬಳ್ಳಿಯ ಅಲಂಕಾರಗಳು ಇಡೀ ಕಟ್ಟಡವನ್ನು ಸುಂದರಗೊಳಿಸಿವೆ.[೭೮]

**೬. ಸೈಯದ್ ಹಜರತ್ ರುಕ್ಮದ್ದೀನ್ ತೋಲ್ ದರ್ಗಾ**

ಈ ದರ್ಗಾವು ಫೀರಾಪುರದ ಎತ್ತರದ ಗುಡ್ಡದ ಮೇಲಿದೆ. ಇಲ್ಲಿ ಹಜರತ್ ರುಕ್ಮದ್ದೀನ್ ತೋಲ್ ಸಂತರ ಬೃಹತ್ ಮಜಾರ(ಗೋರಿ) ತೆರೆದ ಬಯಲಿನಲ್ಲಿದೆ. ಬಜಾರವನ್ನು ನಯವಾದ ಟ್ರ್ಯಾಪ್ ಶಿಲೆಯಿಂದ ನಿರ್ಮಿಸಲಾಗಿದೆ. ಏಕಶಿಲೆಯಂತೆ ಕಾಣುವ ಇದು ಆಯತಾಕಾರದಲ್ಲಿ ಎತ್ತರವಾಗಿದ್ದು, ಮೇಲ್ಭಾಗವು ಕಮಾನಿನ ಆಕಾರದಲ್ಲಿದೆ. ಈ ಬಜಾರದ ಎದುರುಗಡೆಗೆ ಮತ್ತೊಂದು ಬೃಹತ್ ಗೋರಿ ಇದ್ದು, ಇದು ಹಜರತ್‌ಷಾ ಖಾದ್ರಿಯವರದಾಗಿದೆ. ಇದಲ್ಲದೆ ಬ್ರಾಹ್ಮಣ ಮತ್ತು ರುಕ್ಮದ್ದೀನ್ ತೋಲ್ ಸಂತರ ಶಿಷ್ಯೆ, ಹಾಗೂ ಇನ್ನೂ ಕೆಲವು ಗೋರಿಗಳು ಇಲ್ಲಿವೆ. ಇಲ್ಲಿಯ ಗುರು–ಶಿಷ್ಯರ ಮಜಾರಗಳನ್ನು ಹಿಂದೂ–ಮುಸ್ಲಿಂ ಜನಾಂಗದವರಿಬ್ಬರೂ ಗೌರವಾಧರಗಳಿಂದ, ಹಿಂದೂಗಳಂತೆ ಮಡಿ–ಉಡಿಗಳಿಂದ, ಕಾಯಿ–ಕರ್ಪೂರಗಳಿಂದ, ತೆಂಗಿನಕಾಯಿಯೊಂದಿಗೆ ಪೂಜಿಸುವರು. ಇವರ ಜೀವನ ಚರಿತ್ರೆಯು ತುಂಬಾ ಕುತೂಹಲಕಾರಿಯಾಗಿದೆ. ಈ ಬೃಹತ್ ಮಜಾರವು ಹಾಗೂ ದರ್ಗಾವು ಹಜರತ್ ಬಂದೇನವಾಜರ ಸಮಕಾಲೀನದ್ದಾಗಿದೆ.[೭೯]

**೭. ಖಾದರ್ ಭಾಷಾ ದರ್ಗಾ**

ಈ ದರ್ಗಾವು ಗುಲ್ಬರ್ಗಾದ ಸುಲ್ತಾನಪುರ ರಸ್ತೆಯ ಪಕ್ಕದಲ್ಲಿದೆ ಗುಲ್ಬರ್ಗಾ ನಗರದ ಸಮೀಪದ ಊರಾದ ಸುಲ್ತಾನಪುರ ರಸ್ತೆಯ ಪಕ್ಕದ ಒಂದು ಹೊಲದಲ್ಲಿ ಖಾದರ್ ಭಾಷಾ ದರ್ಗಾ ನಿರ್ಮಿಸಲಾಗಿದೆ.

ಈ ದರ್ಗಾವನ್ನು ಉತ್ತರದ ಅಧಿಷ್ಠಾನದ ಮೇಲೆ ಕಟ್ಟಲಾಗಿದೆ.[೮೦] ಆದರೆ ಈ ಕಟ್ಟಡವು ದುಃಸ್ಥಿತಿಯಲ್ಲಿದೆ. ದರ್ಗಾದ ಸುತ್ತಲೂ ಪ್ರದಕ್ಷಿಣ ಪಥ ಇರುವುದು ವಿಶೇಷವಾಗಿದೆ. ಈ ಕಟ್ಟಡದಲ್ಲಿ ಎರಡು ಗೋರಿಗಳಿದ್ದು, ಒಂದೇ ಸಾಲಿನಲ್ಲಿ ಎತ್ತರದಲ್ಲಿ ದಕ್ಷಿಣಾಭಿಮುಖವಾಗಿದೆ. ಈ ಕಟ್ಟಡದ ಉತ್ತರಕ್ಕೆ ಕಮಾನುಗಳುಳ್ಳ ದ್ವಾರಗಳಿವೆ, ಪ್ರತಿ ದ್ವಾರದ ಅಗಲ ೧.೫೦ ಮೀಟರ್ ಇದ್ದು, ಈ ದ್ವಾರಗಳಲ್ಲಿ ಎರಡು ಹಿಂಚಾಚು ಮತ್ತು ಮುಂಚಾಚು ಗಳಿವೆ. ಇಲ್ಲಿಯೂ ಒಳಗಡೆ ಸ್ಕ್ವಿಂಚಸ್‌ಗಳಿವೆ, ಕಮಾನುಗಳನ್ನು ಅರೆಕಂಬಗಳ ಮೇಲೆ ಕೂಡ್ರಿಸಲಾಗಿದೆ. ಮೇಲ್ಗಡೆಗೆ ಮೂಲೆಗಳಲ್ಲಿ ನಾಲ್ಕು ಆಳವಾದ ಕಮಾನುಗಳಿವೆ. ಮೂರು ಗೋಡೆಗಳಲ್ಲಿಯೂ ಕಮಾನುಗಳಿವೆ, ಆದರೆ ಪಶ್ಚಿಮದ ಗೋಡೆಯ ನಡು ಭಾಗದಲ್ಲಿ ಕಮಾನಿನಾಕಾರದ ಗೂಡಿರುವುದು ವಿಶೇಷ. ಈ ಎಲ್ಲಾ ಕಮಾನುಗಳು ಒಂದೇ ಎತ್ತರ ಮತ್ತು ನಮೂನೆಗಳಲ್ಲಿವೆ. ಇದೇ ಮಾದರಿಯನ್ನು ಇಲ್ಲಿಯ ಮಹಿಳಾ ದರ್ಗಾದಲ್ಲೂ ಕಾಣಬಹುದು. ಈ ಕಮಾನುಗಳ ತುದಿಯಲ್ಲಿ ವೃತ್ತಾಕಾರದ ಪಟ್ಟಿಕೆಗಳು, ರೇಖಾಲಂಕಾರ ಹಾಗೂ ಹೂಬಳ್ಳಿಗಳನ್ನು ಅಲಂಕಾರಗೊಳಿಸಿ ಅದರ ಮೇಲೆ ಅರ್ಧವೃತ್ತಾಕಾರದ ಗುಂಬಜವನ್ನು ಏರಿಸಲಾಗಿದೆ. ಇದರ ಬುಡದಲ್ಲಿ ಚೂಪಾದ ಪಟ್ಟಿಕೆಗಳಿವೆ. ಗೊಮ್ಮಟದ ಪಟ್ಟಿಕೆಯ ಮೇಲೆ ಕಮಾನುಗಳ ಅಲಂಕಾರಗಳಿವೆ. ಗೊಮ್ಮಟದ ನಡುವೆ ಎರಡು ವೃತ್ತಗಳಿವೆ ಮತ್ತು ಗೊಮ್ಮಟದ ಒಳಭಾಗದಲ್ಲಿ ಇದ್ದಂತಹ ಅರೆಕಂಬಗಳನ್ನು ತೆಗೆದು ಹಾಕಲಾಗಿದೆ. ತಳಪಾಯ ಚೌಕಾಗಿ ಇದ್ದು, ಇದರ ಗೋಡೆಯನ್ನು ಎಂಟು ಮುಖಗಳಲ್ಲಿ ಕಟ್ಟಿರುವುದು ವಿಶೇಷ. ತಲಾ ಒಂದರ ಅಳತೆಯು ೪.೨೫ ಮೀಟರ್ ಇದ್ದು, ಮೂಲೆಗಳ ಹೊರ ಗೋಡೆಗಳ ಮೇಲೆ ಕಮಾನುಗಳಿವೆ. ಆಳವಿಲ್ಲದ ಗೂಡು ತಳಪಾಯದಿಂದ ೧.೨೦ ಮೀಟರ್ ಎತ್ತರದಲ್ಲಿದೆ. ಮೂಲೆ ಕಮಾನುಗಳ ಗೂಡುಗಳ ಮೇಲೆ, ಬಾಗಿಲುಗಳ ಮೇಲೆ ಮತ್ತು ಪಶ್ಚಿಮ ಗೋಡೆಗಳಲ್ಲಿ ವೃತ್ತಪಟ್ಟಿಕೆಗಳಲ್ಲಿ ರೇಖಾಲಂಕಾರವನ್ನು ಕಾಣಬಹುದು. ಪಶ್ಚಿಮ ಗೋಡೆಯ ಮೇಲೆ, ಕಮಾನಿನ ಮೇಲೆ ಮತ್ತು ಮೂಲೆ ಗೋಡೆಗಳ ಮೇಲೆ ಇಳಿಜಾರಾದ ಸಜ್ಜಾಗಳನ್ನು ನಿರ್ಮಿಸಲಾಗಿದ್ದು ಸಜ್ಜಾಗಳ ಮೇಲೆ ತೆನೆಗಳು ಹಾಗೂ ಮಿನಾರೇಟ್ಸ್‌ಗಳಿವೆ.

**೮. ಮೌಲಾನಾ ಷಾಹ ಖಾದರ್ ರಹಿಮತುಲ್ಲಾ ದರ್ಗಾ**

ಈ ದರ್ಗಾವು ನಗರ ಬದಿಯಲ್ಲಿರುವ ಸುಲ್ತಾನಪುರದಲ್ಲಿದೆ. ಈ ದರ್ಗಾದ ತಳಪಾಯವು ಚೌಕಾಕಾರವಾಗಿದ್ದು, ಒಳಗಡೆ ಮೌಲಾನಾ ಷಾಹ ಖಾದರ್ ರಹಿಮತುಲ್ಲಾನಾ ಗೋರಿ ಇದೆ. ದರ್ಗಾದ ಹೊರಗಡೆಯೂ ಕೆಲವು ಗೋರಿಗಳಿವೆ. ಈ ದರ್ಗಾದ ಕಾಲಮಾನ ಕ್ರಿ.ಶ. ೧೪ನೇ ಶತಮಾನ ಎಂದು ಹೇಳಲಾಗಿದೆ.

**೯. ಸಿದ್ಧಿ ಅಂಬರ್ ದರ್ಗಾ**

ನಗರದಲ್ಲಿರುವ ಖ್ವಾಜಾ ಹಜರತ್ ಬಂದೇನವಾಜ ದರ್ಗಾದ ಹಿಂದುಗಡೆ ಈ ದರ್ಗಾ ಇದೆ. ಚೌಕಾಕಾರದಲ್ಲಿರುವ ಈ ದರ್ಗಾಕ್ಕೆ ದಕ್ಷಿಣದಲ್ಲಿ ಕಮಾನುಗಳುಳ್ಳ ಪ್ರವೇಶ ದ್ವಾರವಿದೆ. ಈ ಕಮಾನುಗಳ ಮೇಲೆ ತೋರಣದ ಅಲಂಕಾರವನ್ನು ಗಾರೆಯಿಂದ ನಿರ್ಮಿಸಲಾಗಿದೆ. ದಕ್ಷಿಣದ ಕಮಾನು ದ್ವಾರದ ಫಲಕಗಳಲ್ಲಿ ಸರಳ ಶಾಖೆಗಳಿವೆ, ಇದರ ಮೇಲೆ ಶಕೀಲ್ ಅಂಬರ್ ಕ್ಯಾಲಿಗ್ರಾಫಿ ಬರವಣಿಗೆ ಇದೆ. ದ್ವಾರದ ದಕ್ಷಿಣದ ಗೋಡೆಗೆ ಒಂದೇ ಎತ್ತರದ ಎರಡು ಕಮಾನುಗಳಿದ್ದು ಹೆಚ್ಚಾಗಿ ಅಲಂಕಾರಗಳಿಂದ ಕೂಡಿವೆ. ಈ ದರ್ಗಾದ ಒಳಗಡೆ ಸಿದ್ಧಿ ಅಂಬರ್ ಮತ್ತು ಅವರ ಕುಟುಂಬದ ನಾಲ್ಕು ಗೋರಿಗಳನ್ನು ಉತ್ತರ–ದಕ್ಷಿಣ ವಾಗಿ ಕಟ್ಟಲಾಗಿದೆ. ತಲಾ ಒಂದರಂತೆ ಗೋಡೆಯ ಬದಿಯಲ್ಲಿ ಕಮಾನುಗಳಿವೆ. ಕಮಾನುಗಳು ಒಂದೇ ಎತ್ತರದಲ್ಲಿದ್ದು, ಅಲಂಕೃತವಾಗಿದ್ದು, ಗೋಡೆಗಳ ಮಾಳಿಗೆಯ ಪ್ಯಾರಾಪೆಟ್ ಮೇಲೆ ಕಮಾನಿನಾಕಾರದ

ತೆನೆಗಳು ಮತ್ತು ಮೂಲೆಗಳ ಮೇಲೆ ಅಲಂಕೃತ ಮಿನಾರೇಸ್ಟ್‌ಗಳಿವೆ. ಅಷ್ಟಪಟ್ಟಿಕೆಯ ಮೇಲೆ ವೃತ್ತ ಗೋಡೆಯನ್ನು ಏರಿಸಿ, ಅದರ ಮೇಲ್ಗಡೆ ಗೊಮ್ಮಟವನ್ನು ನಿರ್ಮಿಸಿದ್ದಾರೆ. ಈ ದರ್ಗಾದ ಮುಂದುಗಡೆ ಕೆಲವು ಮಹಿಳೆಯರ ಮತ್ತು ಮಕ್ಕಳ ಗೋರಿಗಳಿವೆ.

**೧೦. ಖುಂಜಮಾಸಬೀ ದರ್ಗಾ(ಮಹಿಳಾ ದರ್ಗಾ)**

ಈ ದರ್ಗಾವು ಗುಲ್ಬರ್ಗಾ ನಗರದ ಸಮೀಪವಿರುವ ಕಪನೂರಿನಲ್ಲಿ ಕ್ರಿ.ಶ.೧೪೧೪ರಲ್ಲಿ ನಿರ್ಮಿಸಲಾಗಿದೆ. ಈ ದರ್ಗಾದ ವಿಶೇಷವೆಂದರೆ, ನಾಯಿ ಕಡಿಸಿಕೊಂಡವರು ಈ ದರ್ಗಾದ ಬಾವಿಯ ನೀರನ್ನು ಮೂರು ಬಾರಿ ಕುಡಿದರೆ ಗುಣಮುಖವಾಗುವರೆಂದು ನಂಬಿಕೆ ಹಾಗೂ ಆಚರಣೆ ಇಂದಿಗೂ ಉಳಿದುಕೊಂಡಿದೆ. ಈ ದರ್ಗಾದ ಒಳಗಡೆ ಹೆಂಗಸರ ಸಮಾಧಿಗಳಿದ್ದು, ದರ್ಗಾದ ದಕ್ಷಿಣಕ್ಕೆ ಕೆಲವು ಗೋರಿಗಳಿವೆ. ಈ ಸ್ಮಾರಕ ಕಟ್ಟಡವು ಚೌಕಾಕಾರವಾಗಿದ್ದು(೧೫ ಚ.ಮೀ.) ಎತ್ತರದ ಜಗಲಿಯ ಮೇಲೆ ಕಟ್ಟಲಾಗಿದೆ. ಇದರ ಒಳಗಡೆ ಹಜರತ್ ಬೀಬೀ ಕಮಲ ಸುಲ್ತಾನ ಖುಂಜಮಾಸ ಮತ್ತು ಅವಳ ಮಗ ಸೈಯ್ಯದ್ ಖ್ವಾಜಾ ಕರೀಮುಲ್ಲಾ ಹುಸೇನಿಯ ಗೋರಿಗಳಿವೆ. ಬೀಬೀ ಕಮಲಳ ಗೋರಿಯು ಎತ್ತರವಾಗಿದ್ದು, ಮಜಾರದ ಮೇಲ್ಭಾಗವು ಕಮಾನಿನಂತಿದೆ. ಈ ದರ್ಗಾಕೆ ಮೂರು ಕಮಾನುಗಳುಳ್ಳ ದ್ವಾರಗಳಿದ್ದು, ಕಮಾನುಗಳ ಮೇಲೆ ಜಲ್ಲಿಗಳನ್ನು ಕೂಡಿಸಲಾಗಿದೆ. ನಾಲ್ಕು ಗೋಡೆಗಳಲ್ಲಿ ಹಾಗೂ ನಾಲ್ಕು ಮೂಲೆಗಳಲ್ಲಿ ನಾಲ್ಕು ಕಮಾನುಗಳಿವೆ, ಒಟ್ಟಾರೆ ಇಲ್ಲಿ ಎಂಟು ಮುಖಗಳಿವೆ. ಅಷ್ಟಪಟ್ಟಿಯ ಮೇಲೆ ಗೋಡೆ, ಅದರ ಮೇಲ್ಗಡೆ ಗುಮ್ಮಟವನ್ನು ಏರಿಸಲಾಗಿದೆ. ಗೊಮ್ಮಟದ ಮೇಲ್ಗಡೆ ಕಳಸವಿದ್ದು, ಪ್ಯಾರಾಪೆಟ್‌ನಲ್ಲಿ ಕಮಾನಿನ ತೆನೆಗಳು ಹಾಗೂ ಮೂಲೆಗಳಲ್ಲಿ ಮಿನಾರೇಟ್ಸ್‌ಗಳಿವೆ. ಹೊರಗಿನ ಸುತ್ತಲಿನ ಭಾಗವು ಪ್ರದಕ್ಷಣಾ ಪಥವನ್ನು ನೆನಪಿಸುತ್ತದೆ.[೪೧]

**೧೧. ಹಸನ್ ಗಂಗೂ ಮತ್ತು ಇತರರ ಸಮಾಧಿಗಳು(೧೩೭೫)**

ಈ ಸಮಾಧಿಗಳು ಗುಲ್ಬರ್ಗಾದ ಪಶ್ಚಿಮ ಭಾಗದಲ್ಲಿವೆ. ಈ ಕಟ್ಟಡಗಳು ಸರಳ ಹಾಗೂ ಸಣ್ಣ ಗಾತ್ರದ ಗುಮ್ಮಟಗಳಿಂದ ಕೂಡಿದ್ದು, ಹೆಚ್ಚಿನ ಅಲಂಕಾರಗಳು ಕಂಡುಬರುವುದಿಲ್ಲ. ಈ ಗುಮ್ಮಟಗಳು ತುಘಲಕ್ ಶೈಲಿಯಲ್ಲಿದ್ದು, ಈ ಕಟ್ಟಡಗಳಲ್ಲಿ ಮೂರು ಸಮಾಧಿಗಳನ್ನು ನಾವು ಕಾಣಬಹುದು-ಹಸನ್ ಗಂಗೂ ಬಹಮನ್ ಷಾ, ಒಂದನೇ ಮಹಮ್ಮದ್ ಮತ್ತು ಮೂರನೇಯ ಗುಂಬಜ್.

**೧೨. ಹಫ್ತ್ ಅಥವಾ ಸುಲ್ತಾನರ ಸಾತ್ ಗುಂಬಜ್(೧೩೭೮-೧೪೨೨)**

ಇಲ್ಲಿ ಏಳು ಗುಂಬಜ್‌ಗಳಿದ್ದು ಗುಲ್ಬರ್ಗಾ ನಗರದ ಪೂರ್ವ ಭಾಗದಲ್ಲಿವೆ. ಈ ಗುಂಬಜ್‌ಗಳಲ್ಲಿ ಮುಜಾಹಿದ್, ದಾವುದ್, ಫಿರೋಜ್ ಮತ್ತು ಅವನ ಬಂಧುಗಳ ಸಮಾಧಿಗಳು ಕಂಡುಬರುತ್ತವೆ. ಇಲ್ಲಿಯ ಸಮಾಧಿಗಳು ಸರಳವಾಗಿದ್ದು, ಫಿರೋಜನ ಸಮಾಧಿಯು ಇದ್ದುದರಲ್ಲೇ ಉತ್ತಮ ಮಟ್ಟದ್ದಾಗಿದೆ. ಈ ಸಮಾಧಿಯು ೧೫೮ ಅಡು ಉದ್ದ, ೭೮ ಅಡಿ ಎತ್ತರವುಳ್ಳದ್ದಾಗಿದೆ. ಪರ್ಶಿಬ್ರೌನ್‌ರ ಪ್ರಕಾರ ಇದೊಂದು ಬೃಹತ್ ಸಮಾಧಿಯಾಗಿದೆ.[೪೨] ಫಿರೋಜ್‌ನ ಸಮಾಧಿಯಲ್ಲಿ ಮಾತ್ರ ಅಲಂಕಾರದ ವಿನ್ಯಾಸಗಳು ಕಂಡುಬರುತ್ತವೆ. ಈ ಸಾತ್ ಗುಂಬಜ್ ತುಘಲಕ್ ವಾಸ್ತು ಶೈಲಿಯಲ್ಲಿದ್ದು, ಇವುಗಳ ಮೇಲಿನ ಮಾಡುಗಳಲ್ಲಿ ಮತ್ತು ದ್ವಾರಗಳಲ್ಲಿ ರೇಖಾವಿನ್ಯಾಸಗಳು, ತಾವರೇ ಮುಂತಾದ ಬಳ್ಳಿಗಳು, ಇತರ ಬಳ್ಳಿಗಳ ಕಲಾಕೃತಿಗಳು ಕಂಡುಬರುತ್ತವೆ. ಗುಮ್ಮಟದ ಮೇಲ್ಭಾಗದಲ್ಲಿ ವರ್ಣಾಲಂಕಾರದ ಕುರುಹುಗಳನ್ನು ನಾವು ಕಾಣಬಹುದು.

**೧೩. ತಖ್ತ್ ಮಹಲ್(ಅರಮನೆ) ಕ್ರಿಶ. ೧೪೨೪**

ಬೀದರಿನಲ್ಲಿರುವ ಈ ಅರಮನೆಯನ್ನು ಶಿಹಾಬುದ್ದೀನ್ ಸುಲ್ತಾನನು ಕ್ರಿ.ಶ.೧೪೨೪ರಲ್ಲಿ ಕಟ್ಟಿಸಿದನು. ಈ ಅರಮನೆಯು ಉತ್ತರಾಧಿ ಮುಖವಾಗಿದ್ದು, ವಿಷಾಲ ಮಂಟಪ ಮತ್ತು ಕೋಣೆಗಳಿಂದ

ಅಲಂಕೃತಗೊಂಡಿದೆ. ಪಶ್ಚಿಮದಲ್ಲಿ ಎರಡನೇ ಮಹಾದ್ವಾರವಿದ್ದು, ದ್ವಾರದ ಮೇಲೆ ಸೆರಾಮಿಕ್(ಪಿಂಗಾಣಿ) ಬಿಲ್ಲೆಗಳಿಂದ ಅಲಂಕೃತಗೊಳಿಸಲಾಗಿದೆ. ದ್ವಾರಗಳ ಮೇಲ್ಭಾಗದಲ್ಲಿ ಹುಲಿ ಮತ್ತು ಸೂರ್ಯ/ಶಂಸ್‌ನ ರಾಜ ಚಿನ್ಹೆಗಳು ಕಂಡುಬರುತ್ತವೆ. ಅರಮನೆಯ ಗೋಡೆಗಳು ಮತ್ತು ಕಿಟಗಿಗಳ ಮೇಲೆ ಗಾರೆ ಮತ್ತು ಗಚ್ಚಿನ ಅಲಂಕೃತವಾದ ಗೂಡುಗಳಿವೆ. ಮಹಲ್‌ನ ದಕ್ಷಿಣ ಭಾಗದಲ್ಲಿ ಈಜುಗೊಳ್ಳವಿದೆ. ಇಂದು ಈ ಅರಮನೆಯ ಬಹುಭಾಗವು ಶಿಥಿಲಾವಸ್ತೆಯಲ್ಲಿ ಕಂಡುಬರುತ್ತದೆ.[೮೩]

**೧೪. ದಿವಾನ್-ಎ-ಆಮ್(ಸಾರ್ವಜನಿಕ ಸಭಾಭವನ) ೧೪ನೇ ಶತಮಾನ**

ಇದು ಒಂದು ಸಾರ್ವಜನಿಕ ಸಭಾಭವನವಾಗಿದ್ದು, ಇದನ್ನು ೧೪ನೇ ಶತಮಾನದ ಕೊನೆಯಲ್ಲಿ ನಿರ್ಮಿಸಲಾಗಿದೆ. ಈ ಭವನದಲ್ಲಿ ವಿಶಾಲವಾದ ಸಭಾಂಗಣವಿದ್ದು, ಕುಶಲ ಕೆತ್ತನೆಯ ಮರದ ಕಂಭಗಳಿವೆ. ಈ ಭವನವು ಪಿಂಗಾಣಿಯ ಸುಂದರವಾದ ಚದರ ಬಿಲ್ಲೆಗಳಿಂದ ಅಲಂಕೃತಗೊಂಡಿದ್ದಿತ್ತು. ಗೋಡೆಗಳ ಮೇಲ್ಭಾಗದಲ್ಲಿ ಪಾರ್ಶಿ ಶೈಲಿಯ ಕ್ಯಾಲಿಗ್ರಾಫಿ ಬರವಣಿಗೆಗಳನ್ನು, ರೇಖಾವಿನ್ಯಾಸಗಳನ್ನು, ಹೂವು ಬಳ್ಳಿಗಳನ್ನು ಚಿತ್ರಿಸಿರುವುದನ್ನು ಕಾಣಬಹುದು. ಇಂದು ಮರದ ಕಂಭಗಳು ಕಣ್ಮರೆಯಾಗಿದ್ದು ಭವನವು ಶಿಥಿಲಾವಸ್ತೆಂಯಲ್ಲಿದೆ.[೮೪]

**೧೫. ರಂಗೀನ್ ಮಹಲ್(ಅರಮನೆ) ಕ್ರಿ.ಶ. ೧೫೨೦**

ಈ ಮಹಲನ್ನು ಬಾದ್ ಮನೆತನದ ಖಾಸಿಂ ಕ್ರಿ.ಶ. ೧೫೨೦ರಲ್ಲಿ ಕಟ್ಟಿಸಿದನು. ಈ ಮಹಲ್ ಮರದ ಕೆತ್ತನೆಗಳಿಂದಲೂ, ಬಣ್ಣ ತುಂಬಿದ ಚಿತ್ರಗಳಿಂದಲೂ ಕೂಡಿದ್ದು ಆಕರ್ಷಕವಾಗಿದೆ. ಈ ಅರಮನೆಯಲ್ಲಿ ಹಿಂದೂ-ಮುಸ್ಲಿಂ ಶೈಲಿಗಳು ಸಮ್ಮಿಲಿತಗೊಂಡಿರುವುದನ್ನು ನಾವು ಕಾಣಬಹುದು. ಇಂದಿಗೂ ಈ ಮಹಲ್ ಉತ್ತಮ ಸ್ಥಿತಿಯಲ್ಲಿದೆ.[೮೫]

**೧೬. ಗವಾನ್ ಮದ್ರಸಾ(ಕಾಲೇಜು) ಕ್ರಿ.ಶ. ೧೪೭೨**

ಈ ಮದ್ರಸಾವನ್ನು ನಿರ್ಮಿಸಿದವನು ಬಹಮನಿ ಸಾಮ್ರಾಜ್ಯದ ಪ್ರಧಾನಮಂತ್ರಿಯಾಗಿದ್ದ ಮಹಮ್ಮದ್ ಗವಾನನು ನಿರ್ಮಿಸಿದನು. ಈ ಮಾದರಿಯ ಕಟ್ಟಡಗಳು ಪರ್ಶಿಯಾದ ಖುರಾಸಾನ್ ಪ್ರಾಂತದಲ್ಲಿ ಕಂಡುಬರುತ್ತವೆ. ಈ ಮದ್ರಸಾವು ಭವ್ಯವಾದ ಮೂರು ಅಂತಸ್ತುಗಳ ಕಟ್ಟಡವಾಗಿದ್ದು, ಅರೇಬಿಕ್ ಮತ್ತು ಧರ್ಮಶಾಸ್ತ್ರ ಅಧ್ಯಯನದ ಸಂಸ್ಥೆ ಅಥವಾ ಕಾಲೇಜು ಆಗಿದ್ದಿತು. ಚೌಕಾಕಾರದ ಈ ಕಟ್ಟಡದ ಮಧ್ಯ ಭಾಗದಲ್ಲಿ ವಿಶಾಲವಾದ ಅಂಗಳವಿದೆ. ಒಳ ಭಾಗದ ಕಾರಿಡಾರ್‌ನಲ್ಲಿ ಅಲಂಕೃತ ಕಂಭಗಳು, ಪ್ರವೇಶ ದ್ವಾರಗಳನ್ನು ನಿರ್ಮಿಸಲಗಿದೆ. ನಾಲ್ಕು ದಿಕ್ಕುಗಳ ದ್ವಾರಗಳ(ಐವಾನ್) ಮೇಲ್ಭಾಗದಲ್ಲಿ ಗುಮ್ಮಟಗಳನ್ನು ರಚಿಸಲಾಗಿದೆ. ಮದ್ರಸಾದ ಎರಡು ಮೂಲೆಗಳಲ್ಲಿ ಅಂದರೆ ಈಶಾನ್ಯ ಮತ್ತು ಆಜ್ಞೆಯ ಮೂಲೆಗಳಲ್ಲಿ ಸುಮಾರು ೭೦ ಅಡಿ ಎತ್ತರದ ಮಿನಾರ್‌ಗಳಿದ್ದವೆಂದು ತಿಳಿದುಬರುತ್ತದೆ. ಈಗ ಈಶಾನ್ಯ ಭಾಗದ ಮಿನಾರ್ ಮಾತ್ರ ಉಳಿದುಕೊಂಡಿದೆ. ಮದ್ರಸಾದ ಸ್ತಂಭ ಗೋಪುರ ಮತ್ತು ಪ್ರವೇಶ ದ್ವಾರಗಳನ್ನು ವರ್ಣಮಯ ಪಿಂಗಾಣಿ ಬಿಲ್ಲೆಗಳಿಂದ ಅಲಂಕರಿಸಲಾಗಿದೆ.[೮೬]

**೫.೬.೧.೧. ಬೀದರಿ ಕಲೆ**

ಬೀದರಿ ಕಲೆ ಎಂಬ ಮಿಶ್ರಲೋಹದ ಕಲೆಯನ್ನು ಮಹಮ್ಮದ್ ಗವಾನನ ಕಾಲದಲ್ಲಿ ಆರಂಭಿಸಲಾಯಿತು. ಪರ್ಶಿಯಾದಿಂದ ಬಂದ ಮಿಶ್ರಲೋಹ ಪರಿಣಿತರು ಬೀದರಿನಲ್ಲಿ ಇದನ್ನು ಪ್ರಚುರಗೊಳಿಸಿದರು. ಬೀದರಿ ಕಲೆಯಲ್ಲಿ ಪ್ರಮುಖನು 'ಅಬ್ದುಲ್ಲಾ ಬಿನ್ ಖೈಜರ್', ಈತನಿಂದ ಈ ಕಲೆಯನ್ನು ಕಲಿತ ಹಿಂದೂ ಕಲಾವಿದನಾದ ರಾಮಣ್ಣನು ಬೀದರಿನಲ್ಲಿ ಹೆಸರುವಾಸಿಯಾಗಿದ್ದನು. ಇವನು ಮತ್ತಾರಿಗೂ ಕಲಿಸಲು

ಇಚ್ಚಿಸುತ್ತಿರಲಿಲ್ಲ, ಈ ಕಾರಣದಿಂದಾಗಿ ಬೀದರಿ ಕಲೆಯಲ್ಲಿ ಆಸಕ್ತಿ ಇದ್ದವರು ಕದ್ದು ನೋಡಿ ಈ ಕಲೆಯನ್ನು ಕಲಿತುಕೊಂಡರು, ಅಂಥವರಲ್ಲಿ ಬಸಪ್ಪನು ಒಬ್ಬ. ತಾಮ್ರ, ಹಿತ್ತಾಳೆ ಮತ್ತು ಸತುಗಳ ಮಿಶ್ರ ಕಪ್ಪು ಲೋಹದಿಂದ ತಯಾರಿಸಲಾದ ಪೂಜಿ, ಹರಿವಾಣ, ಭರಣಿ, ಮುಂತಾದ ಬೀದರಿ ಲೋಹ ಕಲಾಕೃತಿಗಳು ಹೂಬಳ್ಳಿಗಳಿಂದಲೂ, ದೇವತೆಗಳ ರೇಖಾಚಿತ್ರಗಳಿಂದಲೂ(ಹಿಂದೂಗಳಿಗಾಗಿ), ಪಾನ್‌ದಾನ್ ಗಳು(ವೀಳೆದೆಲೆ ಕರಂಡಕ ಅಥವಾ ಪೆಟ್ಟಿಗೆ), ಅಂಗಿ ಗುಂಡಿಗಳು, ಬೀಗದ ಕೈಗಳು, ದೀಪಗಳು, ಬಳೆಗಳು, ಚಮಚಗಳು, ಮೇಣದಬತ್ತಿ ಹಿಡಿಕೆ, ದೀಪ ಸ್ತಂಭಗಳು, ಗೋಡೆಯ ಮೇಲಿನ ಬಿತ್ತಿ ಚಿತ್ರ ಫಲಕಗಳು ಹಾಗೂ ಕುರಾನ್‌ನ ದಿವ್ಯ ವಾಖ್ಯಗಳಿಂದಲೂ ಮತ್ತು ಬೆಳ್ಳಿ ರೇಖೆಗಳಿಂದಲೂ ಅಲಂಕೃತವಾಗಿರುತ್ತಿದ್ದವು.

ಬೀದರಿ ಕಲಾವಿದರೆಲ್ಲಾ ಬಹುತೇಕವಾಗಿ ಮುಸ್ಲಿಂ ಆಗಿದ್ದರೂ ಸಹ ಹಿಂದೂ ಕಲಾಕೃತಿಗಳನ್ನು ಉದಾರ ಭಾವನೆಯಿಂದ ರಚಿಸುತ್ತಿದ್ದರು. ಬೆಳ್ಳಿಯ ರೇಖೆಗಳನ್ನು 'ಟೆಹ್ನಿಷಾನ್' ಎಂದು ಉಬ್ಬಿದ ರೇಖೆಗಳನ್ನು 'ಜರ್ನಿಷಾನ್' ಎಂದು ಕರೆಯುತ್ತಿದ್ದರು. ಈ ಕಲೆಯಲ್ಲಿ ಅಂದಿನ ಕಾಲದಲ್ಲಿ ಪರ್ಶಿಯಾದ ಹುಸೇನ್ ಇಸ್ ಫಹಾನಿ ಪ್ರಸಿದ್ಧನಾಗಿದ್ದನು. ಬೀದರಿ ಲೋಹ ಕಲೆಯ ಹೂಜಿಗಳಲ್ಲಿ ದಖ್ಖನಿನ ಲೋಹ ಕಲೆಯ ಲಕ್ಷಣಗಳು ಹೆಚ್ಚಾಗಿ ಕಂಡುಬಂದವು. ಇವುಗಳಲ್ಲಿ ಹಿಂದೂ ಕಲಾಕೃತಿಗಳು, ಮುಸ್ಲಿಂ ಕಲಾಕೃತಿಗಳ ಮೇಲೆ ಪ್ರಭಾವ ಬೀರಿದವು. ಇವುಗಳ ಲಕ್ಷಣವೆಂದರೆ ತ್ರಿದಳ ವಿನ್ಯಾಸ ಹಫ್ತಬಿ(ಚಂದ್ರ), ಪುಷ್ಪ ವಿನ್ಯಾಸ, ಹೆಣಿಗೆ ವಿನ್ಯಾಸ(ಹಿತ್ತಾಳೆ, ಬೆಳ್ಳಿ, ಲೋಹ ದ್ರವ ತುಂಬಿಸುವುದು), ಬೆಳ್ಳಿಯ ಶಲಾಕೆಗಳು, ಅಷ್ಟದಳಗಳು, ಷಡ್‌ದಳಗಳು ಪ್ರಮುಖವಾದವುಗಳಾಗಿವೆ. ಈ ಬೀದರಿ ಕಲೆಯು ಕ್ರಮೇಣವಾಗಿ ಬಿಜಾಪುರ, ಗೋಲ್ಕೊಂಡ, ಆಗ್ರಾ ಮತ್ತು ಲಖ್ನೋಗಳಿಗೂ ವ್ಯಾಪಿಸಿತು.

ಈ ಬೀದರಿನ ಕಲೆಯಲ್ಲಿ ಹೆಚ್ಚಿನದಾಗಿ ಉಮಯ್ ಖಯಾಂನ ಕೃತಿ 'ರುಬಿಯತ್'ನ ಆಯ್ದ ದೃಷ್ಟಾಂತಗಳನ್ನು ಸುಂದರವಾಗಿ ಕೊರೆಯಲಾಗಿದೆ. ಇಂದು ಈ ಕಲೆಯ ೨೨ ಕಾರ್ಯಗಾರಗಳಿವೆ, ಅವುಗಳಲ್ಲಿ ೧೩ ಸುವ್ಯವಸ್ಥಿತವಾಗಿವೆ. ವಂಶ ಪಾರ್ಯಂಪರವಾಗಿ ನಡೆದುಕೊಂಡು ಬಂದಿರುವ ಇವುಗಳನ್ನು ಮುಸ್ಲಿಂ ಕುಶಲಕರ್ಮಿಗಳು ತಮ್ಮ ಜೀವನದ ಕಸುಬಾಗಿ ಮಾಡಿಕೊಂಡು ಅಭಿವೃದ್ಧಿಗೊಳಿಸಿಕೊಂಡು ಬಂದಿದ್ದಾರೆ. ಇತ್ತೀಚೆಗೆ ಕೆಲವು ಹಿಂದೂಗಳು ಸಹ ಇದರ ತಯಾರಿಕೆಯಲ್ಲಿ ತೊಡಗಿರುವುದು ಕಂಡು ಬರುತ್ತದೆ. ಹಿಂದೂಗಳಿಗಾಗಿಯೇ ಹಿಂದೂ ದೇವ-ದೇವತೆಯರ ಚಿತ್ರಗಳನ್ನು ಈ ಕಲಾಕೃತಿಗಳಲ್ಲಿ ಮೂಡಿಸಲಾಗಿದೆ, ಹಾಗಾಗಿ ಇದು ಹಿಂದೂ-ಮುಸ್ಲಿಂ ಸಹಬಾಳ್ವೆಯ ಸಂಕೇತದಂತಿದ್ದು, ಈ ಕಲೆಯಲ್ಲಿ ಹಿಂದೂ-ಮುಸ್ಲಿಂ ಭ್ರಾತೃತ್ವವನ್ನು ನಾವು ಗುರುತಿಸಬಹುದು. ಇಂದಿಗೂ ಸಹ ಬೀದರಿನ ಕಲೆ ಹೆಚ್ಚಿನ ವಿದೇಶಿ ವಿನಿಮಯವನ್ನು ತಂದುಕೊಡುವಂಥದ್ದಾಗಿದೆ. ಬೀದರಿನ ಲೋಹ ಕಲೆಯ ಶ್ರೇಷ್ಠ ಕಲಾಕೃತಿಗಳನ್ನು ಹೈದರಾಬಾದಿನ ಸಾಲಾರ್‌ಜಂಗ್ ಮ್ಯೂಸಿಯಂನಲ್ಲೂ, ಲಂಡನ್‌ನ ವಿಕ್ಟೋರಿಯಾ-ಆಲ್ಬರ್ಟ್ ಮ್ಯೂಸಿಯಂನಲ್ಲೂ, ಬಿಜಾಪುರದ ಮ್ಯೂಸಿಯಂನಲ್ಲೂ, ಕಲ್ಕತ್ತಾದ ವಿಕ್ಟೋರಿಯಾ ಮ್ಯೂಸಿಯಂನಲ್ಲೂ, ಜೈಪುರ ಹಾಗೂ ಬರೋಡಾ ಮ್ಯೂಸಿಯಂಗಳಲ್ಲೂ ಸಂಗ್ರಹಿಸಿರುವುದನ್ನು ನಾವು ಕಾಣಬಹುದು.[೮೭]

**೫.೬.೨. ವಿಜಯನಗರದ ಅರಸರ ಕಲೆ ಮತ್ತು ವಾಸ್ತುಶಿಲ್ಪ**

ವಿಜಯನಗರದ ಅರಸರು ಕಲೆ ಮತ್ತು ವಾಸ್ತುಶಿಲ್ಪಗಳ ನಿರ್ಮಾಣ ಕಾರ್ಯದಲ್ಲಿ ನೀಡಿರುವ ಕೊಡುಗೆ ಅಪಾರವಾಗಿದೆ. ಇವರ ಕಾಲದಲ್ಲಿ ಕೆಲವೊಂದು ಅರಮನೆಗಳು, ದೇವಾಲಯಗಳು, ಗೋಪುರಗಳು, ಸಾರ್ವಜನಿಕ ಕಟ್ಟಡಗಳು, ಕಲ್ಯಾಣ ಮಂಟಪಗಳು, ವಸಂತ ಮಂಟಪಗಳು ಹಾಗೂ ಕೋಟೆ-ಕೊತ್ತಲುಗಳು

ಮುಸ್ಲಿ ವಾಸ್ತುಶೈಲಿಯಲ್ಲಿ ನಿರ್ಮಾಣವಾಗಿರುವುದು ತಿಳಿದುಬರುತ್ತದೆ. ಹಂಪೆಯಲ್ಲಿರುವ ಅವಶೇಷಗಳು ಹಾಗೂ ದಕ್ಷಿಣ ಭಾರತಾದ್ಯಂತ ಕಂಡುಬರುವ ವಿಜಯನಗರ ಕಾಲದ ಶಿಲ್ಪ ಕಲಾಶೈಲಿ ಮತ್ತು ಅವರು ಕಲೆಗೆ ನೀಡಿದ ವಿಶಿಷ್ಟವಾದ ಆಸಕ್ತಿಯ ಬಗ್ಗೆ ಪ್ರತ್ಯಕ್ಷವಾಗಿ ಪಳೆಯುಳಿಕೆಗಳು ಇಂದಿಗೂ ಸಾಕ್ಷಿಯಾಗಿ ನಿಂತಿವೆ. ವಿಜಯನಗರದ ಶಿಲ್ಪ ಕಲಾಶೈಲಿಯು ದಖ್ಖನ್ ಬಹಮನಿಯರ ಇಸ್ಲಾಮಿಕ್ ಶೈಲಿ, ಚೋಳ, ಚಾಲುಕ್ಯ ಮತ್ತು ಹೊಯ್ಸಳ ಶೈಲಿಗಳನ್ನು ಬಳಸಿಕೊಂಡು ತನ್ನದೇ ಆದ ವಿಶಿಷ್ಟ ಶಿಲ್ಪಕಲೆಯನ್ನು ಮೂಡಿಸಿದೆ. "ವಿಜಯನಗರದ ವಾಸ್ತುಶಿಲ್ಪವು ದ್ರಾವಿಡ ಶೈಲಿಯ ಶ್ರೇಷ್ಠ ವಿಕಸಿತ ರೂಪ" ಎಂಬುದಾಗಿ ಕಲೆ ಮತ್ತು ವಾಸ್ತುಶಿಲ್ಪದ ಪ್ರಖ್ಯಾತ ವಿಮರ್ಶಕರಾದ ಪರ್ಸಿ ಬ್ರೌನ್‌ರವರು ಅಭಿಪ್ರಾಯಪಟ್ಟಿದ್ದಾರೆ.[೮೭]

ವಿಜಯನಗರ ಕಾಲದ ದೇವಾಲಯಗಳ ವಾಸ್ತುಶಿಲ್ಪ ಶ್ರೀಮಂತವಾಗಿ ಮುನ್ನಡೆಯಿತು. ಇದು ಅನೇಕ ವಿಧವಾದ ಲಕ್ಷಣಗಳಲ್ಲಿ ಗೋಚರಿಸುತ್ತದೆ. ಈ ಕಾಲದಲ್ಲಿ ರಚಿತವಾದ ದೇವಾಲಯಗಳ ವಾಸ್ತುಶಿಲ್ಪವು ಅತಿ ಹೆಚ್ಚಿನ ಅಲಂಕಾರದಿಂದ ಕೂಡಿರುವಂಥದ್ದಾಗಿವೆ. ಅದರ ಸುತ್ತಮುತ್ತ ಸಣ್ಣ-ಸಣ್ಣ ದೇವಾಲಯಗಳು ಮಂಟಪಗಳು ನಿರ್ಮಾಣವಾಗುತ್ತಿದ್ದು ಒಂದು ರೀತಿಯಲ್ಲಿ ಅದು ದೇವಾಲಯಗಳ ಸಮುದಾಯವಾಗಿ ಕಾಣುತ್ತಿತ್ತು. ಧಾರ್ಮಿಕ ವಿಧಾನದಲ್ಲಾದ ಬದಲಾವಣೆ ಮತ್ತು ಹೆಚ್ಚು ವಿಸ್ತಾರವಾಗಿ ನಡೆಯುತ್ತಿದ್ದ ಧಾರ್ಮಿಕ ಸಮಾರಂಭಗಳಿಗಾಗಿ ಅನೇಕ ದೇವಾಲಯಗಳು ರಚಿತವಾದವು. ಅಂತೆಯೇ ಮಂಟಪಗಳು ಕಂಭಗಳಿಂದ ಕೂಡಿದ ಹಜಾರಗಳು ಸೇರಿಕೊಂಡು ಅನೇಕ ಉದ್ದೇಶಗಳಿಗಾಗಿ ಬಳಕೆಯಾದವು.[೮೮]

ವಿಜಯನಗರದಲ್ಲಿ ದೇವಾಲಯಗಳು ಪ್ರಮುಖ ಸ್ಥಾನವನ್ನು ಪಡೆದಿದ್ದವು. ಪ್ರಾರಂಭದ ಕಾಲದಲ್ಲಿ ಕಟ್ಟಿದ ಗುಡಿಗಳು ಸೂಕ್ಷ್ಮ ಕೆತ್ತನೆ ಹಾಗೂ ವಿಶೇಷ ಅಲಂಕಾರಗಳನ್ನು ಒಳಗೊಂಡಿಲ್ಲವಾದರೂ, ಕದಂಬರ ಕಾಲದ ಚತುರಸ್ರಾಕಾರ ಶೈಲಿಯ ಅನುಕರಣೆ ಮಾಡಿದ್ದು ಕಂಡುಬರುತ್ತದೆ. ಈ ದೇವಾಲಯಗಳ ವಿಶಿಷ್ಟತೆ ಎಂದರೆ ಸುತ್ತುವರೆದ ಭದ್ರವಾದ ಗೋಡೆ, ವಿಶಾಲವಾದ ಬಾಗಿಲುಗಳು, ಎತ್ತರವಾದ ರಾಯಗೋಪುರಗಳು, ಪ್ರತಿಯೊಂದು ದೇವಾಲಯಗಳಲ್ಲೂ ಕಲ್ಯಾಣ ಮಂಟಪ ಮತ್ತು ವಸಂತ ಮಂಟಪಗಳು, ಶಿಲೆಯಿಂದ ನಿರ್ಮಾಣವಾದ ಬಾಗಿಲುಗಳು ಮತ್ತು ಇವುಗಳ ಮೇಲೆ ಎತ್ತರವಾದ ಗೋಪುರಗಳನ್ನು ಕೆತ್ತಲಾಗಿದೆ. 'ರಾಯ' ಎಂಬ ನಾಮಾಂಕಿತ ಪಡೆದಿದ್ದ ಅರಸರ ನೆನಪಿನಲ್ಲಿ ಇವುಗಳನ್ನು 'ರಾಯ ಗೋಪುರ'ಗಳೆಂದೇ ಕರೆಯಲಾಗಿದೆ. ಗರ್ಭಗುಡಿ, ಸುಖನಾಸಿ, ನವರಂಗಗಳು, ಈ ದೇವಾಲಯಗಳ ಅವಿಭಾಜ್ಯ ಅಂಗಗಳು. ವಿಜಯನಗರ ವಾಸ್ತುಶಿಲ್ಪದ ಮತ್ತೊಂದು ವೈಶಿಷ್ಟ್ಯವೆಂದರೆ ದೇವಾಲಯದ ಕಂಬಗಳು ಎತ್ತರವಾದ ಮತ್ತು ಬೃಹತ್ತಾದ ಶಿಲೆಗಳಿಂದ ನಿರ್ಮಾಣವಾಗಿದ್ದು, ಹೆಚ್ಚು ಭಾರವನ್ನು ಹೊರಬಲ್ಲಂಥವಾಗಿದೆ. ಇವುಗಳ ಮೇಲೆ ಎರಡು ಕಾಲುಗಳನ್ನೆತ್ತಿ ಮುನ್ನುಗ್ಗುತ್ತಿರುವ ಕುದುರೆಗಳು ಮತ್ತು ಹುಲಿಗಳನ್ನು ಮನೋಹರವಾಗಿ ಕೆತ್ತಲ್ಪಟ್ಟಿವೆ. ಕಂಭಗಳ ಮತ್ತೊಂದು ಭಾಗದಲ್ಲಿ ಕೆತ್ತಿರುವ ದೇವ-ದೇವತೆಗಳ ಶಿಲ್ಪಗಳು ಜೀವತಳೆದು ಎದ್ದುಬರುವನೋ ಎನ್ನುವಂತಹ ಕಲಾಕೃತಿಗಳಾಗಿವೆ.[೮೯]

ಗರ್ಭಗೃಹದ ಮೇಲಿನ ಗೋಪುರಕ್ಕಿಂತಲೂ ಪ್ರವೇಶದ್ವಾರದ ಗೋಪುರವು ಹೆಚ್ಚು ಎತ್ತರವಾಗಿರುವುದನ್ನು ಈ ಕಾಲದ ದೇವಾಲಯಗಳಲ್ಲಿ ಪ್ರಧಾನ ಲಕ್ಷಣಗಳಾಗಿ ಗಮನಿಸಬಹುದು. ದೇವಾಲಯದ ವಿಸ್ತಾರವು ಹೆಚ್ಚಿರುವದಷ್ಟೇ ಅಲ್ಲದೇ ಅದಕ್ಕೆ ಹೊಂದಿಕೊಂಡಂತೆ ವಿಶಾಲವಾದ ಪ್ರಾಂಗಣದೊಳಗೆ ನೃತ್ಯಮಂಟಪ, ಕಲ್ಯಾಣಮಂಟಪ, ಪಾಕಶಾಲೆ ಸೇರ್ಪಡೆ, ಪ್ರಾಂಗಣದ ಸುತ್ತ ಪ್ರಾಕಾರದ ಗೋಡೆಗೆ ಒಳಭಾಗದಲ್ಲಿ ಹೊಂದಿಕೊಂಡ ಕೈಸಾಲೆ, ಕೊಠಡಿಗಳಲ್ಲಿ ಪರಿವಾರ ದೇವತೆಗಳು ಪ್ರತಿಷ್ಠಾನ, ಪ್ರವೇಶದ್ವಾರ ಆಯಾತಕಾರದ ನೆಲಗಟ್ಟಿನ ಮೂರ್ತಿ ಎತ್ತರವಾಗಿ ನಿರ್ಮಾಣ ಆದ ಮೇಲೆ ಹಂತ ಹಂತದ ಶಿಖರ.[೯೦] ವಿಜಯನಗರದ ಅರಸರು ಕಲೆ ಮತ್ತು ವಾಸ್ತುಶಿಲ್ಪಕ್ಕೆ ಅಮೋಘ ಕಾಣಿಕೆಗಳನ್ನು ನೀಡಿರುವುದಲ್ಲದೇ ಅನೇಕ ದೇವಾಲಯಗಳನ್ನು

ನಿರ್ಮಿಸಿದರು, ಅನೇಕ ದೇವಾಲಯಗಳನ್ನು ಜೀರ್ಣೋದ್ಧಾರಗೊಳಿಸಿ ಆ ಮೂಲಕ ದೇವಾಲಯಗಳ ಸಂಸ್ಕೃತಿಯನ್ನು ಜೀವಂತಗೊಳಿಸಿದರು. ವಿಜಯನಗರದ ವಾಸ್ತುಶಿಲ್ಪವನ್ನು ಮೂರು ಭಾಗಗಳಾಗಿ ವಿಂಗಡಿಸಬಹುದು, ಅವುಗಳೆಂದರೆ ಧಾರ್ಮಿಕ, ಲೌಕಿಕ ಮತ್ತು ರಕ್ಷಣಾತ್ಮಕ ಕಟ್ಟಡಗಳು.

**೧. ಧಾರ್ಮಿಕ ಕಟ್ಟಡಗಳು**

ದೇವಾಲಯಗಳು, ಮೂರ್ತಿಗಳು ಧಾರ್ಮಿಕ ವರ್ಗಕ್ಕೆ ಸೇರಿದ್ದು, ವಿಜಯನಗರ, ಲೇಪಾಕ್ಷಿ, ತಿರುಪತಿ, ಶ್ರೀರಂಗಂ, ಕಂಚಿ, ಅಹೋಬಲಿಪುರಂ ಮೊದಲಾದ ಕಡೆಗಳಲ್ಲಿ ಕಂಡುಬರುವ ದೇವಾಲಯಗಳು ಇಂದಿನ ಚರಿತ್ರೆಗೆ ಉತ್ತಮ ನಿದರ್ಶನವಾಗಿವೆ. ವಿಜಯನಗರವು ಬೃಹತ್ ದೇಗುಲಗಳ ತಾಣವಾಗಿದ್ದು, ಸುಂದರ ಕೆತ್ತನೆ, ಮಿಶ್ರಣಗೊಂಡ ಗ್ರಾನೈಟ್ ಶೀಲೆ, ಗರ್ಭಗೃಹ, ಅರ್ಧಮಂಟಪ, ಮಹಾಮಂಟಪ, ಗರ್ಭಗುಡಿ, ಕಂಭಗಳು ಮತ್ತು ಚಿತ್ರಪಟಿಕೆಗಳು ವಿಜಯನಗರದ ವಾಸ್ತು ಕಲೆಯ ಮುಖ್ಯ ಲಕ್ಷಣವಾಗಿವೆ.

ಪ್ರಾಚೀನ ಹೊಯ್ಸಳ ದೇವಾಲಯವೊಂದರ ಸುತ್ತ ಈ ದೇವಾಲಯ ನಿರ್ಮಾಣವಾಗಿದ್ದು, ವಿಜಯನಗರದಲ್ಲೇ ಅತ್ಯಂತ ಪ್ರಾಚೀನ ದೇವಾಲಯ ಇದು. ಮೊದಲನೇ ಹರಿಹರನು ತನ್ನ ಗುರುವಾದ ವಿದ್ಯಾರಣ್ಯರ ಪೂಜಾಕಾರ್ಯ ಮತ್ತು ಸ್ವಂತ ಉಪಯೋಗಕ್ಕಾಗಿ ಇದನ್ನು ಕಟ್ಟಿಸಿದನೆಂದು ತಿಳಿದುಬರುತ್ತದೆ. ಈ ದೇವಾಲಯ ಚರಕ ಯಂತ್ರದಲ್ಲಿ ಸುತ್ತಿ ಕೊರೆದ ಕಂಬಗಳು, ಸೊಗಸಾದ ಕೆತ್ತನೆಯ ಬಾಗಿಲು, ಅಲಂಕೃತ ಚಾವಣಿಗಳಿಂದ ಕೂಡಿರುವುದು ತಿಳಿದುಬರುತ್ತದೆ.

ವಿಜಯನಗರದ ಇತರ ದೇವಾಲಯಗಳೆಂದರೆ ಶಿವಾಲಯ, ಉದ್ಧಾನ ವೀರಭದ್ರ, ಗಾಣಿಗಿತ್ತಿ, ಚಂಡಿಕೇಶ್ವರ, ಮೌಲ್ಯವಂತರಘುನಾಥ, ಸರಸ್ವತಿ, ಹೇಮಕೂಟ ಬೆಟ್ಟದ ದೇವಾಲಯಗಳು, ಸಾಸಿವೆಕಾಳು ಮತ್ತು ಕಡಲೆಕಾಳು ಗಣಪತಿ ದೇವಾಲಯಗಳು, ವೀರಭದ್ರೇಶ್ವರ ದೇವಾಲಯ, ಬಡವಿಲಿಂಗ ಮುಂತಾದ ಧಾರ್ಮಿಕ ಕೆತ್ತನೆಗಳು ಇಂದಿಗೂ ಜನರ ಮನಸ್ಸನ್ನು ಆರ್ಕಷಿಸುತ್ತಿವೆ. ಇಷ್ಟೇ ಅಲ್ಲದೇ ವಿಜಯನಗರದ ಹೊರ ಭಾಗದಲ್ಲಿ ಅಂದರೆ ಲೇಪಾಕ್ಷಿ, ಆನೆಗುಂದಿ, ಅಹೋಬಲ, ತಿರುಪತಿ, ಕಂಚಿ, ಕಾಳಹಸ್ತಿ, ಶ್ರಿರಂಗಂ, ಶ್ರೀಶೈಲಂ ಮೊದಲಾದ ಕಡೆಗಳಲ್ಲಿಯೂ ವಿಜಯನಗರದ ಅರಸರು ಕಟ್ಟಿಸಿದ ವಾಸ್ತುಶಿಲ್ಪ ಶೈಲಿಯ ದೇವಾಲಯ ಗಳನ್ನು ನಾವು ಇಂದಿಗೂ ಕಾಣಬಹುದು.

**೧. ಧಾರ್ಮಿಕ ದೇವಾಲಯಗಳು**

**೧. ಸಾಸುವೆಕಾಳು ಗಣಪತಿ**

ವಿಜಯನಗರದ ಕಾಲದ ಏಕಶಿಲಾ ಶಿಲ್ಪಗಳಲ್ಲಿ ಈ ಸಾಸಿವೆ ಕಾಳು ಗಣಪತಿ ಬಹಳ ಪ್ರಮುಖವಾದುದಾಗಿದೆ. ಈ ಗುಡಿಯಲ್ಲಿ ದಖ್ಖನ್ ಬಹಮನಿಯರ ಮುಸ್ಲಿಂ ಶೈಲಿಯ ಕೈಪಿಡಿ ಗೋಡೆಗಳಿವೆ. ಈ ವಿಗ್ರಹವು ಚಚ್ಚೌಕಾರದ ಒರಟಾದ ಕಂಬಗಳುಳ್ಳ ವಿಶಾಲವಾದ ತೆರೆದ ಮಂಟಪದೊಳಗೆ ಆಸೀನವಾಗಿದೆ. ಈ ವಿಗ್ರಹವು ತುಂಬಾ ದಪ್ಪನಾದ ಹೊಟ್ಟೆಯನ್ನು ಹೊಂದಿದ್ದು ನಾಗರ ಹಾವನ್ನು ಸುತ್ತಿಕೊಂಡು ಕುಳಿತಿದೆ. ಈ ಪ್ರತಿಮೆಯು ತನ್ನ ಎರಡು ಕೋರೆ ಹಲ್ಲುಗಳನ್ನು ಹೊರಗೆ ತೋರಿಸುವಂತಿದೆ. ಈ ವಿಗ್ರಹವು ೪ ಕೈಗಳನ್ನು ಹೊಂದಿದು, ಮುಂದಿನ ಬಲಗೈಯಲ್ಲಿ ಮುಂದಿರುವ ದಂತವನ್ನು ಹಿಂದಿನ ಬಲಗೈಯಲ್ಲಿ ಅಂಕುಶವನ್ನು ಹಿಡಿದಿದ್ದು ಹಿಂದಿನ ಎಡಗೈಯಲ್ಲಿ ಪಾಶವನ್ನು ಹಿಡಿದಿದೆ. ಈ ವಿಗ್ರಹವು ಸುಮಾರು ೧೦ ಅಡಿ ಎತ್ತರವಿದ್ದು, ಯಜ್ಞೋಪವೀತ ಕಂಕಣ ಹಾರ, ಕಾಲ್ಡಡಗ ಮತ್ತು ಮುಕುಟಗಳಿಂದ ಅಲಂಕೃತವಾಗಿದೆ. ಈ ಪ್ರತಿಮೆಯ ಕೆಳಗಿನ ಎಡಗೈ ಹಾಗೂ ಎರಡು ಕೋರೆ ಹಲ್ಲುಗಳಲ್ಲಿ ೧ ಕೋರೆ ಹಲ್ಲು ಒಡೆದು ಹೋಗಿದೆ. ಈ ವಿಗ್ರಹದ ಕಿವಿಯಲ್ಲಿ ಭತ್ತದ ಗೊಂಚಲುಗಳಿರುವುದನ್ನು ಕಾಣಬಹುದು.[೯]

## ೨. ವಿಜಯವಿಠ್ಠಲ ದೇವಾಲಯ

ಹಂಪಿಯಲ್ಲಿರುವ ಈ ದೇವಾಲಯ ಅತ್ಯಂತ ಸುಂದರವಾಗಿದೆ. ಈ ದೇವಾಲಯವು ವಿಜಯನಗರದ ಕಾಲದ ವಾಸ್ತುಶಿಲ್ಪ ಶೈಲಿಯ ಎಲ್ಲಾ ಅಂಶಗಳನ್ನು ಒಳಗೊಂಡಿದೆ. ಫರ್ಗೂಸನ್‌ರು ಈ ದೇವಾಲಯವನ್ನು "ಭಾರತೀಯ ಶಿಲ್ಪ ಬಿರುದುಗಳ ಚಿಂತಾಮಣಿ" ಎಂದು ಕರೆದಿದ್ದಾರೆ. ಸಂಗಮರ ಕಾಲದಲ್ಲಿ ಒಂದು ಸಣ್ಣ ದೇವಾಲಯವಾಗಿ ಅಸ್ತಿತ್ವಕ್ಕೆ ಬಂದ ವಿಠ್ಠಲ ದೇವಾಲಯವು ಕಾಲಾನುಕ್ರಮದಲ್ಲಿ ವಿಸ್ತೀರ್ಣಗೊಳ್ಳುತ್ತಾ ವಿಶಾಲವಾದ ಒಂದು ಸಂಕೀರ್ಣವಾಗಿ ಪರಿವರ್ತನೆಗೊಂಡಿತು. ೧೪ನೆಯ ಶತಮಾನದ ಆದಿಭಾಗದಲ್ಲಿ ಈ ದೇವಾಲಯ ಅಸ್ಥಿತ್ವದಲ್ಲಿತ್ತೆಂಬುದು ನಮಗೆ ಹರಿಭಟ್ಟನಿಂದ ರಚಿತವಾದ "ಉತ್ತರ ನರಸಿಂಹ ಪುರಾಣಂ"ನಿಂದ ಖಚಿತವಾಗುತ್ತದೆ. ಇದರಲ್ಲಿ ೨ನೇ ದೇವರಾಯನ ಅಧಿಕಾರಿಯಾದ ಪ್ರೋಳುಗಂಟಿ ತಿಪ್ಪ ಎಂಬುವನು ವಿಠ್ಠಲ ದೇವಾಲಯದ ಭೋಗಮಂಟಪವನ್ನು ರಚಿಸಿದನೆಂದು ವರ್ಣಿತವಾಗಿದೆ. ಅಂದರೆ ೨ನೇ ದೇವರಾಯನ ಕಾಲಕ್ಕಾಗಲೇ ವಿಠ್ಠಲ ದೇವಾಲಯ ರಾಜಧಾನಿಯ ಮುಖ್ಯ ದೇವಾಲಯಗಳಲ್ಲಿ ಒಂದಾಗಿತ್ತು. ಮೇಲೆ ತಿಳಿಸಿದಂತೆ ಈ ದೇವಾಲಯ ಕಾಲಾನುಕ್ರಮದಲ್ಲಿ ವಿಸ್ತಾರಗೊಳ್ಳುತ್ತಾ ಹೋಯಿತು. ಕ್ರಿ.ಶ. ೧೫೧೩ರಲ್ಲಿ ಕೃಷ್ಣದೇವರಾಯನ ರಾಣಿಯಾದ ತಿರುಮಲಾದೇವಿ ಮತ್ತು ಚಿನ್ನಾದೇವಿಯವರು ವಿಠ್ಠಲ ದೇವಾಲಯದ ಗೋಪುರಗಳನ್ನು ನಿರ್ಮಿಸಿದರು. ಕ್ರಿ.ಶ. ೧೫೧೬ರಲ್ಲಿ ಕೃಷ್ಣದೇವರಾಯ ೧೦೦ ಕಂಬಗಳ ಮಂಟಪವನ್ನು ಈ ಸಂಕೀರ್ಣದಲ್ಲಿ ನಿರ್ಮಿಸಿದನು. ಅಚ್ಯುತರಾಯನ ಕಾಲದಲ್ಲಿ ಮುಖಮಂಟಪ, ಕಲ್ಯಾಣ ಮಂಟಪ, ಪ್ರಾಕಾರದ ಗೋಡೆಗೆ ಹೊಂದಿಕೊಂಡಂತೆ ಕೆಲವು ಮಂಟಪಗಳು ನಿರ್ಮಾಣಗೊಂಡವು. ಸದಾಶಿವರಾಯನ ಕಾಲದಲ್ಲಿ ಉಳಿದ ಮಂಟಪಗಳ ನಿರ್ಮಾಣವಾಯಿತು. ಇದನ್ನು ಕಟ್ಟಬೇಕೆಂದು ಉದ್ದೇಶಿಸಿದ್ದ ವಿಸ್ತಾರವಾದ ಯೋಜನೆಯಂತೆ ಇದು ಪೂರ್ಣಗೊಳ್ಳಲೇ ಇಲ್ಲವೆಂಬಂತೆ ತೋರುತ್ತದೆ.

ಪೂರ್ವಕ್ಕೆ ಮುಖಮಾಡಿರುವ ಈ ದೇವಾಲಯ ಸುಮಾರು ೫೦೦ ಅಡಿ ೩೧೦ ಅಡಿ ಅಗಲದ ಅಂಗಳದ ಮಧ್ಯದಲ್ಲಿದೆ. ಈ ಅಂಗಳದ ಸುತ್ತಲೂ ಪ್ರಾಕಾರದ ಗೋಡೆ ಇದ್ದು ಈ ಪ್ರಾಕಾರದ ಗೋಡೆಗೆ ಹೊಂದಿಕೊಂಡಂತೆ ೩ ಸ್ಥಾಯಿ ಕಂಬಗಳಿಂದ ಕೂಡಿದ ಮಂಟಪದ ವರಾಂಡವಿದೆ. ಈ ದೇವಾಲಯವನ್ನು ಪ್ರವೇಶಿಸಲು ಮೂರು ದಿಕ್ಕಿಗೂ ೩ ಗೋಪುರ ದ್ವಾರಗಳಿವೆ. ಪೂರ್ವ ಮತ್ತು ದಕ್ಷಿಣದ ಕಡೆಗಿರುವ ದ್ವಾರಗಳು ಮುಖ್ಯವಾದವುಗಳು. ಮುಖ್ಯ ದೇವಾಲಯದ ಮುಂಭಾಗದಲ್ಲಿ ಮತ್ತು ಪಕ್ಕದಲ್ಲಿ ಅನೇಕ ಮಂಟಪಗಳಿವೆ. ಮುಂಭಾಗದ ಮಂಟಪದ ಪಕ್ಕದಲ್ಲಿ ಸುಂದರವಾದ ಕಲ್ಲಿನ ರಥವಿದ್ದು ಇಟ್ಟಿಗೆಗಳಿಂದ ನಿರ್ಮಿತ ಇದರ ಶಿಖರ ಈಗ ಸಂಪೂರ್ಣವಾಗಿ ನಾಶವಾಗಿದೆ. ಇದು ಕೋನಾರ್ಕದ ಕಲ್ಲಿನ ರಥವನ್ನು ಹೋಲುತ್ತದೆ. ಈ ರಥವು ಅನೇಕ ಕೆತ್ತನೆ ಕೆಲಸಗಳಿಂದ ಬಹು ರಮಣಿಯವಾಗಿ ಕಾಣುತ್ತದೆ.

ಸಂಪೂರ್ಣವಾಗಿ ಬೆಣಚು ಕಲ್ಲಿನಿಂದ ನಿರ್ಮಿತವಾಗಿರುವ ಈ ದೇವಾಲಯ ದ್ರಾವಿಡ ಶೈಲಿಯಲ್ಲಿದ್ದು, ಇದು ೨೩೦ ಅಡಿ ಉದ್ದ ೨೫ ಅಡಿ ಎತ್ತರವಾಗಿದೆ. ಈ ದೇವಾಲಯದ ಕಂಬಗಳನ್ನು ಏಕಶಿಲೆಯಲ್ಲಿ ಬಹು ಸೂಕ್ಷ್ಮವಾಗಿ ಕೆತ್ತನೆ ಮಾಡಿ ನಿಲ್ಲಿಸಿದ್ದಾರೆ. ಈ ದೇವಾಲಯವನ್ನು ಪ್ರಮುಖವಾಗಿ ೪ ಭಾಗಗಳನ್ನಾಗಿ ಮಾಡಬಹುದು.

೧. ದೇವಾಲಯದ ಹೊರಗಿರುವ ಮುಖಮಂಟಪ

೨. ದೇವಾಲಯದ ಮಧ್ಯಭಾಗದ ರಂಗಮಂಟಪ

೩. ದಕ್ಷಿಣಾಪಥ

೪. ಸುಕನಾಸಿ ಗರ್ಭಗೃಹಗಳಿಂದ ಕೂಡಿ ಹಿಂಭಾಗ

ಈ ದೇವಾಲಯವು ವಿಜಯನಗರದ ಧಾರ್ಮಿಕ ಕಟ್ಟಡಗಳಲ್ಲಿಯೇ ಅತ್ಯಂತ ಸುಂದರವಾಗಿದೆ. ಆಯತಾಕಾರದ ಪ್ರಾಂಗಣ, ಎತ್ತರವಾದ ಮೂರು ಗೋಪುರಗಳು, ನೂರು ಕಂಬಗಳ ಮಂಟಪ ಈ ದೇವಾಲಯದ ಆಕರ್ಷಣೆಯಾಗಿದೆ. ಜಗತ್ ಪ್ರಸಿದ್ಧವಾಗಿರುವ ಸಂಗೀತ ಕಂಬಗಳು, ಸುಂದರ ಕಲ್ಲಿನ ರಥ, ಸುತ್ತಲಿನ ಮಂಟಪಗಳು, ನೃತ್ಯ, ಸಂಗೀತ, ಉತ್ಸವಗಳು, ಪ್ರಾಣಿಗಳ ಚಿತ್ರಗಳು ಇಲ್ಲಿಯ ಪ್ರಮುಖ ಆಕರ್ಷಣೀಯ ಕೆತ್ತನೆಗಳಾಗಿವೆ.[೨]

**೩. ಪಟ್ಟಾಭಿರಾಮ ದೇವಾಲಯ**

ಈ ಬೃಹತ್ ದೇವಾಲಯದಲ್ಲಿ ಅಚ್ಯುತರಾಯನ ಎರಡು ಶಾಸನಗಳಿವೆ. ಇದು ವಿಠ್ಠಲ ದೇವಾಲಯ ಕ್ಕಿಂತಲೂ ಹೆಚ್ಚು ಸುಂದರವಾದ ಶಿಲ್ಪ ಮತ್ತು ಕೆತ್ತನೆಯಿಂದ ಕೂಡಿದೆ.

**೪. ಬಾಲಕೃಷ್ಣ ದೇವಾಲಯ**

ಈ ದೇವಾಲಯವನ್ನು ೧೫೧೩ರಲ್ಲಿ ಕೃಷ್ಣದೇವರಾಯನು ನಿರ್ಮಿಸಿ, ಉದಯಗಿರಿಯಿಂದ ತಂದ ಬಾಲಕೃಷ್ಣ ಮೂರ್ತಿಯನ್ನು ಇಲ್ಲಿ ಪ್ರತಿಷ್ಠಾಪಿಸಲಾಗಿದೆ. ಇದು ವಿಶಾಲ ಮತ್ತು ಸುಂದರ ದೇವಾಲಯವಾಗಿದ್ದು ಶಿಥಿಲಾವಸ್ತೆಯನ್ನು ತಲುಪಿದೆ. ಈ ದೇವಾಲಯವನ್ನು ಹಜಾರ ರಾಮಸ್ವಾಮಿ ದೇವಾಲಯವೆಂದೂ ಸಹ ಕರೆಯುತ್ತಾರೆ. ಇದು ಕೇವಲ ರಾಜ ಕುಟುಂಬದವರ ಆರಾಧನೆಗಾಗಿ ನಿರ್ಮಿಸಲಾಗಿದ್ದು, ಈ ದೇವಾಲಯದಲ್ಲಿ ಗರ್ಭಗೃಹ, ಅಮ್ಮನಗುಡಿ ಮತ್ತು ಕಲ್ಯಾಣಮಂಟಪಗಳು ಇವೆ. ದೇವಾಲಯದ ಕೆಳ ಅಂತಸ್ತು ಕಲ್ಲಿನಿಂದ ನಿರ್ಮಿಸಲ್ಪಟ್ಟಿದ್ದು, ಗೋಪುರವು ಇಟ್ಟಿಗೆಗಳಿಂದ ನಿರ್ಮಾಣಗೊಂಡಿದೆ. ದೇವಾಲಯದ ಒಳಗೋಡೆಗಳು ೧೦೦೦ಕ್ಕಿಂತಲೂ ಹೆಚ್ಚು ರಾಮಾಯಣಕ್ಕೆ ಸಂಬಂಧಿಸಿದ ಶಿಲ್ಪದೃಶ್ಯಗಳಿಂದ ಕೂಡಿವೆ. ದೇವಾಲಯದಲ್ಲಿ ಮಂಟಪದ ಮಧ್ಯದಲ್ಲಿ ನಾಲ್ಕು ಕಂಬಗಳಿದ್ದು, ಒಳಗಡೆ ಸಣ್ಣ ಸಣ್ಣ ಗುಡಿಗಳನ್ನು ಸಹ ಹೊಂದಿದೆ.[೩]

**೨. ಲೌಕಿಕ ಕಟ್ಟಡಗಳು(ವಾಸ್ತುಶಿಲ್ಪ)**

ವಿಜಯನಗರದ ರಾಜಧಾನಿಯಾದ ಹಂಪಿಯು ವೈಭವಪೂರಿತವಾಗಿ ಅನೇಕ ಸೌಂದರ್ಯಯುತ ಕಟ್ಟಡಗಳಿಂದಲೂ, ಅರಮನೆಗಳಿಂದಲೂ ಭವ್ಯ ಸಾಧನೆ ಗಳಿಂದಲೂ ಕೂಡಿತ್ತೆಂದು ಹಲವಾರು ವಿದೇಶಿ ಪ್ರವಾಸಿಗರು ಅಭಿಪ್ರಾಯಪಟ್ಟಿದ್ದಾರೆ. ಕೆಲವು ಕಟ್ಟಡಗಳ ಅವಶೇಷಗಳು ಇಂದಿಗೂ ಅದನ್ನು ಸಮರ್ಥಿಸುತ್ತವೆ. ಆದರೆ ಅವುಗಳಲ್ಲಿ ಕೆಲವು ಭಗ್ನವಾಗಿವೆ. ಇವೆಲ್ಲಾ ಸಾಮಾನ್ಯವಾಗಿ ತಾಳೀಕೋಟೆ ಯುದ್ಧದ ನಂತರ ಶತ್ರುಗಳು ಕೆಲವು ಸುಂದರವಾದ ಹಿಂದೂ ದೇವಾಲಯಗಳು ಮತ್ತು ಅನೇಕ ಕಟ್ಟಡಗಳನ್ನು ಹಾಳು ಮಾಡಿದರು ಎಂದು ಹೇಳಲಾಗಿದೆ. ಅಲ್ಲಿ ಲೌಕಿಕ ಕಟ್ಟಡಗಳಂತೂ ತುಂಬಾ ಭಗ್ನವಾಗಿ ಅವಶೇಷಗಳು ಮಾತ್ರ ಉಳಿದಿವೆ. ಹಿಂದಿನ ಅನೇಕ ಕಟ್ಟಡಗಳು ಮತ್ತು ಅರಮನೆಯ ವಿಷಯವಾಗಿ ಸಮಕಾಲೀನ ಮತ್ತು ವಿದೇಶಿ ಆಧಾರಗಳು ನಮಗೆ ತುಂಬಾ ಸಹಾಯಕವಾಗಿವೆ.

ಲೌಕಿಕ ಕಟ್ಟಡಗಳ ಪೈಕಿ ರಾಣಿಯ ಸ್ನಾನಗೃಹ, ಮಾರುಕಟ್ಟೆಗಳು, ರಾಣಿಯರ ಅರಮನೆಗಳು, ಕಮಲ್ ಮಹಲ್, ಅರಮನೆಯ ಆವರಣ, ಕಲ್ಲಿನ ಕಾಲುವೆ, ಕಲ್ಲಿನ ಕುಡತಿ, ಕಲ್ಲಿನ ತುಲಾಭಾರ, ಮಹಾನವಮಿ ದಿಬ್ಬ, ಪುರಂದರದಾಸರ ಮಂಟಪ, ಕಲ್ಲಿನ ರಥ, ಗಣಪ, ಕಡ್ಲೆಕಾಳು ಗಣಪ ಮುಂತಾದವುಗಳು ಸುಂದರವಾದ ಚಿತ್ರಗಳನ್ನೊಳಗೊಂಡಿವೆ.[೪]

**೧. ರಾಣಿಯರ ಸ್ನಾನಗೃಹ**

ರಾಣಿಯರ ಸ್ನಾನಗೃಹವು ಸಿಂಹಾಸನ ಮಂಟಪದ ಆಗ್ನೇಯಕ್ಕೆ ಎತ್ತರವಾದ ಗೋಡೆಗಳಿಂದ ಆವೃತವಾದ ಚೌಕಾಕಾರದ ಕಟ್ಟಡ. ಇದು ಇಸ್ಲಾಮಿಕ್ ವಾಸ್ತುಶೈಲಿ. ಈ ಸ್ನಾನಗೃಹವು ೧೫ ಚದುರ ಮೀಟರ್ ಉದ್ದವಾಗಿಯೂ ೧೮ ಮೀಟರ್ ಆಳವಾಗಿಯೂ ಇದೆ. ಈಜುಕೊಳಕ್ಕೆ ಅಲ್ಲಲ್ಲಿ ಮುಂಚಾಚಿದ

ಮೊಗಸಾಲೆಗಳಿವೆ. ಎರಡೆರಡು ಮೊಗಸಾಲೆಗಳ ನಡುವೆ ಎರಡೆರಡು ಕಿಟಕಿಗಳು ಕಂಡುಬರುತ್ತವೆ. ಇವುಗಳ ಮೇಲ್ಭಾಗದಲ್ಲಿ ವಿವಿಧ ರೂಪಗಳ ಗಾಜು, ಗಾರೆಯ ಕೆತ್ತನೆಗಳಿವೆ. ಈ ಕೊಳಕ್ಕೆ ನೀರನ್ನು ಹೊರಗಿನಿಂದ ಕಾಲುವೆ ಮೂಲಕ ಆಮೇಲೆ ಹೊರಗೆ ಹೋಗುವಂತೆ ವ್ಯವಸ್ಥೆ ಮಾಡಲಾಗಿತ್ತು. ಸಿಂಹಾಸನ ಮಂಟಪದ ದಕ್ಷಿಣಕ್ಕೆ ದಾರಿಯ ಪಕ್ಕದಲ್ಲಿ ಒಂದು ದೊಡ್ಡ ಕಲ್ಲಿನ ಬಾಗಿಲಿದೆ. ಒಂದೇ ಶಿಲೆಯಿಂದ ಕೆತ್ತಲಾದ ಈ ದ್ವಾರ ಯಾವ ಕಟ್ಟಡಕ್ಕೆ ಸಂಬಂಧಿಸಿದೆ ಎಂಬುದನ್ನು ಹೇಳಲಾಗದು. ಸಮೀಪದಲ್ಲೇ ದೊಡ್ಡ ಕಟ್ಟಡದಂತೆ ಕಾಣುವ ತೊಟ್ಟಿಯಿದೆ. ಗಾರೆಯಿಂದ ಕಟ್ಟಿದ ಈ ತೊಟ್ಟಿಯ ಒಳಗೆ ನೀರು ಹರಿಯಲು ಹೊರಗಿನಿಂದ ಒಳಬರಲು ಕಲ್ಲಿನ ಕಾಲುವೆಯನ್ನು ಆವರಿಸಿದಂತೆ ಹೊರಗೋಡೆ ಎತ್ತರವಾದ ಗೋಡೆಗಳಿವೆ. ಇದಕ್ಕೆ ಪಶ್ಚಿಮ ಪ್ರವೇಶದ್ವಾರವಿದ್ದು ಗೋಡೆಯ ಕೆಳಭಾಗ ಅಗಲವಾಗಿದ್ದು, ಮೇಲೇರಿದಂತೆಲ್ಲಾ ಕಿರಿದಾಗುತ್ತಾ ಹೋಗುತ್ತದೆ. ಈ ಗೋಡೆಯ ಮೂರು ಮೂಲೆಗಳಲ್ಲಿ ಕಾವಲು ಗೋಪುರಗಳಿವೆ. ಈಗ ಕಾವಲು ಗೋಪುರಗಳಿಗೆ ಹೊಸದಾಗಿ ಗೋಡೆ ಕಟ್ಟಲಾಗಿದೆ. ಮೊದಲಿದ್ದ ಗೋಡೆ ಈಗ ಕಾಣಿಸದಾಗಿದೆ. ವಾಸ್ತವವಾಗಿ ಇದನ್ನು ರಾಣಿವಾಸವೆನ್ನಲು ಹೆಚ್ಚಿನ ಆಧಾರಗಳಿಲ್ಲ, ರಾಣಿಯರ ವಾಸನಿವೇಶನ ಅವಶೇಷದಿಂದ ೪೭.೭ ಮೀಟರ್ ಮತ್ತು ೨೯.೬ ಮೀ. ವಿಸ್ತಾರವಾದ ತಳಪಾಯವೇ ಅತಿ ವಿಶಾಲವಾದುದೆಂದು ತಿಳಿಯಬಹುದು.

**೨. ಕಮಲ ಭವನ**

ವಿಜಯನಗರದ ಲೌಕಿಕ ಕಟ್ಟಡಗಳಲ್ಲಿ ಪ್ರಮುಖವಾದ ಕಟ್ಟಡವೆಂದರೆ ಕಮಲಭವನ ಇದನ್ನು ಚಿತ್ರಾಂಗಿ ಮಹಲ್ ಎಂದು ಕರೆಯಲಾಗಿದೆ. ಇದು ಎರಡು ಅಂತಸ್ತುಗಳ ಒಂದು ಅಲಂಕಾರ ಮಂಟಪವಾಗಿದೆ. ವಾಸ್ತವವಾಗಿ ಇದು ಚೌಕಾಕಾರದ ತಳಪಾಯವನ್ನು ಹೊಂದಿದ್ದು ಪಕ್ಕಗಳಲ್ಲಿ ಹಿಂದಕ್ಕೆ ನಿಂತಿರುವುದರಿಂದ ಇದರ ವಿನ್ಯಾಸವು ಕಮಲಾಕಾರವಾಗಿ ಕಂಡುಬಂದಿದೆ. ಕಲ್ಲಿನ ಅಲಂಕೃತವಾದ ಅದಿಸ್ಠಾನದ ಮೇಲೆ ಚೌಕಾಕಾರದ ಕಂಬಗಳಿದ್ದು ಇದರ ಪತ್ರ ವಿನ್ಯಾಸಗಳ ಕಮಾನುಗಳು ಅವುಗಳನ್ನು ಆದರಿಸಿದೆ. ಮೊದಲು ಹೊರ ಭಾಗದಲ್ಲಿ ಮೆದುಗಾರೆಯ ಅಲಂಕಾರಗಳಿದ್ದವೆಂದು ತೋರುತ್ತದೆ. ಆದರೆ ಇಂದು ಅವುಗಳು ನಮಗೆ ಕಾಣುವುದಿಲ್ಲ. ಕಮಾನಿನ ಭೇದಕ್ಕೆ ಸೇರಿದ ತ್ರಿಕೋನಾಕಾರದ ಸ್ಥಳದಲ್ಲಿನ ಪದರಗಳ ಅವಶೇಷಗಳು ಮಾತ್ರ ಅಲ್ಲಿನ ಅಗ್ರಭಾಗದಲ್ಲಿ ಸಿಂಹ ಮುಖಗಳುಳ್ಳ ಚಿತ್ರಗಳಿವೆ. ಮೊದಲನೇ ಅಂತಸ್ತಿನ ಕಪೋತದಲ್ಲಿ ತುಸು ಬಾಗಿದ ಪುಷ್ಪವಿನ್ಯಾಸ ಮತ್ತು ಹೊರ ಮೂಲೆಗಳಲ್ಲಿ ಏಣಿಯಾಕಾರದ ಮುಖಗಳಿದ್ದವು. ಅವುಗಳಲ್ಲಿ ಒಂದು ಮಾತ್ರ ಉಳಿದಿವೆ. ಒಳಭಾಗದಲ್ಲಿ ಈಗ ಯಾವ ಅಲಂಕಾರವು ಸಹ ಕಂಡುಬರುವುದಿಲ್ಲ. ಇಲ್ಲಿ ಒಟ್ಟು ೨೪ ಕಂಬಗಳಿದ್ದು ಈ ಕಮಾನುಗಳನ್ನು ಅಲಂಕೃತ ಕಮಾನುಗಳಿಂದ ಕೂಡಿಸಿದೆ. ಮೂಲೆಗಳಲ್ಲಿನ ಕೆಲಭಾಗದ ಅಡ್ಡ ಕಮಾನುಗಳು ವಿಚಿತ್ರವಾಗಿವೆ. ಛಾವಣಿಯ ಮಧ್ಯಭಾಗದಲ್ಲಿ ಕಮಲದ ಮೊಗ್ಗು ಕೆಳಮುಖವಾಗಿದ್ದು, ಸುತ್ತಲೂ ಗುಮ್ಮಟವನ್ನು ಉಚಿತ ಪರಿಮಾಣಗಳಲ್ಲಿ ಕೂಡಿಸಲಾಗಿದೆ. ಕಟ್ಟಡದ ಉತ್ತರ ಭಾಗದಲ್ಲಿ ಮೇಲಿನ ಅಂತಸ್ತಿಗೆ ಹೋಗಲು ಮೊಗಸಾಲೆಗಳು ಹಿಂಜರಿತವುಳ್ಳ ಪತ್ರ ವಿನ್ಯಾಸದ ಕಿಟಕಿಗಳಿವೆ. ಇದರ ಛಾವಣಿಯಲ್ಲಿ ಅಡ್ಡ ಕೋನಾಕಾರದ ಉಬ್ಬಿದ ಗುಮ್ಮಟಗಳ ಮಧ್ಯದಲ್ಲಿ ಛಾವಣಿಯ ಮೇಲೆ ಒಳಭಾಗಕ್ಕೂ ಬೆಳಕು ಬೀಳುವಂತೆ ಅಳವಡಿಸಿರುವ ಕಿಟಕಿಗಳುಳ್ಳ ಗಾರೆಯ ಕಮಾನುಗಳು ಲತಾ ವಿನ್ಯಾಸಗಳು ಪುಷ್ಪ ಬೋದಿಗೆಗಳು ಮತ್ತು ವಿಗ್ರಹವನ್ನಿಡಲು ಗೂಡುಗಳಿವೆ. ಮಧ್ಯದಲ್ಲಿ ಕೆಳಮುಖವಾದ ಕಮಲದ ಗುಮ್ಮಟದ ಕಟ್ಟಡದ ಮೇಲೆ ಪಿರಮಿಡ್ಡಿನಾಕಾರದ ಭಿನ್ನ ಗಾತ್ರದ ೯ ಶಿಖರಗಳಿವೆ. ಇವು ಒಂದೊಂದು ತುಸು ಬಾಗಿದ ಕಪೋಟಗಳಾಗಿ ಒಂದರ ಮೇಲೊಂದು ಕಿರಿದಾಗುತ್ತಾ ಹೋಗುತ್ತವೆ. ಮೇಲ್ಭಾಗದಲ್ಲಿ ಗುಮ್ಮಟಾಕಾರದ ಶಿಖರವಿದ್ದು ಒಟ್ಟು ಕಟ್ಟಡವನ್ನು ಯಾವ ದಿಕ್ಕಿನಿಂದ ನೋಡಿದರೂ ಒಂದೇ ರೀತಿಯಲ್ಲಿ ಕಾಣಿಸುತ್ತದೆ ಎನ್ನುವುದನ್ನು ನೋಡಬಹುದು.[೯]

## ೩. ಮಹಾನವಮಿ ದಿಬ್ಬ

ಮಹಾನವಮಿ ದಿಬ್ಬವು ಹಂಪಿಯ ಲೌಕಿಕ ವಾಸ್ತುಶಿಲ್ಪಗಳಲ್ಲಿ ಒಂದು ಪ್ರಸಿದ್ಧ ಅವಶೇಷವಾಗಿ ಉಳಿದಿದೆ. ಪಟ್ಟಣದ ಎಲ್ಲಮ್ಮನ ದೇವಸ್ಥಾನದ ದಕ್ಷಿಣಕ್ಕೆ ಎತ್ತರವಾಗಿ ಕಾಣಿಸುವುದೇ ಮಹಾನವಮಿ ದಿಬ್ಬವಾಗಿದೆ. ಈಗ ಕೇವಲ ದಿಬ್ಬ ಮಾತ್ರ ಉಳಿದಿದ್ದು, ಇದರ ಮೇಲೆ ಸುಂದರವಾದ ಕಂಬಗಳ ಮೇಲೆ ಭವ್ಯವಾದ ಮಂಟಪವಿತ್ತೆಂದು ಆಗಿನ ಸಂದರ್ಶಕರ ಉಲ್ಲೇಖನದಿಂದ ತಿಳಿದುಬರುವುದು. ಕ್ರಿ.ಶ. ೧೫೧೩ರಲ್ಲಿ ಕೃಷ್ಣದೇವರಾಯ ಕಳಿಂಗ ದಂಡಯಾತ್ರೆಯಲ್ಲಿ ಜಯಶೀಲನಾದ ಮೇಲೆ ವಿಜಯೋತ್ಸವದ ಆಚರಣೆಗಾಗಿ ಈ ದಿಬ್ಬವನ್ನು ನಿರ್ಮಿಸಿದನೆಂದು ಪಾಯಿಸ್ ಅಭಿಪ್ರಾಯಪಟ್ಟಿದ್ದಾನೆ. ಇದನ್ನು ಸಿಂಹಾಸನ ಮಂಟಪವೆಂತಲೂ ಹೇಳಲಾಗಿದ್ದು ಪಾಯಿಸ್ ಇದನ್ನು ವಿಜಯಮಂದಿರ ಎಂದು ಕರೆದಿರುವುದನ್ನು ಕಾಣಬಹುದು.

ಮಹಾನವಮಿ ಉತ್ಸವದ ದಿನಗಳಲ್ಲಿ ರಾಜರು, ಸಾಮಂತರು, ಉಪರಾಜರು, ಮಾಂಡಲೀಕರು, ಇವರೊಡನೆ ವಿಜಯನಗರದ ಚಕ್ರವರ್ತಿಯು ಇದರ ಮೇಲೆ ಚಿನ್ನದ ಛತ್ರಿಗಳ ಕೆಳಗೆ ಕುಳಿತು ಕುಸ್ತಿ ಪಂದ್ಯ, ಆನೆಗಳ ಕಾಳಗ, ನೃತ್ಯ, ಕ್ರೀಡೆಗಳು ಮುಂತಾದವುಗಳನ್ನು ವೀಕ್ಷಿಸುತ್ತಿದ್ದರು ಎಂಬ ಪ್ರತೀತಿ. ಮಹಾನವಮಿ ದಿಬ್ಬದ ಒಂದು ಅಲಂಕಾರವನ್ನು ವಿಂಗಡಿಸಿ ನೋಡಿದರೆ ಕಾಲ ದೃಷ್ಟಿಯಿಂದ ವಿಜಯನಗರ ಸಾಮ್ರಾಜ್ಯದ ಕಲೆಯ ಹೃದಯ ವೈಶಾಲ್ಯತೆಯನ್ನು ತೋರಿಸುತ್ತದೆ. ಈ ವಿಧಾನಕ್ಕೂ ಹೊಯ್ಸಳ ವಿಧಾನಕ್ಕೂ ಇರುವ ಭೇದಗಳು ಕೂಡ ಇಲ್ಲಿ ಸ್ಪಷ್ಟವಾಗಿ ಕಾಣುತ್ತವೆ. ಇದರ ಉದ್ದ ಸುಮಾರು ೪೦ ಅಡಿಗಳ ಚದುರ ಪ್ರಮಾಣವನ್ನು ಹೊಂದಿದ್ದು ಇದರ ಮೂಲೆಗಳಲ್ಲಿ ಚಿಕ್ಕ ವಿಮಾನಗಳಿರುವುದು ಕಂಡುಬರುತ್ತದೆ.

ಪೂರ್ವ ಭಾಗದಲ್ಲಿ ಮೇಲಿನ ಅಂತಸ್ತಿನ ಕೆಳಗೆ ನೆಲಮಾಳಿಗೆಯೂ ಇದೆ. ಈ ದಿಬ್ಬದ ಸುತ್ತಮುತ್ತಲೂ ಕೆಲವು ದೃಶ್ಯಗಳನ್ನು ಕೆತ್ತಲಾಗಿದೆ. ದಕ್ಷಿಣ ಭಾಗದಲ್ಲಿ ಇಂಥ ರಮಣೀಯತೆಯನ್ನು ವೈಶಿಷ್ಟ್ಯವನ್ನು ತಳೆದ ಶಿಲ್ಪಕೃತಿಗಳು ಇರುವುದಿಲ್ಲವೆಂದು ಹೇಳಿದ್ದಾರೆ. ಇದರ ದಕ್ಷಿಣ ಭಾಗದಲ್ಲಿ ೮-೧೦ ಪಟ್ಟಿಗಳಿದ್ದು ಅಲ್ಲಿ ದೇವಾಲಯಗಳು, ಮಂಟಪಗಳು, ಸೂರ್ಯ ಚಂದ್ರಾದಿಗಳು. ಹಂಸಗಳು, ಆನೆಗಳು ವಿವಿಧ ಭಂಗಿಗಳು, ಕಮಲದೊಡನೆ ಪ್ರೀತಿಸುವ ಪಕ್ಷಿಗಳ ವರ್ಗಗಳು ಕೊಕ್ಕರೆ, ಅಶ್ವಗಳು, ಬಿಲ್ಲುಗಳಿಂದ ಜಿಂಕೆಯನ್ನು ಬೇಟೆಯಾಡುತ್ತಿರುವುದು. ತ್ರಿಮನುಷ್ಯರ ಸಂಯುಕ್ತ ರೂಪಗಳು, ಸ್ತ್ರೀಯರ ಅಲಂಕಾರದ ದೃಶ್ಯಗಳು, ಧನುರ್ಬಾಣಗಳನ್ನು ಧರಿಸಿದ ಬೇಟೆಗಾರರು, ಕಾಡು ಹಂದಿಗಳ ರೂಪದಲ್ಲಿರುವ ಚಿತ್ರಗಳು, ಸಿಂಹಗಳು ಆನೆಗಳನ್ನು ಬೇಟೆಯಾಡುವ ವಿಧಾನಗಳು. ವಾದ್ಯ ಸಮೇತವಾಗಿ ಭರತನಾಟ್ಯದ ವಿವಿಧ ಭಂಗಿಗಳು, ತಮಟೆಯನ್ನು ಬಾರಿಸುವ ವಿಧಾನ ಇವೇ ಮೊದಲಾದ ರಮಣೀಯ ದೃಶ್ಯಗಳನ್ನು ಕಾಣಬಹುದಾಗಿದೆ.

ಈ ದಿಬ್ಬದ ಪೂರ್ವ ಭಾಗದಲ್ಲಿನ ಕಟ್ಟೆಗಳಲ್ಲಿ ಕೂದಲಿನ ಜಡೆ, ಬುಗುರಿಯಾಕಾರದ ಅಥವಾ ಶಂಖಾಕಾರದ ಟೋಪಿ ಹಾಗೂ ಖಡ್ಗಗಳನ್ನು ಹೊಂದಿರುವಂತಹ ವ್ಯಕ್ತಿಗಳ ಗುಂಪನ್ನು ಕಾಣಬಹುದಾಗಿದ್ದು ಬಹುಶಃ ಇವರು ವಿಜಯನಗರದ ಆಸ್ಥಾನಕ್ಕೆ ಭೇಟಿಯಾಗುತ್ತಿದ್ದ ಚೀನಾದ ರಾಯಭಾರಿಗಳೆಂದು ಹೇಳಲಾಗಿದೆ ಅಥವಾ ಊಹಿಸಲಾಗಿದೆ. ಅಲ್ಲದೆ ಈ ದಿಬ್ಬದಲ್ಲಿ ಅರಬ್ ಕುದುರೆ ವ್ಯಾಪಾರಿಗಳ ಹಾಗೂ ಪರದೇಶದ ಕುದುರೆಗಳ ಮೂರ್ತಿ ಶಿಲ್ಪಗಳನ್ನು ಚಿತ್ರಿಸಲಾಗಿದೆ. ಇದು ಅಂದಿನ ಸಮಕಾಲೀನ ಸಾಮಾಜಿಕ ಜೀವನವನ್ನು ಪ್ರತಿನಿಧಿಸುತ್ತದೆ.[೬] ಈ ದಿಬ್ಬ ಉತ್ತರಕ್ಕೆ ಏಕಶಿಲೆಯ ಒಂದು ಕಲ್ಲಿನ ಬಾಗಿಲಿನ ಅವಶೇಷವಿದ್ದು ಅದು ಮೂಲತಃ ಮರದ ಬಾಗಿಲಿನಂತೆ ಇದೆ. ಮರದ ಬಾಗಿಲಿನಂತೆ ಚಿಲಕದ ಗುರಿಗಳನ್ನು ಸಹ ಹೊಂದಿದ್ದು, ಮೂಲತಃ ಇದನ್ನು ಎಲ್ಲಿ ಅಳವಡಿಸಿದ್ದರೆಂದು ತಿಳಿದಿಲ್ಲವಾಗಿದೆ.

ಪರ್ಷಿಯಾದ ರಾಯಭಾರಿಯಾದ ಅಬ್ದುಲ್ ರಜಾಕ್ ಮಹಾನವಮಿ ಉತ್ಸವವನ್ನು ವರ್ಣಿಸಿದ್ದು, ರಾಜಧಾನಿಗೆ ದೂರದ ಪ್ರಾಂತ್ಯಗಳಿಂದಲೂ ರಾಜರು, ಮಾಂಡಲೀಕರು, ಸೇನಾಧಿಪತಿಗಳು, ಚಕ್ರವರ್ತಿಯ ಆಜ್ಞೆಯ ಮೇರೆಗೆ ಇಲ್ಲಿ ಬಂದು ಸೇರುತ್ತಿದ್ದು, ವಿಜಯನಗರ ಚಕ್ರವರ್ತಿಯ ರತ್ನ ಖಚಿತವಾದ ಸಿಂಹಾಸನದಲ್ಲಿ ಕುಳಿತು ವೀಕ್ಷಿಸುತ್ತಿದ್ದನೆಂದು ಹೇಳಿದ್ದಾನೆ. ಪಾಯಿಸ್ ಅಭಿಪ್ರಾಯಪಟ್ಟಿರುವಂತೆ ರಾಜಾಜ್ಞೆ ಮೇರೆಗೆ ಸಾಮ್ರಾಜ್ಯ ದಲ್ಲಿರುವ ಸಮರ್ಥ ನರ್ತಕಿಯರೂ, ಪ್ರಜೆಗಳು ಪರಿವಾರ ಸಮೇತರಾಗಿ ಆಗಮಿಸುತ್ತಿದ್ದರು. ಈ ಉತ್ಸವವು ೯ ದಿನಗಳು ನಡೆಯುತ್ತಿತ್ತು. ಅರಮನೆಯಿಂದ ಬಯಲಿಗೆ ಹೋಗಲು ಒಂದು ಸಣ್ಣ ದ್ವಾರವಿದ್ದು ಅದರ ಮೇಲೆ ಒಂದು ಗೋಪುರವಿತ್ತು. ದ್ವಾರವನ್ನು ದಾಟಿ ಬಂದರೆ ವಿಶಾಲವಾದ ಬಯಲು ಕಾಣುತ್ತಿದ್ದು ಈ ಬಯಲಿನ ಪಾರ್ಶ್ವಗಳಲ್ಲಿನ ಸೈನ್ಯ ಮುಖ್ಯಾಧಿಕಾರಿಗಳು ಮತ್ತು ಇತರ ದೊಡ್ಡ ಅಧಿಕಾರಿಗಳು ಕುಳಿತುಕೊಂಡು ವಿನೋದ ಗಳನ್ನು ವೀಕ್ಷಿಸುತ್ತಿದ್ದರು. ಈ ಬಯಲಿನ ಎಡಭಾಗದಲ್ಲಿ ವಿಜಯ ಭವನವೆಂಬ ಒಂದು ಅಂತಸ್ತಿನ ಕಟ್ಟಡವಿದ್ದು ಇದರ ಮುಂಭಾಗವು ತೆರೆದಿತ್ತು. ಅದಕ್ಕೆ ಕಲ್ಲಿನ ಮೆಟ್ಟಿಲುಗಳಿದ್ದು ಇದರ ನೆಲದ ಮೇಲೆ ಸುಂದರವಾದ ಕಲ್ಲುಗಳನ್ನು ಹಾಸಿದ್ದು ಇಲ್ಲಿಂದ ಕೆಲವರು ಉತ್ಸವಗಳನ್ನು ನೋಡುತ್ತಿದ್ದರು. ಈ ಬಯಲಿನ ಪೂರ್ವ ದಿಕ್ಕಿಗೆ ಇರುವ ದ್ವಾರದ ಎದುರಿಗೆ ವಿಜಯಭವನವನ್ನು ಹೋಲುವ ಮತ್ತೆರಡು ಭವನಗಳಿದ್ದು ಒಂದು ಕಟ್ಟಡವು ಚಕ್ರವರ್ತಿಯ ಮಿತ್ರರ ಮಕ್ಕಳಿಗಾಗಿಯೂ ಮತ್ತೊಂದು ಭವನ ಅವನ ಪರಿವಾರಕ್ಕೂ ಸೀಮಿತವಾಗಿತ್ತು.

### ೪. ಗಜಶಾಲೆ

ಕಮಲ್ ಮಹಲ್ ಸಮೀಪದಲ್ಲಿ ಗಜಶಾಲೆ ಎನಿಸಿದ ೧೧ ಆನೆಯ ಲಾಯದ ಕೊಠಡಿಗಳಿವೆ. ಒಂದೊಂದರಲ್ಲಿ ಒಂದೊಂದು ಆನೆಯನ್ನು ಕಟ್ಟಿಹಾಕುವಂತೆ ವ್ಯವಸ್ಥೆ ಮಾಡಲಾಗಿದೆ. ಇದು ಪೂರ್ವಕ್ಕೆ ಮುಖಮಾಡಿಕೊಂಡಿದೆ. ಆನೆಯನ್ನು ಕಟ್ಟಿಹಾಕುವ ಯಾವುದೇ ತರಹದ ಗೂಟ ಇಲ್ಲದೇ ಕಬ್ಬಿಣದ ವ್ಯವಸ್ಥೆಯು ಇಲ್ಲದ ಕಾರಣ ಇದನ್ನು ಗಜಶಾಲೆ ಎಂದು ಕರೆಯಲು ಕೆಲವರು ಒಪ್ಪುವುದಿಲ್ಲ. ಆದರೆ ಕೊಠಡಿಯ ಮೇಲಿಂದ ಕಬ್ಬಿಣದ ಸರಪಳಿಯನ್ನು ತೂಗಿ ಬಿಟ್ಟು ಅದರಿಂದ ಆನೆಗಳನ್ನು ಕಟ್ಟುತ್ತಿದ್ದರು ಎಂಬ ರಜಾಕನ ಹೇಳಿಕೆಯನ್ನು ಗಮನಿಸಿದರೆ ಇದು ಗಜಶಾಲೆಯೇ ಇದ್ದಿರಬೇಕೆನಿಸುತ್ತದೆ. ಆದರೆ ರಜಾಕನು ಗಜಶಾಲೆಯನ್ನು ದಂಡನಾಯಕನ ಗೃಹದ ಮುಂದಿದ್ದಂತೆ ಸೂಚಿಸಿರುವುದನ್ನು ಕಾಣಬಹುದು.

ಮುಸ್ಲಿಂ ವಾಸ್ತುಶೈಲಿಯ ಈ ಗಜಶಾಲೆ ಪ್ರತಿಯೊಂದು ಕೊಠಡಿಗಳಿಗೂ ಕಮಾನಿನಾಕಾರದ ಬಾಗಿಲನ್ನು ಅಳವಡಿಸಿದ್ದು ಇವು ಸರಳವಾಗಿವೆ. ಗಜಶಾಲೆಯ ಒಂದು ಕೊಠಡಿಯಿಂದ ಇನ್ನೊಂದು ಕೊಠಡಿಗೆ ಹೋಗಲು ಕಮಾನಿನಾಕಾರದ ಬಾಗಿಲುಗಳಿವೆ. ಅಲ್ಲದ ಗಜಶಾಲೆಯ ಮೇಲ್ಭಾಗಕ್ಕೆ ಹೋಗಲು ಮೆಟ್ಟಿಲುಗಳ ವ್ಯವಸ್ಥೆ ಇದೆ. ಗಜಶಾಲೆಯ ಬಾಗಿಲುಗಳ ಪಕ್ಕದಲ್ಲಿ ಕಮಾನಿನಾಕಾರದ ಗೂಡುಗಳನ್ನು ಕಾಣಬಹುದಾಗಿದೆ. ಈ ಕಟ್ಟಡದ ಮೇಲ್ಛಾವಣಿಯ ಮೇಲ್ಭಾಗದಲ್ಲಿ ವಿವಿಧ ಆಕಾರದ ಗುಮ್ಮಟಗಳನ್ನು ಕಾಣಬಹುದಾಗಿದೆ. ಈ ಕಟ್ಟಡ ಮಧ್ಯದ ಕೊಠಡಿಯ ಮೇಲ್ಭಾಗದಲ್ಲಿ ಗೋಪುರವನ್ನು ಕಾಣಬಹುದಾಗಿದೆ. ಆದರೆ ಈ ಗೋಪುರ ಸ್ವಲ್ಪ ಹಾಳಾಗಿರುವುದನ್ನು ಕಾಣುತ್ತೇವೆ.

### ೫. ಕಾವಲುಗಾರ ಗೋಪುರಗಳು

ಇದು ಪೂರ್ಣ ಇಂಡೋ–ಇಸ್ಲಾಮಿಕ್ ಶೈಲಿಯ ಕಟ್ಟಡವಾಗಿದೆ. ರಾಣಿಯರ ಅನಂತಪುರದ ಪಕ್ಕದಲ್ಲಿ ಕಾವಲಿಗಾಗಿ ನಿರ್ಮಿಸುವ ಗೋಪುರಗಳನ್ನು ಕಾಣಬಹುದು ಇವು ಕೋಟೆಯ ೪ ಭಾಗದಲ್ಲೂ ಸಹ ಇದ್ದು ಅಷ್ಟಕೋನಾಕೃತಿಯಲ್ಲಿ ನಿರ್ಮಿಸಲ್ಪಟ್ಟಿವೆ. ಇಟ್ಟಿಗೆ ಮತ್ತು ಗಾರೆಯಿಂದ ಇವುಗಳನ್ನು ಬಹುಭದ್ರವಾಗಿ ಕಟ್ಟಿರುತ್ತಾರೆ. ಈ ಗೋಪುರದ ಮೇಲ್ಭಾಗದಲ್ಲಿ ಚಿಕ್ಕದಾದ ಕೊಠಡಿಗಳನ್ನು ನಿರ್ಮಿಸಿದ್ದು, ಅವು ಕಮಾನಿನಾಕಾರ ವಾಗಿದ್ದವು.

### ೬. ಸ್ತ್ರೀ ಕಾವಲುಗಾರರ ನಿವಾಸಗಳು

ರಾಣಿ ನಿವಾಸ ಎಂದು ಹೇಳಲಾಗಿರುವ ಪ್ರಮುಖ ಕಟ್ಟಡದ ಸಮೀಪದಲ್ಲಿಯೇ ಸ್ತ್ರೀ ಕಾವಲುಗಾರರ ಮನೆಗಳೆಂದು ಹೇಳಲಾದ ಕಟ್ಟಡಗಳಿವೆ. ಪೂರ್ವಾಭಿಮುಖವಾಗಿರುವ ದ್ವಾರವನ್ನು ಹೊರತುಪಡಿಸಿ ಇತರ ಯಾವುದೇ ಬಾಗಿಲುಗಳಾಗಲೀ ಇದಕ್ಕಿಲ್ಲ. ಅಷ್ಟೇನೂ ಎತ್ತರವಿಲ್ಲದ ಈ ಕಟ್ಟಡದ ಛಾವಣಿಯು ಸಮತಟ್ಟಾಗಿದೆ. ಒಳಾಂಗಣದ ನಡುವೆ ಆಯತಾಕಾರದ ಭಾಗವಿದ್ದು ೪ ಕಡೆ ಕಂಬಗಳಿವೆ. ಕಮಾನುಗಳು ಹೊಮ್ಮಿದಂತೆ ಕಾಣುತ್ತವೆ. ಈ ಕಮಾನುಗಳು, ಕಂಬಗಳು, ಮೊಗಶಾಲೆಯನ್ನು ಸಣ್ಣ ಸಣ್ಣ ಭಾಗಗಳಾಗಿ ವಿಂಗಡಿಸಿದೆ. ಒಂದೊಂದು ಭಾಗದ ಮೇಲೂ ಗುಮ್ಮಟಾಕಾರದ ಛಾವಣಿ ಇದೆ. ಈ ಗುಮ್ಮಟಗಳು ಅಷ್ಟಕೋನ ಅಥವಾ ಕಮಾನಿನಂತೆ ಬಾಗಿದಾಕೃತಿಯು ಕಂಬಗಳ ಮೇಲಿಂದ ಪತ್ರ ವಿನ್ಯಾಸದ ಕಮಾನುಗಳು ಮಧ್ಯದ ಆಯತಾಕಾರದ ಛಾವಣಿ ಆವರಿಸಿದೆ. ಈ ಕಟ್ಟಡದ ಉಪಯೋಗ ಎಂತಹದಾಗಿತ್ತೆಂದು ಹೇಳಲಾಗಿದ್ದು ಸ್ತ್ರೀ ಕಾವಲುಗಾರರ ವಾಸಸ್ಥಾನವೆಂದು ಪ್ರತೀತಿಯಿದೆ. ಗಾಳಿ, ಬೆಳಕುಗಳಿಲ್ಲದ ಇದು ವಾಸಕ್ಕೆ ಯೋಗ್ಯವಾಗಿಲ್ಲ ವಾಗಿದ್ದು, ಬಹುಶಃ ಇದೊಂದು ಉಗ್ರಾಣವೆಂದು ನಂಬಲಾಗಿದೆ.

### ೭. ಕೋಟೆಯಲ್ಲಿನ ಕಟ್ಟಡಗಳು

ಅರಮನೆಯ ತಳಪಾಯ: ಸಿಂಹಾಸನ ದಿಬ್ಬದ ಪಶ್ಚಿಮಕ್ಕೆ ಮತ್ತೊಂದು ಶೃಂಗಾರವಾದ ಹಾಳುಬಿದ್ದ ಅರಮನೆಯನ್ನು ಕಾಣಬಹುದು. ಇದು ರಾಜನ ದರ್ಶನಾಗೃಹದ ಉತ್ತರಕ್ಕಿದ್ದು ರಾಮಮಂದಿರಕ್ಕೆ ಸಂಪರ್ಕವನ್ನು ತಂದಿದೆ. ಇದು ಕಲ್ಲಿನಿಂದಲೇ ಕಟ್ಟಲ್ಪಟ್ಟಿದೆ. ಗೋಡೆಗಳು ಮರದ ಕಂಬಗಳನ್ನು ಒಳಗೊಂಡಿದ್ದು ಇಟ್ಟಿಗೆ ಮತ್ತು ಗಾರೆಯಿಂದ ಕಟ್ಟಲ್ಪಟ್ಟಿದೆ. ಗೋಡೆಗಳು ಮೇಲ್ಛಾವಣಿಯ ಎರಡು ಹಂತಗಳಿಂದ ಕೂಡಿದೆ. ಇದನ್ನು ಮೊದಲು ಕಂಡುಹಿಡಿದು ಸುತ್ತಮುತ್ತಲಿನ ಗಿಡಮರಗಳನ್ನು ಸ್ವಚ್ಛ ಮಾಡಿದಾಗ ಇಟ್ಟಿಗೆ ಮತ್ತು ಗಾರೆಗಳಿಂದ ಕಟ್ಟಿದ ತಳಪಾಯದ ಅಥವಾ ಭಸ್ಮವಾದ ಅದಿಸ್ಥಾನ ಗೋಚರಿಸಿದವು. ಇದರ ತಳಪಾಯವು ೧೦ ಅಡಿಗಳಷ್ಟು ಎತ್ತರವಾಗಿದೆ. ಮುಖ್ಯದ್ವಾರವು ಉತ್ತರಕ್ಕಿದೆ. ಇದನ್ನು ದಸರಾದ ಕಾಲದಲ್ಲಿ ಉಪಯೋಗಿಸಲು ಯೋಗ್ಯವಾಗುವಂತೆ ಒಳಗಡೆ ದೊಡ್ಡದಾದ ಸಭಾಂಗಣವನ್ನು ವಿಂಗಡಿಸಲಾಗಿದೆ.

ಭೂಮಿಯ ಕೆಳಗಿನ ಹಂತಗಳು(ನೆಲಮಾಳಿಗೆ): ನೆಲಮಾಳಿಗೆಯ ಕೆಲವು ಕಟ್ಟಡಗಳಿರುವುದನ್ನು ಕಾಣಬಹುದು. ಇದು ಬಹುಶಃ ಮುಖ್ಯ ದೇವತೆಯ ಗುಡಿಯ ಸುತ್ತಲೂ ನಿರ್ಮಿಸಿದ ಸಣ್ಣ ಕೊಠಡಿ ಎನ್ನಬಹುದು. ಇದು ಚಚ್ಚೌಕವಾಗಿದ್ದು, ಇದರ ದ್ವಾರವು ಪೂರ್ವಕ್ಕಿದೆ. ದಕ್ಷಿಣ ಭಾಗಕ್ಕೆ ಸಮನಾದ ೪ ಮೆಟ್ಟಿಲುಗಳಿವೆ. ೪ ಕಂಬಗಳು ಮೇಲ್ಛಾವಣಿ ಆಸರೆಯಾಗಿವೆ. ಒಳಭಾಗವೆಲ್ಲವೂ ಮಣ್ಣಿನಿಂದ ಆವೃತವಾಗಿದೆ. ಇಂತಹ ಸಣ್ಣ ಸಣ್ಣ ಕೊಠಡಿಗಳಲ್ಲಿ ದೇವತೆಗಳನ್ನು ಧಾರ್ಮಿಕ ಭಾವನೆಯಿಂದ ನಿರ್ಮಿಸಿದ್ದು, ಇತರ ದೇವತೆಗಳಂತೆ ಇವು ಧಾರ್ಮಿಕತೆಯಲ್ಲಿ ಔನ್ನತ್ಯ ಪಡೆದುಕೊಂಡಿದ್ದವು ಎಂಬುದನ್ನು ಗುರುತಿಸಬಹುದಾಗಿದೆ.

ರಾಜನ ದರ್ಶನ ಗೃಹಗಳು: ಈ ದೊಡ್ಡದಾದ ಕಟ್ಟಡದ ರಚನೆ ಮಹಾನವಮಿ ದಿಬ್ಬದ ಪೂರ್ವಕ್ಕೆ ಸುಮಾರು ೧೩೭ ಮೀಟರ್ ಅಂತರದಲ್ಲಿದೆ. ಇದಕ್ಕೆ ಮುಖ್ಯ ಪ್ರವೇಶವು ಉತ್ತರಕ್ಕಿದೆ. ಮಂಟಪಕ್ಕೆ ಅಂಗಳವೂ ಸಹ ಇದೆ. ಇದು ೮ ಸಾಲಿನ ಕಂಬಗಳಿಂದ ಮತ್ತು ಪ್ರತಿಯೊಂದು ಸಾಲು ೧೦ ಕಂಬಗಳಿಂದ ಕೂಡಿದ ಮುಖಮಂಟಪವನ್ನು ಹೊಂದಿದೆ. ಈ ಕಂಬಗಳನ್ನು ನೋಡಿದಾಗ ಶೃಂಗರಿಸಿದ ಕಂಬಗಳೆಂಬ ಅಭಿಪ್ರಾಯ ಮೂಡುತ್ತದೆಯ ಬಹುಶಃ ಇಂತಹ ವಿನ್ಯಾಸವನ್ನು ನಾವು ಇನ್ನಾವುದೇ ಕಟ್ಟಡಗಳಲ್ಲಿ ಕಾಣುವುದಿಲ್ಲ. ಆದ್ದರಿಂದಲೇ ಅಬ್ದುಲ್ ರಜಾಕ್ ಇದನ್ನು ರಾಜರ ವೇದಿಕೆಗಳು ಅಥವಾ ದರ್ಶನ ಸ್ಥಳಗಳೆಂಬುದಾಗಿ ಕರೆದಿದ್ದಾನೆ. ಇವು ಸಾಂಸ್ಕಾರಿಕ ಕಟ್ಟಡಗಳಲ್ಲಿ ಮಾನ್ಯತೆಯನ್ನು ಪಡೆದುಕೊಂಡಿವೆ. ಇದು ಮೇಲ್ಭಾಗದಲ್ಲಿ

ಮರ ಕಂಬಗಳಿಂದ ಕೂಡಿದ್ದು, ಕೆಲವು ಹಂತಗಳುಳ್ಳ ದರ್ಬಾರುಗಳನ್ನು ಹೊಂದಿದ್ದು ಮಹಮದೀಯರ ದಾಳಿಯಿಂದ ನಾವು ಹಾಳಾಗಿರಬಹುದೆಂದು ನಂಬಲಾಗಿದೆ.

ಸೂಳೆ ಬಜಾರ್: ವಿಜಯನಗರ ಅರಸರು ವೇಶ್ಯಾವೃತ್ತಿಗೆ ಹೆಚ್ಚಿನ ಪ್ರಾಶಸ್ತ್ಯ ಕೊಟ್ಟಿದ್ದರಿಂದ ಇಂತಹ ವೇಶ್ಯೆಯರ ಒಂದು ಬೀದಿಯೇ ಇದ್ದಿತು. ಇದು ನದಿಯ ದಡದಲ್ಲಿದ್ದು ಇದು ಅಚ್ಯುತ ದೇವಾಲಯದವರೆವಿಗೂ ಮುಂದುವರೆದಿದ್ದು ಹಾಗೂ ಉತ್ತರ ದಕ್ಷಿಣವಾಗಿಯೂ ಮುಂದುವರಿದಿತ್ತು. ವಾರ್ಷಿಕ ಹಬ್ಬ ಮತ್ತು ಉತ್ಸವದಲ್ಲಿ ಈ ಬೀದಿಯು ತೀರಾ ಜನಸಂಪರ್ಕದಿಂದ ಕೂಡಿರುತ್ತಿತ್ತು. ಪ್ರತಿಯೊಂದು ಸ್ತ್ರೀಗೂ ಸಹ ಪ್ರತ್ಯೇಕ ಕೊಠಡಿಗಳು ಇರುತ್ತಿದ್ದು ಅವರ ಸ್ನಾನ ಗೃಹಗಳು ಕೂಡ ಸೂಳೆ ಬಜಾರಿನಲ್ಲೇ ಇದ್ದವು. ಮಹಮದೀಯರ ದಾಳಿಗೆ ತುತ್ತಾಗಿ ಈಗ ಅವಶೇಷವಾಗಿ ಉಳಿದಿವೆ.

### ೮. ರಕ್ಷಣಾತ್ಮಕ ಕಟ್ಟಡಗಳು

ರಕ್ಷಣಾತ್ಮಕ ಕಟ್ಟಡಗಳಲ್ಲಿ ಮುಖ್ಯವಾಗಿ ಕೋಟೆ, ಡಣಾಯಕರ ಕೋಠಡಿ, ನಿರೀಕ್ಷಣಾ ಗೋಪುರಗಳು, ಆನೆಯ ಲಾಯಾ ಮೊದಲಾದ ಕಟ್ಟಡಗಳಿದ್ದು, ಇವುಗಳೆಲ್ಲಾ ಇಂಡೊ-ಇಸ್ಲಾಮಿಕ್ ಲಕ್ಷಣಗಳನ್ನು ಹೊಂದಿದ್ದು ವಿಶೇಷವಾಗಿದೆ.[೯] ಹೀಗೆ ವಿಜಯನಗರದ ವಾಸ್ತುಶಿಲ್ಪ ಕಲೆಯು ಗುಡಿ-ಗೋಪುರಗಳಿಂದ, ಅರಮನೆಗಳಿಂದ ಅತ್ಯಂತ ಶ್ರೀಮಂತವಾಗಿದ್ದು ಉನ್ನತ ಮಟ್ಟದಲ್ಲಿವೆ. ಇದೇ ರೀತಿ ಬಹಮನಿ ಸಾಮ್ರಾಜ್ಯದಲ್ಲಿ ಇಸ್ಲಾಮಿಕ್ ಕಟ್ಟಡಗಳಾದ ಕೋಟೆಗಳು, ಮಸೀದಿಗಳು, ದರ್ಗಾಗಳು, ಅರಮನೆಗಳು ಇಸ್ಲಾಮಿಕ್ ಶೈಲಿಯನ್ನು ಹೊಂದಿದ್ದು, ಸುಂದರವಾಗಿ ನಿರ್ಮಾಣಗೊಂಡಿವೆ. ಒಟ್ಟಿನಲ್ಲಿ ಹೇಳುವುದಾದರೆ ಒಂದೇ ಕಾಲದಲ್ಲಿ ಇದ್ದಂತಹ ವಿಜಯನಗರ ಮತ್ತು ಬಹಮನಿ ಸಾಮ್ರಾಜ್ಯಗಳೆಡರಲ್ಲೂ ಹಿಂದೂ ಹಾಗೂ ಮುಸ್ಲಿಂ ಸಂಸ್ಕೃತಿಗೆ ಸೇರಿದಂತಹ ಸುಂದರವಾದ ಕಲೆ ಮತ್ತು ವಾಸ್ತುಶಿಲ್ಪಗಳು ರಚಿಸಲ್ಪಟ್ಟವೆಂದು ಹೇಳಬಹುದು.

### ಸಮಾರೋಪ

ದಕ್ಷಿಣ ಭಾರತದಲ್ಲಿ ಉಗಮಿಸಿದ ಎರಡು ಬೃಹತ್ ಹಿಂದೂ ಮತ್ತು ಮುಸ್ಲಿಂ ಸಾಮ್ರಾಜ್ಯಗಳಾದ ವಿಜಯನಗರ ಮತ್ತು ಬಹಮನಿ ಅನೇಕ ಸಾಮಾಜಿಕ ಮತ್ತು ಆರ್ಥಿಕ ಸಂಬಂಧ ಹೊಂದಿರುವುದನ್ನು ನಾವು ಇತಿಹಾಸದಿಂದ ಗಮನಿಸಬಹುದಾಗಿದೆ. ಧಾರ್ಮಿಕ ವಿಚಾರಗಳಲ್ಲಿ ಎರಡು ರಾಜ್ಯಗಳ ಅರಸರು ಸನಾತನ ಧರ್ಮಗಳ ಪೋಷಕರಾಗಿರುವುದನ್ನು ನಾವು ಕಾಣುತ್ತೇವೆ. ಎರಡೂ ರಾಜ್ಯಗಳಲ್ಲಿ ಚತುರ್ವರ್ಣಗಳ ಮೇಲೆ ಸಮಾಜ ನೆಲೆಸಿರುವುದು ಕಂಡುಬರುತ್ತದೆ. ಹಿಂದೂಗಳಂತೆ ಮುಸ್ಲಿಂರಲ್ಲಿಯೂ ಸಹ ಜಾತಿ ವರ್ಗೀಕರಣವಾಗಿರುವುದು ಕಂಡುಬರುತ್ತದೆ. ಅದೇ ರೀತಿ ಹಿಂದೂ-ಮುಸ್ಲಿಂ ಜನಾಂಗೀಯ ಮಿಶ್ರಣ ವಾಗಿರುವುದೂ ಕಂಡುಬರುತ್ತದೆ. ಎರಡೂ ರಾಜ್ಯಗಳಲ್ಲಿಯೂ ಗುಲಾಮಗಿರಿ ಪದ್ಧತಿಯು ಜಾರಿ ಯಲ್ಲಿರುವುದನ್ನು ನಾವು ಕಾಣಬಹುದು.

ಎರಡೂ ರಾಜ್ಯಗಳ ಅರಸರು ಕಲೆಗೆ ಪ್ರೋತ್ಸಾಹ ನೀಡುವವರಾಗಿದ್ದು, ಪಂಡಿತರು ಮತ್ತು ವಿದ್ವಾಂಸರಿಗೆ ಆಶ್ರಯದಾತರಾಗಿದ್ದರು. ಶ್ರೀಮಂತರು ಮತ್ತು ಅರಸರು ವೈಭವಯುತ ಜೀವನವನ್ನು ನಡೆಸಿರುವುದನ್ನು ನಾವು ತಿಳಿಯಬಹುದು. ಹಿಂದೂ ಮತ್ತು ಮುಸ್ಲಿಂ ಸಮಾಜಗಳೆರಡರಲ್ಲಿಯೂ ಸ್ತ್ರೀಯರಿಗೆ ಪ್ರತ್ಯೇಕ ಶಿಕ್ಷಣ ವ್ಯವಸ್ಥೆ ಇತ್ತೆಂದು ತಿಳಿಯುತ್ತದೆ. ವಿಜಯನಗರ ರಾಜ್ಯದಲ್ಲಿ ಭಕ್ತಿ ಪಂಥವು ಪಸರಿಸಿದ್ದರೆ, ಬಹಮನಿ ರಾಜ್ಯದಲ್ಲಿ ಸೂಫಿ ಪಂಥವು ಪಸರಿಸಿರುವುದನ್ನು ಕಾಣಬಹುದು. ಬಹಮನಿ ಮತ್ತು ವಿಜಯನಗರಗಳೆಡರಲ್ಲೂ ಹಿಂದೂ-ಮುಸ್ಲಿಂ ಐಕ್ಯತೆಯನ್ನು ಕಾಣಬಹುದು.

ಆರ್ಥಿಕವಾಗಿ ವಿಜಯನಗರ ಸಾಮ್ರಾಜ್ಯವು ಬಹಮನಿಗಿಂತ ಉನ್ನತ ಸ್ಥಿತಿಯಲ್ಲಿದ್ದು, ಮಧ್ಯಮ ವರ್ಗದವರು ಸಾಧಾರಣ ಜೀವನ ನಡೆಸುತ್ತಿದ್ದು, ಕೆಳ ವರ್ಗದವರು ಅರಸರ ಮತ್ತು ಸುಲ್ತಾನರ ಆಶ್ರಯ ಪಡೆದಿರುವುದನ್ನು ಕಾಣುತ್ತೇವೆ. ಎರಡೂ ರಾಜ್ಯಗಳು ಅನೇಕ ಬಂದರುಗಳನ್ನು ಹೊಂದಿದ್ದು ಬೇರೆ ದೇಶಗಳೊಂದಿಗೆ ವ್ಯಾಪಾರ ವಹಿವಾಟುಗಳನ್ನು ನಡೆಸಿರುವುದನ್ನು ವಿದೇಶಿ ಬರಹಗಳಿಂದ ತಿಳಿಯಬಹುದು. ಕೃಷಿಯು ಗ್ರಾಮೀಣ ಅರ್ಥವ್ಯವಸ್ಥೆಯ ಜೀವನಾಡಿಯಾಗಿ ಆರ್ಥಿಕ ಅಭಿವೃದ್ಧಿಗೆ ಕಾರಣವಾಗಿರುವುದು ಕಂಡುಬರುತ್ತದೆ. ನಾಣ್ಯಗಳ ಪರಂಪರೆ ಜಾರಿಯಲ್ಲಿದ್ದು ಉತ್ತಮ ಹಾಗೂ ಸುಂದರ ನಾಣ್ಯಗಳು ಚಲಾವಣೆಯಲ್ಲಿದ್ದುದನ್ನು ನಾವು ಗಮನಿಸಬಹುದಾಗಿದೆ. ಎರಡೂ ರಾಜ್ಯಗಳಲ್ಲಿ ತಾಮ್ರ, ಬೆಳ್ಳಿ ಮತ್ತು ಚಿನ್ನದ ನಾಣ್ಯಗಳು ಚಲಾವಣೆಯಲ್ಲಿದ್ದವೆಂದು ಚರಿತ್ರೆ ಹೇಳುತ್ತದೆ. ಈ ರೀತಿಯಾಗಿ ಎಲ್ಲಾ ಆರ್ಥಿಕ ಮತ್ತು ಸಾಮಾಜಿಕ ವಿಷಯಗಳಲ್ಲಿ ಎರಡೂ ರಾಜ್ಯಗಳ ನಡುವೆ ಸೂಕ್ಷ್ಮವಾದ ಸಾಮರಸ್ಯವಿರುವುದನ್ನು ನಾವು ಕಾಣುತ್ತೇವೆ.

ರಾಜಕೀಯವಾಗಿ ಗಮನಿಸಿದಾಗ ಬಹುತೇಕವಾಗಿ ವಿಜಯನಗರ ಹಾಗೂ ಬಹಮನಿ ಅರಸರ ನಡುವೆ ಘರ್ಷಣೆಯನ್ನೇ ಕಾಣುತ್ತೇವೆ. ವಿಜಯನಗರದ ರಾಜಕೀಯ ಸಂಬಂಧಗಳನ್ನು ಗಟ್ಟಿಗೊಳಿಸುವ ಸಲುವಾಗಿ ದೇವರಾಯನು ಬಹಮನಿ ಸುಲ್ತಾನರೊಂದಿಗೆ ವೈವಾಹಿಕ ಸಂಬಂಧಗಳನ್ನು ಬೆಳೆಸಿರುವುದನ್ನು ಕಾಣುತ್ತೇವೆ. ಅದಾಗ್ಯೂ ಸಹ ವಿಜಯನಗರ ಮತ್ತು ಬಹಮನಿಯರ ನಡುವೆ ನಿರಂತರ ಕದನಗಳು ನಡೆದು ಅನೇಕ ಜೀವಗಳ ಬಲಿದಾನವಾಗಿದ್ದು ತಿಳಿದುಬರುತ್ತದೆ.

ಧಾರ್ಮಿಕವಾಗಿ ಪರಿಶೀಲಿಸಿದಾಗ ಎರಡೂ ರಾಜ್ಯಗಳಲ್ಲಿ ಭಕ್ತಿ ಸಂಚಲನವಾಗಿರುವುದನ್ನು ಗಮನಿಸಬಹುದು. ಭಕ್ತಿ ಮತ್ತು ಸೂಫಿ ಪಂಥಗಳು ಪ್ರವರ್ಧಮಾನಕ್ಕೆ ಬಂದು ಹೊಸ ಸಾಮಾಜಿಕ ಸಂಚಲನಕ್ಕೆ ನಾಂದಿಯಾದವು ಎಂದು ಹೇಳಬಹುದು. ಇದಕ್ಕೆ ಸಾಕ್ಷಿಯಾಗಿ ಹಿಂದೂ-ಮುಸ್ಲಿಂ ಸಾಮರಸ್ಯದ ಅನೇಕ ಕಟ್ಟಡಗಳು ರಚನೆಯಾಗಿದ್ದು ಇಂದಿಗೂ ಸಾಕ್ಷಿಯಾಗಿರುವುದನ್ನು ನಾವು ಪ್ರಸ್ತುತ ಅಧ್ಯಾಯದಲ್ಲಿ ಕಾಣಬಹುದು.

**ಕೊನೆ ಟಿಪ್ಪಣಿಗಳು**

೧. ಗುರುಮೂರ್ತಿ ಪೆಂಡಕೂರ್(ಅನು), ಎನ್. ವೆಂಕಟರಮಣಯ್ಯ(ಮೂಲ), ವಿಜಯನಗರ ಚರಿತ್ರೆ, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು, ೨೦೧೦, ಪುಟ ೮೫-೮೬

೨. ವಿ.ಆರ್.ಹನುಮಂತರಾಯ,' ವಿಜಯನಗರ ಸಾಮ್ರಾಜ್ಯ ಚರಿತ್ರೆ'(The History of Vijayanagar Empire), ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೮. ಪುಟ ೭೦-೭೧.

೩. ಎನ್. ವೆಂಕಟರಮಣಯ್ಯ(ಮೂಲ), ಎನ್. ಬಾಲಸುಬ್ರಹ್ಮಣ್ಯ(ಅನು), ದೆಹಲಿ ಸುಲ್ತಾನರ ಆದಿಪತ್ಯ, ಭಾಗ ೧, ಸಂಪುಟ ೧೧, ಭಾರತೀಯ ವಿದ್ಯಾಭವನ, ಬೆಂಗಳೂರು, ೨೦೦೧, ಪು.೪೨೨-೪೨೩

೪. ಅಮರೇಶ ಯತಗಲ್, 'ಇತಿಹಾಸ ಇಂಚರ'-ವಿಜಯನಗರ ಕಾಲದ ದೋಅಬ್ ಪ್ರದೇಶ-೧೨, ಅದಿತಿ ಪ್ರಕಾಶನ, ಪುಟ ೯೮-೯೯.

೫. ಬಿದರಿ ಚಂದ್ರಭಾಗ., ಹೈದ್ರಾಬಾದ್ ಕರ್ನಾಟಕ ಸಾಹಿತ್ಯದಲ್ಲಿ ಮಹಿಳಾ ಬದುಕು ಪ್ರತಿನಿಧೀಕರಣ ಪಿಎಚ್.ಡಿ. ಅಪ್ರಕಟಿತ ಪ್ರಬಂಧ, ಪುಟ ೧೧

೬. ಪಿ.ಎಂ. ಜೋಷಿ(ಮೂಲ), ವಿಶ್ವನಾಥ(ಅನು), ದೆಹಲಿ ಸುಲ್ತಾನರ ಆದಿಪತ್ಯ, ಭಾಗ ೧, ಸಂಪುಟ ೧೧, ಭಾರತಿ ವಿದ್ಯಾಭವನ, ಬೆಂಗಳೂರು, ೨೦೦೧, ಪುಟ ೩೮೭-೩೮೮.

೭. ಗುರುಮೂರ್ತಿ ಪೆಂಡಕೂರ್(ಅನು), ಎನ್. ವೆಂಕಟರಮಣಯ್ಯ(ಮೂಲ), ವಿಜಯನಗರ ಚರಿತ್ರೆ, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು, ೨೦೧೦, ಪು. ೮೭-೯೦

೮. James Dunning Baker Gribble, Mrs. Mary(Gribble) Pendlebury(1806) A History of Deccan, Luzac and Company, Vol,10, 1924, p.83-85.

೯. ಗುರುಮೂರ್ತಿ ಪೆಂಡಕೂರ್(ಅನು), ಎನ್. ವೆಂಕಟರಮಣಯ್ಯ(ಮೂಲ), ವಿಜಯನಗರ ಚರಿತ್ರೆ, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು, ೨೦೧೦, ಪು-೯೧-೯೩

೧೦. ಎಸ್.ವೈ. ಸೋಮಶೇಖರ್., 'ವಿಜಯನಗರ ಕಾಲದ ಸೈನ್ಯವ್ಯವಸ್ಥೆ ಮತ್ತು ಯುದ್ಧನೀತಿ' ಸಂಚಿಕೆ ಪ್ರಕಾಶನ, ಹೊಸಪೇಟೆ, ೨೦೦೯. ಪುಟ ೧೦೯-೧೧೦.

೧೧. Robert Sewell, A Forgotten Empire Vijayanagar, A Contribution to the History of India. Asian Educational services, New Delhi, 2000, p.71.

೧೨. Robert Sewell, A Forgotten Empire Vijayanagar, A Contribution to the History of India. Asian Educational services, New Delhi, 2000, p.71.

೧೩. Robert Sewell, A Forgotten Empire, Vijayanagar, A Contribution to the History of India. Asian Educational services, New Delhi, 2000, p.73-74.

೧೪. Robert Sewell., A Forgotten Empire, Vijayanagar, A Contribution to the History of India. Asian Educational services, New Delhi, 2000, p.75.

೧೫. Robert Sewell., A Forgotten Empire, Vijayanagar, A Contribution to the History of India. Asian Educational services, New Delhi, 2000, p.75-77.

೧೬. ಗುರುಮೂರ್ತಿ ಪೆಂಡಕೂರ್(ಅನು), ಎನ್. ವೆಂಕಟರಮಣಯ್ಯ(ಮೂಲ), ವಿಜಯನಗರ ಚರಿತ್ರೆ, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು, ೨೦೧೦, ಪು. ೯೪-೯೫

೧೭. ಗುರುಮೂರ್ತಿ ಪೆಂಡಕೂರ್(ಅನು), ಎನ್. ವೆಂಕಟರಮಣಯ್ಯ(ಮೂಲ), ವಿಜಯನಗರ ಚರಿತ್ರೆ, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು, ೨೦೧೦, ಪು. ೯೫-೯೬

೧೮. ಜಿ.ಎನ್. ದೀಕ್ಷಿತ್, ಬಿ.ರಾಮಸ್ವಾಮಿ, ಭಾರ್ಗವಿ ಶಿವಯ, ಶ್ರೀಕೃಷ್ಣದೇವರಾಯನ ಜೀವನ ಮತ್ತು ಸಾಧನೆಗಳು, ಪ್ರಾಚ್ಯವಸ್ತು ಸಂಗ್ರಹಾಲಯ, ಮೈಸೂರು, ೧೯೯೭, ಪುಟ ೨೫-೨೬.

೧೯. ಎಮ್.ಬಿ. ಪಾಟೀಲ, ಗುಲ್ಬರ್ಗಾ ಜಿಲ್ಲೆ,ಭಾರತದ ಗ್ಯಾಸೆಟಿಯರ್ ಕರ್ನಾಟಕ ರಾಜ್ಯ, ೧೯೯೭, ಪುಟ ೫೮-೫೯.

೨೦. ಬಿ.ಮದ್ವಾಚಾರ್, ಮೊಗಲರ ಇಂಡಿಯಾ, ಪಿ.ಎ.ಎನ್. ಪಬ್ಲಿಕೇಶನ್ ಡಿಸ್ಟ್ರಿಬ್ಯೂಟರ್ಸ್, ಬೆಂಗಳೂರು-೨, ೧೯೮೧, ಪುಟ ೩೨-೩೩

೨೧. ಕೆ.ಎಸ್. ಶಿವಣ್ಣ(ಸಂ.ಸಂ.) ಮತ್ತು ಬಿ. ಷೇಕ್ ಅಲಿ(ಪ್ರ.ಸಂ), ಕರ್ನಾಟಕ ಚರಿತ್ರೆ, ಸಂಪುಟ ೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭, ಪು. ೨೪೨.

೨೨. Sailendra Nath Sen, Indian History and Culture, McMillan India Ltd., New Delhi, 2007, p.139

೨೩. Vipul Singh, Gita Shanmugavel and Jasmine Dhillon, Our Story So Far, Dorling Kindersley India Pvt. Ltd., New Delhi, 2009, pp. 32-34.

೨೪. Namadev Shri Jadhav, History and Culture of Bidar 1400 to 1948– A Study. Ph.D. Thesis in History, Gulbarga University, Gulbarga, pp.49-56.

೨೫. Ramananda Chatterjee, The Modern Review (A Monthly Review and Magazine), Kolkatta, p. 530.

೨೬. Mansel Longworth Dames, The Book of Duarte Barbosa, Asian Educational Services, New Delhi, 1989, p. 172-176.

೨೭. Kishori Saran Lal, Studies in Medieval Indian History, Ranjit Printers and Publishers, New Delhi, pp. 187-188.

೨೮. Raghunath Rai, Themes in Indian History, V.K. Indian Enterprises, New Delhi, 2007, P-154.

೨೯. Raghunath Rai, Themes in Indian History, V.K. Indian Enterprises, New Delhi, 2007, p-187.

೩೦. V.K.Agnihotri, Indian History, Allied Publishers Pvt.Ltd., Mumbai, 2015, p. B-164.

೩೧. ಕೆ.ಎಸ್. ಶಿವಣ್ಣ(ಸಂ.ಸಂ.) ಮತ್ತು ಬಿ. ಷೇಕ್ ಅಲಿ(ಪ್ರ.ಸಂ), ಕರ್ನಾಟಕ ಚರಿತ್ರೆ, ಸಂಪುಟ ೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೨೫೨–೨೫೩.

೩೨. ಕೆ.ಎಸ್. ಶಿವಣ್ಣ(ಸಂ.ಸಂ.) ಮತ್ತು ಬಿ. ಷೇಕ್ ಅಲಿ(ಪ್ರ.ಸಂ), ಕರ್ನಾಟಕ ಚರಿತ್ರೆ, ಸಂಪುಟ ೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭, ಪು. ೨೪೭.

೩೩. K.N.Chitnis, Socio-Economic History of Medieval India, Atlantic Publications, New Delhi, 2009, p-152-154.

೩೪. Christipher John Fuller, The Comphor Flame-Popular Hinduism and Society in India, Princeton University Press, Princeton, New Jersey, 2004, p-115-119.

೩೫. ಅರವಿಂದ ಮಾಲಗತ್ತಿ(ಸಂ), ಕನ್ನಡ ವಿಷಯ ವಿಶ್ವಕೋಶ, ಸಂಪುಟ–೧–೨, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು. ೨೦೦೫, ಪುಟ ೩೯೫.

೩೬. ಎನ್. ಚಿನ್ನಸ್ವಾಮಿ ಸೋಸಲೆ, 'ಸಾಮ್ರಾಜ್ಯ ಮತ್ತು ಸಂಸ್ಥಾನ' ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪, ಪುಟ ೧೪೧.

೩೭. Ragunath Rai, Themes inIndian History, V.K. Indian Enterprises, New Delhi, 2007, p.187.

೩೮. Michael C. Howard, Transnationalism in Ancient and Medieval Societies-The Role of Cross Border Trade and Travel, McFarland & Company Inc., Jefferson, North Carolina, 2012, p.189.

೩೯. Alexandra Mack, Spiritual City Imperial City-Pilgrimae to the Temples of Vijayanagara, Vedams books Pvt.Ltd., New Delhi, 2010, p-37-38.

೪೦. ಎನ್. ಚಿನ್ನಸ್ವಾಮಿ ಸೋಸಲೆ, 'ಸಾಮ್ರಾಜ್ಯ ಮತ್ತು ಸಂಸ್ಥಾನ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪, ಪುಟ–೪೦.

೪೧. ಕೆ.ಎಸ್. ಶಿವಣ್ಣ(ಸಂ.ಸಂ.) ಮತ್ತು ಬಿ. ಷೇಕ್ ಅಲಿ(ಪ್ರ.ಸಂ), ಕರ್ನಾಟಕ ಚರಿತ್ರೆ, ಸಂಪುಟ ೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭, ಪುಟ ೨೨೯.

೪೨. Sailendra Nath Sen., Indian History and Culture, McMillan India Ltd, New Delhi, 2007, p-138-139.

೪೩. ಕೆ.ಎಸ್. ಶಿವಣ್ಣ(ಸಂ.ಸಂ.) ಮತ್ತು ಬಿ. ಷೇಕ್ ಅಲಿ(ಪ್ರ.ಸಂ), ಕರ್ನಾಟಕ ಚರಿತ್ರೆ, ಸಂಪುಟ ೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭, ಪುಟ ೨೩೦.

೪೪. ಜಿ.ಎಸ್. ದೀಕ್ಷಿತ್(ಮೂಲ), ಜಿ.ಎಸ್. ಶಿವರುದ್ರಪ್ಪ(ಅನು), ಸಾಮಾಜಿಕ ಮತ್ತು ಆರ್ಥಿಕ ಜೀವನ, ಕರ್ನಾಟಕ ಪರಂಪರೆ, ಸಂಪುಟ ೨, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೯೨, ಪುಟ ೧೦೯-೧೧೦

೪೫. ಎಸ್.ಸಿ. ನಂದಿಮಠ, ಕರ್ನಾಟಕದ ಧರ್ಮಗಳು ಕರ್ನಾಟಕ ಸರಕಾರ ಕನ್ನಡ ವಿಶ್ವಕನ್ನಡ ಸಮ್ಮೇಳನ ಸಾಹಿತ್ಯ ಮಾಲೆ, ಬೆಂಗಳೂರು-೧೯೮೩.ಪು-೨೫೩.೨೫೪.

೪೬. ಬಿ.ಅಬ್ದುಲ್ ಮನ್ನಾನ್, 'ವಿಜಯನಗರ ಪಟ್ಟಣದಲ್ಲಿ ಮುಸ್ಲಿಂ ಧರ್ಮ' ವಿಜಯನಗರ ಅಧ್ಯಯನ-೦೯, ೨೦೦೩, ಪುಟ ೧೧೦-೧೧೧.

೪೭. ಜಿ.ಎನ್. ದೀಕ್ಷಿತ್ ಮತ್ತು ಎಂ.ವಿ. ವಿಶ್ವೇಶ್ವರ, ಸಂಗಮ ಕಾಲದ ವಿಜಯನಗರ, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು, ೧೯೯೧, ಪುಟ ೧೭೨.

೪೮. Anna Liberia Dallapiccola, Anila Verghese., Sculpture at Vijayanagara Iconography and Style, 1998, p153.

೪೯. ಡಿ.ವಿ. ಪರಶಿವಮೂರ್ತಿ, ಕೃಷ್ಣದೇವರಾಯನ ಶಾಸನಗಳು, ಸಂಪುಟ ೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦, ಪುಟ ೩೧-೩೨.

೫೦. Om Gupta. Encyclopedia of India, Pakistan and Bangladesh, Isha Books, New Delhi, 2006, p.1306-1308.

೫೧. Anila Verghese, Religious Traditions at Vijayanagara As Revealed Through Its Monuments, New delhi1995, pp.134-135.

೫೨. Sonali, Progress of the Vijayanagar Empire in India. http:/www.historydiscussion, net.

೫೩. Robert Sewell, A Forgotten Empire. History of India. National Book Trust,New Delhi 2000, p.93-95.

೫೪. ರಹಮತ್ ತರೀಕೆರೆ, ಕರ್ನಾಟಕದ ಸೂಫಿಗಳು ಅಭಿನವ ಪ್ರಕಾಶನ, ಬೆಂಗಳೂರು, ೨೦೧೦, ಪು.೨೪-೩೦.

೫೫. Gist of NCERT Indian History, Kalinjar Publications New Delhi, 2014, p 36.

೫೬. History and Civics, The Bhakti and Sufi Movements Frank Bros & Co Publihsers Ltd, New Delhi, 2007, p.76.

೫೭. History and Civics, The Bhakti and Sufi Movements Frank Bros & Co Publihsers Ltd, New Delhi, 2007, p-81-82.

೫೮. Robert Sewell, A Forgotten Empire, History of India. National Book Trust,New Delhi, 2000, p.82-83.

೫೯. Vimala Angelina, History and Civics. Dorling Kindersley Indian Pvt.Ltd., 2007, p-61.

೬೦. ಎನ್. ವೆಂಕಟರಮಣಯ್ಯ(ಮೂಲ), ಎನ್. ಬಾಲಸುಬ್ರಹ್ಮಣ್ಯ(ಅನು), ದೆಹಲಿ ಸುಲ್ತಾನರ ಆಧಿಪತ್ಯ, ಭಾಗ ೧, ಸಂಪುಟ ೧೧, ಭಾರತೀಯ ವಿದ್ಯಾಭವನ, ಬೆಂಗಳೂರು, ಪುಟ ೪೭೯.

೬೧. ಕೆ. ಎಸ್. ಶಿವಣ್ಣ(ಸಂ.ಸಂ.) ಮತ್ತು ಬಿ. ಷೇಕ್ ಅಲಿ(ಪ್ರ.ಸಂ), ಕರ್ನಾಟಕ ಚರಿತ್ರೆ, ಸಂಪುಟ ೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭, ಪುಟ ೪೦೪.

೬೨. Farooqui Salma Ahmed, A Comprehensive History of Medieval India: Twelfth to the Mid-Eighteenth Century, Dorling Kindersley Indian Pvt.Ltd, p 116.

೬೩. Ganga Ram Garg, Encyclopedia of the Hindu World, Concept publishing Co., Vol.2, New Delhi, 1992, p.646.

೬೪. ಜಿ.ಆರ್. ರಂಗಸ್ವಾಮಯ್ಯ, ಬಿ. ಷೇಕ್‌ಅಲಿ, ದಕ್ಷಿಣ ಭಾರತದ ಇತಿಹಾಸ, ಚೇತನ ಬುಕ್ ಹೌಸ್, ಮೈಸೂರು,೨೦೦೧.ಪು.೩೨೩.೩೨೪.

೬೫. Journal of the Mysore University: Arts, Volume 59, Issue 1, p-65-66, 1966.

೬೬. Sujit Mukherjee, A Disctionary of Indian Literature. Orient Longman Limited, New Delhi, 1930, p.46.

೬೭. ಕೆ.ಎಲ್.ಎನ್.ಮೂರ್ತಿ,ಕರ್ನಾಟಕದ ಕಲೆ ಮತ್ತು ವಾಸ್ತುಶಿಲ್ಪ,ಪ್ರಸರಾಂಗ.ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೫, ಪು-೬೩.

೬೮. ಎಮ್.ಬಿ. ಪಾಟೀಲ್, ಗುಲ್ಬರ್ಗಾ ಜಿ, ಗ್ಯಾಜೆಟಿಯರ್,ಕರ್ನಾಟಕ ರಾಜ್ಯ, ೧೯೯೭, ಪು.೫೮-೫೯.

೬೯. K.A.Nilakanta Sastri, A History of South India from Pre-historic Times to the Fall of Vijayanagara(4th edition), Oxford University Press, Medrass, 1975, p-478.

೭೦. ಎಚ್ಚೆಸ್ಕೆ, ಅವಲೋಕನ 'ಕರ್ನಾಟಕ ಪರಂಪರೆ ಸಮೀಕ್ಷೆ' ವಿಶ್ವಕನ್ನಡ ಸಮ್ಮೇಳನ ಕನ್ನಡ ಮತ್ತು ಸಂಸ್ಕೃತಿ ನಿದೇಶನಾಲಯ, ಬೆಂಗಳೂರು, ೧೯೮೫, ಪುಟ ೧೯೨-೧೯

೭೧. ಕೆ.ಎಲ್.ಎನ್.ಮೂರ್ತಿ, ಕರ್ನಾಟಕದ ಕಲೆ ಮತ್ತು ವಾಸ್ತುಶಿಲ್ಪ, ಪ್ರಸರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೫, ಪು-೬೩.

೭೨. ವೈಶಾಲಿಭಾಯಿ ಬಿ ಕಾಂಬಳೆ, ಬೀದರ್ ಜಿಲ್ಲೆಯ ಚಿತ್ರಕಲೆ, ದೃಶ್ಯಕಲಾ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨, ಪುಟ ೧೦

೭೩. ಎಮ್.ಬಿ. ಪಾಟೀಲ್, ಗುಲ್ಬರ್ಗಾ ಜಿಲ್ಲೆ,ಭಾರತದ ಗ್ಯಾಸೆಟಿಯರ್ ಕರ್ನಾಟಕ ರಾಜ್ಯ, ೧೯೯೭, ಪುಟ ೧೩೨.

೭೪. http://www.india9show/Shah-Bazar-Masjid-43712, html

೭೫. ರು.ಮ. ಷಡಕ್ಷರಯ್ಯ ಮತ್ತು ಸಲ್ಲಾವುದ್ದೀನ್ ಮುನ್ಸಿ, ಗುಲ್ಬರ್ಗಾ ನಗರದಲ್ಲಿರುವ ಮುಸ್ಲಿಂ ಸ್ಮಾರಕಗಳು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ೨೦೦೭.

೭೬. T.V. Sivanandan, 609th Urs of Sufi saint begins today. The Hindu Daily Newspaper, September 22, 2013.

೭೭. George Michell, Mark Zebrowski: Architecture and Art of the Deccan Sultanates, Cambridge University Press, UK, 1999, p.86.

೭೮. George Michell, Mark Zebrowski: Architecture and Art of the Deccan Sultanates, Cambridge University Press, UK, 1999, p. 66-70.

೭೯. ರು.ಮ. ಷಡಕ್ಷರಯ್ಯ, ಗುಲ್ಬರ್ಗಾ ನಗರದಲ್ಲಿರುವ ಬಹಮನ್‌ಷಾಗಳ ಕಾಲದ ಇಸ್ಲಾಮಿಕ್ ಗೋರಿಗಳು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ೨೦೦೭, ಪುಟ ೫೧.

೮೦. ರು.ಮ. ಷಡಕ್ಷರಯ್ಯ, ಗುಲ್ಬರ್ಗಾ ನಗರದಲ್ಲಿರುವ ಬಹಮನ್ ಷಾಗಳ ಕಾಲದ ಇಸ್ಲಾಮಿಕ್ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ಗೋರಿಗಳು, ೨೦೦೭, ಪುಟ ೫೨.

೮೧. ರು.ಮ. ಷಡಕ್ಷರಯ್ಯ, ಗುಲ್ಬರ್ಗಾ ನಗರದಲ್ಲಿರುವ ಬಹಮನ್ ಷಾಗಳ ಕಾಲದ ಇಸ್ಲಾಮಿಕ್ ಗೋರಿಗಳು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ೨೦೦೭, ಪುಟ ೫೩.

೮೨. Percy Brown, Indian Architecture(Islamic Period), D.B.Taraporevala Sons and Co, Bombay, 1940.

೮೩. ಬೇಬಿ, ಬೀದರ್ ಕೋಟೆಯ ಐತಿಹ್ಯಗಳು, ಎಂ.ಫಿಲ್ ಅಪ್ರಕಟಿತ ಪ್ರಬಂಧ, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭, ಪು.೧೨೫.

೮೪. Mohan Lal Nigam and Anupam Bhatnagar, Romance of Hyderabad Culture, Deva Publications, Hyderabad, 1997, p.116.

೮೫. ಬಿ.ಎಂ. ಚಂದ್ರಶೇಖರಯ್ಯ, ಕರ್ನಾಟಕ ಸಾಂಸ್ಕೃತಿಕ ಇತಿಹಾಸ ಪರಂಪರೆ, ಸಿ.ವಿ.ಜಿ. ಪಬ್ಲಿಕೇಷನ್, ಬೆಂಗಳೂರು, ೨೦೦೫, ಪುಟ ೨೦೬.

೮೬. Joshi P.M., Economic &Social Conditions under the Bahmanis, History of the Medieval Deccan,Vol,I,Hyderabad, 1973, p.209.213.

೮೭. John M.Leiche and A.I.Pashkov, A History of Russian Economic Thought, University of California Press, Berkeley, California, 1964, P.89.

೮೮. Suryanath Kamath, A Concise History of Karnataka,Jupiter Book,MCC Publications,Bangalore, 1980, p.182.

೮೯. ಕೆ.ಎಲ್.ಎನ್. ಮೂರ್ತಿ, ಕರ್ನಾಟಕದ ಕಲೆ ಮತ್ತು ವಾಸ್ತುಶಿಲ್ಪ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೫, ಪು. ೪೦.

೯೦. ಕೆ.ಎಲ್.ಎನ್. ಮೂರ್ತಿ, ಕರ್ನಾಟಕದ ಕಲೆ ಮತ್ತು ವಾಸ್ತುಶಿಲ್ಪ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೫, ಪು.೪೦.

೯೧. ಎಚ್.ಎಸ್. ಗೋಪಾಲ್‌ರಾವ್, ಇತಿಹಾಸದ ಇಣುಕುನೋಟ,ಅನಂತ ಪ್ರಗತಿ ಎಂಟರ್‌ಪ್ರೈಸಸ್, ಬೆಂಗಳೂರು, ೨೦೦೭, ಪು–೩೪.

೯೨. ಎಮ್.ಎಸ್. ನಾಗರಾಜರಾವ್, ಕಂಡ ವಿಜಯನಗರ,ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ, ನಿರ್ದೇಶನಾಲಯ, ಬೆಂಗಳೂರು, ೧೯೯೮, ಪು.೩೨.

೯೩. ಕೆ.ಎಲ್.ಎನ್. ಮೂರ್ತಿ, ಕರ್ನಾಟಕದ ಕಲೆ ಮತ್ತು ವಾಸ್ತುಶಿಲ್ಪ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೫, ಪು. ೪೬.

೯೪. ಕೆ.ಎಲ್.ಎನ್. ಮೂರ್ತಿ, ಕರ್ನಾಟಕದ ಕಲೆ ಮತ್ತು ವಾಸ್ತುಶಿಲ್ಪ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೫, ಪು. ೪೪.

೯೫. ಕೆ.ಎಲ್.ಎನ್. ಮೂರ್ತಿ, ಕರ್ನಾಟಕದ ಕಲೆ ಮತ್ತು ವಾಸ್ತುಶಿಲ್ಪ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೫, ಪು. ೪೩.

೯೬. ಕೆ.ಎಲ್.ಎನ್. ಮೂರ್ತಿ, ಕರ್ನಾಟಕದ ಕಲೆ ಮತ್ತು ವಾಸ್ತುಶಿಲ್ಪ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೫, ಪು. ೫೦, ೫೧.

೯೭. ಕೆ.ಎಲ್.ಎನ್. ಮೂರ್ತಿ, ಕರ್ನಾಟಕದ ಕಲೆ ಮತ್ತು ವಾಸ್ತುಶಿಲ್ಪ,ಪ್ರಸರಾಂಗ.ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೫, ಪು. ೫೧.

೯೮. ಕೆ.ಎಲ್.ಎನ್. ಮೂರ್ತಿ, ಕರ್ನಾಟಕದ ಕಲೆ ಮತ್ತು ವಾಸ್ತುಶಿಲ್ಪ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೫, ಪು–೪೫, ೫೨, ೫೩.

## ಅಧ್ಯಾಯ-೦೬

# ಸಮಾರೋಪ

ಮಧ್ಯಕಾಲೀನ ಭಾರತದ ಚರಿತ್ರೆ ಕಾಲದಿಂದಲೂ ದಖ್ಖನ್ ಪ್ರದೇಶವು ಐತಿಹಾಸಿಕವಾಗಿ ಮಹತ್ವವನ್ನು ಪಡೆದುಕೊಂಡಿದೆ. ಬಹಮನಿ ಪ್ರದೇಶವನ್ನೂ ಒಳಗೊಂಡಂತೆ ಅನೇಕ ಲೇಖಕರು ಕೃತಿಗಳನ್ನು ರಚಿಸಿದ್ದಾರೆ. ಈ ಕೃತಿಗಳನ್ನು, ಚರಿತ್ರೆ ಸಂಶೋಧನ ಹಿನ್ನಲೆಯಲ್ಲಿ ನೋಡುವ ಉದ್ದೇಶದಿಂದ ಪ್ರಸ್ತುತ ಅಧ್ಯಯನವನ್ನು ಕೈಗೆತ್ತಿಕೊಳ್ಳುವುದು ಸಂಶೊಧಕನ ಪ್ರಯತ್ನವಾಗಿದೆ. ಇತ್ತೀಚಿನ ದಿನಗಳಲ್ಲಿ ಸ್ಥಳೀಯ ಚರಿತ್ರೆಯ ಅಧ್ಯಯನ ಹೆಚ್ಚು ಮಹತ್ವ ಪಡೆಯುತ್ತಿದೆ. ಇಂತಹ ಅಧ್ಯಯನ ನಡೆಸುವಲ್ಲಿ ಲಿಖಿತ ಮತ್ತು ಮೌಖಿಕ ಆಕರಗಳು ಸಹಕಾರಿಯಾಗಿವೆ. ಪ್ರತಿಯೊಂದು ಪ್ರದೇಶಕ್ಕೂ ತನ್ನದೇ ಆದ ಹಿನ್ನಲೆ ಮತ್ತು ಚರಿತ್ರೆ ಇದ್ದೇ ಇರುತ್ತದೆ. ಈ ಹಿನ್ನಲೆಯಲ್ಲಿ ದಖ್ಖನ್ ಬಹಮನಿ ಪ್ರದೇಶದ ಚರಿತ್ರೆ ನಿರ್ಮಾಣಗೊಂಡ ಬಗೆಯನ್ನು ಕುರಿತು ವಿವರಿಸಲಾಗಿದೆ. ಚರಿತ್ರೆ ಬರವಣಿಗೆ ಮತ್ತು ವಿಶ್ಲೇಷಣೆಗೆ ಸಂಬಂಧಪಟ್ಟಂತೆ ಅನೇಕ ಪಂಥಗಳು ಹುಟ್ಟಿಕೊಂಡವು. ಅವುಗಳಲ್ಲಿ ಮುಖ್ಯವಾಗಿ ವಸಾಹಾತುಶಾಹಿ, ರಾಷ್ಟ್ರೀಯವಾದ, ಮಾರ್ಕ್ಸ್‌ವಾದ, ಸಬಾಲ್ಟ್ರನ್ಸ್ ಪಂಥಗಳು. ಕರ್ನಾಟಕ ಚರಿತ್ರೆಯು ಈ ಪಂಥಗಳಿಂದ ನೇರವಾಗಿ ಪ್ರಭಾವಿತಗೊಂಡಿದೆಯೆಂದರೆ ತಪ್ಪಾಗಲಿಕ್ಕಿಲ್ಲ. ಅದರಲ್ಲಿಯೂ ಓರಿಯಂಟ್‌ಲಿಸ್ಟ್ ಮತ್ತು ರಾಷ್ಟ್ರೀಯವಾದಿ ಚಿಂತನೆಗಳ ಹಿನ್ನಲೆಯಿಂದ ರಚನೆಗೊಂಡ ಕೃತಿಗಳೇ ಹೆಚ್ಚು.

ಸಾಮ್ರಾಜ್ಯಶಾಹಿ ಹಾಗೂ ರಾಷ್ಟ್ರೀಯವಾದಿ ಚರಿತ್ರೆಕಾರರು ಅರಸುಕೇಂದ್ರಿತ ಹಾಗೂ ಧರ್ಮಕೇಂದ್ರಿತ ವಿಚಾರಗಳಿಗೆ ಮನ್ನಣೆ ನೀಡಿ, ಮೇಲ್ವರ್ಗವನ್ನು ವೈಭವೀಕರಿಸುವ ಪ್ರಯತ್ನ ನಡೆಸಿದರು. ಸಾಮಾನ್ಯವಾಗಿ ಚರಿತ್ರೆಯನ್ನು ಅರಸು ಮನೆತನಗಳಿಗಷ್ಟೇ ಸೀಮಿತಗೊಳಿಸಿ, ಅದೊಂದು ನಡೆದು ಹೋದ ಘಟನೆ ಎನ್ನುವ ತೀರ್ಮಾನವನ್ನು ಸಾರುವ ಅಧ್ಯಯನಗಳ ಸಂಖ್ಯೆಯೇ ಹೆಚ್ಚು. ರಾಜನ ವ್ಯಕ್ತಿಕೇಂದ್ರಿತ ಹಾಗೂ ಅವನ ಯುದ್ಧ, ದಿಗ್ವಿಜಯ, ವಂಶಾವಳಿ ಮುಂತಾದ ಅಂಶಗಳೇ ಪ್ರಧಾನವಾಗಿರುವ ಚಿತ್ರಣಗಳು ಕಂಡು ಬರುತ್ತವೆ. ಬಹುಪಾಲು ಚರಿತ್ರೆ ಕೃತಿಗಳಲ್ಲಿ ಅರ್ಧಕ್ಕಿಂತ ಹೆಚ್ಚು ಭಾಗ ರಾಜರ ಆರ್ಥಿಕ ಮತ್ತು ಸಾಮಾಜಿಕ ಮುಂತಾದ ಅಂಶಗಳು ಅರಸು–ಕೇಂದ್ರಿತವಾಗಿವೆಯೇ ಹೊರತು, ಪ್ರಜಾ–ಕೇಂದ್ರಿತವಾಗಿರುವುದನ್ನು ಕಾಣಲು ಕಷ್ಟಸಾಧ್ಯವಾಗಿದೆ. ಉದಾಹರಣೆಗೆ: ಷೇಕ್ ಅಲಿ ಅವರ 'ಕರ್ನಾಟಕ ಚರಿತ್ರೆ ಸಂಪುಟ', ಸೂರ್ಯನಾಥ ಕಾಮತ್‌ರವರ– 'ಕರ್ನಾಟಕ ಸಂಕ್ಷಿಪ್ತ ಇತಿಹಾಸ', ಆರ್.ಆರ್. ದಿವಾಕರ್‌ರವರ 'ಕರ್ನಾಟಕ ಪರಂಪರೆ' ಗೋಪಾಲರಾವ್ ಅವರ 'ಕರ್ನಾಟಕ ಇತಿಹಾಸ' ಹೀಗೆ ಮುಂತಾದ ಕೃತಿಗಳಲ್ಲಿ ಬಹಮನಿ ಆಳ್ವಿಕೆಯನ್ನೂ ಒಳಗೊಂಡಂತೆ ದಖ್ಖನ್ ಪ್ರದೇಶಗಳಲ್ಲಿ ಆಡಳಿತ ವಿಸ್ತರಿಸಿದ ವಿಜಯನಗರದ ಅರಸರ, ಮೊಗಲರ, ಬಿಜಾಪುರದ ಆದಿಲ್‌ಷಾಹಿಗಳ, ಕಲ್ಯಾಣ ಚಾಲುಕ್ಯರ, ಕಲಚೂರಿಗಳ, ದೇವಗಿರಿಯ ಸೇವುಣರ ಕುರಿತ

ವಿವರಣೆಗಳು ಸಿಗುತ್ತವೆ. ಆದರೆ ಈ ಕೃತಿಗಳು ರಾಜಕೀಯ-ಕೇಂದ್ರಿತ ವಿಚಾರಗಳಿಗೆ ಹೆಚ್ಚಿನ ಮನ್ನಣೆಯನ್ನು ನೀಡಿವೆಯೇ ಹೊರತು, ಇವರ ಆಳ್ವಿಕೆಯ ಸಂದರ್ಭದ ಸಾಮಾಜಿಕ ಹಾಗೂ ಆರ್ಥಿಕ ಚರಿತ್ರೆಯನ್ನು ಕಟ್ಟಿಕೊಡುವುದಿಲ್ಲ.

ಪ್ರಸ್ತುತ ಅಧ್ಯಯನವು ಐತಿಹಾಸಿಕವಾಗಿ ತುಂಬಾ ಮಹತ್ವದ್ದಾಗಿದೆ. ಕಾರಣ ಭಾರತ ಉಪಖಂಡದಲ್ಲಿ ಬಹಮನಿ ಸಂತತಿಯು, ಮುಸ್ಲಿಂ ರಾಜ ಪ್ರಭುತ್ವಗಳಲ್ಲೇ ಪ್ರಬಲವಾದುದು. ಈ ಸಂಶೋಧನೆಯು ದಕ್ಷಿಣ ಭಾರತದಲ್ಲಿ ಬಹಮನಿ ಸುಲ್ತಾನರ ಹುಟ್ಟು ಮತ್ತು ಬೆಳವಣಿಗೆ, ಅವನತಿ ಹಾಗೂ ಶೈಕ್ಷಣಿಕ, ಸಾಮಾಜಿಕ, ಆರ್ಥಿಕ, ಮತ್ತು ಸಾಂಸ್ಕೃತಿಕ ವಿಚಾರಗಳ ಜೊತೆಗೆ ಬಹಮನಿ ಸಾಮ್ರಾಜ್ಯದ ಪ್ರಬಲವಾದ ಅಂಶಗಳನ್ನು ಮತ್ತು ಬಲಗಳನ್ನು ಪ್ರಾಥಮಿಕ ಮತ್ತು ದ್ವಿತೀಯ ಮೂಲಾಧಾರಗಳ ಆಧಾರದ ಮೇಲೆ ಈ ಅಧ್ಯಯನದಲ್ಲಿ ವಿಶ್ಲೇಷಣಾತ್ಮಕವಾಗಿ ವಿವರಿಸಲಾಗಿದೆ. ಬಹಮನಿ ಆಡಳಿತಗಾರರು ಸೂಫಿ ಸಂತರ ಮತ್ತು ನೊಬೆಲ್‌ರ ಸಧೃಡ ತತ್ವ ಮತ್ತು ಆಚರಣೆಗಳಿಂದ ಪ್ರಭಾವಿತರಾಗಿ, ರಾಜ್ಯವನ್ನು ಕೇಂದ್ರೀಕರಿಸಲು ಮತ್ತು ಆಳ್ವಿಕೆ ಮಾಡಲು ಸರಣಿ ಸುಧಾರಣೆಗಳನ್ನು ಜಾರಿಗೆ ತಂದರು.

ಚರಿತ್ರೆ ಅಧ್ಯಯನದ ಎರಡನೇಯ ಹಂತವಾಗಿ ಕಂಡುಬಂದಿರುವ ಮಧ್ಯಕಾಲೀನ ಚರಿತ್ರೆಯು, ವಿಜಯನಗರ ಆಳ್ವಿಕೆಯೊಂದಿಗೆ ಆರಂಭವಾಗುತ್ತದೆ. ನಂತರ ಇದೇ ಕಾಲಘಟ್ಟದಲ್ಲಿ ಆಳ್ವಿಕೆ ಮಾಡಿದ ಬೀದರ್, ಗುಲ್ಬರ್ಗಾ, ಬಿಜಾಪುರ ಆದಿಲ್‌ಷಾಹಿ ಹಾಗೂ ಮೊಗಲರ ಆಳ್ವಿಕೆ ನಡೆಸಿರುವುದು ಕಂಡು ಬರುತ್ತದೆ. ಬೀದರ್ ಮತ್ತು ಗುಲ್ಬರ್ಗಾವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಬಹಮನಿ-ಸುಲ್ತಾನರು ಅಧಿಕಾರಕ್ಕೆ ಬಂದರು. ಇದರಿಂದ ಮುಸ್ಲಿಂ ಪ್ರಭಾವ ಹೆಚ್ಚಾಯಿತು. ಇದರ ಪರಿಣಾಮವಾಗಿ ಕೋಟೆ, ಮಸೀದೆ, ದರ್ಗಾ, ಮದರಸ, ಗುಂಬಜ ಮುಂತಾದ ಕಟ್ಟಡಗಳು ರಚನೆಯಾದವು. ಉರ್ದು ಮತ್ತು ಅರಬ್ಬೀ ಭಾಷೆಗಳ ಪ್ರಭಾವವೂ ಕೂಡ ಈ ಪ್ರದೇಶದ ಜನರ ಮೇಲೆ ಬೀರಿತು. ಇದರಿಂದ ನಿರಂತರ ವಿಜಯನಗರ ಸಾಮ್ರಾಜ್ಯದೊಂದಿಗೆ 'ದೋ-ಅಬ್' ಪ್ರದೇಶಕ್ಕಾಗಿ ಹೋರಾಟಗಳು ನಡೆದವು.

ಬಹಮನಿಯ ಸಮಕಾಲೀನ ರಾಜ್ಯವಾದ ವಿಜಯನಗರಕ್ಕೆ ನೀಡಿದ ಪ್ರಾಶಸ್ತ್ಯವನ್ನು ಬಹಮನಿ ಸಂಸ್ಥಾನಕ್ಕೆ ನೀಡದಿಲ್ಲದಿರುವುದನ್ನು ಬಹುತೇಕ ಬರವಣಿಗೆಗಳಲ್ಲಿ ಕಾಣಬಹುದು. ನಿಜಾಮನ ಕಾಲಕ್ಕೆ ಸಂಬಂಧಪಟ್ಟಂತೆ ರಚಿಸಿದ ಅನೇಕ ಕೃತಿಗಳಲ್ಲಿ 'ಹಿಂದುತ್ವ ಪಂಥ' ಧೋರಣೆ ಹೆಚ್ಚಾಗಿ ಕಂಡುಬಂದಿದ್ದು, ನಿಜಾಮ ತನ್ನ ಅರಸೊತ್ತಿಗೆ ಮೂಲಕ ರಾಜಕೀಯ ಪ್ರಭಾವ ಬೀರಿ ಪ್ರಜಾಪೀಡನೆ ಮಾಡುತ್ತಿದ್ದ ವಿವರಗಳನ್ನು ಚಿತ್ರಿಸುವ ಭರದಲ್ಲಿ ನಿಜಾಮನ ಧಾರ್ಮಿಕ ಶ್ರದ್ಧೆಯನ್ನು ಕೋಹಕ ಮಾಡಿರುವಂತಹದ್ದನ್ನು ಗುರುತಿಸಬಹುದಾಗಿದೆ. ಹಿಂದೂ-ಮುಸ್ಲಿಂ ನಡುವಿನ ಘರ್ಷಣೆಗಳಿಗಿಂತ ನಿಜಾಮನ ಆಡಳಿತ ವ್ಯವಸ್ಥೆಯು ಕುಸಿದಿರುವ ಬಗ್ಗೆ ವೈಜ್ಞಾನಿಕವಾದ ಬರಹಗಳು ಕಡಿಮೆ ಇರುವುದನ್ನು ಈ ಅಧ್ಯಯನದಲ್ಲಿ ಗಮನಿಸಬಹುದು. ಕೆಲವು ಬರಹಗಳಲ್ಲಿ ಹಿಂದೂ ಪರವಾದ ವಿಚಾರಗಳಿಲ್ಲದ್ದಿದ್ದರೂ, ವ್ಯವಸ್ಥೆಯನ್ನು ವಿಮರ್ಶಿಸುವ ಪ್ರಯತ್ನಗಳು ಅಷ್ಟಾಗಿ ಕಂಡು ಬರದಿರುವುದನ್ನು ಈ ಅಧ್ಯಯನದಿಂದ ನಮ್ಮನ್ನು ವಿಮರ್ಶಿಸಿಕೊಳ್ಳಬೇಕಾಗಿದೆ.

ಬಹಮನಿ ಸಂತತಿಯು ೧೮ ಸುಲ್ತಾನರ ಆಳ್ವಿಕೆಯಲ್ಲಿ ವಿವಿಧ ರೀತಿಯ ಆಡಳಿತಕ್ಕೆ ಸಾಕ್ಷಿಯಾಗಿತ್ತು. ಬಹಮನಿ ಸುಲ್ತಾನರು, ದೆಹಲಿ ಸುಲ್ತಾನರ ರಾಜಕೀಯ ಅನುಭವದ ತಳಹದಿಯ ಮೇಲೆ ಶೂನ್ಯತೆಯಲ್ಲಿನ ಕತ್ತಲೆಯಿಂದ ಹೊರಬಂದು ವಿಭಿನ್ನ ಆಯಾಮದ ಶ್ರೀಮಂತಿಕೆಯ ಆಡಳಿತಕ್ಕೆ ಕಾರಣೀಕರ್ತರಾದರು. ಉದಾಹರಣೆಗೆ: ಫೀರೋಜ್‌ಷಾನ ರಾಜಕೀಯ ಸಾಹಸಗಳು, ಮಹಮದ್ ಗವಾನನ ಅಭಿವೃದ್ಧಿಯ ಪಥ, ಗೇಸೂಧರಾಜನ ಆಧ್ಯಾತ್ಮಿಕ ಹಿರಿಮೆ, ಹೀಗೆ ಬಹಮನಿ ಸಾಮ್ರಾಜ್ಯವು ಇಂತಹ ಹಲವು ಕ್ಷೇತ್ರಗಳಲ್ಲಿ

ಪ್ರಸಂಶನೀಯ ಪ್ರಗತಿಯನ್ನು ಮಧ್ಯಕಾಲೀನ ಭಾರತದ ಇತಿಹಾಸದಲ್ಲಿ ಸಾಧಿಸಿತ್ತು. ಶ್ರೇಷ್ಠ ಸುಲ್ತಾನರ ದೃಷ್ಟಿಕೋನ ಅವರ ಸಾಹಸಮಯ ದಂಡೆಯಾತ್ರೆಗಳು, ರಾಜತಾಂತ್ರಿಕತೆ ಮುಂತಾದ ನಿರ್ಣಾಯಕ ಅಂಶಗಳು ಅತ್ಯಲ್ಪ ಅವಧಿಯಲ್ಲಿಯೇ ದಕ್ಷಿಣ ಭಾರತದಲ್ಲಿ ಶಾಂತ, ಬಲಿಷ್ಠ ಮತ್ತು ಸಮೃದ್ಧ ಸಾಮ್ರಾಜ್ಯವನ್ನಾಗಿಸಲು ಅವರು ನೀಡಿದ ಕೊಡುಗೆಗಳು ಯಾವ ವಿಜಯನಗರ ಸಾಮ್ರಾಜ್ಯದ ಅರಸರ ಕೊಡುಗೆಗಳಿಗಿಂತ ನಿಕೃಷ್ಟವಾದವುಗಳಲ್ಲ ಅನ್ನುವುದನ್ನು ಈ ಅಧ್ಯಯನದಲ್ಲಿ ತಿಳಿಸಲಾಗಿದೆ.

### ೬.೧. ಅಧ್ಯಯನದ ಸಾರಾಂಶ

ಸಂಸ್ಕೃತದ 'ದಕ್ಷಿಣ' ಎಂಬ ಪದದ ರೂಪಾಂತರವೇ 'ದಖನ್' ಎಂಬುದು ಬಹತೇಕ ವಿದ್ವಾಂಸರ ಅಭಿಪ್ರಾಯವಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ದಖ್ಖನ್ ಪ್ರದೇಶವನ್ನು ಬಹಮನಿ ಸುಲ್ತಾನರ ಅಧೀನದಲ್ಲಿದ್ದ ಪ್ರದೇಶಕ್ಕೆ ನಿರ್ಮಿತಗೊಳಿಸಿ, ಉತ್ತರದಲ್ಲಿ ನರ್ಮದಾ ನದಿಯಿಂದ, ದಕ್ಷಿಣದಲ್ಲಿ ಕೃಷ್ಣಾ-ತುಂಗಾಭದ್ರಾ ನದಿಗಳ ನಡುವಿನ ಭೌಗೋಳಿಕ ಪ್ರದೇಶವನ್ನು 'ಬಹಮನಿ ದಖ್ಖನ್' ಎಂದು ಕರೆಯಲಾಗಿದೆ.

ಕ್ರಿ.ಶ. ೧೩೪೭ರಲ್ಲಿ ಮಧ್ಯಕಾಲೀನ ಭಾರತ ಚರಿತ್ರೆಯಲ್ಲಿ ಅಲ್ಲಾವುದ್ದೀನ್-ಹಸನ್-ಗಂಗು-ಬಹಮನ್ ಷಾ ಎಂಬ ಯೋಧನಿಂದ ಸ್ಥಾಪಿತವಾದ ಬಹಮನಿ ಸಾಮ್ರಾಜ್ಯ ಕೊನೆಯ ಸುಲ್ತಾನ ಅಮೀರ ಅಲಿಯವರೆಗೂ(ಕ್ರಿ.ಶ. ೧೫೩೮, ಖಲಿಮುಲ್ಲಾ), ಅವರ ಜೀವನ ಸಾಧನೆಗಳೊಂದಿಗೆ ಸಂಕ್ಷಿಪ್ತ ಚರಿತ್ರೆಯನ್ನು ಪ್ರಸ್ತುತ ಅಧ್ಯಯನದಲ್ಲಿ ವಿಶ್ಲೇಷಿಸಲಾಗಿದೆ. ಸಾಮಾಜಿಕ ಮತ್ತು ಆರ್ಥಿಕ ಕ್ಷೇತ್ರಗಳಲ್ಲಿ ಬಹಮನಿ ಸಾಮ್ರಾಜ್ಯದ ಕೊಡುಗೆಗಳು ಮಧ್ಯಕಾಲೀನ ಭಾರತದ ಇತಿಹಾಸದಲ್ಲಿ ಬಹುಮಹತ್ವ ಹೊಂದಿದೆ. ಭಾರತ ಮತ್ತು ಅರಬ್ ಜಗತ್ತುಗಳ ಅನನ್ಯ ಸಂಬಂಧಗಳ ಕುರಿತದ್ದಾಗಿದೆ. ದೆಹಲಿ ಸುಲ್ತಾನರ ಮಹಮದ್-ಬಿನ್-ತುಘಲಕ್‌ನ ಆಡಳಿತದ ಉದ್ದಕ್ಕೂ ಸ್ಥಳೀಯ ಸರಣಿ ದಂಗೆಗಳು ಅವನನ್ನು ಹೈರಾಣಾಗಿಸಿದರ ಕುರಿತು ಹಾಗೂ ಫಿರೋಜಷಾನು ದಖ್ಖನ್ ಸ್ವಾತಂತ್ರ್ಯವನ್ನು ಮಾನ್ಯತಿಸಿದ್ದನ್ನು ಮತ್ತು ಅವನ ಕಾಲದಲ್ಲಿ ಬಹಮನಿ ಸಾಮ್ರಾಜ್ಯವು ಉತ್ಕೃಷ್ಠತೆಯ ಮಟ್ಟವನ್ನು ತಲುಪಿದ್ದನ್ನು ಸಂಕ್ಷಿಪ್ತವಾಗಿ ಈ ಅಧ್ಯಯನದಲ್ಲಿ ನೋಡಬಹುದಾಗಿದೆ.

ಹಿಂದಿನ ವಿದ್ವಾಂಸರು ಕಡೆಗಣಿಸಿದ ಹಾಗೂ ಬಹಮನಿ ಕಾಲದ ಆಡಳಿತಗಾರರಾದ, ಅಲ್ಲಾವುದ್ದೀನ್-ಹಸನ್-ಬಹಮನ್-ಷಾ (ಕ್ರಿ.ಶ.೧೩೪೭-೧೩೫೮), ಮಹಮದ್ ಷಾ ೧ನೇ(ಕ್ರಿ.ಶ ೧೩೫೮-೧೩೭೫), ಮಹಮದ್ ೨ನೇ (ಕ್ರಿ.ಶ ೧೩೭೮-೧೩೯೭), ಫೀರೋಜ ಷಾ ಬಹಮನಿ(ಕ್ರಿ.ಶ ೧೩೯೭-೧೪೨೨), ಅಹಮದ್ ಷಾ ಕ್ರಿ.ಶ (೧೪೨೨-೧೪೩೬), ಅಲ್ಲಾವುದ್ದೀನ ೨ನೇ(ಕ್ರಿ.ಶ ೧೪೩೬-೧೪೫೮), ಮಹಮದ್ ಗವಾನ್ ಮುಂತಾದವರ ಆಳ್ವಿಕೆ ಕಾಲದ ಸಾಮಾಜಿಕ, ಆರ್ಥಿಕ, ರಾಜಕೀಯ ಕ್ಷೇತ್ರಗಳ ಬೆಳವಣಿಗೆಯನ್ನು ಕುರಿತದ್ದಾಗಿದೆ.

ಬಹಮನಿ ಸುಲ್ತಾನರ ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕ ಕೊಡುಗೆಗಳು ವೈಜ್ಞಾನಿಕ ಮೌಲ್ಯಗಳುಳ್ಳ ಮತ್ತು ಅರ್ಥಪೂರ್ಣ ದಸ್ತಾವೇಜುಗಳಾಗಿವೆ. ಪ್ರಾಥಮಿಕ ಮತ್ತು ದ್ವಿತೀಯ ಮೂಲಾಧಾರಗಳ ತಳಹದಿಯ ಮೇಲೆ ಈ ಸಂಶೋಧನಾ ಪ್ರಬಂಧವು ಬಹಮನಿ ಸುಲ್ತಾನರ ಆಳ್ವಿಕೆಯಡಿ ದಖ್ಖನ್ ಸಾಧಿಸಿದ ಪ್ರಗತಿಯ ಅಂಶಗಳ ಮತ್ತು ಬಲಗಳ ಅಧ್ಯಯನದ ವೈಜ್ಞಾನಿಕ ಮೌಲ್ಯಮಾಪನವನ್ನು ಹೊಂದಿದೆ. ದಫ್ತರ್-ಇ-ದಿವಾನಿ, ಹೈದರಾಬಾದ್‌ನಲ್ಲಿ ಸಂಗ್ರಹಿಸಲಾಗಿರುವ ದಾಖಲೆಗಳು, ಬಹಮನಿ ಸುಲ್ತಾನರ ಆಳ್ವಿಕೆಯ ಬಗ್ಗೆ ನಿಖರವಾದ ಮಾಹಿತಿ ಕಣಜಗಳಾಗಿವೆ. ಪರ್ಶಿಯನ್ ಕೋರ್ಟನ 'ಮೀರ್ ಜುಮ್ಲಾ' ಮತ್ತು ದಖ್ಖನ್ ಸುಲ್ತಾನರ ನಡುವಿನ ಪತ್ರ ವ್ಯವಹಾರಗಳು ದಖ್ಖನ್ ಬಹಮನಿ ಸಾಮ್ರಾಜ್ಯದ ಬಗ್ಗೆ ಮಾಹಿತಿ ನೀಡುತ್ತವೆ. ಜಾನ್‌ಬ್ರಿಗ್ಸ್‌ನ, 'ಹಿಸ್ಟರಿ ಆಫ್ ದ ಮಹಮದನ್ ಪವರ್ ಇನ್ ಇಂಡಿಯಾ'

ಗ್ರಂಥವ ೪ ಸಂಪುಟಗಳು, ಬಹಮನಿ ರಾಜರ ದಿಗ್ವಿಜಯಗಳ ದಾಖಲೆ ಬಗ್ಗೆ ಮಾಹಿತಿ ನೀಡುತ್ತವೆ. ಜೊತೆಗೆ ಬಹಮನಿ ಸುಲ್ತಾನರ ಬಹುಮುಖ ಆಡಳಿತ ಮತ್ತು ಬೆಳವಣಿಗೆಯ ಪ್ರಯತ್ನಗಳು ದಖ್ಖನ್ ಪ್ರದೇಶದ ಸಂಸ್ಕೃತಿಯನ್ನು ಶ್ರೀಮಂತಗೊಳಿಸಿದ ಮಾಹಿತಿಗಳೂ ದೊರೆಯುತ್ತವೆ. ಆಂಧ್ರಪ್ರದೇಶದ ಹೈದರಾಬಾದ್‌ನ ಪತ್ರಾಗಾರದಲ್ಲಿ ಆಂಗ್ಲರು ಬಿಟ್ಟು ಹೋದ ಬಹುಮುಖ್ಯ ದಾಖಲೆಗಳು ಬಹಮನಿ ಸಾಮ್ರಾಜ್ಯಕ್ಕೆ ಸಂಬಂಧಿಸಿದ ಮಾಹಿತಿಯಾಗಿದ್ದು, ಇದನ್ನು ಪುಷ್ಠೀಕರಿಸುತ್ತದೆ.

ಬಹಮನಿ ಸಾಮ್ರಾಜ್ಯದ ಪ್ರಾಚೀನ ಇತಿಹಾಸವು ಅನೇಕ ಮಹಾನ್ ವಿದ್ವಾಂಸರ ಶಾಸನಗಳ ಸಹಾಯದಿಂದ ರಚಿಸಲ್ಪಟ್ಟ ಗ್ರಂಥಗಳು, ಬಹಮನಿ ಸಾಮ್ರಾಜ್ಯದ ಪ್ರಾಚೀನ ಇತಿಹಾಸವನ್ನು ಅರ್ಥೈಸಿಕೊಳ್ಳಲು ಪ್ರಮುಖ ಪ್ರಾಥಮಿಕ ಆಧಾರಗಳಾಗಿವೆ. ಬಹಮನಿಯರ ಇತಿಹಾಸ ಅಧ್ಯಯನಕ್ಕೆ ನೆರವಾಗುವ ಕೆಲವು ಶಾಸನಗಳು, ಅವು ಪರ್ಶಿಯನ್ ಭಾಷೆಯಲ್ಲಿದ್ದರೂ ಕೆಲವು ಇತಿಹಾಸ ಕಥನಗಳಿಗೆ ಮುಖ್ಯ ಸಾಧನ ಸಾಮಗ್ರಿಗಳಾಗಿವೆ. ಅವುಗಳೆಂದರೆ, ಅಹಮದ್‌ನಗರದ–ತಬಾತಬಾ ಬರೆದ–ಬುರ್ಹಾನ–ಇ–ಮಾಸೀರ(೧೫೯೬) ಮತ್ತು ನಿಜಾಂ–ಉದ್–ದೀನ್ ಬಕ್ಷಿಯ–ತಬರಾಜತ–ಇ–ಅಕ್ಬರೀ(೧೫೯೪) ಬಹಮನಿ ಸುಲ್ತಾನರ ಬಗ್ಗೆ ಮಾಹಿತಿ ಒದಗಿಸುತ್ತವೆ. ಈ ಶಾಸನಗಳಿಗೆ ಪುಷ್ಠೀ ನೀಡುವಂತಹ ಪ್ರಮುಖ ಬರಹಗಳಾದ, ಬಿಜಾಪುರದ ಫೆರಿಸ್ತಾನ–ತಾರೀಖ್–ಇ–ಫೆರಿಸ್ತಾ(೧೬೦೬) ಹಾಗೂ ಷಿರಾಜಿಯ ತಾಜ್‌ಕೀರತ್–ಉಲ್–ಮಲೂಕ್(೧೬೧೦). ಇವುಗಳಲ್ಲದೆ ಇವರ ಕಾಲದ ಅರಸರ ನಾಣ್ಯಗಳು ದೊರೆತಿವೆ. ಜೊತೆಗೆ ರಷ್ಯನ್ ಪ್ರವಾಸಿ ನಿಕೆಟಿನ್(೧೪೭೧) ಕೂಡ ಬಹಮನಿಯರ ಕುರಿತು ಕೆಲವು ವಿವರಗಳನ್ನು ನೀಡಿದ್ದಾನೆ.

ಬಹಮನಿ ಚರಿತ್ರೆ ಕುರಿತು ಕೈರೋಷಿ(೧೯೪೪), ನಾರಾಯಣ ಸರ್ಕಾರ(೧೯೪೨), ಗುಲಾಮ(೧೫೪೭), ಶ್ರೀರಾಮ್ ಶರ್ಮ(೧೫೫೧), ಸಿದ್ದಿಕಿ(೧೫೫೨&೧೯೮೯), ಇರ್ಫಾನ್ ಹಬೀಬ್(೧೯೬೩,೧೫೭೧,೧೯೮೫), ಹುಸೇನ್(೧೫೬೩), ಹಬೀಬುಲ್ಲಾ(೧೫೬೫), ದೇಸಾಯಿ(೧೯೭೪), ನಿಜಾಮಿ(೧೫೭೪), ಶೇರ್ವಾನಿ ಮತ್ತು ಜೋಶಿ(೧೫೭೪), ನಯೀಮ್ (೧೫೭೫), ಶೇರವಾನಿ(೧೫೮೫), ಯಾಜದಾನಿ(೧೯೪೭), ಸಾಕಿ(೧೯೮) ಮುಂತಾದವರು ದಖ್ಖನ್ ಇತಿಹಾಸ ರಚನೆಯಲ್ಲಿ ತಮ್ಮದೇ ಆದ ಕೊಡುಗೆ ನೀಡಿದ್ದಾರೆ.

ಸ್ಥಳೀಯರು ಮತ್ತು ವಿದೇಶಿಯರು ಒಟ್ಟಾರೆಯಾಗಿ ವಿಭಿನ್ನವಾದ ಸಂಸ್ಕೃತಿ ಮತ್ತು ಸಿದ್ಧಾಂತಗಳನ್ನು ಹೊಂದಿದ್ದರು. ಆದುದರಿಂದ ತಮ್ಮ ಸ್ವಹಿತಾ ಶಕ್ತಿಗಳಿಗೋಸ್ಕರ ಇವರೀರ್ವರ ನಡುವೆ ಆಗಾಗ್ಗೆ ಅನೇಕ ಸಂಘರ್ಷಗಳು ಸಂಭವಿಸುತ್ತಿದ್ದವು. ಮುಸ್ಲಿಂರು ಉನ್ನತ ಸ್ಥಾನಮಾನಗಳನ್ನು ಅನುಭವಿಸಿದರೆ, ಮುಸ್ಲಿಮೇತರರು ಉಳಿದ ಜವಾಬ್ದಾರಿಗಳನ್ನು ನಿರ್ವಹಿಸಿದರು. ದೂರದೃಷ್ಠಿ ಮತ್ತು ಮಿಷನರಿಗಳ ಪ್ರಚಾರದ ಉತ್ಸಾಹದ ಆಧಾರದ ಮೇಲೆ ಬಹಮನಿ ಸಾಮ್ರಾಜ್ಯವನ್ನು ಏಕೀಕೃತ ಶ್ರೀಮಂತಿಕೆಗೊಳಿಸುವಲ್ಲಿ ಮಹಮದ್ ಗವಾನನು ಬಹುಮುಖ್ಯ ಪಾತ್ರವಹಿಸಿದನು. ಬಹಮನಿ ಸಾಮ್ರಾಜ್ಯವು ಎಲ್ಲಾ ಮೂಲಭೂತ ಮತ್ತು ನಾಗರೀಕ ಸೌಲಭ್ಯಗಳನ್ನು ಹೊಂದಿತ್ತು. ಬಹಮನಿ ಆಡಳಿತಗಾರರು ತಮ್ಮ ರಾಜಕೀಯ ಎದುರಾಳಿಗಳನ್ನು ಕೊಳ್ಳೆ ಹೊಡೆದು ತಮ್ಮ ಸಾಮ್ರಾಜ್ಯಕ್ಕೆ ಸಿರಿ ಸಂಪತ್ತು ತಂದರು. ಮಧ್ಯಪ್ರಾಚ್ಯದ ವಾಸ್ತುಶಿಲ್ಪದ ಶ್ರೇಷ್ಠತೆ ಮತ್ತು ಮಹತ್ವಾಕಾಂಕ್ಷೆಗಳು ಭಾರತದ ವಾಸ್ತುಶಿಲ್ಪದ ಶ್ರೇಷ್ಠತೆಗಿಂತ ಶ್ರೇಷ್ಠವಾಗಿದ್ದವು. ಭಕ್ತಿ ಪಂಥ ಮತ್ತು ಸೂಫಿ ಪಂಥಗಳು ಇವರ ಕಾಲದಲ್ಲಿ ಪ್ರಮುಖ ಪಾತ್ರ ವಹಿಸಿದ್ದನ್ನು ಪ್ರಸ್ತುತ ಅಧ್ಯಯನದಲ್ಲಿ ಗಮನಿಸಬಹುದು. 'ಸೂಫಿಸಂ' ಜೀವನದ ಒಂದು ದಾರಿಯಾಗಿದ್ದು, ಅದು ದೇವರು ಮತ್ತು ಮಾನವನನ್ನು ಒಂದುಗೂಡಿಸುವ ಸಾಧನವಾಗಿತ್ತು. ಇದು ಹೆಚ್ಚಾಗಿ ಇರಾಕಿನ 'ಬಸ್ರಾ'ದಲ್ಲಿ ಆಚರಣೆಯಲ್ಲಿತ್ತು. ಸೂಫಿ ಮತ್ತು ಭಕ್ತಿ ಪಂಥದ

ಸಂತರು ಬಹಮನಿ ಸುಲ್ತಾನರ ಮೇಲೆ ಅಗಾಧ ಪ್ರಭಾವ ಬೀರಿದ್ದು, ಸಾಮಾಜಿಕ ಪಿಡುಗುಗಳನ್ನು ಹೊಡೆದೋಡಿಸಿ ದಖ್ಖನ್ ಜನರ ಉನ್ನತಿಗೆ ತಮ್ಮದೇ ಕೊಡುಗೆ ನೀಡಿರುವುದನ್ನು ಇಲ್ಲಿ ತಿಳಿಸಲಾಗಿದೆ.

ಬಹಮನಿ ಆಡಳಿತಗಾರರು ಮಧ್ಯಏಷ್ಯಾದಿಂದ ಸಂತರು, ವಿದ್ವಾಂಸರು, ಕಲಾಕಾರರು, ಹಾಗೂ ಶಿಲ್ಪಿಗಳನ್ನು ಆಹ್ವಾನಿಸಿದರು. ಇವರು ಪರ್ಶಿಯನ್ ಸಂಸ್ಕೃತಿಯನ್ನು ದಖ್ಖನ್‌ನಲ್ಲಿ ಹರಡಲು ಕಾರಣೀಕರ್ತರಾದರು. ಅವರಲ್ಲಿ ಪ್ರಮುಖರಾದ ಇಬ್ನಬತೂತ್, ನಿಕೋಲೊ ಕೊಂಟಿ, ದೂರ್ತೆಬಾರ್ಬೋಸಾ, ಫೇರಿಸ್ತಾ, ನಿಕೆಟಿನ್ ಮತ್ತು ಇನ್ನಿತರ ವಿದೇಶಿ ಪ್ರವಾಸಿಗರ ಬರಹಗಳು ದಖ್ಖನ್ ಬಹಮನಿ ಸುಲ್ತಾನರ ಶ್ರೀಮಂತಿಕೆ ಮತ್ತು ಶ್ರೇಷ್ಠತೆಯನ್ನು ವಿವರಿಸುತ್ತವೆ. ಆಡಳಿತಗಾರರು ಹಲವಾರು ಪ್ರಾಂತ್ಯಗಳನ್ನು ಗೆದ್ದು ಚಿನ್ನ, ಬೆಳ್ಳಿ ಮುಂತಾದ ಲೋಹಗಳನ್ನು ದಖ್ಖನ್‌ಗೆ ತಂದರು. ಹೀಗೆ ಗೆದ್ದು ತಂದ ಲೋಹಗಳನ್ನು, ಮಸಾಲೆ ಪದಾರ್ಥಗಳಿಗೆ, ಬಟ್ಟೆ ಮತ್ತು ದಂತದ ವಸ್ತುಗಳಿಗೆ ವಿನಿಮಯ ಮಾಡಿಕೊಂಡರು. ದಖ್ಖನ್ ಸುಲ್ತಾನರ ಆಳ್ವಿಕೆ ಕಾಲದಲ್ಲಿ ಆರ್ಥಿಕತೆ ತನ್ನ ಉತ್ಕೃಷ್ಟಮಟ್ಟ ತಲುಪಿತ್ತು. ಕೃಷಿ ಉತ್ಪನ್ನ, ಕೈಗಾರಿಕಾ ಲಾಭ, ವ್ಯಾಪಾರದಿಂದ ಬಂದ ಲಾಭ, ಕರಕುಶಲ ಕೈಗಾರಿಕೆಗಳ ಏಳಿಗೆ ಮತ್ತು ಅಂತರಾಷ್ಟ್ರೀಯ ವ್ಯಾಪಾರವು ಬಹಮನಿಯ ಆರ್ಥಿಕ ಸ್ಥಿತಿಗಳನ್ನು ಉನ್ನತಿಗೇರಿಸಿತ್ತು. ದಖ್ಖನ್ನಿನ ಆರ್ಥಿಕತೆಯು ಊಳಿಗಮಾನ್ಯ ಪದ್ಧತಿಯನ್ನು ಹೊಂದಿದ್ದು, ಕೃಷಿ ಚಟುವಟಿಕೆಗಳ ಮೇಲೆ ಅವಲಂಬಿತವಾಗಿತ್ತು. ಸುಲ್ತಾನರು ಭೂರಹಿತ ರೈತರ ಒಳಿತನ್ನೂ ಬಯಸುತ್ತಿದ್ದರು. ಸಾರಿಗೆ ಮತ್ತು ಸಂಪರ್ಕ ವ್ಯವಸ್ಥೆಗಳ ಬೆಳವಣಿಗೆಯು ಬಹಮನಿಯ ಆರ್ಥಿಕತೆಯಲ್ಲಿ ಪ್ರಮುಖಪಾತ್ರ ವಹಿಸಿತ್ತು. ಅಂತರ್‌ರಾಷ್ಟ್ರೀಯ ವ್ಯಾಪಾರ ಮತ್ತು ವಾಣಿಜ್ಯಗಳು ಟರ್ಕಿ, ಪರ್ಶಿಯಾ, ಇರಾನ್, ಪೋರ್ಚುಗೀಸ್, ಅರೇಬಿಯಾ, ಚೀನಾ ಮತ್ತು ಭಾರತದ ಉಪಖಂಡಗಳ ಮಧ್ಯೆ ನಡೆಯುತ್ತಿತ್ತು. ಆಂತರಿಕ ದಂಗೆಗಳು ಹಾಗೂ ಯುದ್ಧಗಳ ಮಧ್ಯೆಯೂ ಬಹಮನಿ ಆಡಳಿತಗಾರರು ಆರ್ಥಿಕ ಪ್ರಗತಿ ಸಾಧಿಸಿದ್ದು ಗಮನಾರ್ಹವಾದ ಅಂಶವಾಗಿದೆ.

ಮಧ್ಯಕಾಲೀನ ದಖ್ಖನ್ ಯುಗದಲ್ಲಿ ಹುಟ್ಟಿದ ಎರಡು ಬೃಹತ್ ಸಾಮ್ರಾಜ್ಯಗಳಾದ ಮುಸ್ಲಿಂ ಸಾಮ್ರಾಜ್ಯ ಬಹಮನಿ ಮತ್ತು ಹಿಂದೂ ಸಾಮ್ರಾಜ್ಯ ವಿಜಯನಗರಗಳು. ಹೀಗೆ ಅನೇಕ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಸಮಸ್ಯೆಗಳಿಂದ ಕೂಡಿರುವುದು ಕಂಡುಬಂದಿದ್ದು, ಎರಡೂ ರಾಜ್ಯಗಳ ಆಡಳಿತಗಾರರು ತಮ್ಮ ಸನಾತನ ಧರ್ಮಗಳ ಪೋಷಕರಾಗಿರುವುದನ್ನು ನಾವು ಗಮನಿಸಬಹುದು. ಅದೇ ರೀತಿ ಬಹಮನಿಯರಲ್ಲಿ ಹಿಂದೂ–ಮುಸ್ಲಿಂ ಜನಾಂಗೀಯ ಮಿಶ್ರಣವಾಗಿರುವುದು ಕೂಡ ಕಂಡುಬಂದಿದೆ. ಈ ಎರಡೂ ಸಾಮ್ರಾಜ್ಯಗಳಲ್ಲಿ ಕೆಳವರ್ಗದ ಜನರು ಗುಲಾಮರಾಗಿರುವುದೂ ಕಂಡುಬರುತ್ತದೆ. ಇದರ ಕುರಿತಾದ ವಿವರವನ್ನು ಈ ಪ್ರಸ್ತುತ ಅಧ್ಯಯನದಲ್ಲಿ ತಿಳಿಸಲಾಗಿದೆ.

ಬಹಮನಿ ಆಳ್ವಿಕೆಯ ವಿಶ್ವಾಸಾರ್ಹ ಮತ್ತು ಅಗಾಧ ಪ್ರಮಾಣದ ಆಧಾರಗಳು ನಮಗೆ ಲಭ್ಯವಾಗುವುದು ಪರ್ಶಿಯನ್ ಭಾಷೆಯಲ್ಲಿಯೇ ಇದರ ಕೆಲವು ಮಹತ್ವದ ದಾಖಲೆಗಳು ಆಂಗ್ಲಭಾಷೆಗೆ ತುರ್ಜುಮೆ ಮಾಡಲ್ಪಟ್ಟಿವೆ. ಆದರೆ ಧಾರ್ಮಿಕ ಪಕ್ಷಪಾತದ ಕಾರಣಗಳಿಂದ ಭಾರತೀಯ ಇತಿಹಾಸಕಾರರು ಬಹಮನಿ ಸಾಮ್ರಾಜ್ಯಕ್ಕಿಂತ ವಿಜಯನಗರ ಸಾಮ್ರಾಜ್ಯದ ವೈಭವವನ್ನು ವೈಭವೀಕರಿಸಿದ್ದಾರೆ. ವಸಾಹತು ಇತಿಹಾಸಕಾರರು ಮಧ್ಯಕಾಲೀನ ಭಾರತದ ಇತಿಹಾಸದ ಕುರಿತು ಧಾರ್ಮಿಕ ಪಕ್ಷಪಾತದ ದಾಖಲೆಗಳನ್ನು ಒದಗಿಸಿದ್ದಾರೆ. ಇದಕ್ಕೆ ಸಂಬಂಧಿಸಿದಂತೆ ಹೈದರಾಬಾದ್‌ನಲ್ಲಿರುವ(ರಾಜ್ಯ ಪತ್ರಾಗಾರ ಇಲಾಖೆಯ) ದಾಖಲೆಗಳು ಬಹಮನಿ ಆಡಳಿತಗಾರರ ದಿಗ್ವಿಜಯಗಳು ಅವರ ಬೆಳವಣಿಗೆಯ ಪ್ರಯತ್ನಗಳ, ಸಾಮಾಜಿಕ ಮತ್ತು ಆರ್ಥಿಕ ಸುಧಾರಣೆಗಳ ಬಗ್ಗೆ ಹೊಸ ಆಯಾಮವನ್ನು ನೀಡುತ್ತವೆ.

ದೆಹಲಿ ಸುಲ್ತಾನರ ಅನೈಕ್ಯತೆಯಲ್ಲಿ ಹುಟ್ಟಿಬಂದ ರಾಜ್ಯಗಳಲ್ಲಿ ಬಹಮನಿ ಸಾಮ್ರಾಜ್ಯವು ಬಲಿಷ್ಠ ಸ್ವತಂತ್ರ್ಯ ರಾಜ್ಯಗಳಲ್ಲಿ ಒಂದು. ೧೮ ಸುಲ್ತಾನರು ಆಳಿದ ಬಹಮನಿ ಸಂತತಿಯ ರಾಜರು ದಕ್ಷಿಣ ಭಾರತದ ಭಯಂಕರ ಆಡಳಿತಗಾರರಾಗಿದ್ದರು. ದೆಹಲಿ ಸುಲ್ತಾನರ ಸಾಮಂತಿಕೆಯನ್ನು ತಿರಸ್ಕರಿಸಿ ಸ್ವಾತಂತ್ರ್ಯ ಸಾಮ್ರಾಜ್ಯವನ್ನು ಸ್ಥಾಪಿಸಿದರು. ದೆಹಲಿ ಸುಲ್ತಾನರು ಸಾಮ್ರಾಜ್ಯವನ್ನು ವರ್ಧಿಸಿದರೂ ದಖ್ಖನ್ನಿನಲ್ಲಿ ಸಾಂಸ್ಕೃತಿಕವಾಗಿ ಸ್ಫೂರ್ತಿ ಸಾಧಿಸಲು ಸಾಧ್ಯವಾಗಲೇ ಇಲ್ಲ.

ಫೀರೋಜ್ ಷಾ ಮತ್ತು ಮಹಮದ್ ಗವಾನ್‌ರ ಆಡಳಿತದಲ್ಲಿ ಪರ್ಶಿಯನ್ ಗಲ್ಫ್ ಹಾಗೂ ಬಹಮನಿ ಸಾಮ್ರಾಜ್ಯದ ನಡುವಿನ ವ್ಯಾಪರವು ಪ್ರಗತಿ ಹೊಂದಿತ್ತು. ಫಿರೋಜ್‌ಷಾ ನಾಯಕತ್ವದಲ್ಲಿ ಬಹಮನಿಯು ಏಕೀಕೃತ ಶ್ರೀಮಂತಿಕೆಯನ್ನು ಸಾಧಿಸಿದರೆ, ಮಹಮದ್ ಗವಾನನ ಕಾಲದಲ್ಲಿ ಅವನ ದೂರದೃಷ್ಟಿತ್ವದ ಪರಿಣಾಮ ಕಲೆ, ವಾಸ್ತುಶಿಲ್ಪ, ಸಾಹಿತ್ಯ, ರಾಜಕೀಯ, ಸಾಮಾಜಿಕ ಸುಧಾರಣೆ, ಐಕ್ಯತೆ ಹಾಗೂ ಆರ್ಥಿಕ ಉತ್ಕೃಷ್ಠತೆಯನ್ನು ಸಾಧಿಸಿತ್ತು. ಮಹಮದ್ ಗವಾನನು ಬಹಮನಿ ಸಾಮ್ರಾಜ್ಯದ ಶ್ರೀಮಂತಿಕೆ, ಉತ್ಕೃಷ್ಟತೆಗೆ ಪ್ರಮುಖವಾಗಿ ಕಾರಣೀಕರ್ತನಾಗಿದ್ದಾನೆ.

ಅಲ್ಲಾವುದ್ದೀನ್ ಹಸನ್‌ನು ರಾಜಕೀಯವಾಗಿ ಮತ್ತು ಆರ್ಥಿಕವಾಗಿ ಬಹಮನಿ ಸಾಮ್ರಾಜ್ಯಕ್ಕೆ ಭದ್ರ ಬುನಾದಿ ಹಾಕಿದ್ದನು. ಮಹಮದ್ ಷಾ ಮೊದಲನೆ, ೨ನೇ ಮಹಮದ್, ಫಿರೋಜ್ ಷಾ ಬಹಮನಿ, ಅಹಮದ್ ಷಾ ಹಾಗೂ ಅಲ್ಲಾವುದ್ದೀನ ಮುಂತಾದ ಸುಲ್ತಾನರು ರಾಜಕೀಯವಾಗಿ ಮತ್ತು ಆರ್ಥಿಕವಾಗಿ ಬಹಮನಿ ಸಾಮ್ರಾಜ್ಯವನ್ನು ಆಧುನೀಕರಣಗೊಳಿಸಿ ಫಲಪ್ರದವಾದ ರಾಜತಾಂತ್ರಿಕ ಸಂಬಂಧವನ್ನು ದಖ್ಖನ್ ಮತ್ತು ಪರ್ಶಿಯನ್ ಗಲ್ಫ್ ಮಧ್ಯೆ ಬೆಳಸಿದರು.

ಪ್ರಸ್ತುತ ಅಧ್ಯಾಯವು ಬಹಮನಿ ಸುಲ್ತಾನರ ಆಳ್ವಿಕೆ ಕಾಲದಲ್ಲಿನ ಸಾಮಾಜಿಕ ಮತ್ತು ಆರ್ಥಿಕ ಜೀವನದ ದಾಖಲೆ ಹಾಗೂ ಮೌಲ್ಯಮಾಪನ ಮಾಡುವ ಒಂದು ಪ್ರಯತ್ನವಾಗಿದೆ. ಈ ಬಹಮನಿ ಸಾಮ್ರಾಜ್ಯವನ್ನು ಬಲವರ್ಧನೆಗೊಳಿಸಲು ಮತ್ತು ಪುಷ್ಠೀಕರಿಸಲು ಕೇವಲ ಕೆಲವೇ ಆಡಳಿತಗಾರರು, ರಾಜತಾಂತ್ರಿಕರು, ಸಂತರು ಮತ್ತು ವಿದ್ವಾಂಸರು ಐತಿಹಾಸಿಕ ಕೊಡುಗೆಗಳನ್ನು ನೀಡಿದ್ದಾರೆ. ಆದರೆ ಅಧ್ಯಯನದ ಸಂದರ್ಭದಲ್ಲಿ ಈ ಸಾಮ್ರಾಜ್ಯದ ವಿವಿಧ ಕ್ಷೇತ್ರಗಳ ಇಂತಹ ಮಹತ್ವವಾದ ವಿಷಯಗಳ ಕುರಿತ ಗಹನವಾದ ಸಮರ್ಥನಾ ಸಂಶೋಧನೆಗಳು ನಡೆಯಬೇಕಾಗಿರುವುದನ್ನು ಇಲ್ಲಿ ಕಾಣಬಹುದು. ಫಿರೋಜ್‌ಷಾ ಮತ್ತು ಮಹಮದ್ ಗವಾನ್‌ರಂತಹ ಆಡಳಿತಗಾರರು ಬಹುಮುಖ ವ್ಯಕ್ತಿತ್ವವನ್ನು ಹೊಂದಿರುವುದಲ್ಲದೇ ಮತ್ತು ಬಹುವಿಧಗಳ ಸೇವೆಗಳ ಮೂಲಕ ತಮ್ಮ ಬಹಮನಿ ಸಾಮ್ರಾಜ್ಯಕ್ಕೆ ಕೊಡುಗೆಗಳನ್ನು ನೀಡಿದ್ದಾರೆ. ಇವರಲ್ಲದೆ, ಮಹಾನ್ ಸಂತರು, ವಿದ್ವಾಂಸರು, ಶಿಲ್ಪಿಕಾರರು, ಸಾಂಸ್ಕೃತಿಕ ವ್ಯಕ್ತಿಗಳು, ಶಿಕ್ಷಣ ತಜ್ಞರು, ರಾಜತಾಂತ್ರಿಕರು, ಆಡಳಿತಗಾರರು ಮತ್ತು ಸಮಾಜ ಸುಧಾರಕರೂ ಕೂಡ ಈ ಬಹಮನಿ ಸಾಮ್ರಾಜ್ಯದ ಇತಿಹಾಸವನ್ನು ಶ್ರೀಮಂತಗೊಳಿಸಿದ್ದಾರೆ. ಬಹಮನಿ ಸಾಮ್ರಾಜ್ಯದ ಸಮಗ್ರ ಅಭಿವೃದ್ಧಿಗೆ ಬಹಮನಿಯ ಸುಲ್ತಾನರ ಪಾತ್ರವೂ ಕೂಡ ಮಹತ್ವದ್ದಾಗಿದೆ. ಈ ಸುಲ್ತಾನರು ಕಲೆ, ವಾಸ್ತುಶಿಲ್ಪ, ಸಾಹಿತ್ಯ, ಸಂಸ್ಕೃತಿ, ರಾಜ್ಯವ್ಯವಸ್ಥೆ, ಆರ್ಥಿಕತೆ ಮತ್ತು ಬಹಮನಿ ಸಾಮ್ರಾಜ್ಯದ ಮಾನವ ಜೀವನಕ್ಕೆ ಸಂಬಂಧಿಸಿದ ಇನ್ನುಳಿದ ಕ್ಷೇತ್ರಗಳ ಪದೋನ್ನತಿಗೆ ನೀಡಿದ ಕೊಡುಗೆಗಳೂ ಕೂಡ ಭವಿಷ್ಯದ ಮುಂದಿನ ಸಂಶೋಧಕರು ಪ್ರತ್ಯೇಕವಾಗಿ ಅಧ್ಯಯನ ಮಾಡಬೇಕಾಗಿದೆ. ಭವಿಷ್ಯದಲ್ಲಿ, ಮುಂದಿನ ಸಂಶೋಧಕರು ಹಲವು ಏಜೆನ್ಸಿಗಳಿಂದ ಸಂಗ್ರಹಿಸಲಾದ ಎಲ್ಲಾ 'ಅರ್ಕೈವಲ್' ದಾಖಲೆಗಳನ್ನು ವ್ಯಾಪಕವಾಗಿ ಪರಿಮಾಣಾತ್ಮಕ ಮತ್ತು ಗುಣಾತ್ಮಕ ವಿಷಯ ವಿಶ್ಲೇಷಣೆ ಕೈಗೊಳ್ಳಬೇಕಾದುದರಿಂದ ಮಧ್ಯಕಾಲ ಭಾರತದ ಬಹಮನಿ

ಸುಲ್ತಾನರ ಬಹುಮುಖ ವ್ಯಕ್ತಿತ್ವಗಳನ್ನು ಮತ್ತು ಬಹುವಿಧಗಳ ಸೇವೆಗಳನ್ನು ಅರ್ಥೈಸಿಕೊಳ್ಳಲು ಮುಖ್ಯವಾಗಿ ನಾವು ಐತಿಹಾಸಿಕ ಸಂಶೋಧನೆ, ಕ್ಷೇತ್ರ ಅಧ್ಯಯನ ಮತ್ತು ಗುಣಾತ್ಮಕ ವಿಷಯ ವಿಶ್ಲೇಷಣೆ ಈ ಮೂರರ ಸಂಯೋಜನೆಗಳಿಂದ ಮಾತ್ರ ಬಲವಾಗಿ ಪ್ರತಿಪಾದಿಸಬಹುದಾಗಿದೆ ಎಂಬುದು ಈ ಸಂಶೋಧಕನ ನಿಲುವಾಗಿದೆ.

ಬಹಮನಿ ಸಾಮ್ರಾಜ್ಯವು ಹಲವಾರು ವಿದ್ವಾಂಸರಿಗೆ, ಸಂತರಿಗೆ, ತತ್ವಜ್ಞಾನಿಗಳಿಗೆ, ಮುತ್ಸದ್ಧಿಗಳಿಗೆ, ಶಿದ್ದಿಗಳಿಗೆ ಹಾಗೂ ರಾಷ್ಟ್ರೀಯನಾಯಕರಿಗೆ ಜನ್ಮನೀಡಿತು. ಇವರೆಲ್ಲರೂ ಮಧ್ಯಯುಗದಲ್ಲಿ ಸಮಾನಾಂತರ ಇತಿಹಾಸವನ್ನು ಸೃಷ್ಠಿಸಿದರು. ಫಿರೋಜ ಷಾ, ಮಹಮದ್ ಗವಾನ್ ಮತ್ತು ಗೇಸೂದಾರಾಜ್‌ರಂತಹ ಉನ್ನತ ವ್ಯಕ್ತಿತ್ವಗಳು ಸಾಮ್ರಾಜ್ಯದ ಇತಿಹಾಸಕಾರರರಿಗೆ ಅತ್ಯುನ್ನತ ಸ್ಥಾನ ಕಲ್ಪಿಸಿದವು.

ಸಂಪೂರ್ಣವಾಗಿ ಐತಿಹಾಸಿಕ ಭಾತೃತ್ವವು ಸುಲ್ತಾನರಿಗೆ ಗೌರವಪೂರ್ವಕವಾಗಿ ಸಲಾಮು ಹೊಡೆಯುತ್ತಿತ್ತು. ಅದರಲ್ಲೂ ನಿರ್ದಿಷ್ಠವಾಗಿ ಮಹಮದ್ ಗವಾನನು ಸಾಮ್ರಾಜ್ಯದ ಯಶೋಗಾದೆಯನ್ನು ಮುಂದುವರೆಸಿಕೊಂಡು, ಮಧ್ಯಯುಗೀನ ಭಾರತದ ಇತಿಹಾಸದಲ್ಲಿ ಮಾದರಿ ಸಾಮ್ರಾಜ್ಯವನ್ನು ಕಟ್ಟಿದ್ದನ್ನು ಈ ಅಧ್ಯಯನದಲ್ಲಿ ನೋಡಬಹುದು. ಬಹಮನಿ ಸುಲ್ತಾನರ ಅಪಾರ ಕೊಡುಗೆಗಳು ಲಭ್ಯವಿದ್ದು, ಫಿರೋಜ್ ಷಾ ಮತ್ತು ಮಹಮದ್ ಗವಾನರು ಸಂಶೋಧಕರಿಗೆ ಶ್ರೇಷ್ಠ ಆಡಳಿತಗಾರರಾಗಿ ಕಂಡರೆ, ಭಾತೃತ್ವ ಇತಿಹಾಸಕಾರರಿಗೆ ಅವರು ತತ್ವಜ್ಞಾನಿಗಳಾಗಿ ಕಂಡರು. ರಾಜನೀತಿ ತಜ್ಞರಂತೆ ಜೀವಿಸಿದ್ದ ಗವಾನ್ ಮತ್ತು ಫಿರೋಜ್ ಷಾ, ಬಹಮನಿ ಸಾಮ್ರಾಜ್ಯಕ್ಕೆ ಅಸಾಧ್ಯ ಕೊಡುಗೆಗಳನ್ನು ನೀಡಿದ್ದಾರೆ.

## ೬.೨. ಅಧ್ಯಯನದ ಫಲಿತಗಳು

**೧. ರಾಜಕಾರಣ:** ಮಧ್ಯಭಾರತದಲ್ಲಿ ಹೊಸ ಬಗೆಯ ಮುಸ್ಲಿಂ ಆಳ್ವಿಕೆ(ರಾಜಕಾರಣ)ಯನ್ನು ಬಹಮನಿಗಳು ಹುಟ್ಟುಹಾಕಿದರು. ದಕ್ಷಿಣದ ಕಡೆಗೆ ಭಾರತದಲ್ಲಿ ಮೊಗಲರ ಆಳ್ವಿಕೆಯ ಸ್ವರೂಪವನ್ನು ಜಾರಿಗೆ ತಂದರು. ಬಹಮನಿಯ ೧೮ ಸುಲ್ತಾನರು ವಿವಿಧ ರೀತಿಯ ಆಡಳಿತಕ್ಕೆ ಸಾಕ್ಷಿಯಾದರು. ಪರ್ಶಿಯನ್ ಮತ್ತು ಗಲ್ಫ್ ಮಧ್ಯೆ ಸಾಮ್ರಾಜ್ಯವನ್ನು ಆಧುನೀಕರಣಗೊಳಿಸಿ ಫಲಪ್ರದವಾದ ರಾಜತಾಂತ್ರಿಕ ಸಂಬಂಧವನ್ನು ಬೆಳೆಸಿದ್ದನ್ನು ನೋಡಬಹುದು.

**೨. ವ್ಯಾಪಾರ:** ಮಧ್ಯಕಾಲೀನ ಜಗತ್ತಿನ ಜಾಗತಿಕ ಮಟ್ಟದ ವ್ಯಾಪಾರಸ್ಥರಾಗಿ ಗುರುತಿಸಿಕೊಂಡಿದ್ದ, ಅರೇಬಿಯನ್‌ರ ಮತ್ತು ಪರ್ಶಿಯನ್ನರ ಮೂಲಕ ಹೊಸ ವ್ಯಾಪಾರ ಮತ್ತು ವಾಣಿಜ್ಯ ನೀತಿಯ ತಂತ್ರವನ್ನು ಜಾರಿಗೆ ತಂದಿರುವುದನ್ನು ಗುರುತಿಸಲಾಗಿದೆ. ಹೊಸ ಕೈಗಾರಿಕೆಗಳ ಸ್ಥಾಪನೆ, ಬಂದರುಗಳು, ಹಡಗುಗಳು, ಪೈಠಾನ್, ದೌಲತಾಬಾದ್, ಗುಲ್ಬರ್ಗಾ, ಬೀದರ್, ರಾಯಚೂರುಗಳಲ್ಲಿ ಜಾರಿಗೆ ತಂದಿರುವುದನ್ನು ನೋಡಬಹುದು.

**೩. ಆರ್ಥಿಕವಾಗಿ:** ಮಧ್ಯಭಾರತದಲ್ಲಿ ಭೌಗೋಳಿಕ ವೈಶಿಷ್ಟ್ಯವನ್ನು ನೋಡಬಹುದು. ಫಲವತ್ತಾದ ಭೂಮಿ, ಭೌಗೋಳಿಕತೆ ಅದು ಹೆಚ್ಚು ಸಂಪನ್ಮೂಲಗಳನ್ನು ಕೊಡುವುದು. ಕೃಷಿ ಸಮುದಾಯ, ಉದ್ಯಮೆಯಲ್ಲಿ ಲಾಭವಿರುವುದನ್ನು ಕಾಣಬಹುದು. ಗ್ರಾಮೀಣ ಮತ್ತು ನಗರ ವ್ಯವಸ್ಥೆಯನ್ನಾಗಿ ಮಾಡಿಕೊಂಡು ಕೃಷಿ, ಭೂಕಂದಾಯ, ದೋ–ಅಬ್ ಪ್ರದೇಶಗಳು ಅಭಿವೃದ್ಧಿಪಥದಲ್ಲಿರುವುದನ್ನು ಕಾಣಬಹುದು.

**೪. ತತ್ವ ಸಿದ್ಧಾಂತಗಳು:** ಮಧ್ಯಕಾಲೀನ ಇಸ್ಲಾಂ ಸಂಪ್ರದಾಯದಲ್ಲಿ ಸೂಫಿಗಳು ಮಹತ್ತರ ಪಾತ್ರ ವಹಿಸಿದರು. ಸುಲ್ತಾನರು ಪ್ರಾರಂಭದಿಂದಲೇ ಈ ಸೂಫಿಗಳ ಮಹತ್ವವನ್ನು ಅರಿತಿದ್ದರು. ಸುಲ್ತಾನರ

ವಾಸ್ತವಕ್ಕೆ, ಪ್ರಾದೇಶಿಕ ಹಿಂದೂ ಸಮುದಾಯಗಳ ಜೊತೆಗೆ ಸಂವಾದಿಸಲು ಹಾಗೂ ಅವರ ಶ್ರದ್ಧೆಯನ್ನು ಸೆಳೆಯುವಲ್ಲಿ ಈ ಸೂಫಿಗಳು ಉಲೇಮಗಳಿಗಿಂತ ಹೆಚ್ಚು ಮಹತ್ವಪೂರ್ಣರಾಗಿದ್ದರು. ಮಧ್ಯಕಾಲೀನ ಸಮಾಜದಲ್ಲಿ ಮುಸ್ಲಿಂ ಉಪಸ್ಥಿತಿಯಲ್ಲಿ ಹೊಸ ತಾತ್ವಿಕ ಸಮಾನತೆಯನ್ನು ಸಾಧಿಸಿದ್ದರು. ಜೊತೆಗೆ ಮುಸ್ಲಿಂ ಪ್ರಭುತ್ವದ ವಿಮರ್ಶೆಯನ್ನು ಸಾಧಿಸಿದ್ದರು. ಮುಸ್ಲಿಂ ರಾಜ್ಯಗಳ ಸಾಂಸ್ಕೃತಿಕ ನಿರ್ಮಾಣದಲ್ಲಿ ಪ್ರಧಾನ ಪಾತ್ರ ವಹಿಸಿದ್ದನ್ನು ನೋಡಬಹುದು. ಭಕ್ತಿ ಪಂಥದ ದಾಸರು ಮತ್ತು ಸುಧಾರಕರು ಮಧ್ಯಕಾಲದಲ್ಲಿ ಅಂತರ್‌ಯುದ್ಧಗಳು ಮತ್ತು ಸಾಮ್ರಾಜ್ಯದ ಪತನದಿಂದ ಸಮಾಜದಲ್ಲಿ ನೆಮ್ಮದಿ ಇರಲಿಲ್ಲ ಇವರು ತಮ್ಮ ತತ್ವ ಮತ್ತು ಸಂಗೀತವನ್ನು, ಕಾಯಕದ ಅನಿಸ್ಥಿತಿಯನ್ನು ಬೋಧಿಸಿ ಮನಸ್ಸನ್ನು ಲೌಕಿಕದ ಕಡೆಗೆ ತಿರುಗಿಸಿದ್ದನ್ನು ನೋಡಬಹುದು.

**೫. ಹಿಂದೂ ಮತ್ತು ಮುಸ್ಲಿಂ ಸಂಬಂಧಗಳು:** ಮಧ್ಯಕಾಲೀನ ದಖ್ಖನ್ ಪ್ರದೇಶದಲ್ಲಿ ಬಹಮನಿ ಮತ್ತು ವಿಜಯನಗರ ಪ್ರದೇಶಗಳು ಸಾಮಾಜಿಕವಾಗಿ, ಆರ್ಥಿಕ ಹಾಗೂ ಸಾಂಸ್ಕೃತಿಕವಾಗಿ ಗುರುತಿಸಿಕೊಂಡಿದ್ದರು. ರಾಜಕೀಯವಾಗಿ ರಾಯಚೂರು ಮತ್ತು ಮುದಗಲ್(ಕೃಷ್ಣಾ–ತುಂಗಭದ್ರಾ) ಪ್ರದೇಶದ ಸಲುವಾಗಿ ನಿರಂತರವಾಗಿ ಹೋರಾಟ ಮಾಡಿರುವುದು ಕಂಡುಬರುತ್ತದೆ. ಏನೇ ವೈಶಮ್ಯವಿದ್ದರೂ, ಅಧಿಕಾರ ಸ್ಥಾಪನೆಗೋಸ್ಕರವೇ ಹೊರತು ಧರ್ಮಕೇಂದ್ರಿತವಲ್ಲವೆಂಬುದು ಕಾಣಬಹುದು. ಬಹಮನಿ ಮತ್ತು ವಿಜಯನಗರ ಸಾಮ್ರಾಜ್ಯಗಳು ಅಕ್ಕಪಕ್ಕದಲ್ಲಿದ್ದರೂ ಸಹ ಸದಾ ಕಾಲ ಯುದ್ಧ ಮತ್ತು ಕಲಹಗಳಲ್ಲಿ ಮುಳುಗಿರುವುದು ಈ ಅಧ್ಯಯನದಿಂದ ತಿಳಿದುಬಂದಿದೆ. ಆರ್ಥಿಕವಾಗಿ ಬಹಮನಿ ರಾಜ್ಯವು ವಿಜಯನಗರಕ್ಕೆ ಹೋಲಿಸಿದರೆ, ಹಿಂದುಳಿದಿತ್ತೆಂದು ಹೇಳಬಹುದು. ವಿಜಯನಗರ ಮತ್ತು ಬಹಮನಿಯರ ನಡುವೆ ನೋಡಿದಾಗ, ೧೪ ವಿಜಯನಗರದ ಅರಸರು ಮತ್ತು ೧೫ ಬಹಮನಿ ಅರಸರು ಸತತವಾಗಿ ೧೧ ಯುದ್ಧಗಳಲ್ಲಿ ತೊಡಗಿದ್ದರು. ಈ ಪರಿಸರದಲ್ಲಿ ಅಂದರೆ, ವಿಜಯನಗರ ಕಾಲಾವಧಿಯಲ್ಲಿ ಇಸ್ಲಾಂ ಧರ್ಮವೂ ಬಾಳಿ ಬೆಳಗಿತು ಎಂಬ ಅಂಶವು ಕಂಡುಬರುವುದನ್ನು ನೋಡಬಹುದು.

**೬. ಧರ್ಮ ಪಾರಂಪರ್ಯ:** ಸಾಮ್ರಾಜ್ಯಶಾಹಿ ಹಾಗೂ ರಾಷ್ಟ್ರೀಯವಾದಿ ಚರಿತ್ರೆಕಾರರು ಅರಸುಕೇಂದ್ರಿತ ಹಾಗೂ ಧರ್ಮಕೇಂದ್ರಿತ ವಿಚಾರಗಳಿಗೆ ಮನ್ನಣೆ ನೀಡಿ, ಮೇಲ್ವರ್ಗವನ್ನು ವೈಭವೀಕರಿಸುವ ಪ್ರಯತ್ನ ನೆಡೆಸಿದರು. ಇವರು ಸಾಮಾನ್ಯವಾಗಿ ಚರಿತ್ರೆಯನ್ನು ಅರಸು ಮನೆತನಗಳಿಗಷ್ಟೆ ಸೀಮಿತಗೊಳಿಸಿ ಅದೊಂದು ನಡೆದು ಹೋದ ಘಟನೆ ಎನ್ನುವ ತೀರ್ಮಾನವನ್ನು ಕೊಡುವ ಅಧ್ಯಯನಗಳ ಸಂಖ್ಯೆ ಹೆಚ್ಚಾದವು. ಉದಾಹರಣೆಗೆ: ರಾಜನ ಹುಟ್ಟು ಹಾಗೂ ಯುದ್ಧ, ವಂಶಾವಳಿ ಮುಂತಾದ ಅಂಶಗಳು ಪ್ರಧಾನವಾಗಿ ಕಂಡುಬರುತ್ತವೆ. ಶೇ ೭೫ರಷ್ಟು ಭಾಗ ರಾಜರ ಆರ್ಥಿಕ, ಸಾಮಾಜಿಕ ಮುಂತಾದ ಅಂಶಗಳು ಅರಸುಕೇಂದ್ರಿತವಾಗಿದೆಯೇ ಹೊರತು ಪ್ರಜಾ ಕೇಂದ್ರಿತವಾಗಿಲ್ಲದಿರುವುದನ್ನು ಪ್ರಸ್ತುತ ಅಧ್ಯಯನದಲ್ಲಿ ಕಾಣಬಹುದು.

**೭. ಚಾರಿತ್ರಿಕ ಲೇಖನ ಪಾರಂಪರೆ:** ಚರಿತ್ರೆ ಬರವಣಿಗೆ ಮತ್ತು ವಿಶ್ಲೇಷಣೆಗೆ ಸಂಬಂಧಿಸಿದ ಪಂಥಗಳ ವಿಚಾರಧಾರೆಗಳು ಏಕಮುಖಿಯಾಗಿದ್ದವಲ್ಲದೇ ಪಕ್ಷಪಾತದಿಂದ ಕೂಡಿರುವುದು ಈ ಅಧ್ಯಯನದಿಂದ ಕಂಡುಬಂದಿದೆ. ಬಹಮನಿ ಸಾಮ್ರಾಜ್ಯದ ಆಡಳಿತಗಾರರಿಗೆ ಸಂಬಂಧಿಸಿದಂತೆ, 'ಹಿಂದುತ್ವ ಪಂಥ' ಧೋರಣೆ ಎದ್ದು ಕಾಣುತ್ತದೆ. ಬಹಮನಿಯರು ತಮ್ಮ ಅರಸೊತ್ತಿಗೆ ಮೂಲಕ ರಾಜಕೀಯ ಪ್ರಭಾವ ಬೀರಿ ಪ್ರಜಾಪೀಡನೆ ಮಾಡುತ್ತಿದ್ದ ವಿವರಗಳನ್ನೆ ಚಿತ್ರಿಸುವ ಭರದಲ್ಲಿ ಅವರ ಧಾರ್ಮಿಕ ಶ್ರದ್ಧೆ, ಸಾಮಾಜಿಕ, ಆರ್ಥಿಕ ಹಾಗೂ ಸಾಂಸ್ಕೃತಿಕವಾಗಿ ಪ್ರಬಲವಾದ ಅಂಶಗಳನ್ನು ಮತ್ತು ಅವರ ಬೆಳವಣಿಗೆಯ ಪ್ರಯತ್ನಗಳನ್ನುಅವರ ದೂರದೃಷ್ಟಿತ್ವ ಇವುಗಳನ್ನು ಕಡೆಗಣಿಸಿರುವುದನ್ನು ಕಾಣಬಹುದು.

**೮. ಆಡಳಿತಾತ್ಮಕತೆ:** ಮಹಮದ್ ಗವಾನ್‌ನು ಅವನು ದಿಗ್ವಿಜಯಿಯಾಗಿರದೇ ಉತ್ತಮ ಆಡಳಿತಗಾರನೂ, ಸಮರ್ಥ ದಂಡನಾಯಕನೂ ಆಗಿದ್ದನು. ಇವನ ಕಾಲದಲ್ಲಿ ರಾಜ್ಯವನ್ನು ೮ ತರಫ್‌ಗಳನ್ನಾಗಿ ವಿಂಗಡಿಸಿದನು. ಇದರಿಂದ ಭೂಕಂದಾಯ, ನೇರವಾಗಿ ಸಂಭಾವನೆ, ಸಶಕ್ತವಾದ ಸೈನಿಕ ವ್ಯವಸ್ಥೆ, ಕಲೆ, ಸಾಹಿತ್ಯ, ವಾಸ್ತುಶಿಲ್ಪ, ಶಿಕ್ಷಣದಲ್ಲಿ ಗಮನಾರ್ಹ ಸಾಧನೆಯ ಜೊತೆಗೆ ರಾಜಕೀಯ ಐಕ್ಯತೆ, ಆರ್ಥಿಕ ಉತ್ಕೃಷ್ಟತೆಯನ್ನು ಸಾಧಿಸಿತು. ಗವಾನ್‌ನ ಕಾಲದಲ್ಲಿ ಹಲವಾರು ವಿದ್ವಾಂಸರಿಗೆ, ಸಂತರಿಗೆ, ತತ್ವಜ್ಞಾನಿಗಳಿಗೆ, ಮುತ್ಸದ್ದಿಗಳಿಗೆ, ಶಿದ್ದಿಗಳಿಗೆ ಹಾಗೂ ರಾಷ್ಟ್ರೀಯನಾಯಕರಿಗೆ ಗವಾನ್‌ನು, ಗೇಸುದಾಸರಂತಹ ಉನ್ನತ ವ್ಯಕ್ತಿತ್ವಗಳು ಅತ್ಯುನ್ನತ ಸ್ಥಾನ ಕಲ್ಪಿಸಿದನು. ಜೊತೆ ಜೊತೆಗೆ ಸಾಮ್ರಾಜ್ಯದ ಯಶೋಗಾಥೆಯನ್ನು ಮುಂದುವರೆಸಿಕೊಂಡು ಮಧ್ಯಕಾಲೀನ ಭಾರತದ ಇತಿಹಾಸದಲ್ಲೇ ಮಾದರಿ ಸಾಮ್ರಾಜ್ಯ ಕಟ್ಟಿದ್ದನ್ನು ಕಾಣಬಹುದು.

**೯. ಧಾರ್ಮಿಕತೆ:** ಬಹಮನಿ ರಾಜ್ಯದಲ್ಲಿ ಇಸ್ಲಾಂ ಧರ್ಮಕ್ಕೆ ಮತ್ತು ಸಂಸ್ಕೃತಿಗಳಿಗೆ ಅತ್ಯಂತ ಹೆಚ್ಚು ಪ್ರೋತ್ಸಾಹ ಮತ್ತು ಮಹತ್ವವನ್ನು ನೀಡಲಾಗಿತ್ತು. ಮುಸ್ಲಿಂ ಸಮುದಾಯದಂತೆ ಬಹಮನಿ ರಾಜ್ಯದಲ್ಲಿ ಹೆಚ್ಚಿನ ಜನರೂ ಹಿಂದೂ ಧರ್ಮದವರಾಗಿದ್ದರು. ಇಷ್ಟೇ ಅಲ್ಲದೇ ಲಿಂಗಾಯತ, ಜೈನ, ಕ್ರೈಸ್ತ, ಯಹೂದಿ ಮತ್ತಿತರ ಪಂಗಡಗಳ ಜನರೂ ಸಹ ಬಹಮನಿ ರಾಜ್ಯದಲ್ಲಿ ನೆಲೆಸಿದ್ದರಿಂದ, ಇಂಡೋ ಮತ್ತು ಇಸ್ಲಾಮಿಕ್ ಸಂಸ್ಕೃತಿ ಇವರ ಕಾಲದಲ್ಲಿ ಬೇರೆ ಸಾಮ್ರಾಜ್ಯಗಳಿಗಿಂತ ಉತ್ತುಂಗ ಶಿಖರದಲ್ಲಿತ್ತು. ಜನಸಂಖ್ಯೆಗೆ ಹೋಲಿಸಿದರೆ ಬಹಮನಿ ರಾಜ್ಯದಲ್ಲಿ ಅಧಿಕ ಸಂಖ್ಯಾತರು ಹಿಂದುಗಳಾಗಿದ್ದು, ಮುಸ್ಲಿಂರು ಅಲ್ಪಸಂಖ್ಯಾತರಾಗಿರುವುದನ್ನು ಪ್ರಸ್ತುತ ಅಧ್ಯಾಯದಲ್ಲಿ ಕಾಣಬಹುದು.

**೧೦. ಸಾಂಸ್ಕೃತಿಕವಾಗಿ:** ಹದಿನಾಲ್ಕನೇ ಶತಮಾನದ ಅವಧಿಯಲ್ಲಿ ದಖ್ಖನ್ನಿನ ಮುಸ್ಲಿಂ ವಾಸ್ತುಶೈಲಿಯು ಉಳಿದೆಲ್ಲಾ ವಾಸ್ತುಶೈಲಿಗಿಂತ ಭಿನ್ನವಾಗಿ ಬೆಳೆಯಿತು. ಇಲ್ಲಿಯ ಕಲೆ ಮತ್ತು ವಾಸ್ತುಶಿಲ್ಪ ರಚನೆಗೆ ದೆಹಲಿ ಮತ್ತು ಪರ್ಷಿಯನ್‌ರಿಂದ ದಖ್ಖನ್‌ರು ಪ್ರೇರಣೆಯನ್ನು ಪಡೆದಿದ್ದರು. ಬಹಮನಿ ವಾಸ್ತುಶಿಲ್ಪದಲ್ಲಿ ಮುಸ್ಲಿಂ ವಾಸ್ತುಶೈಲಿ ಮತ್ತು ಪರ್ಷಿಯನ್ ಶೈಲಿಗಳ ಸಮ್ಮಿಲನವನ್ನು ಕಾಣಬಹುದು. ಬಹಮನಿ ವಾಸ್ತುಶಿಲ್ಪ ಕಲೆಯ ಅಲಂಕಾರಗಳಲ್ಲಿ ಹಿಂದು ಮತ್ತು ಇಸ್ಲಾಮಿಕ್ ಕಲೆ, ವಾಸ್ತುಶಿಲ್ಪಗಳೆರಡೂ ಬೆರೆತಿವೆ ಮುಸ್ಲಿಂ ಮಂದಿರಗಳನ್ನು ಕಣ್ಣಿಗೆ ಅಂದವಾಗಿ ಕಾಣುವಂತೆ ಮಾಡಲು ಶ್ರಮ, ಹಣವನ್ನು ಲೆಕ್ಕಿಸಲಿಲ್ಲ. ಒಟ್ಟಿನಲ್ಲಿ ದೆಹಲಿ ಮತ್ತು ದಕ್ಷಿಣದ ಬಹಮನಿ ರಾಜ್ಯದಂತಹ ಮುಸ್ಲಿಂ ರಾಜ್ಯಗಳ ರಾಜಕೀಯ ಸಂಬಂಧ ಕಡಿದುಹೋದರೂ ದೆಹಲಿಯ ವಾಸ್ತುಶಿಲ್ಪದ ಮೇಲ್ಪಂಕ್ತಿಯನ್ನು ದಕ್ಷಿಣದಲ್ಲಿ ಅನುಕರಿಸಿರುವುದನ್ನು ನೋಡಬಹುದು.

**೧೧. ಸಾಮಾಜಿಕವಾಗಿ:** ಮಧ್ಯಕಾಲೀನ ಕರ್ನಾಟಕದ ಬಹಮನಿ ಸಮಾಜವು ಪ್ರಾಚೀನ ಸಮಾಜದ ಆಚಾರ-ವಿಚಾರ ಪದ್ಧತಿ ಜಾರಿಗೆ ತಂದರು. ಅದರಲ್ಲಿ ಕೆಲವು ಬದಲಾವಣೆ ಮಾಡಿಕೊಂಡದ್ದನ್ನು ನೋಡಬಹುದು. ಕಾರಣ ಈ ಕಾಲಘಟ್ಟದಲ್ಲಿ ಮುಸ್ಲಿಮರು, ವಿದೇಶಿಯರು, ರಾಷ್ಟ್ರೀಯ ಹಾಗೂ ಪ್ರಾಂತೀಯ ಹಂತಗಳಲ್ಲಿ ಕಾಣಿಸಿಕೊಂಡಿದ್ದರು. ಇದರ ಜೊತೆಗೆ ವಿವಿಧ ಸಂಸ್ಕೃತಿ ಧರ್ಮದವರೂ ಇದ್ದರು. ದಖ್ಖನ್ ಮುಸ್ಲಿಮರಲ್ಲಿ ಹಿಂದೂಗಳಂತೆ ನಾಲ್ಕು ವರ್ಗಗಳಿದ್ದವು; ಅವು ಶಿಯಾ, ಸುನ್ನಿ, ಶೇಖ್, ಸೈಯದ್. ಇದರ ಜೊತೆಗೆ ದಖ್ಖನ್ನಿಯರು, ಪರದೇಶಿಯರು ಇರುವುದನ್ನು ಕಾಣಬಹುದು.

**೧೨. ಭಾಷೆ:** ಬಹಮನಿ ಪ್ರದೇಶದಲ್ಲಿ ಹೊಸ ಭಾಷೆಗಳು ಹುಟ್ಟಿಕೊಂಡವು. ಪರ್ಶಿಯನ್, ಅರೇಬಿಕ್, ಉರ್ದು ಮತ್ತು ಕನ್ನಡ ಭಾಷೆ. ಅದರಲ್ಲಿ ದಖ್ಖನಿ ಭಾಷೆ ಪ್ರಸಿದ್ಧಿ ಪಡೆಯಿತು. ಹೀಗೆ ಮಧ್ಯಯುಗೀನ ಚರಿತ್ರೆಯಲ್ಲಿ ಹೊಸ ಭಾಷೆ, ಹೊಸ ಸಮುದಾಯ ಉದಯವಾದದ್ದನ್ನು ನೋಡಬಹುದು.

**೧೩. ಸಾಹಿತ್ಯ:** ಬಹಮನಿ ಕಾಲದಲ್ಲಿ ಪರ್ಶಿಯನ್, ಅರೇಬಿಕ್, ಉರ್ದು ಮತ್ತು ಕನ್ನಡ ಸಾಹಿತ್ಯ ರಚನೆಯಾಯಿತು. ಇವರ ಕಾಲದಲ್ಲಿ ಹಲವಾರು ವಿದ್ವಾಂಸರಿಗೆ, ಸಂತರಿಗೆ, ತತ್ವಜ್ಞಾನಿಗಳಿಗೆ, ಮುತ್ಸದ್ಧಿಗಳಿಗೆ, ಸಿದ್ಧಿಗಳಿಗೆ ಆಶ್ರಯ ನೀಡಿತು. ಅದರಲ್ಲಿ ಪ್ರಮುಖರಾದ ಖ್ಯಾತ ಸೂಫಿ ಸಂತರಾದ ಗೇಸುದರಾಜನು ಅನೇಕ ಕಾವ್ಯಗಳನ್ನು ರಚಿಸಿದನು.

**೧೪. ಗುಲಾಮರು:** ಬಹಮನಿ ಸುಲ್ತಾನರ ಕಾಲದಲ್ಲಿ ಯುಸೋಪ್ ಆದಿಲ್‌ಖಾನ್, ಮಲ್ಲಿಕಾ ಹಸನ್, ಖಾಸಿಂ ಬರೀದ್, ಮಹಮ್ಮದ್ ಗವಾನ್ ಗುಲಾಮರು ಇರುವುದನ್ನು ಕಾಣಬಹುದು. ಅದರಲ್ಲಿ ಪ್ರಮುಖನಾದ ಮಹಮ್ಮದ್ ಗವಾನ್ ಪರ್ಶಿಯಾದಿಂದ ಗುಲಾಮನಾಗಿ ಬಂದು, ಸುಲ್ತಾನನಾಗಿ ಸಾಮ್ರಾಜ್ಯದ ಯಸೋಗಾದೆಯನ್ನು ಮುಂದುವರೆಸಿಕೊಂಡು, ಮಧ್ಯಯುಗೀನ ಭಾರತದ ಇತಿಹಾಸದಲ್ಲಿ ಮಾದರಿ ಸಾಮ್ರಾಜ್ಯವನ್ನು ಕಟ್ಟಿದ್ದನ್ನು ನೋಡಬಹುದು.

**೧೫. ಮೊಗಲರು:** ಬಾಬರನು ಭಾರತಕ್ಕೆ ಕ್ರಿ.ಶ.೧೪೮೧ರಲ್ಲಿ ದೆಹಲಿಯ ಮೇಲೆ ದಾಳಿಯಿಟ್ಟಾಗ ಅದನ್ನು ದಖ್ಖನ್ ಬಹಮನಿಯರು ತಡೆಯದೇ ಹೋದರು. ಕಾರಣ ಆ ಸಮಯದಲ್ಲಿ ಬಹಮನಿ ರಾಜ್ಯ ಬಿಜಾಪುರ, ಅಹಮದ್‌ನಗರ, ಬೀದರ್, ಬೀರಾರ್ ಮತ್ತು ಗೋಲ್ಕಂಡಗಳಲ್ಲಿ ಐದು ಷಾಹಿ ರಾಜ್ಯಗಳಲ್ಲಿ ವಿಭಜಿತವಾಗಿ ಅವುಗಳ ನಡುವೆ ಪರಸ್ಪರ ದ್ವೇಷ, ಅಸೂಯೆಗಳಲ್ಲಿ ತೊಡಗಿದ್ದವು. ಮುಂದೆ ಇದರ ಲಾಭ ಪಡೆದ ಬಾಬರ್ ಕ್ರಿ.ಶ.೧೫೨೬ರಲ್ಲಿ ಸ್ಥಾಪಿಸಲು ಭಾರತದಲ್ಲಿ ಮೊಗಲ್ ಸಾಮ್ರಾಜ್ಯ ಈ ಅಂಶವೂ ಕಾರಣವಾಗಿರುವುದನ್ನು ನಾವು ಈ ಪ್ರಸ್ತುತ ಅಧ್ಯಯನದಲ್ಲಿ ನೋಡಬಹುದು. ಮೊಗಲರು, ದಖ್ಖನ್ ಪ್ರದೇಶದ ಮೇಲೆ ತೀವ್ರ ಗಮನ ಹರಿಸುವುದರ ಮೂಲಕ ದಾಳಿಯನ್ನು ಕೈಗೊಂಡರು. ಇದಕ್ಕಿಂತ ಮುಂಚೆ ದೆಹಲಿ ಸುಲ್ತಾನರ ಅಲ್ಲಾವುದ್ದೀನ್ ಖಿಲ್ಜಿ ಮತ್ತು ಮಹಮದ್-ಬಿನ್-ತುಘಲಕ್ ಅವರ ದಾಳಿ ಮಾಡುವುದರ ಮುಖಾಂತರ ಸಂಪತ್ತನ್ನು ಕೊಳ್ಳೆ ಹೊಡೆದರು. ಮೊಗಲರ ದಾಳಿಗೆ ಮುಖ್ಯ ಉದ್ದೇಶ, ದಖ್ಖನ್ನಿನ ಪ್ರಬಲ ರಾಜಕೀಯ ಶಕ್ತಿಯನ್ನು ದಮನ ಮಾಡುವುದು ಆಗಿತ್ತೇ ವಿನಹ ಯಾವ ದುರದ್ದೇಶವನ್ನು ಹೊಂದಿರಲಿಲ್ಲ. ಮೊಗಲ್‌ರ ರಾಜನಾದ ಔರಂಗಜೇಬನು ದಖ್ಖನ್ ಕಡೆ ಹೆಚ್ಚು ಗಮನ ಹರಿಸುವುದರ ಮುಖಾಂತರ ಬಹಮನಿ ಸುಲ್ತಾನರ ಅವನತಿಗೆ ಕಾರಣೀಕೃತನಾದನು. ಇದರ ಪರಿಣಾಮವಾಗಿ ಬೀರಾರ್, ಅಹಮದ್‌ನಗರ, ಗೋಲ್ಕಂಡ, ವಿಜಾಪುರ, ಬೀದರ್ ಒಳಗೊಂಡಂತೆ ಇವುಗಳ ಪ್ರದೇಶದ ಮೇಲೂ ದಾಳಿ ಕೈಗೊಂಡಿರುವುದನ್ನು ಪ್ರಸ್ತುತ ಈ ಅಧ್ಯಯನದಲ್ಲಿ ಗಮನಿಸಬಹುದು.

## ಅನುಬಂಧಗಳು

೧. ಆಧಾರ ಗ್ರಂಥಗಳು
   ೧. ವಿಶ್ವಕೋಶ
   ೨. ಶಾಸನ ಸಂಪುಟಗಳು
   ೩. ಗೆಜೆಟಿಯರ್‌ಗಳು
   ೪. ಪ್ರಕಟಿತ ಕೃತಿಗಳು
      * ಕನ್ನಡ ಕೃತಿಗಳು
      * ಇಂಗ್ಲಿಶ್ ಕೃತಿಗಳು
   ೫. ಪಿಎಚ್.ಡಿ ಮತ್ತು ಎಂ.ಫಿಲ್ ನಿಬಂಧಗಳು
   ೬. ಲೇಖನಗಳು
   ೭. ಅಂತರ್ಜಾಲ ಮಾಹಿತಿ
೨. ನಾಣ್ಯಗಳು
೩. ಶಾಸನಗಳು
೪. ನಕ್ಷೆಗಳು
೫. ಛಾಯಚಿತ್ರಗಳು

## ಅನುಬಂಧ–೧

## ಆಧಾರ ಗ್ರಂಥಗಳು


### ೧. ವಿಶ್ವಕೋಶ

೧. ಅರವಿಂದ ಮಾಲಗತ್ತಿ(ಸಂ), ಕುವೆಂಪು ಕನ್ನಡ ವಿಷಯ ವಿಶ್ವಕೋಶ, ಸಂಪುಟ ೧, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೨೦೦೫.

೨. ಕನ್ನಡ ವಿಷಯ ವಿಶ್ವಕೋಶ, ಸಂಪುಟ–೨, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೩. ಭಾರತದ ಕಥೆ, ಕಿರಿಯರ ವಿಶ್ವಕೋಶ–ಸಂಪುಟ–೭, ಜ್ಞಾನಗಂಗೋತ್ರಿ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೪. ಮನುಕುಲದ ಕಥೆ, ಕಿರಿಯರ ವಿಶ್ವಕೋಶ, ಜ್ಞಾನ ಗಂಗೋತ್ರಿ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೦.

೫. ರಾಮಚಂದ್ರಗೌಡ, ಹಿ.ಶಿ.(ಸಂ), ಕನ್ನಡ ವಿಷಯ ವಿಶ್ವಕೋಶ, ಸಂಪುಟ ೧, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಹಂಪಿ, ವಿದ್ಯಾರಣ್ಯ, ೨೦೦೭.

೬. ವಿಜಯ್ ಪೂಣಚ್ಚ ತಂಬಂಡ(ಸಂ), ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ ಸಂಪುಟ ೧–೪, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ,ಹಂಪಿ. ೨೦೦೧.

### ೨. ಶಾಸನ ಸಂಪುಟಗಳು

೧. ಆರ್.ಎಸ್. ಪಂಚಮುಖಿ, ಕರ್ನಾಟಕ ಇನ್‌ಸ್ಕ್ರಿಪ್ಷನ್, ಸಂಪುಟ ೧–೬, ಧಾರವಾಡ.

೨. ಎಫಿಗ್ರಾಫಿಯಾ ಕರ್ನಾಟಿಕ, ಸಂಪುಟ ೧ ರಿಂದ ೧೫, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೩. ಎಫಿಗ್ರಾಫಿಯಾ ಇಂಡಿಕಾ, ಸಂಪುಟ ೬.

೪. ಎಫಿಗ್ರಾಫಿಯಾ ಇಂಡಿಕಾ, ಅರೇಬಿಕ್ ಮತ್ತು ಪರ್ಶಿಯನ್ ಶಾಸನಗಳು, ಬಹಮನಿ ಶಾಸನಗಳು, ರಾಯಚೂರು ಜಿಲ್ಲೆ, ೧೯೬೨.

೫. ಚೆನ್ನಬಸಪ್ಪ ಪಾಟೀಲ್, ಕರ್ನಾಟಕ ಶಾಸನ ಸಂಪುಟ ೧, ವಿಜಯನಗರ(ಹಂಪೆ) ಶಾಸನಗಳು, ಪ್ರಾಚ್ಯವಸ್ತು ಸಂಗ್ರಾಹಾಲಯ, ಮೈಸೂರು, ೧೯೯೬.

೬. ದೇವರಕೊಂಡಾರೆಡ್ಡಿ ಮತ್ತು ಹನುಮಾಕ್ಷಿಗೋಗಿ, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೮, ಬೀದರ್ ಜಿಲ್ಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬.

೭. ಯಾಸೀನ್ ಕ್ಯೂದ್ದೇಶಿ ಎಮ್., ಮತ್ತು ಸೀತರಾಮ ಜಾಗಿರದಾರ, ಕರ್ನಾಟಕದ ಅರೇಬಿಕ್, ಉರ್ದು ಹಾಗೂ ಪರ್ಶಿಯನ್ ಶಾಸನಗಳು, ಮೈಸೂರು, ೨೦೦೧.

೮. ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಸನ್ಸ್, ಮಹಾರಾಷ್ಟ್ರ, ಸಂಪುಟ ೧–೨೦

೯. ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಸನ್ಸ್, ಆಂಧ್ರಪ್ರದೇಶ, ಸಂಪುಟ ೧–೧೬

**೩. ಗೆಜೆಟಿಯರ್‌ಗಳು**

೧. ಎಮ್.ಬಿ. ಪಾಟೀಲ್, ಗುಲ್ಬರ್ಗಾ ಜಿಲ್ಲೆ ಗ್ಯಾಸೆಟಿಯರ್, ಕರ್ನಾಟಕ ರಾಜ್ಯ, ೧೯೯೭, ಪು.೧೩೨.

೨. Gazetteer of the Bombay Presidency, Government Central Press, Bombay, Vol, XX, 1884.

೩. ಮುನಿಸ್ವಾಮಿ ಆರ್(ಸಂ), ಬಿಜಾಪುರ ಜಿಲ್ಲೆ ಗ್ಯಾಜೆಟಿಯರ್, ಕರ್ನಾಟಕ ಸರಕಾರ, ಬೆಂಗಳೂರು, ೧೯೯೯.

೪. ವರದರಾಜ ಹುಯಿಲಗೋಳ, ಭಾರತದ ಗೆಜೆಟಿಯರ್ ಸಂಪುಟ–೨, ಭಾರತದ ದೇಶಕೋಶ, ಇತಿಹಾಸ ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೮೭.

೫. ಸೂರ್ಯನಾಥ ಕಾಮತ್(ಸಂ), ಭಾರತದ ಗ್ಯಾಜೆಟಿಯರ್, ಕರ್ನಾಟಕ ಸರ್ಕಾರ, ಧಾರವಾಡ ಜಿಲ್ಲೆ, ಬೆಂಗಳೂರು, ೧೯೯೫.

೬. Sathyan B.N., Mysore State Gazetteer, Bangalore, 1966.

**೪. ಪ್ರಕಟಿತ ಕೃತಿಗಳು**

*** ಕನ್ನಡ ಕೃತಿಗಳು**

೧. ಅಶ್ವತಪ್ಪ ಕೆ.ಎನ್., ಭಾರತದ ಇತಿಹಾಸ(೧೨೦೦–೧೭೬೧), ಸಪ್ನಾ ಬುಕ್‌ಹೌಸ್, ಬೆಂಗಳೂರು, ೨೦೧೩.

೨. ಎಚ್ಚೆಸ್ಕೆ, ಕರ್ನಾಟಕ ಪರಂಪರೆ, ಸಮೀಕ್ಷೆ, ವಿಶ್ವ ಕನ್ನಡ ಸಮ್ಮೇಳನ, ಕನ್ನಡ ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೮೫.

೩. ಕರ್ನಾಟಕ ಪರಂಪರೆ, ಸಂಪುಟ ೧–೨, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೬

೪. ಕೃಷ್ಣ ಕೋಲ್ಹಾರ ಕುಲಕರ್ಣಿ, 'ಬಿಜಾಪುರ ಆದಿಲ್‌ಷಾಹಿ' ಸಿಕ್ಯಾಬ್ ಆದಿಲ್‌ಷಾಹಿ ಅಧ್ಯಯನ ಸಂಸ್ಥೆ(ರಾಜ್ಯ–ಕೇಂದ್ರ ಗ್ರಂಥಾಲಯ, ಬೆಂಗಳೂರು), ಬಿಜಾಪುರ, ೨೦೦೨.

೫. ಕೃಪಟಾಳ ಕೃಷ್ಣರಾವ್, ಕರ್ನಾಟಕ ಸಂಸ್ಕೃತಿ ಸಂಶೋಧನೆ, ಉಷಾ ಸಾಹಿತ್ಯಮಾಲೆ, ಮೈಸೂರು, ೨೦೦೭.

೬. ಕೊಡವ ಎಸ್.ಬಿ., 'ವಿಜಯನಗರದ ಉಚ್ಛ್ರಾಯ ಕಾಲ,' ಪ್ರಭಾ ಪಬ್ಲಿಕೇಶನ್, ಧಾರವಾಡ, ೧೯೬೬

೭. ಗುರುಮೂರ್ತಿ ಪೆಂಡಕೂರ್(ಅನು), ವೆಂಕಟರಮಣಯ್ಯ ಎನ್(ಮೂಲ)., ವಿಜಯನಗರ ಚರಿತ್ರೆ, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು, ೨೦೧೦,

೮. ಗೋಪಾಲ್‌ರಾವ್ ಎಚ್.ಎಸ್., ಇತಿಹಾಸದ ಇಣುಕುನೋಟ, ಅನಂತ ಪ್ರಗತಿ ಎಂಟರ್‌ಪ್ರೈಸಸ್, ಬೆಂಗಳೂರು, ೨೦೦೭.

೯. ಚಂದ್ರಶೇಖರಪ್ಪ ಟಿ.ಜಿ., ಮಧ್ಯಕಾಲೀನ ಭಾರತದ ಇತಿಹಾಸ ಆರಂಭದಿಂದ, ಪೂರ್ಣ ಪ್ರಕಾಶನ, ಶಿವಮೊಗ್ಗ, ೨೦೦೬

೧೦. ಚಂದ್ರಶೇಖರಯ್ಯ ಬಿ.ಎಂ., ಕರ್ನಾಟಕ ಸಾಂಸ್ಕೃತಿಕ ಇತಿಹಾಸ ಪರಂಪರೆ, ಸಿ.ವಿ.ಜಿ. ಪ್ರಕಾಶನ, ಬೆಂಗಳೂರು, ೨೦೦೫.

